# ಮೈಸೂರು ರಾಜ್ಯ



ನವಂಬರ್ ೧, ೧೯೫೭

THE INAUGURATION of the enlarged State of Mysore is a significant event not only in the history of that State but that of India. After much trouble and travail, a new map of India is taking shape. I earnestly hope that the controversies and disputes which have preceded this re-shaping will now be set at rest and everyone will work wholeheartedly for the consolidation of the new States, and above all, for the realisation that it is finally India that counts and not any separate part of it by itself.

THE STATE of Mysore has had a chequered and eventful history. That history is a part of the history of India. We now move on to this unified outlook on India which incorporates the great variety of its several parts. I have no doubt that the work before us now is to build and construct, to raise the standards of our people and immediately to work for the success of the Second Five-Year Plan. This Plan will lay the foundations of rapid industrial and economic growth.

MYSORE HAS in some ways been a model State in India in the past. It has high traditions to keep. I hope it will preserve them and add to them.

I SEND my good wishes on the occasion of this historic event.

JAWAHARLAL NEHRU

ವಿಶಾಲ ಮೈಸೂರಿನ ಉದ್ಘಾಟನೆಯು ಮೈಸೂರಿನ ಇತಿಹಾಸದಲ್ಲಿಯೇ ಅಲ್ಲದೆ ಭಾರತದ ಇತಿಹಾಸದಲ್ಲಿಯೂ ಒಂದು ಗಣ್ಯ ಸಮಾರಂಭ. ವಿಪರೀತ ತೊಡಕು ಮತ್ತು ಪ್ರಯಾಸಗಳ ತರುವಾಯ ಭಾರತದ ನೂತನ ನಕ್ಷೆ ರೂಪುಗೊಳ್ಳುತ್ತಿದೆ. ನೂತನ ನಕ್ಷೆಯ ಪುನರ್ವ್ಯವಸ್ಥೆಯ ಹಿಂಬದಿಯಲ್ಲಿ ಸಂಭವಿಸಿದ ವಾದ ವಿವಾದಗಳು ಕೊನೆಗಂಡು, ಪ್ರತಿಯೊಬ್ಬರೂ ನೂತನ ಪ್ರಾಂತ್ಯಗಳ ಸಂಘಟನೆಗೂ, ಮೇಲಾಗಿ, ಭಾರತವೊಂದೇ ಗಣನೀಯವಲ್ಲದೆ, ಯಾವ ಒಂದು ಸಂಸ್ಥಾನವೂ ತನ್ನಷ್ಟಕ್ಕೇ ಗಣನೀಯವಲ್ಲ ಎಂಬ ವಿಚಾರವನ್ನು ಮನಗಾಣುವುದಕ್ಕೂ ಹೃತ್ಪೂರ್ವಕವಾಗಿ ಶ್ರಮಿಸುವರೆಂದು ನಾನು ತೀವ್ರವಾಗಿ ನಂಬಿದ್ದೇನೆ.

ಮೈಸೂರು ವಿಚಿತ್ರವಾದ ಮತ್ತು ವಿಶೇಷವಾದ ಘಟನೆಗಳಿಂದ ಕೂಡಿದ ಇತಿಹಾಸವುಳ್ಳ ಸಂಸ್ಥಾನ. ಈ ಇತಿಹಾಸವು ಭಾರತದ ಇತಿಹಾಸದ ಒಂದು ಭಾಗ. ನಾವು ಈಗ ವಿವಿಧ ಹಾಗೂ ನಾನಾ ವಿಭಾಗಗಳನ್ನೊಳಗೊಂಡಿರುವ ಏಕೈಕ ಭಾರತದತ್ತ ಸಾಗುತ್ತಿದ್ದೇವೆ. ಈಗ ನಮ್ಮ ಮುಂದಿರುವ ಕಾರ್ಯವೆಂದರೆ, ಕಟ್ಟುವುದು ಮತ್ತು ರಚಿಸುವುದು, ನಮ್ಮ ಜನರ ಜೀವನ ಮಟ್ಟವನ್ನು ಹೆಚ್ಚಿಸುವುದು ಮತ್ತು ಈ ಕೂಡಲೇ ದ್ವಿತೀಯ ಪಂಚವಾರ್ಷಿಕ ಯೋಜನೆಯ ಯಶಸ್ಸಿಗೆ ದುಡಿಯುವುದು ಎಂಬ ವಿಚಾರದಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಈ ಯೋಜನೆಯು ಕೈಗಾರಿಕೆ ಮತ್ತು ಆರ್ಥಿಕ ಸ್ಥಿತಿಯ ಶೀಘ್ರ ಪ್ರಗತಿಗೆ ತಳಹದಿ ಹಾಕುವುದಾಗಿದೆ

ಹಿಂದೆ, ಮೈಸೂರು ಕೆಲವು ವಿಚಾರಗಳಲ್ಲಿ ಭಾರತದ ಮಾದರಿ ಸಂಸ್ಥಾನವಾಗಿತ್ತು. ಅನುಸರಿಸಲು ಅತ್ಯುತ್ತಮವಾದ ಸಂಪ್ರದಾಯಗಳನ್ನು ಪಡೆದಿತ್ತು. ಮುಂದೂ ಅಂತಹ ಸಂಪ್ರದಾಯಗಳನ್ನು ಈ ಸಂಸ್ಥಾನ ಉಳಿಸಿ ಬೆಳಸಿಕೊಂಡು ಬರುವುದೆಂದು ನಾನು ನಂಬಿದ್ದೇನೆ.

ಚರಿತ್ರಾರ್ಹವಾದ ಈ ಮಹೋತ್ಸವ ಸಮಾರಂಭದಲ್ಲಿ ನನ್ನ ಶುಭಾಶಯಗಳನ್ನು ಕಳುಹಿಸಿದ್ದೇನೆ.

**ಜವಾಹರಲಾಲ್ ನೆಹರು**

I AM GLAD to know that you are bringing out an illustrated souvenir in Kannada to mark the inauguration of the new enlarged State of Mysore on the 1st of November, 1956. I have no doubt that, with the additional natural resources and manpower and with the great traditions of the Kannada-speaking areas, the State will be a prosperous one.

S. RADHAKRISHNAN

ನವಂಬರ್ ಒಂದನೆಯ ತಾರೀಖು ಉದಯವಾಗುವ ವಿಶಾಲ ಮೈಸೂರು ಸಂಸ್ಥಾನದ ಸೂಚಕವಾಗಿ ತಾವು ಕನ್ನಡದಲ್ಲಿ ಒಂದು ಸಚಿತ್ರ ಸ್ಮಾರಕ ಗ್ರಂಥವನ್ನು (Souvenir) ಪ್ರಕಟಿಸುತ್ತೀರೆಂಬುದನ್ನು ಕೇಳಿ ನನಗೆ ಸಂತೋಷವಾಗಿದೆ. ಹೆಚ್ಚಿನ ಪ್ರಕೃತಿ ಸಂಪತ್ತು ಮತ್ತು ಜನಬಲದಿಂದ, ಕನ್ನಡ ಪ್ರದೇಶಗಳ ಭವ್ಯ ಸಂಸ್ಕೃತಿಗಳ ಸಹಾಯದಿಂದ, ಈ ನೂತನ ಸಂಸ್ಥಾನವು ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸುವ ವಿಷಯದಲ್ಲಿ ನನಗೆ ಯಾವ ಸಂಶಯವೂ ಇಲ್ಲ.

ಎಸ್. ರಾಧಾಕೃಷ್ಣನ್

ಈ ಪುಸ್ತಕವು ಶುಭ ಮುಹೂರ್ತದಲ್ಲಿ ಹೊರಬಿದ್ದಿದೆ. ಕರ್ಣಾಟಕದವರು ಬಹು ದಿನಗಳಿಂದಲೂ ಕಾಣುತ್ತಿದ್ದ ಏಕೀಕರಣದ ಕನಸು ಇಂದು ನನಸಾಗಿದೆ. ಇದು ನಮ್ಮ ಮನಸ್ಸಿಗೆ ತುಂಬ ಸಂತೋಷವನ್ನುಂಟುಮಾಡಿದೆ. ಹಿಂದೆ ಅನೇಕ ಶತಮಾನಗಳಿಂದಲೂ ಕರ್ಣಾಟಕ ಸಂಸ್ಕೃತಿಯು ಏಕರೂಪದಲ್ಲಿದ್ದರೂ ಕಾಲಗತಿಯಿಂದ ಪ್ರಾಂತದ ವಿಭಜನೆಯಾಗಿ ಆ ಸಂಸ್ಕೃತಿಯ ಪ್ರಗತಿಗೆ ಅಡಚಣೆಯಾಗಿತ್ತು. ಈಗ ನಾಡಿನ ಪುಣ್ಯೋದಯದಿಂದ ಆ ಅಡ್ಡಿ ಅಡಚಣೆಗಳು ದೂರವಾಗಿವೆ. ಇಡೀ ಭಾರತದ ಸಂಸ್ಕೃತಿಯನ್ನು ಮಹಾಸಾಗರವೊಂದಕ್ಕೆ ಹೋಲಿಸಬಹುದು. ನಮ್ಮ ಪ್ರಾಂತೀಯ ಸಂಸ್ಕೃತಿಗಳು ಅದಕ್ಕೆ ಸೇರುವ ಪುಣ್ಯ ನದಿಗಳು. ಯಾವುದೊಂದು ನದಿಯಲ್ಲೂ ನೀರು ನಿಂತು ಹಸುರುಗಟ್ಟದೆ ಮುಂದೆ ಸಾಗಬೇಕು. ಇಲ್ಲದಿದ್ದರೆ ಸಾಗರಕ್ಕೆ ಸಲ್ಲಿಸುವ ಕಾಣಿಕೆ ಅಪೂರ್ಣವೂ ಅಶುದ್ಧವೂ ಆದೀತು. ಅಂದಮೇಲೆ ಭಾರತೀಯ ಸಂಸ್ಕೃತಿಯು ಪರಿಪೂರ್ಣವೂ ಪರಿಶುದ್ಧವೂ ಆಗಲೆಂದು ಇತರ ಭಾಷಾ ಪ್ರಾಂತದವರಂತೆ ನಾವೂ ನಮ್ಮ ಸಂಸ್ಕೃತಿಯನ್ನು ರೂಢಿಸಬೇಕು. ಮೊದಲನೆಯದು ಗುರಿ; ಎರಡನೆಯದು ಸಾಧನ. ಇವೆರಡರ ಪವಿತ್ರತೆಯನ್ನೂ ಕಾಪಾಡುವುದು ನಮ್ಮ ಕರ್ತವ್ಯ. ಭಾಷಾವಾರು ಪ್ರಾಂತಗಳ ಮಾತು ಬಂದಾಗಲೆಲ್ಲಾ ನಾವು ಇದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇಲ್ಲದಿದ್ದರೆ ಪ್ರಾಂತಗಳ ಪುನರ್ರಚನೆ ವ್ಯರ್ಥವಾದೀತು; ನಾಶಕಾರಕವಾದೀತು. ಸರ್ವಾಂಗ ಸೌಷ್ಠವವೇ ಭಾರತಾಂಬೆಯ ಹೃಷ್ಟಪುಷ್ಟ ಆರೋಗ್ಯದ ಪೂರ್ಣ ಸಿರಿ. ಸಹಸ್ರಾರು ವರ್ಷಗಳಿಂದ ಬೆಳೆದುಬಂದಿರುವ ಭಾರತೀಯ ಸಂಸ್ಕೃತಿಯ ವೃಷ್ಟಿವೈಶಾಲ್ಯವನ್ನು ಯಾರೂ ಮರೆಯುವಂತಿಲ್ಲ.

ಭಾಷಾದೃಷ್ಟಿಯಿಂದ ಅಲ್ಲಲ್ಲಿ ಅಸ್ವಾಭಾವಿಕವಾಗಿ ಮೂಡಿದ್ದ ಕೃತಕ ಭೇದಭಾವನೆಗಳನ್ನು ನಮ್ಮ ಮನಸ್ಸಿನಿಂದ ತೊಡೆದುಹಾಕಲು ನಾವು ಈ ಸದವಕಾಶವನ್ನು ಉಪಯೋಗಿಸಿಕೊಳ್ಳೋಣ. ಪ್ರಾಂತಗಳ ಪುನರ್ರಚನೆಯಿಂದ ಆಯಾಯ ಭಾಷೆಗಳ ಪ್ರದೇಶದವರು ತಮ್ಮ ದಿನಚರಿ ಜೀವನದಲ್ಲೂ, ರಾಜಕೀಯ ಮತ್ತು ವ್ಯಾಪಾರ ವ್ಯವಹಾರಗಳಲ್ಲೂ ನಿಕಟ ಸಂಬಂಧವನ್ನು ಹೊಂದಿ. ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲು ಬಹುಮಟ್ಟಿಗೆ ಅವಕಾಶವಿದೆ.

ಬೇರೆ ಬೇರೆ ಪ್ರದೇಶಗಳಿಗೆ ಹರಿದು ಹಂಚಿಹೋಗಿದ್ದ ಕನ್ನಡಿಗರು ಅಂದರೆ—ಮೈಸೂರು, ಹೈದರಾಬಾದು, ಬೊಂಬಾಯಿ, ಕೊಡಗು ಮತ್ತು ಮದರಾಸು ಜಿಲ್ಲೆಗಳ ಕನ್ನಡಿಗರು ಒಬ್ಬರನ್ನೊಬ್ಬರು ಪ್ರಾಯಶಃ ಸಾಕಾದಷ್ಟು ತಿಳಿದುಕೊಂಡಿಲ್ಲ. ಆಡಳಿತದ ಐಕ್ಯವಿಲ್ಲದೆ ಇದ್ದದ್ದು ಇದಕ್ಕೆ ಕಾರಣ. ಅದೂ ಅಲ್ಲದೆ ನಾವು ನಮ್ಮ ಕನ್ನಡನಾಡಿನ ಇತಿಹಾಸ, ಸಸ್ಯ ಮತ್ತು ಖನಿಜಸಂಪತ್ತು, ನಾಡಿನ ಪ್ರಗತಿಯನ್ನು ಸಾಧಿಸಲು ಇರಬಹುದಾದ ಸೌಲಭ್ಯ ಮತ್ತು ಸೌಕರ್ಯ

ಗಳು—ಇವುಗಳನ್ನೂ ಪೂರ್ಣವಾಗಿ ತಿಳಿದುಕೊಂಡಿಲ್ಲ. ನಮ್ಮ ರೇವುಪಟ್ಟಣಗಳು ಎಷ್ಟು ಹಡಗುಗಳಿಗೆ ಆಶ್ರಯ ಕೊಡಬಲ್ಲವೋ, ನಮ್ಮ ಮಲೆನಾಡಿನ ಅರಣ್ಯಗಳಲ್ಲಿ ಎಷ್ಟು ಸಂಪತ್ಸಾಧನಗಳಿವೆಯೋ, ಅಲ್ಲಿ ಹುಟ್ಟಿ ಹರಿಯುವ ನದಿಗಳಲ್ಲಿ ಎಷ್ಟು ವಿದ್ಯುಚ್ಛಕ್ತಿ ಅಡಗಿದೆಯೋ, ಭೂಗರ್ಭದಲ್ಲಿ ಎಷ್ಟು ಖನಿಜಗಳು ನರನಾರಾಯಣನ ಸೇವೆಗಾಗಿ ಕಾದಿವೆಯೋ, ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡಿಗರ ಹೃದಯದಲ್ಲಿ ಅದೆಷ್ಟು ಉತ್ಸಾಹ ಸತ್‌ಶಕ್ತಿಗಳು ಅರಳಲು ವಸಂತಕಾಲವನ್ನು ನಿರೀಕ್ಷಿಸುತ್ತಿವೆಯೋ—ಇದೆಲ್ಲವನ್ನೂ ಅಳೆದು ಪರಿಶೀಲಿಸುವ ಕಾಲ ಬಂದಿದೆ. ಈ ಕೆಲಸವನ್ನು ಪೂರೈಸುವ ಘನೋದ್ದೇಶದಿಂದಲೇ ಈ ಕೈಪಿಡಿಯನ್ನು ಪ್ರಕಟಿಸಲಾಗಿದೆಯೆಂದು ತಿಳಿದಿದ್ದೇವೆ. ಈ ಕೈಪಿಡಿಯಲ್ಲಿ ಪ್ರಸಿದ್ಧ ವಿದ್ವಾಂಸರು ಬರೆದಿರುವ ಪಾಂಡಿತ್ಯಪೂರ್ಣವೂ, ವಿಷಯ ಗರ್ಭಿತವೂ ಆದ ಲೇಖನಗಳಿರುವುದನ್ನು ನೋಡಿ ನಮಗೆ ಸಂತೋಷವಾಗಿದೆ. ಈ ಪ್ರೌಢಲೇಖನಗಳಿಂದ ನಮ್ಮ ನಾಡಿನ ಜನಜೀವನ, ಕಲೆ, ಧರ್ಮ, ಇತಿಹಾಸ—ಒಟ್ಟಿನಲ್ಲಿ ನಮ್ಮ ಸಂಸ್ಕೃತಿಯ ವಿಶ್ವರೂಪದ ದಿಗ್ದರ್ಶನವಾಗಿದೆ. ಈ ಲೇಖನಗಳನ್ನು ಅವಲೋಕಿಸಿದವರು ನಮ್ಮ ಪ್ರಾಂತದ ಪ್ರಾಕೃತಿಕ ಸೌಂದರ್ಯ, ಸಂಪತ್ತು, ಕಲಾಕೌಶಲ್ಯ—ಇವುಗಳ ವೈವಿಧ್ಯ, ವೈಭವ, ವೈಖರಿ ಗಳನ್ನು ನೋಡಿ ದಿಗ್ಭ್ರಮೆಗೊಳ್ಳುತ್ತಾರೆ. ಪಂಪ ಮಹಾಕವಿಯು ತನ್ನ ಅಮರ ಕಾವ್ಯವಾದ 'ವಿಕ್ರಮಾರ್ಜುನ ವಿಜಯ' ದಲ್ಲಿ ಹೇಳಿರುವ —

> "ಚಾಗದ, ಭೋಗದ, ಅಕ್ಕರದ,
> ಗೇಯದ, ಗೊಟ್ಟಿಯ, ಅಲಂಪಿನ,
> ಇಂಪುಗಳ್ಗೆ ಆಗರ ಮಾನಿಸರೇ"—

ಕನ್ನಡಿಗರು, ಎಂಬ ಮಾತನ್ನು ಈ ಕೈಪಿಡಿಯು ಸರ್ವವಿಧದಲ್ಲಿಯೂ ಸಮರ್ಥಿ ಸುತ್ತದೆ. ಕನ್ನಡಿಗರ ಜಾಣ್ಮೆ, ವಿವೇಕ, ಕಷ್ಟಸಹಿಷ್ಣುತೆ, ಸಹನೆ, ಪರಾಕ್ರಮ, ಶಾಂತಿ, ಶಿಸ್ತು, ಶೀಲ ಇತ್ಯಾದಿ ಉದಾತ್ತಗುಣಗಳ ಕೈಗನ್ನಡಿಯಂತಿರುವ ಈ ಕೈಪಿಡಿಯು ಸರ್ವಾದರಣೀಯವಾಗಿದೆ. ಇದನ್ನು ನಾವು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ.

ಕರ್ನಾಟಕದ ಇತಿಹಾಸದಲ್ಲಿ ಈ ಶುಭಪ್ರಕರಣ ನಮ್ಮ ಅಧಿಕಾರಾವಧಿ ಯಲ್ಲಿ ಒದಗಿದ್ದು ನಮ್ಮ ಭಾಗ್ಯವೆಂದು ಹೇಳಲು ಹೆಮ್ಮೆಪಡುತ್ತೇವೆ.

ಒಂದುಗೂಡಿದ ಕನ್ನಡನಾಡು ಭಾರತಾಂಬೆಯ ಸೇವೆಗೆ ಅನರ್ಘ್ಯರತ್ನ ಗಳನ್ನು ತರಲಿ. ಕನ್ನಡ ಜನತೆಯೂ, ಅಂತೆಯೇ ಭಾರತದ ಎಲ್ಲ ಸಹೋದರ ಸಹೋದರಿಯರೂ, ಸತ್ಯ, ಧರ್ಮ, ಶಾಂತಿ, ಸಹನೆಗಳನ್ನು ಎತ್ತಿಹಿಡಿದು, ಭಾರತಾಂಬೆಯ ಕೀರ್ತಿ ಜಗತ್ತಿನಲ್ಲೆಲ್ಲಾ ಬೆಳಗುವಂತಾಗಲಿ.

I SEND my best wishes to enlarged Mysore. I hope and pray that one day the southern regions whose people speak only various dialects of the same language—Tamil, Kannada and Malayalam, and who are one in their way of life will come together in one well-governed prosperous big State within the Union. Let us not allow small and narrow interests to take obstinate root and obstruct real progress. " A State with but one language and one way of life is both weak and decrepit ", said King Stephen of Hungary, long ago. " A State which is incompetent to satisfy different races condemns itself; a State which does not include them is destitute of the chief basis of self-government; a State which labours to neutralize, to absorb or expel them destroys its own vitality ", said Lord Acton. The multi-lingual multi-national state is the ideal State in political theory today.

C. RAJAGOPALACHAR

ವಿಶಾಲ ! ಮೈಸೂರಿಗೆ ನನ್ನ ಶುಭಾಶಯಗಳನ್ನು ಕಳುಹಿಸುತ್ತೇನೆ. ಒಂದೇ ಭಾಷೆಯ ಹಲವಾರು ಉಪಭಾಷೆಗಳಾಗಿರುವ ತಮಿಳು, ಕನ್ನಡ ಮತ್ತು ಮಲೆಯಾಳ ಭಾಷೆಗಳನ್ನಾಡುವ ಮತ್ತು ಒಂದೇ ಜೀವನ ಮಾರ್ಗವನ್ನು ಹೊಂದಿರುವ ಜನರಿರುವ ದಕ್ಷಿಣ ಪ್ರದೇಶಗಳು ಒಂದು ದಿನ ಭಾರತದಲ್ಲಿ ಒಂದು ಉತ್ತಮ ಆಡಳಿತದಿಂದ ಕೂಡಿದ ಪ್ರಗತಿಪರ ಹಿರಿಯ ಸಂಸ್ಥಾನವಾಗಿ ರೂಪುಗೊಳ್ಳುವುದೆಂಬ ಭರವಸೆ ನನಗಿದೆ; ಮತ್ತು ಹಾಗಾಗಲೆಂದು ನಾನು ಪ್ರಾರ್ಥಿಸುತ್ತೇನೆ. ಸಣ್ಣ ಮತ್ತು ಸಂಕುಚಿತ ಆಸಕ್ತಿಗಳು ತೊಡಕಿನ ಬೇರುಗಳನ್ನು ಬಿಟ್ಟು, ನೈಜ ಪ್ರಗತಿಗೆ ಅಡ್ಡಿತಂದೊಡ್ಡಲು ನಾವು ಅವಕಾಶಕೊಡುವುದು ಬೇಡ. "ಒಂದೇ ಭಾಷೆಯ ಮತ್ತು ಒಂದೇ ಜೀವನ ಮಾರ್ಗದ ಒಂದು ಸಂಸ್ಥಾನವು ದುರ್ಬಲವಾದುದು ಮತ್ತು ತೇಜೋವಿಹೀನವಾದುದು."—ಎಂದು ಹಂಗೇರಿಯ ಸ್ಟೀಫನ್ ದೊರೆಯು ಬಹಳ ಹಿಂದೆಯೇ ಹೇಳಿರುತ್ತಾರೆ. "ವಿವಿಧ ಜನಾಂಗಗಳನ್ನು ತೃಪ್ತಿಪಡಿಸಲು ಅಶಕ್ತವಾದ ಸಂಸ್ಥಾನ ತನ್ನನ್ನು ತಾನೇ ನಿಷೇಧಪಡಿಸಿಕೊಳ್ಳುತ್ತದೆ; ಅವರನ್ನು ಒಳಗೊಳ್ಳದ ಸಂಸ್ಥಾನಕ್ಕೆ ಸ್ವಯಂಪ್ರಭುತ್ವದ ಮುಖ್ಯ ತಳಹದಿಯೇ ಇಲ್ಲದಂತಾಗುತ್ತದೆ; ಅವರನ್ನು ತಾಟಸ್ಥ್ಯಗೊಳಿಸಲು, ಒಳಪಡಿಸಿಕೊಳ್ಳಲು ಅಥವಾ ಹೊರದೂಡಲು ಪ್ರಯತ್ನಿಸುವ ಸಂಸ್ಥಾನ ತನ್ನ ಸತ್ವವನ್ನೇ ಕಳೆದುಕೊಳ್ಳುತ್ತದೆ"—ಎಂದು ಲಾರ್ಡ್ ಆಕ್‌ಟ‌ರವರು ಹೇಳಿರುತ್ತಾರೆ. ಇಂದಿನ ರಾಜಕೀಯ ಸಿದ್ಧಾಂತದ ಪ್ರಕಾರ ವಿವಿಧ ಭಾಷೆಗಳ ವಿವಿಧ ರಾಷ್ಟ್ರೀಯತೆಯುಳ್ಳ ಸಂಸ್ಥಾನವೇ ಆದರ್ಶ ಸಂಸ್ಥಾನ.

**ಸಿ. ರಾಜಗೋಪಾಲಾಚಾರ್**

ಕನ್ನಡ ಜನತೆಯ ಜೀವನದಲ್ಲಿ ಇದೊಂದು ಮಹಾದಿನ. ಚರಿತ್ರೆಯಲ್ಲಿಯೇ ಪ್ರಥಮಬಾರಿ ಕನ್ನಡಿಗರು ಒಂದುಗೂಡಿ, ಈಗ ಒಂದು ರಾಜ್ಯವಾಗಿದ್ದಾರೆ.

ನಮ್ಮ ಇತಿಹಾಸ ದೊಡ್ಡದು; ಸಂಸ್ಕೃತಿ ದೊಡ್ಡದು; ಜೀವನ ದೊಡ್ಡದು. ಈ ಇತಿಹಾಸ ಇನ್ನೂ ದೊಡ್ಡದಾಗಬೇಕು; ಸಂಸ್ಕೃತಿ ಇನ್ನೂ ಎತ್ತರವಾಗಬೇಕು; ಜೀವನ ಇನ್ನೂ ವಿಸ್ತಾರವಾಗಬೇಕು. ಈ ಧ್ಯೇಯಗಳನ್ನು ಸಾಧಿಸುವ ಅಪೂರ್ವ ಅವಕಾಶ ಈಗ ನಮ್ಮದಾಗಿದೆ. ದಕ್ಷಿಣದ ಚಾಮರಾಜನಗರದಿಂದ ಹಿಡಿದು ಉತ್ತರದ ಬಿದರೆ ನಗರದವರೆಗಿನ ಎಲ್ಲ ಕನ್ನಡಿಗರೂ ತಮ್ಮ ಜೀವನವನ್ನು ಉತ್ತಮಗೊಳಿಸಿಕೊಂಡು ಭಾರತದ ಸುಖಸಮೃದ್ಧಿಯನ್ನು ಹೆಚ್ಚಿಸಬೇಕು.

ಈ ಕನ್ನಡ ರಾಜ್ಯದಲ್ಲಿ ಬದುಕಿನ ಶ್ರೀಮಂತಿಕೆಯನ್ನು ಹೆಚ್ಚಿಸಲು ಏನೇನು ಬೇಕೋ ಅದೆಲ್ಲವೂ ಇದೆ. ಬೆಳೆಯುವ ವೈವಿಧ್ಯಮಯ ಭೂಮಿ ಇದೆ; ನಿರಂತರವಾಗಿ ಹರಿಯುವ ನದಿಗಳಿವೆ; ವಿವಿಧ ಸಂಪತ್ತನ್ನುಳ್ಳ ಕಡಲ ತೀರವಿದೆ; ಭಾಗ್ಯದ ಬಾಗಿಲು ಮುಚ್ಚಿದಂತಿರುವ ಮಲೆನಾಡು ಪ್ರದೇಶವಿದೆ; ಖನಿಜ ಸಂಪತ್ತಿನ ವಿಪುಲ ಸಂಗ್ರಹವಿದೆ. ಅದೆಲ್ಲವನ್ನೂ ಪ್ರಯೋಜನಕ್ಕೆ ತಂದುಕೊಳ್ಳಲು ಮನುಷ್ಯನ ಶಕ್ತಿ ಮಾತ್ರ ಜಾಗೃತವಾಗಬೇಕು. ಈ ನಾಡು ನಮ್ಮದು—ಅದನ್ನು ಕಟ್ಟಿ ನಿಲ್ಲಿಸಿದ ಕೀರ್ತಿ ನಮ್ಮದಾಗಬೇಕು. ಈ ಜೀವನ ನಮ್ಮದು—ಅದರಲ್ಲಿ ಬದುಕಿದ ಗೌರವ ನಮ್ಮದಾಗಬೇಕು.

ಭಾರತದ ಒಟ್ಟಿನ ಐಕ್ಯವನ್ನು ಹೆಚ್ಚಿಸುವುದೇ ಕನ್ನಡ ನಾಡು ಒಂದುಗೂಡುವುದರ ಉದ್ದೇಶ. ಭಾರತದೇಶವು ಉಳಿದರೆ ಕನ್ನಡನಾಡು ಉಳಿಯುತ್ತದೆ. ಭಾರತದ ಅಭಿವೃದ್ಧಿಯಲ್ಲಿ ನಮ್ಮ ಹೊಸ ಮೈಸೂರಿನ ಅಭಿವೃದ್ಧಿ ಅಡಕವಾಗಿದೆ. ಭಾರತಕ್ಕೇ ಅಲಂಕಾರಪ್ರಾಯವಾಗಿ ನಮ್ಮ ನಾಡು ಬೆಳೆಯಬೇಕು.

ಈಗ ತಲೆಯೆತ್ತುವ ಹೊಸ ರಾಜ್ಯಗಳೂ ಸಹ ಅಲ್ಲಿಯ ಜನರಿಗಾಗಿ ಹೊಸ ಜೀವನದ ಬಾಗಿಲನ್ನು ತೆರೆಯುವುವೆನ್ನುವ ವಿಶ್ವಾಸ ನನಗಿದೆ. ಸೋದರ ರಾಜ್ಯಗಳ ಅವತರಣವನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿ, ನಾನು ಅಲ್ಲಿಯ ಜನರಿಗೆ ಶುಭವನ್ನು ಕೋರುತ್ತೇನೆ.

ಕನ್ನಡ ನಾಡಿನ ಎಲ್ಲ ಜನರೂ ತಮ್ಮ ಭಿನ್ನತೆಗಳನ್ನು ಮರೆತು ಪರಸ್ಪರತೆಯನ್ನು ಹೆಚ್ಚು ಹೆಚ್ಚಾಗಿ ಅರಿತುಕೊಳ್ಳಬೇಕು; ಇನ್ನೊಬ್ಬರ ಸಮಸ್ಯೆಯನ್ನು

ಆತ್ಮೀಯತೆಯಿಂದ ಅರಿಯುವುದಕ್ಕಿಂತಲೂ ಹೆಚ್ಚಿನ ಅನುಕಂಪ ಬೇರೊಂದಿಲ್ಲ. ನಾವು ಅನೇಕ ದಶಕಗಳಿಂದ ಬಯಸುತ್ತಿದ್ದ ಕನ್ನಡ ರಾಜ್ಯ ಈಗ ನಮಗೆ ಲಭಿಸಿದೆ. ನಾವೆಲ್ಲರೂ ಒಟ್ಟಿಗೆ ಬದುಕಿ, ಒಟ್ಟಿಗೆ ಅನುಭವಿಸಿ, ಒಟ್ಟಿಗೆ ಶಕ್ತಿಸಂಪನ್ನತೆಯನ್ನು ಪಡೆಯೋಣ. ನಮ್ಮ ಜೀವನದಲ್ಲಿ ತೇಜಸ್ಸು ಉದ್ಭವಿಸಿ, ಇಡೀ ಭಾರತದ ಜೀವನವನ್ನು ಜಾಜ್ವಲ್ಯಮಾನಗೊಳಿಸಲಿ. ವಿಷವೆಲ್ಲ ಅಳಿದು ನಮ್ಮ ಜೀವನ ಅಮೃತಮಯವಾಗಲಿ.

ಬೆಂಗಳೂರು,
೧ನೆಯ ನವಂಬರ್ ೧೯೫೬.

**ಸಿ. ನಿಜಲಿಂಗಪ್ಪ**
**ಮುಖ್ಯ ಮಂತ್ರಿ**

# INTRODUCTION

IN RECENT years, we have witnessed two important events in our country. The first event is the attainment of the Independence of India. The second event is the Re-organisation of States. The Independence of India has created a lot of stir all over the world. But the question of States' Re-organisation did not create any stir in the world as such ; but, it did agitate the minds of the vast millions of this country. No other problem excepting the question of Independence of this country created so much enthusiasm, commotion, agitation and to some extent, bitterness as the States' Re-organisation issue. After the agitation and bitterness were over, we were able to settle down and think calmly. We have realised that this is not a problem which should embitter feelings and create disharmony. We have taken a final decision now.

We must not forget that under the scheme of States' Re-organisation, we are only altering the number and boundaries of the States for administrative purposes and not trying to set up Independent Sovereign States. We should never forget that we are Indians first and that our destiny is inextricably bound up with that of the whole country. Therefore, the question of States' Re-organisation need not warrant that much of excitement which was evinced when we were fighting for Independence.

This Souvenir marks the inauguration of the new State of Mysore in which, for the first time, all the Kannada-speaking areas with a population of nearly two crores are coming under a single administration. Whatever might be the differences that existed prior to the final decision, now it is our bounden duty to forget the past and strive our utmost to build up a prosperous Mysore State. The complete synthesis of the five administrative systems which have worked in isolation from each other for centuries may take some time. I feel that this synthesis will be smooth if all concerned make up their minds to approach it with the faith that we are Indians first and then Kannadigas. In his message printed elsewhere in this Souvenir, the Prime Minister has pointed out that every one of us should realise that it is finally India and not any separate part that counts.

May God give us the strength to go forward united to build up a prosperous new Mysore State.

KADIDAL MANJAPPA
*Chief Minister*

*31st October, 1956.*

# ಮುನ್ನುಡಿ



ಇತ್ತೀಚೆಗೆ ನಮ್ಮ ದೇಶದಲ್ಲಿ ಎರಡು ಪ್ರಮುಖ ಪ್ರಸಂಗಗಳನ್ನು ನಾವು ವೀಕ್ಷಿಸಿರುತ್ತೇವೆ. ಭಾರತದ ಸ್ವಾತಂತ್ರ್ಯೋದಯವೇ ಮೊದಲನೆಯ ಪ್ರಸಂಗ. ರಾಜ್ಯಗಳ ಪುನರ್ವಿಂಗಡನೆಯೇ ಎರಡನೆಯ ಪ್ರಸಂಗ. ಭಾರತದ ಸ್ವಾತಂತ್ರ್ಯವು ವಿಶ್ವದಾದ್ಯಂತ ಹೆಚ್ಚು ಕೋಲಾಹಲವನ್ನುಂಟುಮಾಡಿತು. ಆದರೆ, ಭಾರತದ ಸಂಸ್ಥಾನಗಳ ಪುನರ್ವಿಂಗಡನೆಯು ವಿಶ್ವದಲ್ಲಿ ಅಂತಹ ಯಾವ ಕೋಲಾಹಲವನ್ನೂ ಉಂಟುಮಾಡಲಿಲ್ಲ; ಆದಾಗ್ಯೂ, ಇದು ಈ ದೇಶದ ಲಕ್ಷೋಪ ಲಕ್ಷ ಜನರ ಮನಸ್ಸನ್ನು ಕಲಕಿತು. ಈ ದೇಶದ ಸ್ವಾತಂತ್ರ್ಯದ ಸಮಸ್ಯೆಯನ್ನು ಬಿಟ್ಟರೆ, ಉಳಿದ ಇನ್ನಾವ ಸಮಸ್ಯೆಯೂ ಸಂಸ್ಥಾನಗಳ ಪುನರ್ವಿಂಗಡನೆಯ ಸಮಸ್ಯೆಯಷ್ಟು ಉತ್ಸಾಹ, ಉದ್ವೇಗ, ಕೋಲಾಹಲ ಮತ್ತು ಸ್ವಲ್ಪಮಟ್ಟಿಗೆ ವೈಮನಸ್ಯಗಳನ್ನು ಉಂಟುಮಾಡಲಿಲ್ಲ. ಕೋಲಾಹಲವೂ, ವೈಮನಸ್ಯಗಳೂ ನಿಂತ ಮೇಲೆ, ಒಂದು ಸ್ಥಿಮಿತಕ್ಕೆ ಬಂದು, ಶಾಂತರೀತಿಯಲ್ಲಿ ವಿಚಾರಮಾಡಲು ನಮಗೆ ಸಾಧ್ಯವಾಯಿತು. ಆದರೆ, ವೈಮನಸ್ಯ ಮತ್ತು ಅನೈಕ್ಯತೆಗಳನ್ನು ಉಂಟುಮಾಡುವ ಸಮಸ್ಯೆ ಇದಲ್ಲವೆಂದು ನಾವು ಮನಗಂಡಿರುತ್ತೇವೆ. ನಾವು ಈಗ ಒಂದು ಅಂತಿಮ ನಿರ್ಧಾರಕ್ಕೆ ಬಂದಿರುತ್ತೇವೆ.

ಸಂಸ್ಥಾನಗಳ ಪುನರ್ವಿಂಗಡನೆಯ ಯೋಜನೆಯ ಪ್ರಕಾರ . ಕೇವಲ ಆಡಳಿತದ ಉದ್ದೇಶಗಳಿಗಾಗಿ ನಾವು ಸಂಸ್ಥಾನಗಳ ಸಂಖ್ಯೆ ಮತ್ತು ಎಲ್ಲೆಕಟ್ಟುಗಳನ್ನು ಬದಲಾಯಿಸುತ್ತಿದ್ದೇವೆಯೇ ಹೊರತು, ಸರ್ವಸ್ವತಂತ್ರ ಸಂಸ್ಥಾನಗಳನ್ನು ಪುನರ್‌ರೂಪಿಸಲು ಹೊರಟಿಲ್ಲವೆಂಬುದನ್ನು ನಾವು ಮರೆಯತಕ್ಕುದಲ್ಲ. ನಾವು ಮೂಲತಃ ಭಾರತೀಯರು ಮತ್ತು ನಮ್ಮ ಆಗುಹೋಗುಗಳು ಇಡೀ ದೇಶದ ಆಗುಹೋಗುಗಳೊಡನೆ ನಿಕಟವಾಗಿ ಹೊಂದಿಕೊಂಡಿವೆ ಎಂಬುವನ್ನು ನಾವು ಎಂದೆಂದಿಗೂ ಮರೆಯಲಾಗದು. ಆದುದರಿಂದ, ಸಂಸ್ಥಾನಗಳ ಪುನರ್ವಿಂಗಡನೆಯ ಪ್ರಶ್ನೆಯು ಸ್ವಾತಂತ್ರ್ಯದ ಹೋರಾಟ ನಡೆದಾಗ ಕಂಡುಬಂದಷ್ಟು ಉದ್ವೇಗವನ್ನು ಕೆರಳಿಸಬೇಕಾಗಿಲ್ಲ.

ಈ ಸ್ಮಾರಕ ಗ್ರಂಥವು ಕನ್ನಡ ಮಾತನಾಡುವ ಎಲ್ಲ ಪ್ರದೇಶಗಳ ಸುಮಾರು ಎರಡು ಕೋಟಿ ಕನ್ನಡಿಗರು ಮೊಟ್ಟ ಮೊದಲನೆಯಬಾರಿ ಏಕೈಕ ಆಡಳಿತವ್ಯಾಪ್ತಿಗೆ ಬರುತ್ತಿರುವ ನೂತನ ಮೈಸೂರು ಸಂಸ್ಥಾನದ ಉದ್ಘಾಟನೆಯ ಸವಿನೆನಪನ್ನು ಸೂಚಿಸುತ್ತದೆ. ಅಂತಿಮ ತೀರ್ಮಾನಕ್ಕೆ ಬರುವಮುನ್ನ ಏನೇ ಭಿನ್ನಾಭಿಪ್ರಾಯಗಳು

ತಲೆದೋರಿರಲಿ, ಈಗ ಅವುಗಳನ್ನೆಲ್ಲಾ ನಾವು ಮರೆತು, ಮೈಸೂರಿನ ಅಭ್ಯುದಯ ಕ್ಕಾಗಿ ದುಡಿಯುವುದು ನಮ್ಮ ಆದ್ಯಕರ್ತವ್ಯವಾಗಿದೆ. ಶತಮಾನಗಳವರೆವಿಗೆ ಒಂದಕ್ಕೊಂದು ಬೇರ್ಪಟ್ಟು, ಐದು ಆಡಳಿತ ಪದ್ಧತಿಗಳಿಗೊಳಪಟ್ಟಿದ್ದ ಪ್ರದೇಶಗಳ ಸಂಯೋಜನೆಗೆ ಸ್ವಲ್ಪ ಕಾಲ ಬೇಕಾದೀತು. ಈ ಸಂಯೋಜನೆಗೆ ಪ್ರಯತ್ನಿಸುವವ ರೆಲ್ಲರೂ, ಮೊದಲು ತಾವು ಭಾರತೀಯರು, ಅನಂತರ ಕನ್ನಡಿಗರು, ಎಂಬ ಭಾವನೆ ಯಿಂದ ಮುಂದುವರಿದರೆ, ಈ ಸಂಯೋಜನಾ ಕಾರ್ಯವು ಸುಗಮವಾಗುವುದೆಂದು ನಾನು ಭಾವಿಸುತ್ತೇನೆ. ಈ ಸ್ಮಾರಕ ಗ್ರಂಥದ ಬೇರೆಡೆಯಲ್ಲಿ ಪ್ರಕಟವಾಗಿರುವ ಸಂದೇಶದಲ್ಲಿ ಪ್ರಧಾನ ಮಂತ್ರಿಗಳಾದ ಮಾನ್ಯ ಜವಾಹರಲಾಲ್ ನೆಹ್ರೂರವರು ಸಹ ಇದೇ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಪರಮಾತ್ಮನು ಪ್ರಗತಿಯುಕ್ತವಾದ ನೂತನ ಮೈಸೂರಿನ ರಚನೆಗಾಗಿ ಒಟ್ಟಿಗೆ ಕಲೆತು ಮುಂದುವರಿಯುವ ಸಾಮರ್ಥ್ಯವನ್ನು ನಮಗೆ ದಯಪಾಲಿಸ ಲೆಂದು ಬೇಡುತ್ತೇನೆ.

ಬೆಂಗಳೂರು
೩೧-೧೦-೧೯೫೬

**ಕಡಿದಾಳ್ ಮಂಜಪ್ಪ**
ಮುಖ್ಯ ಮಂತ್ರಿ

# PREFACE

THIS BOOK has been issued in two parts, the first containing articles written by eminent people from all over the Kannada-speaking areas, and the second containing statistical data about the 19 districts that form the new State of Mysore. The idea behind the publication is to see that it will serve to create a mental and psychological fusion between the several areas.

Writing on "Our Culture", Shri R. R. Diwakar has explained clearly the difference between individual culture and social culture and has pointed out that Kannada culture is part and parcel of Indian culture. He has expressed the view that Kannada culture has for its background a great ancient heritage and hopes that this culture will have a bright future in its enlarged sphere.

Dr. S. Srikanta Sastry, in his article on "The History of Karnataka", has dealt with the succession of Kings who ruled Karnataka, namely, the Kadambas, the Gangas, the Chalukyas, and the Hoysalas, culminating in the establishment of the Vijayanagar Empire. He has made a reference to the Mahratta influence on Mysore and the Mohamedan rule under Hyder and Tippu. He has pointed out that the new Mysore State with its glorious past should be able to make a mark in Independent India.

The article on "Geographical Features of Karnataka" has been contributed by Sri H. Rama Rao. He has given a clear picture of the geographical features of the new State with its varying climate and rainfall. He has indicated that the new State with its rivers and fertile soil should be able to advance in every direction so as to make the people happy and contented.

In his article on "The Aborigines of Karnataka", Shri D. Krishna Iyengar has traced the origin, life and culture of the aborigines of the Kannada country who are scattered in its hills and forests in places like the Biligirirangan Hills, the Nilgiris, Coorg, South Kanara and Bellary. He has explained in detail the social life of these aborigines and their culture and has expressed the view that Government should make every effort to safeguard the interests of these aborigines so as to bring them into contact with the civilised world.

*Asthana Vidwan, Panditaratnam* B. Shivamurthy Sastry has, in his article on "The Religious Movements in Karnataka", dealt with the several religious movements that have left their impress on the Kannadigas. He has pointed out that the philosophers of the Vedic religion who were followed by the supporters of Jainism, Buddhism, Shaivism, Vaishnavism and Veerashaivism, have all stood for the oneness of God.

In his illuminating article on "The Political Life of the Kannadigas", Shri T. T. Sharma has given a clear picture of the political history of Karnataka and has pointed out that the Kings of Karnataka have always stood for a 'Welfare State'

and that the municipal administration was well-organised. He has expressed the hope that the new State will be able to proceed in the foot-steps of their great ancestors and succeed in the establishment of a 'Welfare State' according to modern conception.

In his article, on "The Traditions of Karnataka" *Rajasevasakta* C. K. Venkataramayya has given a picture of the noble traditions that existed among the people of Karnataka in the past in the matter of their food habits, patriotism, international relationship, courage and fortitude, loyalty to their king and devotion to God. He has indicated that these noble traditions should stand in good stead in the new set-up so as to make the people of new Mysore State great and good citizens of this ancient land.

Writing on "Architecture" Dr. M. Seshadri has given a clear picture of the architectural development in Karnataka under the Kadambas, the Gangas, the Chalukyas, the Hoysalas and the Vijayanagar Kings. He has given suitable illustrations to establish the truth that Karnataka has had a glorious past in the matter of architectural beauty.

Writing on "Dance", Shri S. N. Swamy has given a clear account of the origin and development of Karnataka dance with its distinctive features. He has given an account of the theory of dance as it obtains in Karnataka.

In his article on "Drama", Shri Devudu Narasimha Sastry has dealt with the development of drama in Karnataka, drawing largely on the dramatic technique as it existed in Sanskrit. He has given a

pen-picture of some of the great exponents of histrionic art in Karnataka, both in professional and amateur fields. He has invited the attention of young writers to the necessity to bring out dramas so as to reflect the culture and the greatness of Karnataka.

In his article on "Music", Shri B. V. Krishna Sastry has dealt with the origin and development of Karnataka music, both in theory and practice. He has stated that there was a time when musicians from Tamilnad and other South Indian places came to regard Mysore State as the great centre of Karnataka music and has pointed out that it is up to the present artistes to maintain that high standard.

Writing on "Painting", Shri A. N. Subba Rao has given a clear account of the theory and practice of painting as it prevails in Karnataka, which includes line drawings and colour paintings. He has given a good account of the great painters in the past as well as those that are now in the field, and has expressed the view that Karnataka artistes will carry on the high tradition.

In his article on "The Formation of New Mysore", Shri Gorur Ramaswamy Iyengar has traced the several events that led to the formation of the New Mysore State. He has indicated that the new State is an integral part of India and has expressed the view that with the various natural resources and manpower, the new State should be able to progress in all directions.

In his article on "The Religious Unity of Karnataka" Shri K. P. Ramanathaiya has given a clear

picture of the religious movements that influenced the growth of culture in Karnataka and has pointed out that the protagonists of these religions have persis tently preached the oneness of God.

Writing on "The Women of Karnataka", Srimathi Jayadevitayi Ligade has given a good account of the part played by women in Karnataka in the past. She has expressed the view that women should be given proper education and opportunities to display their talents and be worthy partners in building up a new India.

Shri S. M. Desai, in his article on "Kannada Folk Songs", has given a clear account of the development of folk songs in Karnataka, dealing with the several aspects of social life. He has illustrated his article profusely with quotations from the several well-known writers of folk songs and has pointed out that Kannadigas should not only preserve the ancient folk songs but try to develop this aspect of literature, which will easily reflect the culture of the people.

Writing on "Modern Kannada Literature", Shri A. N, Krishna Rao has dealt with, in detail, the development of modern literature in Kannada in the field of prose, drama, short story, lyric, novel and literary review. He has indicated that the influence of English literature has given a liberal outlook among the Kannada authors. He has welcomed the growth of modern trends in Kannada literature and has expressed the view that Kannada writers, instead of being complacent over their achievements, should give the world the best specimens of literature.

Shri V. S. Basavanala has written on "Co-operation". He has given a clear picture of the growth of co-operative movement in Karnataka and has pointed out that in a Welfare State, it is absolutely necessary to develop co-operative effort by utilising the natural resources in the new set-up.

In his article on "Industries", Shri S. K. Kallapur has indicated that industries should take their pride of place in the new State and every help should be given by Government towards industrial development in the country.

Writing on "Kannada Journalism", Shri P. R. Ramaiya has given a good account of the growth and development of Kannada journalism in the State. He has indicated that the newspapers in Karnataka should come to the fore in the art of administration and give constructive criticism of Government measures. He has also pointed out that newspapers should help in the development of Kannada vocabulary so as to explain the several aspects of life in the modern set-up.

In his article on "Transport", Shri Krishnakumar Kallur has made an exhaustive survey of the road, rail and air systems of transport, and with three illustrative diagrams, he has been able to explain the lines on which this transport system should be developed in future. He has pointed out that every effort should be made to link the sea-coast towns with Bangalore, the administrative headquarters, as well as some of the key towns in Karnataka.

---

# ಭಾಗ ೧

## (ಲೇಖನ ಮಾಲೆ)

---

## ಲೇಖನ ಕ್ರಮ

# ಭಾಗ ೨

## (ಅಂಕಿಗಳ ಸಂಗ್ರಹ)

---

## ವಿಷಯಾನುಕ್ರಮ

| ಸಂಖ್ಯೆ | ವಿಷಯ | ಪುಟ |
|---|---|---|


---

# ನಮ್ಮ ಸಂಸ್ಕೃತಿ

ಲೇಖಕರು :

ಶ್ರೀಮಾನ್ ರಂಗನಾಥ ದಿವಾಕರ್ ಅವರು, ರಾಜ್ಯಪಾಲರು, ಬಿಹಾರ್.

## ೧. ಸಂಸ್ಕೃತಿಯ ಅರ್ಥ

ಸಂಸ್ಕೃತಿ ಎಂದೊಡನೆ ನಮಗೆ ತಟ್ಟನೆ ಒಂದು ಅರ್ಥವು ಹೊಳೆಯುವದು. 'ಕ್ಷ' ಎಂಬುವನು ಶುದ್ಧ ಪಶು, ಅವನಿಗೇನೂ ಸಂಸ್ಕಾರವಿಲ್ಲ, ಎಂಬ ವಾಕ್ಯದ ಅರ್ಥವು ನಮಗೆ ಚೆನ್ನಾಗಿ ಆಗುವದು. ಹೀಗಿದ್ದರೂ ಸಂಸ್ಕೃತಿ (ಕಲ್ಚರ್) ಎಂಬ ಶಬ್ದದ ಸರ್ವಸಮ್ಮತ ಅಥವಾ ಸರ್ವಸಮರ್ಪಕ ವ್ಯಾಖ್ಯೆ ನಮಗೆ ಇನ್ನೂ ಎಲ್ಲಿಯೂ ದೊರೆಯುವದಿಲ್ಲ. ಇದಕ್ಕೆ ಕಾರಣವಿದೆ.

ಸಂಸ್ಕೃತಿ ಎಂಬುದಕ್ಕೆ ಬೇರೆ ಬೇರೆ ವಿದ್ವಾಂಸರು ಬೇರೆ ಬೇರೆ ಅರ್ಥಗಳನ್ನು ಕಲ್ಪಿಸುವರು. ಹಲವರು ಸಂಸ್ಕೃತಿ (ಕಲ್ಚರ್) ಬೇರೆ, ಸಭ್ಯತೆ (ಸಿವಿಲಿಜೇಶನ್) ಬೇರೆ ಎನ್ನುವರು. ಮನುಷ್ಯನ ಸದ್ಗುಣ-ಸತ್‌ಶಕ್ತಿಗಳ ವಿಕಾಸಕ್ಕೆ ಸಂಸ್ಕೃತಿ ಎಂದೂ, ಬಾಹ್ಯವಾದ ರೇಲ್ವೆ, ವಿದ್ಯುತ್ ಆದಿಗಳ ಮೂಲಕ ಆಗಬಹುದಾದ ಸೌಕರ್ಯವಿಕಾಸಕ್ಕೆ ಸಭ್ಯತೆ ಎಂದೂ ಅವರು ಹೇಳುವರು. ಇನ್ನೂ ಹಲವರು ವೈಯಕ್ತಿಕ ಪ್ರಗತಿಗೆ ಸಂಸ್ಕೃತಿ, ಸಾಮೂಹಿಕ ಪ್ರಗತಿಗೆ ಸಭ್ಯತೆ ಎನ್ನುವರು. ಕೆಲವರು ಸಾಹಿತ್ಯಸಂಗೀತಾದಿ ಕಲೆಗಳಿಗೆ ಮಾತ್ರ ಸಂಸ್ಕೃತಿ ಎಂಬ ಹೆಸರಿಡುವರು. ಇನ್ನೂ ಕೆಲವರು ಸೌಜನ್ಯಾದಿ ಸದ್ಗುಣಗಳ ವಿಕಾಸಕ್ಕಷ್ಟೆ ಸಂಸ್ಕೃತಿ ಎನ್ನುವರು.

ಏನೇ ಇರಲಿ, ದಿನೇ ದಿನೇ ಸಂಸ್ಕೃತಿಯ ಅರ್ಥವು ಹೆಚ್ಚು ವ್ಯಾಪಕ ಹಾಗೂ ಸರ್ವಸಂಗ್ರಾಹಕವಾಗತೊಡಗಿದೆ. ಈ ವಿಷಯದ ಅಭ್ಯಾಸವು ಕೂಡಾ ಈಚೆಗೆ ಮಹಾನ್ ಪಂಡಿತರ ಲಕ್ಷ್ಯವನ್ನು ಹೆಚ್ಚೆಚ್ಚು ಆಕರ್ಷಿಸುತಲಿದೆ. ಸಂಸ್ಕೃತಿಯ ವಿಕಾಸದ ದೃಷ್ಟಿಯಿಂದ ಇತಿಹಾಸದತ್ತ ನೋಡುವ ಪ್ರವೃತ್ತಿ ಈಗ ಹೆಚ್ಚುತಲಿದೆ. ಮೊದಲು ಒಮ್ಮೆ ಇತಿಹಾಸವೆಂದರೆ ಕೇವಲ ರಾಜವಂಶಗಳ ಚರಿತ್ರೆ ಎಂಬ ಕಲ್ಪನೆ ರೂಢವಿತ್ತು. ಆದರೆ ಈಗ ಯಾವುದೊಂದು ಕಟ್ಟುನಿಟ್ಟು ಜನಾಂಗದ ಸಮಗ್ರ ಜೀವನ ಚರಿತ್ರೆಯೆ ಇತಿಹಾಸವೆನಿಸಬಲ್ಲದು. ರಾಜರ ಚರಿತ್ರೆಯೂ ಅದರ ಒಂದು ಚಿಕ್ಕಭಾಗ. ಈಗ ಲೋಕಚರಿತ್ರೆಯೆ ಮುಖ್ಯ, ಜನಜೀವನದ ವಿಕಾಸವೆ ಪ್ರಧಾನ.

ಆದರೆ ಲೋಕಚರಿತ್ರೆ ಎಂದರೇನು ? ಸಾಮೂಹಿಕ ದೃಷ್ಟಿಯಿಂದ ಆಯಾ ಜನರ ಶಕ್ತಿವಿಶೇಷಗಳ ಆವಿರ್ಭಾವ, ವಿಕಾಸ. ಈ ರೀತಿ ಇತಿಹಾಸವೆಂದರೆ ಆಯಾ ಜನರ ಸಂಸ್ಕೃತಿವಿಕಾಸದ ಚರಿತ್ರೆ ಎಂಬ ನಿರ್ಧಾರಕ್ಕೆ ಈಗಿನ ವಿಚಾರವಂತರು ಬಂದಿದ್ದಾರೆ. ವಿವಿಧ ದೇಶಗಳ ಇತಿಹಾಸವನ್ನು ಅಭ್ಯಸಿಸಿ ಆಯಾ ಜನರ ಜೀವನ ವಿಕಾಸ ಹೇಗಾಯಿತು, ಏಕಾಯಿತು, ಯಾವ ವಿಚಾರವಿಶೇಷಗಳು, ಪ್ರೇರಕ

ಶಕ್ತಿಗಳು, ಅಂತಃಸ್ಫೂರ್ತಿಗಳು ಅವರ ಮನಸಿನಲ್ಲಿ ಕೆಲಸಮಾಡುತ್ತಿದ್ದವು ಮುಂತಾದವುಗಳ ವಿಮರ್ಶೆಮಾಡಿ ಹಲವೊಂದು ನಿಷ್ಕರ್ಷಕ್ಕೆ ಬರಲು ಈಚೆಗೆ ಅನೇಕ ವಿದ್ವಾಂಸರು ದುಡಿದಿದ್ದಾರೆ ಹಾಗು ದುಡಿಯುತಲಿದ್ದಾರೆ.

ಈ ರೀತಿ ಅಭ್ಯಸಿಸುವಾಗ ಹಲವೊಂದು ಸಂಸ್ಕೃತಿಗಳು ಅಳಿದುದು, ಹಲವು ಉಳಿದುದು, ಹಲವು ಹೊಸದಾಗಿ ಹುಟ್ಟಿದುದು ವಿದ್ವಾಂಸರಿಗೆ ಕಂಡುಬಂದಿತು. ರಾಷ್ಟ್ರಗಳಿಗೆ, ಜನಾಂಗಗಳಿಗೆ, ವಿಶಿಷ್ಟ ಮಾನವ ಸಮಾಜಗಳಿಗೆ ಏರಿಳಿತಗಳು, ಉತ್ಪತ್ತಿ, ಸ್ಥಿತಿ, ಲಯ, ಅಳಿವು, ಉಳಿವು ಇದ್ದಂತೆ, ಸಂಸ್ಕೃತಿಗಳಿಗೂ ಆ ಸ್ಥಿತಿ ಗತಿಗಳು ಇವೆ, ಎಂಬ ಸಿದ್ಧಾಂತವನ್ನು ಈಗ ಎಲ್ಲ ಇತಿಹಾಸ ಶಾಸ್ತ್ರಜ್ಞರೂ, ಸಮಾಜ ಶಾಸ್ತ್ರವನ್ನು ಬಲ್ಲವರೂ ಒಪ್ಪುವರು. ಈಚೆಗೆ ಸುಮಾರು ಐವತ್ತು ವರುಷಗಳಲ್ಲಿ ಹಲವಾರು ವಿದ್ವಾಂಸರು ಈ ಬಗೆಯ ಅಭ್ಯಾಸಮಾಡಿ, ದೊಡ್ಡ ದೊಡ್ಡ ಹೊತ್ತಿಗೆ ಗಳನ್ನು ಬರೆದು ಸಂಸ್ಕೃತಿಗಳ ಏರಿಳಿತಗಳ ನಿಯಮಗಳನ್ನು ಕಂಡುಹಿಡಿದು, ಅವುಗಳನ್ನು ಸಪ್ರಮಾಣವಾಗಿ ಮಂಡಿಸಲು ಯತ್ನಿಸಿದ್ದಾರೆ.

ಸತ್ಯವನ್ನರಿತುಕೊಳ್ಳುವ ಆತುರತೆ, ಅದನ್ನು ಅರಿತುಕೊಂಡಮೇಲೆ ಅದನ್ನು ತನ್ನ ಇಷ್ಟಾನಿಷ್ಟ ಉದ್ದೇಶಗಳ ಸಾಫಲ್ಯಕ್ಕಾಗಿ ಉಪಯೋಗಿಸಿಕೊಳ್ಳುವ ಪ್ರವೃತ್ತಿ, ಇವು ಮನುಷ್ಯನಲ್ಲಿ ಜನ್ಮಜಾತವಿರುವವು. ಅದಕ್ಕನುಸರಿಸಿ ಈಗ ಮಾನವನು ಜಡವೆನಿಸುವ, ಜಡವೆಂದು ಪ್ರತೀತವಾಗುತ್ತಿರುವ ಜಗತ್ತಿನ ರಹಸ್ಯ ವನ್ನು ತಿಳಿದುಕೊಳ್ಳಲು ಜಗದ್ವ್ಯಾಪಾರಗಳಿಗೆ ಆಧಾರಭೂತವಾದ ಮೂಲಶಕ್ತಿ ಯನ್ನು ಅರಿಯಲು ಹೆಣಗುತಿರುವಾಗ ಅಣುಶಕ್ತಿಯನ್ನು ಕಂಡು ಹಿಡಿದಿರುವನು. ಅದೇ ರೀತಿ ಮಾನವನು ಸಂಸ್ಕೃತಿಗಳ ಹಾಗು ತತ್ಪ್ರೇರಕವಾದ ಅಂತಃಶಕ್ತಿಗಳ ಗುಟ್ಟನ್ನು ಗೊತ್ತುಹಚ್ಚುವ ಯತ್ನವನ್ನೂ ನಡೆಸಿದುದು ಸ್ವಾಭಾವಿಕ. ಇದೇ ಸಂದರ್ಭದಲ್ಲಿ ಮಾನವನು ತನ್ನ ಚಿತ್ತದಲ್ಲಿ (ಕಾನ್‌ಶಸ್‌ನೆಸ್) ಹುದುಗಿರುವ ಚೈತನ್ಯಪ್ರವಾಹಗಳ ಚಲನವಲನಗಳ ನಿಯಮಗಳನ್ನು . ಕಂಡುಹಿಡಿಯಲು ಯೋಗಶಾಸ್ತ್ರಾದಿಗಳ ಮುಖಾಂತರ ಯತ್ನಿಸುತ್ತ ಬಂದಿರುವುದು ಯೋಗ್ಯವೇ ಸೈ.

ಈ ಮೂರು ವಿಷಯಗಳಲ್ಲಿ ಮಾನವನು ಇನ್ನೂ ಪೂರ್ಣಸತ್ಯವನ್ನು ಕಂಡಿಲ್ಲ ಎಂಬುದು ಸ್ಪಷ್ಟವಿದೆ. ಇಷ್ಟೇ ಅಲ್ಲ, ಇವುಗಳಲ್ಲಿಯ ಪರಸ್ಪರ ಸಂಬಂಧ-ಸಾಮ ರಸ್ಯಗಳನ್ನು ಅರಿತು ಅರಗಿಸಿಕೊಳ್ಳಲು ಅವನು ಇನ್ನೂ ಯತ್ನವನ್ನು ಸಹ ಪ್ರಾರಂಭಿ ಸಿಲ್ಲ ಎಂದು ಹೇಳಬಹುದು. ಆದುದರಿಂದಲೇ ತನಗೆ ಈವರೆಗೆ ಅಂಶತಃ ಕೈವಶ ವಾದ ಅಣುಶಕ್ತ್ಯಾದಿಗಳನ್ನು ಹಿರೋಶೀಮಾದಂಥ ಭವ್ಯ ಪಟ್ಟಣಗಳನ್ನು ನಾಶ ಗೊಳಿಸುವದರಲ್ಲಿ ಮಾನವನು ಉಪಯೋಗಿಸುತಿರುವ ದೃಶ್ಯವು ಗೋಚರವಾಗು ವದು. ತಮ್ಮ ಸಂಸ್ಕೃತಿಯೆ ಶ್ರೇಷ್ಠ ಎಂಬ ಅಹಮಹಮಿಕೆಯಿಂದ ಮತ್ತರಾಗಿ ಹಲವು ರಾಷ್ಟ್ರಗಳು ಇತರ ಸಂಸ್ಕೃತಿಗಳನ್ನು ವಿವಿಧ ದುಃಸಾಧನಗಳಿಂದ ಹತ್ತಿಕ್ಕುವ, ಹದಗೆಡಿಸುವ, ಪರಿವರ್ತಿಸುವ ಪ್ರಯತ್ನಗಳನ್ನು ನಡೆಸಿರುವ ನಿಂದ್ಯ ದೃಶ್ಯಗಳು ಕಣ್ಣಿಗೆ ಬೀಳುವವು. ಹಲವಾರು ವ್ಯಕ್ತಿಗಳು ವೈಯಕ್ತಿಕ ಮೋಕ್ಷದ ಮೋಹದಿಂದ ಸಮಾಜವನ್ನು ತ್ಯಜಿಸಿ ಗಿರಿಗಹ್ವರಗಳನ್ನು, ಇಲ್ಲವೆ ನಿಬಿಡ ಏಕಾಂತ ವನ್ನು ಸೇರುವದು ಕಂಡುಬರುವದು.

ಮನುಷ್ಯಮಾತ್ರನು ಪ್ರತ್ಯೇಕ ಸ್ವತಂತ್ರ ವ್ಯಕ್ತಿಯಲ್ಲ; ಅವನೊಂದು ಸಾಮಾಜಿಕ ಪ್ರಾಣಿ. ತನ್ನ ಸತ್ಪ್ರವೃತ್ತಿಗಳ ವಿಕಾಸದ ಮುಖಾಂತರ ಪರಾರ್ಥವನ್ನು ಸಾಧಿಸುವದೆ ಅವನ ಮೋಕ್ಷ; ಪಾಶವೀ ಜೀವನದ ಮಟ್ಟಿನಿಂದ ಮಾನವೀಜೀವನ ವಿಕಾಸದ ಮಾರ್ಗವಾಗಿ ದೈವೀ ಜೀವನದತ್ತ ಸಾಗುವದೆ ಅವನ ಸಕಲ ಪ್ರಯತ್ನಗಳ ಸಾರೋದ್ದೇಶ, ಎಂಬ ಮೂರು ಸತ್ಯಗಳ ಪ್ರತೀತಿಯಾಗಿ, ಅವುಗಳ ವಿಚಾರ, ಉಚ್ಚಾರ, ಆಚಾರ, ಪ್ರಚಾರ, ಇವು ಮಾನವನ ನಿತ್ಯ ಸಾಧನಗಳಾಗುವವರೆಗೆ ಸದ್ಯದ ಭಯಾನಕ, ಹಿಂಸಾಮಯ, ತೂಕ ತಪ್ಪಿದ ಪರಿಸ್ಥಿತಿಯೊಳಗಿಂದ ಮಾನವನು ಪಾರಾಗುವದು ದುರಾಪಾಸ್ತವು.

## ೨. ವೈಯಕ್ತಿಕ ಸಂಸ್ಕೃತಿ

ಸದ್ಯದ ಸಂದರ್ಭದಲ್ಲಿ ಸಂಸ್ಕೃತಿಯೆಂದರೆ ಮಾನವನು ಅಥವಾ ಮಾನವ ಸಮಾಜವು ಪಶುಜೀವನದ ಮಟ್ಟಿನಿಂದ ಮುಂದೆ ಸಾಗಿ ಮಾನವೀ ಜೀವನದ ಮಾರ್ಗದಲ್ಲಿ ಮುಂದಡಿ ಇಡುವದು, ಎಂದು ಹೇಳಲು ಅಡ್ಡಿಯಿಲ್ಲ. ಬಾಹ್ಯ ಜಡಶಕ್ತಿಗಳು ಹಾಗೂ ಆಂತರಿಕ ಚೇತನಶಕ್ತಿಗಳು ಮನುಷ್ಯನನ್ನು ಎತ್ತೆತ್ತಲೂ ಆವರಿಸಿಕೊಂಡಿರುವವು. ಈ ಶಕ್ತಿಗಳ ಪರಸ್ಪರ ಸಂಬಂಧ ಸಮ್ಮೇಳಗಳಿಂದಲೆ ಮನುಷ್ಯಮಾತ್ರನು ಹುಟ್ಟಿ ಬಂದಿರುವನು. ಮನುಷ್ಯನು ದೇಹ-ಆತ್ಮಗಳ ಸಂಗಮ ಸ್ಥಾನವು. ದೇಹಕ್ಕೆ ಸಂಬಂಧಿಸಿದ ಬಾಹ್ಯ ಜಡಶಕ್ತಿಗಳನ್ನು ಆತ್ಮಕ್ಕೆ ಸಂಬಂಧಿಸಿದ ಚಿತ್‌ಶಕ್ತಿಗಳನ್ನು ತನ್ನ ಕೈವಶಮಾಡಿಕೊಂಡು ತನ್ನ ಉದ್ದೇಶ ಆಕಾಂಕ್ಷೆಗಳನ್ನು ಈಡೇರಿಸಬೇಕೆಂದು ಮಾನವನು ಸತತವೂ ಹೆಣಗಾಡುತಿರುವನು. ಈ ಹೆಣಗಾಟ, ಈ ವಿಷಯದಲ್ಲಿ ಅವನ ಪ್ರಗತಿ ಇವೇ ಅವನ ಸಂಸ್ಕೃತಿಯ ಅಳತೆಗೋಲು ಎಂದು ಹೇಳಿದರೆ ತಪ್ಪಾಗಲಾರದು. ತನ್ನ ಹಿಂಬದಿಯಲ್ಲಿ ತನಗೆ ತಳಹದಿಯ ರೂಪದಲ್ಲಿರುವ ಪಶುಜೀವನ, ತಾನು ಇನ್ನುಮೇಲೆ ಪಡೆಯಬೇಕೆಂದಿರುವ ಮುಂಬರುವ ದೈವೀಜೀವನ, ಇವೆರಡರ ನಡುವೆ ಮಾರ್ಗಕ್ರಮಣ ಮಾಡುತಿರುವ ಮಾನವನ (ವ್ಯಕ್ತಿಯಿರಲಿ-ಸಮಾಜವಿರಲಿ) ಸಂಸ್ಕೃತಿಯ ವಿಕಾಸವನ್ನು ಅಳೆದು ನೋಡುವದರಿಂದಲೆ ಅವನ ಪ್ರಗತಿ ಅಥವಾ ಪ್ರತಿಗತಿ ಅಥವಾ ಸ್ಥಿತಿಗತಿ ಇವು ಗೊತ್ತಾಗಬಲ್ಲವು. ಬಾಹ್ಯ ಹಾಗು ಆಂತರಿಕ ಜಡ-ಚೇತನ ಶಕ್ತಿಗಳ ಮೇಲೆ ಸಂಪೂರ್ಣ ಪ್ರಭುತ್ವವನ್ನು ಪಡೆದು, ಸ್ವರಾಟ್ ಹಾಗು ಸಮ್ರಾಟ್ ಎನಿಸಿ ಸಾತ್ವಿಕೋತ್ತಮ ಪ್ರವೃತ್ತಿಗಳಿಂದ ಪ್ರೇರಿತನಾಗಿ ಸರ್ವಭೂತಹಿತರತನಾಗಿ, ವಿಶ್ವಶಕ್ತಿಗಳ ನಿಮಿತ್ತಮಾತ್ರನಾಗಿ, ಒಂದು ಬಗೆಯ ಕರ್ಮಸಮಾಧಿಯಲ್ಲಿ ತಲ್ಲೀನನಾಗಿರಲು ಯತ್ನಿಸುವದೆ ಕದಾಚಿತ್ ಮಾನವನು ದೈವೀ ಜೀವನದತ್ತ ಸಾಗುವ ಸಾಧನಸರ್ವಸ್ವವಾಗಿರಲು ಸಾಕು.

## ೩. ಸಾಮಾಜಿಕ ಸಂಸ್ಕೃತಿ

ನಾವು ಇಲ್ಲಿ ಈಗ ವಿಚಾರಿಸುತಿರುವದು ಮಾನವನ ವೈಯಕ್ತಿಕ ಸಂಸ್ಕೃತಿಯಲ್ಲ. ಆದರೆ ಸಮಾಜ, ಇಲ್ಲವೆ ರಾಷ್ಟ್ರ ಅಥವಾ ದೇಶ, ಎಂಬ ಹೆಸರಿನಿಂದ ಪ್ರಸಿದ್ಧ

ವಾದ ಆಯಾ ಮಾನವರ ಸಾಮೂಹಿಕ ಗುಂಪುಗಳ ಸಂಸ್ಕೃತಿ. ಈವರೆಗೆ ಇತಿಹಾಸ ಕಾಲದಲ್ಲಿ ಅಂದರೆ ಸುಮಾರು ಹೋದ ಹತ್ತು ಸಾವಿರ ವರುಷಗಳಲ್ಲಿ, ಹಲವಾರು ಮಾನವ ಸಮಾಜಗಳು ತಮ್ಮ ಸಾಂಸ್ಕೃತಿಕ (ಅತ್ಯಂತ ವ್ಯಾಪಕ ಅರ್ಥದಲ್ಲಿ) ಜೀವನವನ್ನು ನಡಿಸಿರುವವು. ಅವುಗಳಲ್ಲಿ ಅನೇಕ ಮಾಯವಾಗಿ ಹೋಗಿರುವವು. ಸ್ಪೆಂಗಲರ್ ಎಂಬ ಮಹಾ ಪಂಡಿತನನ್ನು ಮೊದಲು ಮಾಡಿಕೊಂಡು ಟಾಯನ್‌ಬೀ, ಸೋರೊಕಿನ್, ಇವರವರೆಗೆ ಅನೇಕ ವಿದ್ವಾಂಸರು ಮಿಸರ, ಖಾಲ್ಡಿಯನ್, ಗ್ರೀಕ, ರೋಮನ್ ಮುಂತಾದ ಸುಮಾರು ಹದಿನಾರು ಸಂಸ್ಕೃತಿಗಳು (ಆಯಾ ಸಂಸ್ಕೃತಿಗಳನ್ನು ಬೆಳೆಸಿದ ಜನಾಂಗಗಳೊಡನೆ) ನಷ್ಟವಾಗಿವೆಯೆಂದೂ, ಯೂರೋಪಿಯನ್ ಸಂಸ್ಕೃತಿ ಕೂಡ ಅಳಿಗಾಲಕ್ಕೆ ಬಂದಿದೆಯೆಂದೂ ಹೇಳಿದ್ದಾರೆ.

ಹೀಗೆ ಅವರೆಲ್ಲರೂ ಹೇಳಿದಾಕ್ಷಣಕ್ಕೆ ಆಯಾ ಸಂಸ್ಕೃತಿಗಳಾಗಲಿ, ಆಯಾ ಜನಾಂಗಗಳಾಗಲಿ, ತೀರ ನಾಮಶೇಷವಾಗಿವೆ ಎಂದರ್ಥವಲ್ಲ. ಆಯಾ ಸಂಸ್ಕೃತಿಗಳ ಅನೇಕಾಂಶಗಳು ಬೇರೆ ರೂಪದಿಂದ ಬೇರೆ ಸಂಸ್ಕೃತಿಗಳಲ್ಲಿ ಒಂದಾಗಿವೆ. ಆಯಾ ಜನಾಂಗದ ವಂಶಜರು ಬೇರೆ ಸಂಸ್ಕೃತಿಗಳನ್ನು ಸ್ವೀಕರಿಸಿ ಬೇರೆ ಹೆಸರಿನಿಂದ ಬದುಕಿ ಬಾಳುತಿದ್ದಾರೆ. ಉದಾಹರಣಾರ್ಥವಾಗಿ, ಈಗ ಇಜಿಪ್ತದಲ್ಲಿ ವಾಸಿಸುತಿರುವ ಜನರು ಮೂಲ ಇಜಿಪ್ಶನ್ ಜನರ ವಂಶಜರಿದ್ದರೂ ಅವರಲ್ಲಿ ಪುರಾತನ ಕಾಲದ ಇಜಿಪ್ತದ ಸಂಸ್ಕೃತಿಯ ಲವಲೇಶವು ಕೂಡ ಇಲ್ಲ. ಖಾಲ್ಡಿಯಾ, ಗ್ರೀಸ್ ಮುಂತಾದ ಹದಿನಾರು ಸಂಸ್ಕೃತಿಗಳ ಹಾಗೂ ಜನಾಂಗಗಳ ಸ್ಥಿತಿಯು ಹೀಗೆಯೆ ಆಗಿದೆ. ಒಂದಾನೊಂದು ಕಾಲಕ್ಕೆ ಅತ್ಯಂತ ವೈಭವಶಿಖರಕ್ಕೇರಿ ಮೆರೆದ, ವಿಶಾಲ ಭೂಪ್ರದೇಶದ ಮೇಲೆ ಅಧಿಕಾರ ನಡೆಸಿದ ಹಲವಾರು ಸಂಸ್ಕೃತಿಗಳನ್ನು ಹಾಗು ಜನಾಂಗಗಳನ್ನು ಈ ರೀತಿ ನುಂಗಿ ನೀರು ಕುಡಿದು ಅ......ಬ್ ಎಂದ ಮಹಾಕಾಲನ ದರಬಾರಿನಲ್ಲಿ ನಮ್ಮ ಭಾರತದ ಸಂಸ್ಕೃತಿಯು ಸ್ಥಿತಿಗತಿ ಏನು! ಇದನ್ನು ಸ್ವಲ್ಪ ನೋಡುವ.

## ೪. ಭಾರತೀಯ ಸಂಸ್ಕೃತಿ

ಈಚೆಗಿನ ಸುಮಾರು ಐದು ಸಾವಿರ ವರುಷಗಳಲ್ಲಿಯ ವಿವಿಧ ಸಂಸ್ಕೃತಿಗಳ ಹಾಗು ಜನಾಂಗಗಳ ಇತಿಹಾಸವನ್ನು ನೋಡಿದರೆ, ಕಾಲನ ದವಡೆಯಲ್ಲಿ ಅಬ್ಬುಜಬ್ಬಾಗಿದ್ದರೂ ಹಲವಾರು ಅಂಶಗಳಲ್ಲಿ ಮಾರ್ಪಟ್ಟಿದ್ದರೂ ಭಾರತೀಯ ಹಾಗು ಚೀನಿ ಈ ಎರಡೇ ಸಂಸ್ಕೃತಿಗಳು ತಮ್ಮ ಮೂಲಭೂತ ವ್ಯಕ್ತಿತ್ವವನ್ನು ಕಾಯ್ದುಕೊಂಡು, ತಮ್ಮವೇ ಆದ ಹಲವು ವೈಶಿಷ್ಟ್ಯಗಳನ್ನು ಸಂರಕ್ಷಿಸುತ್ತ ಬದುಕಿ ಬಾಳುತ್ತಿವೆ. ಅಲ್ಲದೆ, ಪರೆ ಉಚ್ಚಿದ ಹಾವಿನಂತೆ ಪುನಃ ಉದಯೋನ್ಮುಖವಾಗಿವೆ ಎಂದು ಹೇಳಬಹುದು. ವುಯಿಲ್ ಡ್ಯುರಂಟ ಹಾಗು ಭಾಶಮ್ ಎಂಬ ಪ್ರಸಿದ್ಧ ಲೇಖಕರು ಭಾರತೀಯ ಸಂಸ್ಕೃತಿಯು ಬಗ್ಗೆ ಬರೆಯುವಾಗ ಈ ಮುಂದಿನಂಥ ವಿಚಾರಗಳನ್ನು ವ್ಯಕ್ತಮಾಡಿದ್ದಾರೆ:—'' ಈ ಸಂಸ್ಕೃತಿಯ ಆಯುಷ್ಯ ತೀರಿದೆ ಅಥವಾ ಇದು ಮುಪ್ಪಾಗಿದೆ ಎಂದು ಹೇಳಲಿಕ್ಕಾಗುವದಿಲ್ಲ. ಈ ಸಂಸ್ಕೃತಿಯನ್ನು ಹತ್ತಿಕ್ಕಲು ಅನುವಾದ ಪಾಶ್ಚಾತ್ಯ ಸಂಸ್ಕೃತಿಯನ್ನು ಕೂಡ ಅರಗಿಸಿಕೊಂಡು,

ಪೂರ್ವ-ಪಶ್ಚಿಮಗಳ ಸಮನ್ವಯದಿಂದ ಸಿದ್ಧವಾದ ಸಂಸ್ಕೃತಿ ವಿಶೇಷವನ್ನು ಸಿದ್ಧಗೊಳಿಸಲು ಭಾರತವು ಮುಂದಾಗಿದೆ. ಭಾರತವು ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧಿ, ಅರವಿಂದ, ರವೀಂದ್ರನಾಥರಂಥ ತೇಜಸ್ವೀ ಪುರುಷರಿಗೆ ಜನ್ಮಕೊಟ್ಟಿದೆ, ಇನ್ನೂ ಕೊಡುತ್ತಿದೆ. ಸತ್ಯಾಗ್ರಹ, ದೈವೀಜೀವನ ಮುಂತಾದ ವಿಚಾರಧಾರೆಗಳ ಪುರಸ್ಕಾರಮಾಡುತಿದೆ.''

ಅಂದ ಬಳಿಕ ಈ ಸಂಸ್ಕೃತಿಯಲ್ಲಿದ್ದ ಪ್ರೇರಣೆ-ಅಂತಃಶಕ್ತಿಗಳು ಬಹಳೇ ಪ್ರಭಾವಿಯಾದವುಗಳೂ, ದೀರ್ಘಜೀವಿಗಳೂ ಇರುವವೆಂಬುದು ಸ್ಪಷ್ಟ. ನಾಲ್ಕಾರು ಸಾವಿರ ವರುಷಗಳ ತನ್ನ ಜೀವನದಲ್ಲಿ ಈ ಸಂಸ್ಕೃತಿಯು ಹಲವಾರು ಮಾರ್ಪಾಟುಗಳನ್ನು ಹೊಂದಿದೆ. ಹಲವೊಂದು ಹಳೆಯ ಅಂಶಗಳನ್ನು ಬಿಟ್ಟು ಹೊಸ ಹಾಗು ಹೊರಗಿನ ಅಂಶಗಳನ್ನು ಆತ್ಮಸಾತ್ ಮಾಡಿಕೊಂಡಿದೆ ಎಂಬಲ್ಲಿ ಸಂಶಯವಿಲ್ಲ. ಪ್ರತಿಯೊಂದು ಜೀವಂತ ಸಂಸ್ಕೃತಿಯೂ ಈ ಬಗೆಯ ವಿನಿಮಯವನ್ನು ಮಾಡುತ್ತಲೆ ಇರುತ್ತದೆ. ಒಂದು ಬಗೆಯಿಂದ ನೋಡಿದರೆ ಇಂಥ ವಿನಿಮಯವೆ ಜೀವಂತ ಸಂಸ್ಕೃತಿಯ ಮುಖ್ಯ ಲಕ್ಷಣ. ಆದರೆ, ಈ ಸಂಸ್ಕೃತಿ ವೇದೋಪನಿಷತ್ತುಗಳ ಕಾಲದಿಂದ ನಡೆದು ಬಂದ ತನ್ನ ಮೂಲಭೂತವಾದ ಸನಾತನ ಧರ್ಮವನ್ನು ಹಾಗು ತತ್ವಜ್ಞಾನವನ್ನು ಬಿಟ್ಟಿಲ್ಲ. ಬಾಹ್ಯರೂಪದಲ್ಲಿ ಬದಲಾವಣೆಗಳು ಆಗಿದ್ದರೂ ಭಾರತದ ಆತ್ಮವು ತನ್ನದೇ ಆದ ಒಂದು ಆಧ್ಯಾತ್ಮಿಕ ಮಾರ್ಗದಿಂದ ವಿಕಾಸ ಹೊಂದುತ್ತ ಸಾಗಿದೆ. ಭಾರತೀಯ ಜನಾಂಗ ಹಾಗು ಭಾರತೀಯ ಸಂಸ್ಕೃತಿಗೆ ಅನ್ವಯಿಸುವ ಮಾತುಗಳೆ ಸಾಮಾನ್ಯತಃ ಭಾರತದಲ್ಲಿ ಅಂತರ್ಭೂತವಾದ ಪ್ರಾಂತ ಮುಂತಾದ ಅಂಗಾಂಗಗಳಿಗೂ ಅನ್ವಯಿಸುವವು.

ಈಚೆಗೆ ಭಾಷೆಗೊಂದು ಸಂಸ್ಕೃತಿ, ಪ್ರಾಂತಕ್ಕೊಂದು ಸಂಸ್ಕೃತಿ, ಧಾರ್ಮಿಕ ಸಾಂಪ್ರದಾಯಕ್ಕೊಂದು ಸಂಸ್ಕೃತಿ ಎಂದು ಕಲ್ಪಿಸಿಕೊಂಡು ಅವುಗಳಲ್ಲಿಯ ಚಿಲ್ಲರೆ ಭಿನ್ನತೆಗಳಿಗೆ ಹೆಚ್ಚು ಮಹತ್ವಕೊಡುವ ಪ್ರವೃತ್ತಿಯು ಕಂಡುಬರುವದು. ಈ ಪ್ರವೃತ್ತಿಯು ರಾಜಸಿಕ ಅಹಂಭಾವವನ್ನು ಬೆಳೆಸುವದಲ್ಲದೆ, ರಾಷ್ಟ್ರದ ಏಕತೆಗೆ ಹಾಗು ಆಯಾ ಸಂಸ್ಕೃತಿ ಪ್ರಭೇದದ ವಿಕಾಸಕ್ಕೆ ಘಾತಕವಾದುದಾಗಿದೆ. ಸೂಕ್ಷ್ಮ ರೀತಿಯಿಂದ ಪರೀಕ್ಷಿಸಿ ನೋಡಿದರೆ ಭಿನ್ನತೆಯ ಅಂಶಗಳಿಗಿಂತ ಏಕತೆಯ ಅಂಶಗಳೆ ಹೆಚ್ಚು, ಹಾಗು ಮಹತ್ವದವು ಎಂಬುದು ಸ್ಪಷ್ಟವಾಗುವದು. ಇಷ್ಟೇ ಏಕೆ, ಇಡೀ ಮಾನವನ ಕುಲವು ಒಂದೇ ಒಂದು ಪ್ರಾಣಿವರ್ಗಕ್ಕೆ (ಹೋಮೋ ಸೇಪಿಯನ್ಸ್) ಸೇರಿರುವುದರಿಂದ ಅದರ ಸಂಸ್ಕೃತಿ, ಧ್ಯೇಯ, ವಿಕಾಸಮಾರ್ಗ ಒಂದೇ ಇರುವದು. ಆಧುನಿಕ ವೈಜ್ಞಾನಿಕ ಸಾಧನಗಳ ಮೂಲಕ ಅಖಿಲ ಪೃಥ್ವಿಯ ಜನಾಂಗಗಳಲ್ಲಿ ನಿಕಟ ಸಂಪರ್ಕ-ಸಂಬಂಧಗಳು ಬೆಳೆಯುತ್ತ ಹೋದಂತೆ ಈ ಮಾತು ಹೆಚ್ಚು ಸ್ಪಷ್ಟವಾಗುತ್ತ ನಡೆದಿರುವದು. ಬೇರೆ ಬೇರೆ ಜನಾಂಗಗಳ ಸಂಸ್ಕೃತಿಯ ಮಟ್ಟಗಳು ದೇಶಕಾಲ ಪರಿಸ್ಥಿತಿಯ ಮೂಲಕ ಬೇರೆ ಕಂಡರೂ ಮಾನವ ಸಂಸ್ಕೃತಿ ಎಂಬುದು ಒಂದೇ ಒಂದು ಎಂಬುದನ್ನು ಈಗ ಎಲ್ಲ ವಿಚಾರವಂತರೂ ಒಪ್ಪುವರು.

ಭಾಷಾನುಗುಣ, ಪ್ರಾಂತಾನುಗುಣ, ವಿಶಿಷ್ಟ ಪಕ್ಷಾನುಗುಣವಾಗಿ ಸಂಸ್ಕೃತಿ ಬೇರೆ ಎಂದು ಹೇಳುವದಲ್ಲದೆ, ಆರ್ಯ ಸಂಸ್ಕೃತಿ, ದ್ರಾವಿಡ ಸಂಸ್ಕೃತಿ

ಎಂದು ಭೇದಗಳನ್ನು ಕಲ್ಪಿಸಿ, ದೊಡ್ಡ ವಾದವನ್ನೆಬ್ಬಿಸಿ, ಒಂದೇ ರಾಷ್ಟ್ರದ ಎರಡು ಗುಂಪುಗಳಲ್ಲಿ ಹೋರಾಟ ನಡೆಯುವಂತೆ ಸಹ ಹಲವರು ಪ್ರಯತ್ನಪಡುತ್ತಿರುವದು ಕಾಣುವದು. ಆದರೆ, ವಾಸ್ತವಿಕವಾಗಿ ಹಾಗು ವೈಜ್ಞಾನಿಕ ದೃಷ್ಟಿಯಿಂದ ಪರೀಕ್ಷಿಸಿ ನೋಡಿದರೆ ಈ ಹೊತ್ತು ಜಗತ್ತಿನಲ್ಲಿ ಶುದ್ಧ ರಕ್ತ, ಶುದ್ಧ ವಂಶ, ಶುದ್ಧ ಸಂಸ್ಕೃತಿ ಎಂಬುದು ಎಲ್ಲಿಯೂ ಇಲ್ಲವೆ ಇಲ್ಲ. ಯಾವುದಾದರೂ ಮಾಯದಿಂದ ಎಲ್ಲಿಯಾದರೂ ಮಿಶ್ರವಾದುದು ಕಂಡುಬರುವದು. ಆದುದರಿಂದ ವೈಜ್ಞಾನಿಕ ದೃಷ್ಟಿಗೆ ವಿರುದ್ಧವಾಗಿರುವ ಈ ಬಗೆಯ ವಿಚಾರಗಳಿಗೆ ಪ್ರೋತ್ಸಾಹಕೊಡುವದು ಎಂದಿಗೂ ಹಿತಕಾರಕವಾಗಲಾರದು. ಮನುಷ್ಯಮಾತ್ರನು ಆದರಣೀಯನು, ಆಯಾ ಸಂಸ್ಕೃತಿರೂಪವು ಆಯಾ ಜನರಿಗೆ ಸಲ್ಲುವದು, ಎಂಬ ಭಾವನೆಯಿಂದ ನಡೆದುಕೊಳ್ಳುವುದೆ ಮಾನವೀ ವಿಕಾಸದ ದೃಷ್ಟಿಯಿಂದ ಪ್ರಯೋಜನಕಾರಿಯು. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ಸದ್ಯದ ಭಾರತೀಯರ ರಕ್ತದಲ್ಲಿ ಬೇರ್ಪಡಿಸಲಿಕ್ಕೆ ಬಾರದ ಆರ್ಯ-ಆರ್ಯೇತರ ರಕ್ತದ ಸಂಮಿಶ್ರಣವು ಯಾವ ರೀತಿ ಇರುವುದೊ ಅದೇ ರೀತಿ ಭಾರತೀಯ ಸಂಸ್ಕೃತಿಯಲ್ಲಿ ಆರ್ಯ-ದ್ರಾವಿಡ ಸಂಸ್ಕೃತಿಗಳ ಸುಂದರ ಸಮ್ಮೇಳನವು ದೃಗ್ಗೋಚರವಾಗುವದು. ಇದು ಕೇವಲ ಆರ್ಯ ಸಂಸ್ಕೃತಿಯೂ ಅಲ್ಲ, ಕೇವಲ ದ್ರಾವಿಡ ಸಂಸ್ಕೃತಿಯೂ ಅಲ್ಲ. ಇದಕ್ಕೆ ಬೇಕಾದರೆ 'ಆರ್ಯ-ದ್ರಾವಿಡ ಸಂಸ್ಕೃತಿ' ಅಥವಾ 'ದ್ರಾವಿಡ-ಆರ್ಯ ಸಂಸ್ಕೃತಿ' ಎಂಬ ಹೆಸರನ್ನಿಡಬಹುದು.

## ೫. ಕರ್ನಾಟಕ ಸಂಸ್ಕೃತಿ

ಇನ್ನು ನಮ್ಮ ಸಂಸ್ಕೃತಿ ಅಥವಾ ಕರ್ನಾಟಕದಲ್ಲಿ ಪ್ರಚಲಿತವಿದ್ದ ಸಂಸ್ಕೃತಿಯತ್ತ ಹೊರಳುವ. ಈ ವಿಷಯವನ್ನೆತ್ತುವ ಮೊದಲು ಭೂಮಿಕೆಯ ರೂಪದಲ್ಲಿ ನಾಲ್ಕು ಮಾತುಗಳನ್ನು ಹೇಳಲು ನಾನು ಹವಣಿಸಿರುವೆ. ನನ್ನ ದೃಷ್ಟಿಯಿಂದ ಆ ಭೂಮಿಕೆಯೆ ಅತ್ಯಂತ ಮಹತ್ವದ್ದು. ಏಕೆಂದರೆ ಯಾವದೇ ವಸ್ತುವನ್ನು ನೋಡುವ ದೃಷ್ಟಿಯ ಮೇಲೆಯೆ ಆ ಬಗ್ಗೆ ನಮ್ಮ ಆಚಾರ-ವಿಚಾರಗಳು ಅವಲಂಬಿಸಿರುವವು. ಯಾವುದೇ ಒಂದು ಸಂಕುಚಿತ ಭಾವದಿಂದ, ಇಲ್ಲವೆ ಭಾಷಿಕ ಅಥವ ಸ್ಥಳಿಕ ದೃಷ್ಟಿಯಿಂದ, ಸಂಸ್ಕೃತಿಯಂಥ ವಿಷಯದತ್ತ ನೋಡುವ ಕಾಲ ಸಂದಿಹೋಯಿತು. ಬರಬರುತ್ತ ಎಲ್ಲ ಮಹತ್ವದ ವಿಷಯಗಳನ್ನು ಕುರಿತು ಇಡೀ ಮಾನವ ಕುಲದ ದೃಷ್ಟಿಯಿಂದ ವಿಚಾರಮಾಡುವ ದಿನಗಳು ಬರುತ್ತಲಿವೆ. ಕರ್ನಾಟಕದ ಸಂಸ್ಕೃತಿ ಕನ್ನಡ ಭಾಷೆಯ ಉದ್ದಾಮ ಗ್ರಂಥಗಳಲ್ಲಿ ಗರ್ಭಿತವಾದ ಸಂಸ್ಕೃತಿ; ಕರ್ನಾಟಕದಲ್ಲಿ ಪ್ರಚಲಿತವಾದ ಧರ್ಮತತ್ವಜ್ಞಾನಾದಿಗಳಲ್ಲಡಗಿದ ಸಂಸ್ಕೃತಿ; ಈ ಪ್ರಾಂತದ ಮೂಲೆ ಮೂಲೆಗಳಲ್ಲಿರುವ ಗುಡಿಗುಂಡಾರಗಳಲ್ಲಿ, ಮಾಸತಿ ವೀರಗಲ್ಲುಗಳಲ್ಲಿ, ಶಿಲಾಶಾಸನಗಳಲ್ಲಿ, ವಾಸ್ತುಶಿಲ್ಪಗಳಲ್ಲಿ, ಲಲಿತ ಕಲಾಕೃತಿಗಳಲ್ಲಿ ವ್ಯಾಪಿಸಿತ್ತು ನಿಂತ ಸಂಸ್ಕೃತಿ. ಇದು ಉಜ್ವಲವಾಗಿದೆ, ವೀರವತ್ತರವಾಗಿದೆ, ಸ್ಫೂರ್ತಿದಾಯಕವಾಗಿದೆ, ನಮ್ಮನ್ನು ವಿಕಾಸಮಾರ್ಗದಗುಂಟ ಭರದಿಂದ ಮುಂದೊಯ್ಯುವಂತಹದಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ, ಅದು ಮೂಲತಃ ಭಾರತೀಯ ಸಂಸ್ಕೃತಿಯನ್ನು

ಬಿಟ್ಟು ಬೇರೆಯಾದುದಲ್ಲ. ಇಷ್ಟೇ ಅಲ್ಲ. ಭಾರತೀಯ ಸಂಸ್ಕೃತಿಗೆ ಅದು ಸಾಕಷ್ಟು ಮುಡಿಪನ್ನಿತ್ತಿದೆ ಎಂದು ಹೇಳಬಹುದು. ಭಾರತೀಯ ಇತಿಹಾಸ ಹಾಗು ಸಂಸ್ಕೃತಿ ಇವುಗಳೊಳಗಿಂದ, ಮಧ್ವಾಚಾರ್ಯರ ದ್ವೈತ ತತ್ವಜ್ಞಾನ, ವಿಜಯನಗರದ ಸಾಮ್ರಾಜ್ಯ ಹಾಗು ತತ್ಕಾಲೀನ ಸಾಂಸ್ಕೃತಿಕ ಪುನರುಜ್ಜೀವನ, ಹೊಯ್ಸಳ ರಾಷ್ಟ್ರಕೂಟರ ಶಿಲ್ಪ, ಬಸವೇಶ್ವರರ ಹಾಗು ವಚನಕಾರರ ವಚನ ವೈಭವ, ದಾಸರ ಭಕ್ತಿವಾಙ್ಮಯ ಇತ್ಯಾದಿಗಳನ್ನು ತೆಗೆದುಹಾಕಿದರೆ, ಆ ಸಂಸ್ಕೃತಿಯು ಆ ಮಟ್ಟಿಗೆ ಬಡವಾಗಿ ಬಿಡುವದು ಎಂಬಲ್ಲಿ ಸಂಶಯವಿಲ್ಲ. ಆದುದರಿಂದ ಭಾರತ ಹಾಗು ಭಾರತದ ಯಾವದೇ ಅಂಗ ಇವುಗಳ ಸಂಬಂಧವು ಅವಿಭಾಜ್ಯವಾದುದು, ಜೈವಿಕವಾದುದು (ಆರ್ಗ್ಯಾನಿಕ್), ಪರಸ್ಪರ ಪೂರಕವಾದುದು: ಭಾರತೀಯ ಸಂಸ್ಕೃತಿಯ ವಿಶಾಲ ಹಾಗು ಸುಂದರ ನಂದನವನದಲ್ಲಿ ಕರ್ನಾಟಕ ಸಂಸ್ಕೃತಿ ಎಂಬುದು ಒಂದು ಚಿಕ್ಕ ಉಪವನ. ಭಾರತೀಯ ಸಂಸ್ಕೃತಿಯಿಲ್ಲದ ಕರ್ನಾಟಕ ಸಂಸ್ಕೃತಿಯನ್ನಾಗಲಿ, ಕರ್ನಾಟಕ ಸಂಸ್ಕೃತಿಯಿಲ್ಲದ ಭಾರತೀಯ ಸಂಸ್ಕೃತಿಯನ್ನಾಗಲಿ ಕಲ್ಪಿಸುವುದೆ ಅಸಾಧ್ಯ. ಏಕೆಂದರೆ ಭಾರತದಲ್ಲಿಯ ಎಲ್ಲ ಪ್ರಾಂತೀಯ ಸಂಸ್ಕೃತಿ ವಿಶೇಷಗಳೂ ಅಂಗೋಪಾಂಗಗಳಂತೆ ಬೆಳೆದು ಬಂದಿವೆ, ಬೆಳೆದು ನಿಂತಿವೆ, ಹಾಗು ಬೆಳೆಯುತ್ತ ಮುಂದೆ ಸಾಗಿವೆ. ಮೇಲಾಗಿ ಭಾರತೀಯ ಸಂಸ್ಕೃತಿಯ ಏಕಛತ್ರದ ಭವ್ಯವಾದ ಅಂಗಳದಲ್ಲಿ ಬೆಳೆದಿರುವ ಈ ಪ್ರಾಂತೀಯ ಸಂಸ್ಕೃತಿವಿಶೇಷಗಳು ಪರಸ್ಪರದಲ್ಲಿ ಕೂಡ ಸತತವೂ ವಿನಿಮಯವನ್ನು ಮಾಡುತ್ತಲೆ ಇವೆ. ಹಾಗು ಮೂಲ ಸ್ಫೂರ್ತಿಸ್ರೋತದಿಂದ ಶಕ್ತಿಯನ್ನು ಪಡೆಯುತ್ತಲೇ ಇವೆ. ಪ್ರಾಂತೀಯ, ಇಲ್ಲವೆ ಸ್ಥಳಿಕ ಸಂಸ್ಕೃತಿವಿಶೇಷಗಳ, ವಿಚಾರ ವಿಮರ್ಶೆಮಾಡುವಾಗ ಈ ಮೇಲಿನ ಎಲ್ಲ ಮಾತುಗಳನ್ನೂ ಹಿನ್ನೆಲೆಯಾಗಿ ಇಟ್ಟುಕೊಳ್ಳುವದು ಅತ್ಯವಶ್ಯ.

ಇನ್ನು ಭಾರತದ ಮುಖ್ಯಾಂಗಗಳಲ್ಲಿ ಒಂದಾದ ಕರ್ನಾಟಕ ಪ್ರದೇಶದಲ್ಲಿ ಶತಕಾನುಶತಕಗಳಿಂದ ಬೆಳೆದು ಬಂದು, ಈಗ ಪ್ರಚಲಿತವಿರುವ ಸಂಸ್ಕೃತಿ ಪರ್ಯಾಯವನ್ನು ಸ್ವಲ್ಪ ನೋಡುವಾ.

## ೬. ಕರ್ನಾಟಕ ಏಕೀಕರಣ

ಈಚೆಗೆ ವಿಶೇಷತಃ ಕರ್ನಾಟಕ ಏಕೀಕರಣದ ಆಂದೋಲನವು ಪ್ರಾರಂಭವಾದಂದಿನಿಂದ, ಈ ವಿಷಯವನ್ನು ಕುರಿತು ಕನ್ನಡದಲ್ಲಿ ಹಾಗು ಇಂಗ್ಲೀಷಿನಲ್ಲಿ ಬೇಕಾದಷ್ಟು ಲೇಖ ಮುಂತಾದವು ಬರೆಯಲಾಗಿವೆ. ಅಖಿಲ ಕರ್ನಾಟಕಸ್ಥರ ನಲವತ್ತು ವರುಷಗಳ ಕನಸಾದ ಏಕೀಕರಣವು ಈಗ ನನಸಾಗಿ ಮೈಗೊಳ್ಳುವ ಸಂದರ್ಭದಲ್ಲಿ ಈ ಬಗ್ಗೆ ಇಲ್ಲಿ ನಾಲ್ಕು ಮಾತುಗಳನ್ನು ಬರೆಯುವುದು ಅವಶ್ಯವು. ಹೀಗೆ ಬರೆಯುವಾಗ ಪುನರುಕ್ತಿದೋಷವಾದರೂ ಅದನ್ನು ವಾಚಕರು ಕ್ಷಮಿಸುವರೆಂಬ ಭರವಸೆ ಇದೆ.

ಭಾರತದ ರಾಷ್ಟ್ರೀಯ ಜಾಗೃತಿಗೆ ೧೮೮೫ ರಲ್ಲಿ ಒಂದು ಮೂರ್ತಸ್ವರೂಪ ಬಂದಿತು ಎಂದು ಹೇಳಬಹುದು. ಆ ವರುಷ ರಾಷ್ಟ್ರೀಯ ಕಾಂಗ್ರೆಸ್ಸಿನ

ಜನ್ಮವಾಯಿತು. ಆದರೆ, ಹೊಸ ರಾಷ್ಟ್ರೀಯಚೈತನ್ಯದ ವೀರಸಂಚಾರವು ವಂಗಭಂಗದ ಕಾಲಕ್ಕೆಯೆ (೧೯೦೬) ಆಯಿತು ಎಂದು ಹೇಳಬಹುದು. ಹೊಡೆ ದೆಬ್ಬಿಸಿದ ಹೆಬ್ಬುಲಿಯಂತೆ ರಾಷ್ಟ್ರವು ಎಚ್ಚತ್ತು, ಪರರ ಆಕ್ರಮಣವನ್ನು ಸ್ವಪರಾಕ್ರಮದಿಂದ ಹಿಮ್ಮೆಟ್ಟಿಸಲು ಸಿದ್ಧವಾಗಿ ನಿಂತಿತು. ಸ್ವದೇಶ, ಸ್ವಭಾಷೆ, ಸ್ವಧರ್ಮ ಸ್ವಸಂಸ್ಕೃತಿ ಇವುಗಳ ಬಗ್ಗೆ ವಿಶೇಷ ಅಭಿಮಾನ, ಅವುಗಳನ್ನು ಸಂರಕ್ಷಿಸಬೇಕು, ಬೆಳಿಸಬೇಕು ಎಂಬ ಹಂಬಲ ಸಕ್ರಿಯರೂಪವನ್ನು ಧರಿಸಲಾರಂಭಿಸಿತು. ಇದರೊಡನೆ ೧೯೧೬ ರಲ್ಲಿ ಕರ್ನಾಟಕ ಏಕೀಕರಣದ ಜಾಗೃತಿಯೂ ಸ್ಪಷ್ಟವಾಗಿ ಮೂಡಿತು. ಅಂದಿನಿಂದ 'ಸ್ವತಂತ್ರ ಭಾರತ ಏಕತಂತ್ರ ಕರ್ನಾಟಕ' ಎಂಬ ಮಂತ್ರದ ಜಪವು ಪ್ರಾರಂಭವಾಯಿತು. ೧೯೪೭ರ ೧೫ ನೆ ಆಗಸ್ಟಿನ ದಿನ ಆ ಮಂತ್ರದ ಅರ್ಧಭಾಗವು ಸಿದ್ಧವಾಯಿತು. ಇನ್ನುಳಿದ ಅರ್ಧಭಾಗವು ಈಗ ನಮ್ಮೆದುರು ಸಿದ್ಧಿಗೊಂಡಿದೆ.

ಆದರೆ, ಈ ಹೋರಾಟ, ಈ ಸ್ವಾತಂತ್ರ್ಯ, ಈ ಏಕೀಕರಣ ಇದೆಲ್ಲ ಏತರ ಗೋಸುಗ? ನಾವು ಸ್ವತಂತ್ರ ರಾಷ್ಟ್ರವೆನಿಸಿದಾಕ್ಷಣಕ್ಕೆ, ನಮ್ಮದೊಂದು ಸ್ವತಂತ್ರ ಪ್ರಾಂತವಾದಾಕ್ಷಣಕ್ಕೆ ನಮ್ಮ ಉದ್ದೇಶ ಸರ್ವಸ್ವಗಳು ಸಫಲವಾದವೊ? ಇಲ್ಲ, ಸರ್ವಥಾ ಇಲ್ಲ. ಸ್ವಾತಂತ್ರ್ಯ, ಏಕೀಕರಣ ಇವು ಕೂಡ ಕೇವಲ ಸಾಧನಗಳು ಮಾತ್ರ. ಏತರ ಸಾಧನಗಳು?

ನಮ್ಮಲ್ಲಿ ಹುದುಗಿಕೊಂಡಿರುವ ಶಕ್ತಿವಿಶೇಷಗಳ ಸಮಗ್ರ, ಸಮರ್ಪಕ ಹಾಗು ಸಂಪೂರ್ಣ ವಿಕಾಸ, ವಿಶ್ವಮಾನವನ ಅಥವಾ ಜನತಾಜನಾರ್ದನನ ಚರಣಾರವಿಂದಗಳಲ್ಲಿ ಆ ವಿಕಸಿತ ಶಕ್ತಿಗಳ ನಿಷ್ಕಾಮ ಸಮರ್ಪಣ, ಅಂಥ ಸಮರ್ಪಣದಿಂದ ಸಾಧಿಸುವ ಲಯದಲ್ಲಿ ತಲ್ಲೀನರಾಗಿ ವಿಶ್ವಸಂಗೀತದಲ್ಲಿ ಸಮರಸವಾಗುವದೆ ಮಾನವನ ಪರಮಧ್ಯೇಯ. ಒಂದು ಮಾಮರದ, ಇಲ್ಲವೆ ಮಲ್ಲಿಗೆಯ ಬಳ್ಳಿಯ ಧ್ಯೇಯವೇನಿರಬಹುದು? ಚಿಗಿತು, ಹೂತು, ಫಲಿಸಿ, ಹಣ್ಣಾಗಿ, ಪ್ರಾಣಿಗಳಿಗೆ ಆ ಹಣ್ಣಿನಿಂದಾದ ಸಂತೋಷದಿಂದ ತಾನೂ ಸಂತುಷ್ಟವಾಗುವದರಲ್ಲಿಯೆ ಮಾಮರದ ಸಾರ್ಥಕತೆ ಇದೆ. ಚಿಗಿತು, ಹೂತು, ದಿಕ್ಕು ದಿಕ್ಕುಗಳಿಗೂ ಸುಗಂಧವನ್ನು ಬೀರಿ ವಿಶ್ವಾತ್ಮನನ್ನು ತಣಿಸುವದರಲ್ಲಿಯೆ ಮಲ್ಲಿಗೆಯ ಮಂಟಪದ ಧನ್ಯತೆ ಇದೆ. ಅದರಂತೆ ಆಧ್ಯೇಯಸಿದ್ಧಿಗಾಗಿಯೆ, ಸ್ವಾತಂತ್ರ್ಯ ಹಾಗು ಏಕತಂತ್ರ್ಯ ಇವು ಸಾಧನ ವಿಶೇಷಗಳು. ಪರತಂತ್ರತೆ ಹಾಗು ಅನೇಕ ತಂತ್ರತೆ ಇವೆರಡೂ ಆ ಧ್ಯೇಯಾನುಸಂಧಾನಕ್ಕೆ ವಿರೋಧಿಯಾದವುಗಳು. ಆದುದರಿಂದಲೆ ಅವುಗಳನ್ನು ಹೋಗಲಾಡಿಸುವ ಪ್ರಯತ್ನಗಳಿಗೆ ಮಹತ್ವ ದೊರಕಿತು.

ಮೇಲೆ ಹೇಳಿದಂತೆ, ಅಂತಃಶಕ್ತಿಗಳ ವಿಕಾಸವೆ ಸಂಸ್ಕೃತಿಯ ರೂಪವನ್ನು ಧರಿಸುವದು. ಸಂಸ್ಕೃತಿ ಎಂಬುದು ಒಂದೇ ಎರಡೇ ಹತ್ತೇ ಚಟುವಟಿಕೆಗಳಲ್ಲಿ ವ್ಯಕ್ತವಾಗುವದೆಂದು ತಿಳಿಯಕೂಡದು. ಮಾನವ ಜೀವನದ ಪ್ರತಿಯೊಂದು ಮಾತಿನಲ್ಲಿಯೂ ಅದು ಹೊರಹೊಮ್ಮುವದು. ಮುಖ್ಯವಾಗಿ ಧರ್ಮಭಾವನೆ, ತತ್ತ್ವಜ್ಞಾನ, ಆಂತರಿಕ ಪ್ರೇರಣೆ ಇವೇ ಆಯಾ ಸಂಸ್ಕೃತಿಗಳಿಗೆ ವಿಶಿಷ್ಟ ರೂಪವನ್ನು ಕೊಡುವವು. ಮನುಷ್ಯನ ವಿವಿಧ ಚಟುವಟಿಕೆಗಳಲ್ಲಿ, ನಾನಾ ಕಾರ್ಯಕ್ಷೇತ್ರಗಳಲ್ಲಿ,

ಆ ಸಂಸ್ಕೃತಿಯ ರೂಪಗಳು ದೃಗ್ಗೋಚರವಾಗುವವು. ವಿವಿಧ ವಿದ್ಯೆಗಳು, ನಾನಾಕಲೆಗಳು ಇವೆಲ್ಲ ಸಂಸ್ಕೃತಿಯ ಅಂಗಗಳೇ ಸೈ.

## ೭. ಕರ್ನಾಟಕದ ಮಹತ್ವ

ಭಾರತದಂತೆ ಕರ್ನಾಟಕವು ಮೂಲತಃ ಆಧ್ಯಾತ್ಮಿಕ ಪ್ರವೃತ್ತಿಗಳಿಂದ ಕೂಡಿದುದು. ಇಲ್ಲಿ ಮೊದಲು ಮೊದಲು ಆನುವಂಶಿಕ, ಪೂರ್ವಪುರಾತನವಾದ ದ್ರಾವಿಡ ಸಂಸ್ಕೃತಿ ನೆಲೆಯಾಗಿರಲಿಕ್ಕೆ ಸಾಕು. ನಾವು ಯಾವಾಗಲೂ ಆಧ್ಯಾತ್ಮ ಪ್ರಧಾನವಾದ ಮತಮತಾಂತರಗಳಿಗೆ ಸ್ವಾಗತವನ್ನೀಯುತ್ತಲೆ ಇದ್ದೇವೆ ಎಂದು ಹೇಳಬಹುದು. ಬೌದ್ಧಮತದ ಪ್ರಚಾರವು ಇಲ್ಲಿ ಎಷ್ಟು ಇತ್ತು ಎಂಬುದನ್ನು ಹೇಳುವದು ಕಠಿಣವಿದ್ದರೂ ಜೈನ ಮತಕ್ಕೆ ಇಲ್ಲಿ ಚೆನ್ನಾಗಿ ಆಶ್ರಯ ಕೊಡ ಲಾಯಿತು. ನಮ್ಮ ಹಳೆಯ ಅರಸರಲ್ಲಿ, ದಂಡನಾಯಕರಲ್ಲಿ, ಉದ್ದಾಮ ಕವಿಗಳಲ್ಲಿ, ಶಿಲ್ಪಿಗಳಲ್ಲಿ ಅನೇಕರು ಜೈನರಿದ್ದರೆಂಬುದು ಇತಿಹಾಸ ಪ್ರಸಿದ್ಧವು. ಅದೇ ರೀತಿ ಅದ್ವೈತವಾದದ ಶಿಖಾಮಣಿಗಳಾದ ಕೇರಳದ ಶಂಕರಾಚಾರ್ಯರಿಗೆ, ವಿಶಿಷ್ಟಾದ್ವೈತದ ಪುರಸ್ಕರ್ತರಾದ ತಮಿಳುನಾಡಿನ ರಾಮಾನುಜಾಚಾರ್ಯರಿಗೆ ಇಲ್ಲಿ ಒಳ್ಳೆ ಆಶ್ರಯವು ದೊರೆಕಿತು. ದ್ವೈತಮತ ಸ್ಥಾಪನಾಚಾರ್ಯರಾದ ಮಧ್ವಾಚಾರ್ಯರಂತೂ ಉಡಪಿಯವರೇ. ಬಸವಣ್ಣನವರ ಮುಟ್ಟಿಗಂತೂ ಅವರ ಅವತಾರಕಾರ್ಯವೆಲ್ಲ ಇಲ್ಲಿಯೆ ನಡೆಯಿತು. ಇದಲ್ಲದೆ ಇಲ್ಲಿ ಶಕ್ತಿಪೀಠಗಳಿಗೂ ಆಶ್ರಯವಿದೆ. ಈಚೆಗೆ ಇಸ್ಲಾಮು, ಕ್ರಿಸ್ತೀ ಮುಂತಾದ ಮತಗಳಿಗೂ ಸಾಕಷ್ಟು ಮರ್ಯಾದೆ ದೊರೆಕಿದೆ. ಬೇಲೂರ ಶ್ರೀ ಚೆನ್ನಕೇಶವನ ದೇವಾಲಯದಲ್ಲಿರುವ 'ಯಂ ಶೈವಾಃ ಸಮುಪಾಸತೇ . . . .' ಎಂಬ ಶ್ಲೋಕದ ಪ್ರತ್ಯಕ್ಷ ಆಚರಣೆಯು ಇಲ್ಲಿ ನಡೆದು, ಧರ್ಮಸಹಿಷ್ಣುತೆಯು ಪರಮಾವಧಿಗೆ ಮುಟ್ಟಿತು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಜ್ಞಾನ ಅಸೂಯೆ ಮುಂತಾದ ದೋಷಗಳ ಮೂಲಕ ಉಂಟಾಗಬಹುದಾದ ಮತಮತಾಂತರಗಳಲ್ಲಿಯ ಜಗಳಗಳನ್ನು ಸಮನ್ವಯಭಾವದಿಂದ ಹೇಗೆ ಬಗೆ ಹರಿಸಬೇಕೆಂಬುದಕ್ಕೆ ತುಂಗಭದ್ರೆಯ ತೀರದಲ್ಲಿರುವ ಹರಿಹರೇಶ್ವರನ ದೇವಾಲಯವೆ ಸಾಕ್ಷಿ.

ರಾಜಕೀಯ ಕ್ಷೇತ್ರದಲ್ಲಿಯೂ ಕರ್ನಾಟಕವು ಭಾರತದ ಕರ್ತೃತ್ವಕ್ಕೆ ಸಾಕಷ್ಟು ಸಹಾಯ ಮಾಡಿದೆ. ಪೂರ್ವಕಾಲದಲ್ಲಿ ಹಲವಾರು ಅರಸರು ಸನಾತನ ಧರ್ಮದ ಶ್ರೇಷ್ಠ ತತ್ವಗಳಿಗನುಸರಿಸಿ ಆಡಳಿತವನ್ನು ನಡೆಸಿದುದು ನಮ್ಮ ಇತಿಹಾಸದಲ್ಲಿ ಪ್ರಸಿದ್ಧವಿರುವುದು. ವಿಜಯನಗರದ ಸ್ಥಾಪನೆ, ಸುಮಾರು ೨೫೦ ವರುಷದ ಅದರ ಬಾಳಿಕೆ, ಆ ಕಾಲದಲ್ಲಿ ನಡೆದ ಸಂಸ್ಕೃತಿವಿಕಾಸ-ಇವು ಭಾರತೀಯ ಇತಿಹಾಸಕ್ಕೆ ಭೂಷಣಾಸ್ಪದವಾಗಿವೆ ಎಂದು ವಿದ್ವಾಂಸರು ಸಾರಿದ್ದಾರೆ. ಭಾರತದ ಇತರ ಪ್ರಾಂತಗಳೊಡನೆ ಇದ್ದ ಕರ್ನಾಟಕದ ಸಂಬಂಧದ ಬಗ್ಗೆ ಬಿಹಾರ, ನೇಪಾಲ, ಬಂಗಾಲ, ಓರಿಸಾ ಮುಂತಾದ ದೂರ ದೂರ ಪ್ರಾಂತಗಳ ಇತಿಹಾಸಗಳು ಸಾಕಷ್ಟು ಸಾಕ್ಷಿಕೊಡುತ್ತಿವೆ. ದರಭಂಗಾ (ಮಿಥಿಲಾ) ರಾಜ್ಯದಲ್ಲಿಯ ಹಲವು ದೊಡ್ಡ ಕೆರೆಗಳನ್ನು ಕರ್ನಾಟಕದ ಅರಸರು ಕಟ್ಟಿಸಿದರೆಂದು

ಅಲ್ಲಿಯ ಮಹಾರಾಜರೆ ನನಗೆ ಹೇಳಿದರು! ಅಂದಬಳಿಕ ಆಗಿನ ಕಾಲಕ್ಕನುಸರಿಸಿ ಕ್ಷತ್ರಿಯ ಶ್ರೇಷ್ಠರಲ್ಲಿರಬೇಕಾದ ವಿಜಿಗೀಷು ವೃತ್ತಿ, ಧರ್ಮಕ್ಕನುಸರಿಸಿ ಪ್ರಜೆಗಳನ್ನು ಪಾಲಿಸಬೇಕೆಂಬ ಅನುಸಂಧಾನ, ಸಾಹಿತ್ಯ ಸಂಗೀತಾದಿ ಕಲೆಗಳಿಗೆ ಪ್ರೋತ್ಸಾಹ ಕೊಡುವ ಪ್ರವೃತ್ತಿ ಇತ್ಯಾದಿ ಕರ್ನಾಟಕದ ಅರಸರಲ್ಲಿ ಹೇರಳವಾಗಿ ಕಂಡು ಬರುತಿದ್ದವು. ಮೇಲಾಗಿ ತಮ್ಮ ಹೆಸರಿನ ಅಂಕಿತವನ್ನು ಮಾಡದೆ ಹಂಪೆಯ ವಿರೂಪಾಕ್ಷನ ಹೆಸರಿನಿಂದಲೆ ರಾಜ್ಯವಾಳುವ, ಅವನ ಕಿಂಕರರೆಂದು ಅವನ ಹೆಸರನ್ನೇ ಹಸ್ತಾಕ್ಷರವನ್ನಾಗಿ ಇಟ್ಟುಕೊಂಡಿರುವ ವಿಜಯನಗರದ ಅರಸರ ಶ್ರೇಷ್ಠ ಆಧ್ಯಾತ್ಮಿಕ ಹಾಗು ನೈತಿಕ ನಿಲುಮೆ ಕರ್ನಾಟಕದ ಗೌರವವನ್ನು ಹೆಚ್ಚಿಸುವವು. ಅದಲ್ಲದೆ ಕರ್ನಾಟಕ ಸಿಂಹಾಸನಾಧೀಶ್ವರರಾದ ಒಡೆಯರ ವಂಶದವರು 'ಸತ್ಯಮೇವೋದ್ಧರಾಮ್ಯಹಮ್' ಎಂಬ ಬಿರುದನ್ನು ಇಟ್ಟು ಕೊಂಡಿರುವದು ಅವರ ಉಚ್ಚಧ್ಯೇಯವಾದಿತ್ವವನ್ನು ಸಾರುವದು.

ಕರ್ನಾಟಕವು ವಾಸ್ತುಶಿಲ್ಪಾದಿಗಳ ಬಗ್ಗೆ ಪರದೇಶಗಳಲ್ಲಿ ಕೂಡ ಎಷ್ಟು ಪ್ರಸಿದ್ಧವಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೊಯ್ಸಳಪೂರ್ವವಾದ ಬಾದಾಮಿ ಐಹೊಳೆ ಪಟ್ಟದ ಕಲ್ಲುಗಳಲ್ಲಿಯ ಶಿಲ್ಪಸೌಂದರ್ಯದ ಮಾದರಿಗಳನ್ನು ಮೊದಲುಮಾಡಿ, ಮುಡುಬಿದ್ರೆ, ಬೇಲೂರು, ಹಳೇಬೀಡು, ಗದಗು, ಇಟಗಿ ಮುಂತಾದ ಕಡೆಗೆ ಇದ್ದ ಗುಡಿಗೋಪುರಗಳನ್ನೊಳಗೊಂಡು ಚಾಮುಂಡಿಯ ಮಹಿಷಾಸುರಮರ್ದಿನಿಯ ಮಂದಿರದವರೆಗೆ ಕರ್ನಾಟಕದ ಈ ಪವಿತ್ರ ಭೂಮಿಯಲ್ಲಿ ಶಿಲ್ಪದೇವಿಯು ಸ್ವಚ್ಛಂದವಾಗಿ ವಿಹರಿಸಿದ್ದಾಳೆನ್ನಲು ಯಾವ ಅಭ್ಯಂತರವೂ ಇಲ್ಲ. ಶುದ್ಧ ಭಾರತೀಯ ಶಿಲ್ಪದ ಅತ್ಯಂತ ಉಚ್ಚಾಗ್ರಯ ಸ್ಥಿತಿಯನ್ನು ಇಲ್ಲಿ ನೋಡಲು ಸಿಕ್ಕುವಂತೆ, ಇಂಡೊ ಸಾರಸೆನಿಕ್ ಹಾಗು ಇಂಡೊ ಪರ್ಶಿಯನ್ ಎಂದು ಹೆಸರಾದ ಶಿಲ್ಪಕಲೆ ಕೂಡ ವಿಜಾಪುರ, ಗುಲಬುರ್ಗಾ ಮುಂತಾದ ಸ್ಥಳಗಳಲ್ಲಿ ನಮ್ಮ ದೃಷ್ಟಿಗೆ ಬೀಳುವದು. ಅದೇ ರೀತಿ ಗಾಥಿಕ್ ಎನಿಸಬಹುದಾದ ಸುಂದರ ಕ್ರಿಶ್ಚನ್ ಚರ್ಚುಗಳೂ ಗೋವೆ ಪ್ರಾಂತದಲ್ಲಿ ಈಗ್ಗೂ ವಿರಾಜಮಾನವಾಗಿವೆ. ಆದುದ ರಿಂದ ವೈಭವದೊಡನೆ ವೈವಿಧ್ಯವೂ ಇಲ್ಲಿ ಮೈವೆತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು.

ಸಂಗೀತ ಚಿತ್ರಕಲೆ ಮುಂತಾದವುಗಳೂ ಇಲ್ಲಿ ಸಾಕಷ್ಟು ಪ್ರೋತ್ಸಾಹವನ್ನು ಪಡೆದುವಲ್ಲದೆ ಇಲ್ಲಿಯೆ ಮನೆಮಾಡಿಕೊಂಡೂ ಇವೆ. ಸಂಗೀತದ ವಿಷಯದಲ್ಲಿ ಯಂತೂ ದಾಕ್ಷಿಣಾತ್ಯ ಸಂಗೀತಕ್ಕೆ ಕರ್ನಾಟಕ ಸಂಗೀತವೆಂದೇ ಹೆಸರಾಯಿತು. ಅದನ್ನು ಶುದ್ಧವಾಗಿರಿಸಿ ಅದಕ್ಕೆ ಗ್ರಂಥಾದಿಗಳ ಮುಖಾಂತರ ಸ್ಥಿರ ಸ್ವರೂಪವನ್ನು ಕೊಟ್ಟದ್ದಲ್ಲದೆ, ತ್ಯಾಗರಾಜರಿಗೂ ಮೊದಲು ಇನ್ನೂರು ವರುಷ ಅದನ್ನು ಕೀರ್ತನೆಗಳ ಮೂಲಕ ಲೋಕಪ್ರಿಯ ಮಾಡಿದ ಶ್ರೇಯಸ್ಸು ಕರ್ನಾಟಕದ ಪುರಂದರಾದಿ ದಾಸಶ್ರೇಷ್ಠರಿಗಿದೆ ಎಂಬುದನ್ನು ಮರೆಯತಕ್ಕದ್ದಲ್ಲ. ಅಜಂತಾ ಮುಂತಾದ ಕಡೆಗೆ ಪುರಸ್ಕೃತವಾದ ಚಿತ್ರಕಲಾ ನೈಪುಣ್ಯದ ವಿಷಯದಲ್ಲಿ ಕೂಡ ಮೊನ್ನೆ ಮೊನ್ನೆ ತೀರಿದ ಸಿದ್ಧಲಿಂಗಸ್ವಾಮಿಗಳ ಹೆಸರು, ಅದೇ ರೀತಿ ವೆಂಕಟಪ್ಪ ನವರ ಹೆಸರು ನಮ್ಮೆದುರು ಬರುವುವು.

ಸಮಾಜರಚನೆ, ಸಮಾಜ ಶಾಸ್ತ್ರ, ಸಮಾಜ ಸುಧಾರಣೆ, ಜನ ಸಾಮಾನ್ಯರಲ್ಲಿ ಸುಲಭವಾದ ಧರ್ಮಪ್ರಚಾರ ಮುಂತಾದ ದೃಷ್ಟಿಯಿಂದ ಕರ್ನಾಟಕದ ಇತಿಹಾಸ ವನ್ನು ಪರಿಶೀಲಿಸಿದರೆ ನಮಗೆ ಹಲವು ಮಹತ್ವದ ಸಂಗತಿಗಳು ದೃಗ್ಗೋಚರ ವಾಗುವವು. ಈ ವಿಷಯದಲ್ಲಿ ವಚನಕಾರರು ಹಾಗು ದಾಸಕೂಟದವರು ಮಾಡಿದ ಲೋಕಸೇವೆ ಅನುಪಮವೂ ಅಮೋಘವೂ ಇರುವದು. ಅದು ಕೇವಲ ಸಾಹಿತ್ಯಸೇವೆಯಲ್ಲ. ಅದು ಶ್ರೇಷ್ಠವಾದ ಧರ್ಮಸೇವೆ. ಸುಲಭ ಸುಲಲಿತ ಶೈಲಿಯಲ್ಲಿ ಗಹನ ಗಂಭೀರವಾದ ತತ್ವಗಳನ್ನು ಸುಲಿದ ಬಾಳೆಯ ಹಣ್ಣಿ ನೋಪಾದಿಯಲ್ಲಿ ಬಾಲಭಾವದ ಜನಸಾಮಾನ್ಯರಲ್ಲಿ ಪ್ರಚಾರಗೊಳಿಸುವದು ಬಹು ದೊಡ್ಡ ಕೆಲಸ. ಮೇಲಾಗಿ ಸಮಾಜ ಸುಧಾರಣೆಯ ವಿಷಯದಲ್ಲಿ ಬಸವೇಶ್ವರರಷ್ಟು ಮುಂದುವರಿದವರೆಷ್ಟು ಜನ? ಆಗಿನ ಕಾಲದಲ್ಲಿ ಸಮಾಜ ದಲ್ಲಿಯ ವಿಷಮತೆಯನ್ನು ತೊಡೆದುಹಾಕಲು ಅವರು ಮಾಡಿದ ಪ್ರಯತ್ನ ಅದ್ವಿತೀಯ.

ಇನ್ನು ಕನ್ನಡ ಸಾಹಿತ್ಯ, ವಾಙ್ಮಯ ಇವುಗಳತ್ತ ನೋಡಿದರೆ ನಾಲ್ಕನೆ ಐದನೆ ಶತಮಾನದಿಂದಲೆ ಒಂದು ದಿವ್ಯ ಭವ್ಯ ಪರಂಪರೆ ನಮ್ಮ ದೃಷ್ಟಿಗೆ ಬೀಳುವದು. ಭಾರತದಲ್ಲಿಯ ಯಾವದೇ ಇತರ ಪ್ರಾಂತಗಳ ವಾಙ್ಮಯಕ್ಕೆ ಹೋಲಿಸಿ ನೋಡಿದರೂ ಕನ್ನಡದ ವಾಗ್ವೈಭವ ಹಿಂದೆ ಬೀಳುವಂತಿಲ್ಲ. ಬೇಕಾ ದಷ್ಟು ಕಷ್ಟಕಾಲ, ಏರಿಳಿತಗಳು ಬಂದು ಹೋಗಿದ್ದರೂ, ಈಗ ಆಧುನಿಕ ಕಾಲದಲ್ಲಿ ಮತ್ತೆ ಕನ್ನಡ ಸರಸ್ವತಿಯು ತನ್ನ ವೈಭವವನ್ನು ಬೀರುತಿರುವಳು. ಸಣ್ಣ ಕಥೆ, ದೊಡ್ಡ ಕಥೆ, ಕಾದಂಬರಿಗಳು, ಕಾವ್ಯ, ವೃತ್ತಪತ್ರ, ನಾಟಕಗಳು ಮುಂತಾದ ವಿವಿಧ ರೂಪದಲ್ಲಿ ವಾಙ್ಮಯವೆಂಬುದು ಬೆಳೆದು ಬರುತಿರುವದು. ಕರ್ನಾಟಕವು ಅನೇಕಾನೇಕ ವರುಷಗಳವರೆಗೆ ಹರಿದು ಹಂಚಿಹೋದ ಸ್ಥಿತಿಯಲ್ಲಿ ಬಿದ್ದು ಕೊಂಡಿದ್ದರೂ, ಕನ್ನಡವು ತನ್ನ ವ್ಯಕ್ತಿತ್ವವನ್ನು ಕಳಕೊಳ್ಳದೆ ವಿಷಮಕಾಲದಲ್ಲಿ ಕೂಡ ತನ್ನ ತೇಜಸ್ಸನ್ನು ತೋರಿಸುತ್ತಲೆ ಬಂದಿದೆ, ಎಂಥ ಪರಿಸ್ಥಿತಿಯಲ್ಲಿಯೂ ಪ್ರಗತಿ ಹೊಂದುತ್ತಲಿದೆ. ಇದೆಲ್ಲ ಕನ್ನಡದ ಆಂತರಿಕ ಶಕ್ತಿ, ಕನ್ನಡ ಓದುಗರ ಪ್ರೀತಿ ಅಭಿಮಾನಗಳು ಇವುಗಳ ಮೂಲಕವೆ ಸಾಧ್ಯವಾಗಿದೆ. ಕನ್ನಡದ ಭವಿಷ್ಯವು ಇನ್ನೂ ಉಜ್ವಲವಾಗಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

## ೮. ಹಾರೈಕೆ

ಕರ್ನಾಟಕದ ಸಂಸ್ಕೃತಿಯ ಕಿಂಚಿತ್ ದರ್ಶನವನ್ನು ಇಲ್ಲಿ ಮಾಡಲಾಗಿದೆ. ಏಕೀಕೃತ ಕರ್ನಾಟಕದಲ್ಲಿ ಅದರ ಸ್ವರೂಪವು ದಿವ್ಯಭವ್ಯವಾಗಿ ಬೆಳೆಯಲು, ಈ ಮೊದಲಿಗಿಂತ ಹೆಚ್ಚಿನ ಮುಡಿಪನ್ನು ಭಾರತಕ್ಕೆ, ತನ್ಮುಖಾಂತರ ವಿಶ್ವಕ್ಕೆ ಸಲ್ಲಿಸುವ ಶಕ್ತಿ ಅದರಲ್ಲಿ ಉಂಟಾಗಲು ಆಸ್ಪದ ದೊರಕೀತೆಂಬ ಭರವಸೆ ಇದೆ. ಅಥವಾ ಅಂಥ ಆಸ್ಪದ ದೊರೆಯಲೆಂದೇ ಏಕೀಕರಣದ ಆಂದೋಲನವನ್ನು ಕೈಕೊಳ್ಳಲಾಗಿತ್ತು ಎಂದು ಹೇಳಬಹುದು. ಭಾರತದ ಅನ್ಯ ಪ್ರಾಂತಗಳೊಡನೆ ಹೆಗಲಿಗೆ ಹೆಗಲು ಹಚ್ಚಿ, ಆಧುನಿಕ ವಿಜ್ಞಾನಾದಿ ಕ್ಷೇತ್ರಗಳಲ್ಲಿ, ಉದ್ಯೋಗ

ವ್ಯಾಪಾರಾದಿಗಳಲ್ಲಿ, ಹೆಚ್ಚಿನ ದವಸಧಾನ್ಯಗಳನ್ನು ಉತ್ಪನ್ನ ಮಾಡುವದರಲ್ಲಿ ಕರ್ನಾಟಕವು ಮುಂದಾಗಬೇಕೆಂಬ ಹಂಬಲವು ನಮ್ಮೆಲ್ಲರಿಗೂ ಇರಬೇಕು. ಇದು ಸ್ವಾಭಾವಿಕ. ಇದಲ್ಲದೆ ವಿಶಿಷ್ಟ ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ಈ ಪ್ರಾಂತವು ಇನ್ನಿತರ ಪ್ರಾಂತಗಳ ಹಿಂದೆ ಉಳಿಯಕೂಡದು. ಕರ್ನಾಟಕವು ತನ್ನ ಉಜ್ವಲ ಪರಂಪರೆಯನ್ನು ಮರೆಯದೆ ಉಚ್ಚಧ್ಯೇಯಗಳತ್ತ ಸತತ ದೃಷ್ಟಿಯನ್ನಿಟ್ಟುಕೊಂಡು ಭಾರತಕ್ಕೆ ಸ್ವಾತಂತ್ರ್ಯ, ಕರ್ನಾಟಕಕ್ಕೆ ಏಕತಂತ್ರ, ಇವು ದೊರೆತುದೇ ಉಚ್ಚತರ ಧ್ಯೇಯಗಳ ಸಾಧನೆಗಾಗಿ, ಎಂಬುದನ್ನು ಧ್ಯಾನಿಸುತ್ತ ಮುಂದೆ ಸಾಗುವದು ಅವಶ್ಯ. ಈ ಭಾರ ವಿಶೇಷತಃ ತರುಣ ಪೀಳಿಗೆಯ ಮೇಲೆ ಇದೆ. ನವೋತ್ಸಾಹ ಭರಿತರಾದ ತರುಣ ತರುಣಿಯರು, ಯುವಕ ಯುವತಿಯರು ಭವಿಷ್ಯದ ದಿವ್ಯ ದರ್ಶನವನ್ನು ಪಡೆಯುತ್ತ, ಭವ್ಯ ಭೂತಕಾಲದಿಂದ ಸ್ಫೂರ್ತಿಯನ್ನು ಸೆಳೆಯುತ್ತ, ನಿರ್ಮಲ ಹೃದಯದಿಂದ, ನಿಚ್ಚಳ ಬುದ್ಧಿಯಿಂದ, ಗಟ್ಟಿಯಾದ ಹೆಜ್ಜೆಯನ್ನಿಡುತ್ತ ಮುಂದೆ ಸಾಗಿ, ಜಯ ಕರ್ನಾಟಕ, ಜಯ ಭಾರತ, ಎಂಬ ಭೇರಿಯನ್ನು ದಿಗಂತದಲ್ಲಿ ಮೊಳಗಿಸಲಿ ಎಂದು ಹಾರೈಸಿ ಈ ನಾಲ್ಕುಮಾತು ಮುಗಿಸುವೆ.

---

# ಕನ್ನಡ ನಾಡಿನ ಚರಿತ್ರೆ

ಲೇಖಕರು :

ಡಾ|| ಎಸ್. ಶ್ರೀಕಂಠಶಾಸ್ತ್ರೀ ಅವರು, ಮೈಸೂರು.

ಗಾಡಿಯ ಸೀಮೆ ಚೆಲ್ವೊಗೆದ ತಾಣಮುಲಂಪಿನ ಸಂತೆ ಪೆಂಪು ಸಾ
ರ್ದಾಡುವ ಭೂಮಿ ಸೌಖ್ಯದೆಡೆ ಪುಣ್ಯದ ಗೊತ್ತು ವಿನೋದದಾಗರಂ
ಮೋಡಿಯ ಮಂಟಪಂ ಸಿರಿಯ ಪೆರ್ಚುಗೆಗೊಳ್ಗನೆ ಮುಕ್ತಿಕಾಂತೆ ಕೈ
ಗೂಡುವ ಬೀಡು ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ ||

— ಚಿಕ್ಕುಪಾಧ್ಯಾಯ

## ೧. ಪ್ರಾಕ್ ಚಾರಿತ್ರಕ ಯುಗ

ಕರ್ನಾಟಕದ ಅತ್ಯಂತ ಪ್ರಾಚೀನತೆಯನ್ನು ಪುರಾತತ್ವ ಶೋಧನೆ ಮತ್ತು ಭೂಶಾಸ್ತ್ರದಿಂದ ತಿಳಿಯಬಹುದು. ದಕ್ಷಿಣಾಪಥದ ಪಶ್ಚಿಮ ಮತ್ತು ಮಧ್ಯ ಭಾಗಗಳನ್ನು ಆಕ್ರಮಿಸಿಕೊಂಡಿರುವ ಕನ್ನಡ ನಾಡು ಕೋಟ್ಯಂತರ ವರ್ಷಗಳ ಹಿಂದೆ ದಕ್ಷಿಣ ಆಫ್ರಿಕ ಮತ್ತು ಆಸ್ಟ್ರೇಲಿಯದವರೆಗೂ ವ್ಯಾಪಿಸಿದ್ದ "ಗೊಣ್ಡವಾನ" ಎಂಬ ಭೂಖಂಡದ ಭಾಗವಾಗಿದ್ದಿತು. ಗೋದಾವರಿ, ಕೃಷ್ಣಾ, ಕಾವೇರೀ, ತುಂಗಭದ್ರಾ, ಘಟಪ್ರಭಾ ನದಿಗಳ ಪಾತ್ರಗಳಲ್ಲಿ ಪುರಾಣಯುಗದ ಅವಶೇಷಗಳು ಸಿಕ್ಕಿವೆ. ಉಪಶ್ಶಿಲಾಯುಗ (Eolithic) ದಲ್ಲಿಯೇ ಮಾನವನು ಕೆಲವು ಕಲ್ಲಿನ ಆಯುಧಗಳನ್ನುಪಯೋಗಿಸುತ್ತಿದ್ದಂತೆ ಕಂಡುಬರುವದು. ಮೈಯೋಸೀನ್ ಕಾಲದ ಪ್ರಾಣಿಗಳ ಅವಶೇಷಗಳೊಡನೆ ಲ್ಯಾಟರೈಟ್ ಮತ್ತು ವಿಂಧ್ಯ ಮರಳು ಕಲ್ಲುಗಳಿಂದ ಮಾಡಿದ ಕೈಗೊಡಲಿ ಇತ್ಯಾದಿ ಆಯುಧಗಳು ಗೋದಾವರಿ ಕಣಿವೆಯಲ್ಲಿ ಸಿಕ್ಕಿರುವುದರಿಂದ ಬಹುಶಃ "ನಿಯಾಂಡರ್‌ಥೆಲಾಯ್ಡ್" ವರ್ಗಕ್ಕೆ ಸೇರಿದ್ದ ಆದಿಮಾನವನು ನೆಲಸಿದ್ದನೆಂದು ಊಹಿಸಬಹುದು. ಅನಂತರ ಪುರಾತನ ಶಿಲಾಯುಗ (Palæolithic) ದಲ್ಲಿ ದಕ್ಷಿಣ ಆಫ್ರಿಕದಿಂದ ಬಂದಿದ್ದ ನೀಗ್ರಿಡ್ ಜನರು "ಕ್ವಾರ್‌ಟ್ಸೈಟ್" ಕಲ್ಲುಗಳಿಂದ ಕೊಡಲಿ, ಭರ್ಜಿ, ಕವಣೆಕಲ್ಲು, ಚಾಕು ಮುಂತಾದುವನ್ನೂ ಮರದಿಂದ ಬಾಚಣಿಗೆ ಇತ್ಯಾದಿಯನ್ನೂ ತಯಾರಿಸುತ್ತಿದ್ದರು. ಗುಂತಕಲ್ಲು, ಕಡೂರು, ನ್ಯಾಮ್ತಿ, ಬಳ್ಳಾರಿ, ಇನ್ನೂ ಅನೇಕ ಸ್ಥಳಗಳಲ್ಲಿ ಪುರಾತನ ಶಿಲಾಯುಗದ ಜನರು ವಸಾಹತು ಮಾಡಿಕೊಂಡಿದ್ದರು. ಬಳ್ಳಾರಿ ಮತ್ತು ಕರ್ನೂಲ್ ಹತ್ತಿರ ಇರುವ ಬಿಲ್ಲಸರ್ಗಂ ಗುಹೆಗಳಲ್ಲಿ "ಮಾಗ್ಡಲೀನಿಯನ್" ಕಾಲದ ಶಿಲಾಯುಧಗಳು, ಅನೇಕ ವಿಧಗಳಾದ ಕಪಿ, ಕಿರುಬ, ಕುದುರೆ, ಗಂಡಮೃಗ ಮತ್ತು ಆನೆಗಳ ಪ್ರಾಚೀನ ರೂಪಾವಶೇಷಗಳು ಸಿಕ್ಕಿವೆ.

ಕ್ಷುದ್ರ ಶಿಲಾಯುಗ (Microlithic) ದಲ್ಲಿ ಡಾ|| ಐಕ್ಸ್ಟೆಡ್ ಅಭಿಪ್ರಾಯದಂತೆ "ವೆಡ್ಡಿಡ್" ಜನರು "ಸೀಡ್ರಿಡ್" ಜನರನ್ನು ಫಲವತ್ತಾದ ಭಾಗಗಳಿಂದ

ಓಡಿಸಿ ಆ ಸ್ಥಳಗಳನ್ನು ಆಕ್ರಮಿಸಿಕೊಂಡು ಕ್ಷುದ್ರ ಶಿಲಾಯುಗ ಸಂಸ್ಕೃತಿಯನ್ನು ಸ್ಥಾಪಿಸಿದರು. ಈ ಜನರು ಬ್ರಹ್ಮಗಿರಿ, ಚಂದ್ರವಳ್ಳಿ, ಕೊಲ್ಲಾಪುರ, ಗೋದಾವರಿ ಪ್ರಾಂತ್ಯಗಳಲ್ಲಿ ಕಲ್ಲಿನಿಂದ ನಯವಾದ ಚಿಕ್ಕದಾದ ಉಪಕರಣಗಳನ್ನು ಮಾಡಿಕೊಂಡು, ಕೈಯಿಂದ ಮಾಡಿದ ಹಸಿಮಣ್ಣಿನ ಮಡಕೆಗಳನ್ನು ತಯಾರಿಸುತ್ತಿದ್ದರು. ಅನಂತರ ನವ ಶಿಲಾಯುಗ ಆರಂಭದಲ್ಲಿ "ಗ್ರಾಸ್ಸೈಲ್ ಇಂಡಿಡ್" ಜನರು ಬೃಹತ್ ಶಿಲೆಗಳಿಂದ (Megalithic) ಸಮಾಧಿಗಳನ್ನೂ, ವ್ಯವಸಾಯ, ಗ್ರಾಮ ರಚನೆ, ಮಾತೃ ಅಧಿಕಾರ, ಮುಂತಾದುವನ್ನೂ ಸ್ಥಾಪಿಸಿದರು. ಈ ಸಂಸ್ಕೃತಿಯ ಅವಶೇಷಗಳು ಬ್ರಹ್ಮಗಿರಿ, ಚಂದ್ರವಳ್ಳಿ, ಮಾಗಡಿ, ಬೆಂಗಳೂರು, ಆನೆಕಲ್, ಹರಳಕೋಟೆ, ಬಳ್ಳಾರಿ, ಮಾಸ್ಕಿ, ಸಿಂಗನಪುರ, ಬಿಜಾಪುರ ಇವೇ ಮುಂತಾದ ಅನೇಕ ಸ್ಥಳಗಳಲ್ಲಿ ಸಿಕ್ಕಿವೆ. ನವ ಶಿಲಾಯುಗದ ಉತ್ತರಾರ್ಧದಲ್ಲಿ ಕಬ್ಬಿಣ, ತಾಮ್ರ, ಮತ್ತು ಕಂಚು ಲೋಹಗಳಿಂದ ಪಾತ್ರೆಗಳನ್ನೂ ಆಯುಧಗಳನ್ನೂ ತಯಾರಿಸುವ ವಿಧಾನವನ್ನು ಅರಿತಿದ್ದರು. ಬಳ್ಳಾರಿ ಬಳಿಯಲ್ಲಿರುವ ಸಂಗನಕಲ್, ಕಪ್ಪಗಲ್ ಗುಹೆಗಳಲ್ಲಿ ನವ ಶಿಲಾಯುಗದ ಕಾರ್ಖಾನೆ ಇದ್ದಂತೆ ಕಂಡುಬರುತ್ತದೆ. ಅಲ್ಲದೆ ಈ ಗುಹೆಗಳಲ್ಲಿ ಕಂಡುಬರುವ ಪ್ರಾಕ್ಚಾರಿತ್ರಿಕ ಯುಗದ ಚಿತ್ರಕಲೆಯನ್ನು ಯೂರೋಪಿನ ಪುರಾತನ ಗುಹಾ ಚಿತ್ರಗಳಿಗೆ ಹೋಲಿಸಬಹುದು ಮತ್ತು ಬ್ಯಾಬಿಲೋನಿಯನ್ ಸಂಸ್ಕೃತಿಯ ಸಮಾಧಿ ಕುಂಭಗಳನ್ನು ಹೋಲುವ ಕುಂಭಗಳು ಚಂದ್ರವಳ್ಳಿ, ಕೊಲ್ಲಾಪುರ, ಬೆಂಗಳೂರು ಇತ್ಯಾದಿ ಸ್ಥಳಗಳಲ್ಲಿ ಕಂಡುಬಂದಿವೆ. ಕ್ರಿಸ್ತಪೂರ್ವ ಒಂದು ಸಾವಿರ ವರ್ಷದಿಂದಲಾದರೂ ಕರ್ಣಾಟಕಕ್ಕೂ ಪಾಶ್ಚಾತ್ಯ ಸಂಸ್ಕೃತಿಗಳಿಗೂ ವ್ಯಾಪಾರ ಸಂಬಂಧವಿದ್ದಿತೆಂದು ಊಹಿಸಬಹುದು. ಧ್ರಾವಿಡ ಭಾಷಾ ಪದಗಳಾದ ಅರಿಶೀ (ಅಕ್ಕಿ), ಮರಿಚಿ (ಮೆಣಸು), ತೋಕೈ (ನವಿಲು), ಸಂದನ್ (ಚಂದನ), ಇತ್ಯಾದಿ, ಬೈಬಲಿನ "ಓಲ್ಡ್ ಟೆಸ್ಟಮೆಂಟ್", ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಕಂಡುಬರುವದರಿಂದ ಕರ್ಣಾಟಕದ ಪಡುವಣ ಕರಾವಳಿಯಿಂದ ಈ ಪದಾರ್ಥಗಳು ಪಾಶ್ಚಾತ್ಯ ದೇಶಗಳಿಗೆ ಸಾಗಾಣಿಕೆ ಆಗುತ್ತಿದ್ದವೆಂದೂ, ವೈಜಯಂತೀ ಮಹಾದ್ವಾರ (ಬನವಾಸಿ), ಮಾಲ್ಪಿ, ಭಟ್ಕಲ್, ಕಲ್ಯಾಣ ರೇವು ಪಟ್ಟಣಗಳಲ್ಲಿ ವಿದೇಶೀಯ ವರ್ತಕರು ವ್ಯಾಪಾರ ನಡಿಸುತ್ತಿದ್ದರೆಂದೂ ನಿಶ್ಚಿತವಾಗಿದೆ. ಕ್ರಿ. ಶ. ೨ನೆ ಶತಾಬ್ದದ ಒಂದು ಗ್ರೀಕ್ ನಾಟಕದಲ್ಲಿ ಕನ್ನಡಕ್ಕೆ ಸಂಬಂಧಪಟ್ಟ ಒಂದು ಭಾಷೆಯ ಕೆಲವು ಶಬ್ದಗಳು ಕಂಡುಬಂದಿವೆ.

## ೨. ಕರ್ಣಾಟಕ_ಕನ್ನಡ

ಕರ್ಣಾಟಕ ಎಂಬ ಹೆಸರು ಕ್ರಿಸ್ತಶಕ ಆರನೆ ಶತಾಬ್ದಕ್ಕೆ ಹಿಂದೆಯೇ ರೂಢಿಗೆ ಬಂದಿದ್ದಿತೆಂದು ವರಾಹ ಮಿಹಿರನ ಬೃಹತ್ಸಂಹಿತೆಯಿಂದ ಖಚಿತವಾಗಿದೆ. ಆದರೆ ಇದನ್ನು ಕೊಂಕಣ, ವನವಾಸ, ಕುಂತಲ, ಪುನ್ನಾಟ, ತಾಳಕಟ ಎಂಬ ಭಾಗಗಳಿಂದ ಪ್ರತ್ಯೇಕವಾಗಿ ಹೇಳಿರುವದರಿಂದ ಕನ್ನಡ ಭಾಷೆಯ ವ್ಯಾಪ್ತಿ ಇದ್ದ ದೇಶವನ್ನೆಲ್ಲ ಒಳಕೊಂಡಿರಲಿಲ್ಲ. ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ವನವಾಸ, ಅಪರಾಂತಗಳು ಅಶೋಕನ ಕಾಲದ ಗ್ರಂಥಗಳಲ್ಲಿ ಉಕ್ತವಾಗಿದೆ.

ಶಾತವಾಹನ ರಾಜರಾದ ಶಾತಕರ್ಣಿಗಳ ಹೆಸರಿನಿಂದ "ಕರ್ಣಾಟ"ವೆಂಬ ಹೆಸರು ಮೊದಲು ಶ್ರೀ ಪರ್ವತ ಪ್ರಾಂತಕ್ಕೆ ಬಂದಿರಬಹುದು. ನಂದ ಮತ್ತು ಮೌರ್ಯರ ಕಾಲದಲ್ಲಿ ಮಗಧ ಸಾಮ್ರಾಜ್ಯ ಮೈಸೂರಿನ ಮಧ್ಯಭಾಗದವರೆಗೂ ಹರಡಿದ್ದಿತೆಂಬುದಕ್ಕೆ ಅಶೋಕನ ಶಾಸನಗಳು, ಚೀಣ ಪ್ರವಾಸಿಕರ ವರದಿಗಳು ಸಾಕ್ಷಿಯಾಗಿವೆ. ಮಹಾಭಾರತ, ರಾಮಾಯಣ ಕಾಲದಲ್ಲಿ ದಂಡಕಾರಣ್ಯ, ಜನಸ್ಥಾನ, ಪಂಪಾ ಸರೋವರ ಮುಂತಾದ ದಕ್ಷಿಣಾಪಥದ ಭಾಗಗಳಲ್ಲಿ ಆರ್ಯ ಸಂಸ್ಕೃತಿಯು ವಿಸ್ತರಿಸುತ್ತಿದ್ದಿತು. ಅಗಸ್ತ್ಯ, ಪರಶುರಾಮ, ಕಣ್ವ, ಇತ್ಯಾದಿ ಸಂಸ್ಕೃತಿ ವೀರರು ವೈದಿಕ ಮತವನ್ನು ಪ್ರಚಾರ ಮಾಡಿದರು. ಕ್ರಿಸ್ತ ಪೂರ್ವ ಆರನೆಯ ಶತಾಬ್ದದಲ್ಲಿ ಉದ್ಭವಿಸಿದ ಬೌದ್ಧ, ಜೈನಮತಗಳು ದಕ್ಷಿಣ ದೇಶದಲ್ಲಿ ಹರಡಿ ಕೇಂದ್ರಗಳನ್ನು ಸ್ಥಾಪಿಸಿದ್ದವು. ನಂದರಾಜರು ಕರ್ಣಾಟಕದ ಕೆಲವು ಭಾಗಗಳನ್ನು ಆಳುತ್ತಿದ್ದಂತೆ ಶಾಸನಗಳು ಹೇಳುವವು. ಮೌರ್ಯ ಚಂದ್ರಗುಪ್ತನು ದಕ್ಷಿಣ ದೇಶಗಳನ್ನು ಗೆದ್ದಂತೆ ಎಲ್ಲಿಯೂ ಹೇಳಲಿಲ್ಲವಾದರೂ, ಆಗಲೇ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ ಕಟವಪ್ರ (ಶ್ರವಣಬೆಳಗೊಳ) ಕ್ಕೆ ತನ್ನ ಗುರುವಾದ ಶ್ರುತಕೇವಲಿ ಭದ್ರಬಾಹುವಿನೊಡನೆ ಬಂದಿದ್ದನೆಂದು ಜೈನ ಐತಿಹ್ಯಗಳಿರುವುದರಿಂದ, ಮೌರ್ಯ ಸಾಮ್ರಾಜ್ಯದೊಡನೆ ಸಂಪರ್ಕವಿದ್ದಿರಬೇಕು. ಅಶೋಕನ ದಕ್ಷಿಣ ರಾಜಧಾನಿ ಸುವರ್ಣಗಿರಿಯು ಎರ್ರಗುಡಿ ಹತ್ತಿರ ಇರುವ ಜೊನ್ನಗಿರಿ ಎಂದು ಊಹಿಸಲು ಅವಕಾಶವಿದೆ. ಸುವರ್ಣಗಿರಿಯಲ್ಲಿದ್ದ ಪ್ರಾಂತಾಧಿಕಾರಿಯ ಅಧೀನದಲ್ಲಿದ್ದ ಮಹಾಮಾತ್ರ ಎಂಬ ಅಧಿಕಾರಿಯು "ಇಸಿಲ" ಅಥವಾ ಬ್ರಹ್ಮಗಿರಿಯಲ್ಲಿ ಆಳುತ್ತಿದ್ದನು. ಅವನನ್ನು ನಿರ್ದೇಶಿಸಿ ಅಶೋಕನು ಸುವರ್ಣಗಿರಿಯ ಆರ್ಯಪುತ್ರನ ಮೂಲಕ ಸಂದೇಶವನ್ನು ಕಳುಹಿಸಿದನೆಂದು ಬ್ರಹ್ಮಗಿರಿ ಶಾಸನದಿಂದ ತಿಳಿದುಬರುವುದು. ಚಂದ್ರವಳ್ಳಿ, ಬ್ರಹ್ಮಗಿರಿ, ಮಾಸ್ಕಿ, ಕೊಪ್ಪಲ, ಕೊಂಡಾಪುರ, ಪೈಠಾನ, ಕೊಲ್ಹಾಪುರ, ಇವೇ ಮೊದಲಾದ ಸ್ಥಳಗಳಲ್ಲಿ ಮೌರ್ಯರ ಕಾಲದ ಪಟ್ಟಣಗಳು ಭೂಶೋಧನೆಯಿಂದ ಬೆಳಕಿಗೆ ಬಂದಿವೆ. ಅಲ್ಲದೆ ಮೌರ್ಯರ ವಂಶದವರು ಕೊಂಕಣದಲ್ಲಿ ಏಳನೇ ಶತಾಬ್ದದವರೆಗೂ ಆಳುತ್ತಿದ್ದರೆಂದೂ, ಮೌರ್ಯರು ತಿರುಪತಿ ಬೆಟ್ಟಗಳವರೆಗೂ ದಂಡೆತ್ತಿ ಬಂದಿದ್ದರೆಂದೂ ಶಾಸನಗಳಿಂದಲೂ, ತಮಿಳು ಸಾಹಿತ್ಯದಿಂದಲೂ ತಿಳಿದುಬರುತ್ತದೆ.

ಮೌರ್ಯ ಸಾಮ್ರಾಜ್ಯ ಪತನಾನಂತರ ಶಾತವಾಹನರು ವಿಂಧ್ಯ ಪರ್ವತಗಳಿಂದ ಕಾವೇರಿವರೆಗೂ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರ ಮೂಲ ನಿವಾಸ "ಸಾತಾಹ ನಿಹಾರ" (ಧಾರ್ವಾಡ ಮತ್ತು ಬಳ್ಳಾರಿ ಜಿಲ್ಲೆಗಳು) ಆದುದರಿಂದ ಇವರು ಆಂಧ್ರರಲ್ಲ. ಪುರಾಣಗಳಲ್ಲಿ ಇವರನ್ನು ಆಂಧ್ರರೆಂದು ಕರೆದಿದ್ದರೂ, ಕ್ರಿಸ್ತಶಕ ಎರಡನೆ ಶತಾಬ್ದದಲ್ಲಿ ಇವರು ತೆಲುಗು ದೇಶವನ್ನು ಗೆದ್ದು ಆಳುತ್ತಿದ್ದುದರಿಂದ ಈ ಹೆಸರು ಬಂದಿತು. ಇವರಲ್ಲಿ ಪ್ರಸಿದ್ಧನಾದ ಹಾಲನು ಕ್ರಿಸ್ತಶಕ ೭೮ರಲ್ಲಿ ಶಾಲಿವಾಹನ ಶಕೆಯನ್ನು ಸ್ಥಾಪಿಸಿ ಗಾಥಾ ಸಪ್ತಶತಿಯನ್ನು ರಚಿಸಿ ಸಿಂಹಳ ದ್ವೀಪವನ್ನು ಗೆದ್ದಿದ್ದನೆಂದು ತಿಳಿದುಬರುವದು. ಎರಡನೆ ಶತಾಬ್ದದಲ್ಲಿ ಗೌತಮೀಪುತ್ರ ಶಾತಕರ್ಣಿ "ಕ್ಷಹರಾತ"ರೆಂಬವರನ್ನು ನಿರ್ಮೂಲ

ಮಾಡಿ, ಪಂಜಾಬಿನ ದಕ್ಷಿಣಭಾಗದವರೆಗೂ ಸಾಮ್ರಾಜ್ಯವನ್ನು ವಿಸ್ತರಿಸಿದ್ದನು. ಅವನ ಮಗನಾದ ವಾಸಿಷ್ಠೀಪುತ್ರ ಪುಳುಮಾವಿ ಶಕಕ್ಷತ್ರಪ ರಾಜನಾದ ರುದ್ರದಾಮನಿಂದ ಸೋಲಿಸಲ್ಪಟ್ಟು, ಗೋದಾವರಿ ತೀರದಲ್ಲಿರುವ ಪ್ರತಿಷ್ಠಾನ (ಪೈಠಾನ್) ಅಥವಾ "ನವನಗರ" ವನ್ನು ರಾಜಧಾನಿ ಮಾಡಿಕೊಂಡು ಆಂಧ್ರ ದೇಶವನ್ನಾಕ್ರಮಿಸಿದನು. ಶಾತವಾಹನ ವಂಶದಲ್ಲಿ ಕೊನೆಯ ಪ್ರಸಿದ್ಧನಾದ ಯಜ್ಞಶ್ರೀ ಶಾತಕರ್ಣಿ ಕನ್ನಡ-ತೆಲುಗು ದೇಶಗಳನ್ನೆಲ್ಲ ಆಳುತ್ತಿದ್ದನು. ಸುಮಾರು ಕ್ರಿಸ್ತಶಕ ೨೩೦ರಲ್ಲಿ ಶಾತವಾಹನ ಮೂಲವಂಶ ಕೊನೆಗೊಂಡಿತು. ಅವರ ಸಾಮಂತರಾಗಿದ್ದವರು ಸ್ವತಂತ್ರರಾದರು. ಆಂಧ್ರ ದೇಶದಲ್ಲಿ ಆಂಧ್ರ ಭೃತ್ಯರೆನಿಸಿದ ಇಕ್ಷ್ವಾಕು ವಂಶದವರು ನಾಗಾರ್ಜುನಕೊಂಡ, ಅಮರಾವತಿ, ಜಗ್ಗಯ್ಯಪೇಟ, ಗೋಲಿ, ಬೆಜವಾಡ, ಧಾನ್ಯಕಟಕ ಇತ್ಯಾದಿ ಸ್ಥಳಗಳಲ್ಲಿ, ತಾವು ವೈದಿಕ ಮತದವರಾದರೂ ಬೌದ್ಧ ವಿಹಾರಗಳನ್ನು ಸ್ಥಾಪಿಸಿದರು. ಅಂತೆಯೇ ಶಾತವಾಹನರ ಕಾಲದಲ್ಲಿ ಕುಂಡಕುಂದಾಚಾರ್ಯ ಮುಂತಾದ ಜೈನ ಗುರುಗಳು ಜೈನ ಮತ ಪ್ರಚಾರ ಮಾಡಿದರು. (ಕ್ರಿಸ್ತಶಕ ಮೂರನೆಯ ಶತಾಬ್ದದಲ್ಲಿಯೇ ಶೈವ, ವೈಷ್ಣವ, ಬೌದ್ಧ, ಜೈನ ಮತಗಳು ದಕ್ಷಿಣ ಮಧುರೆಯಲ್ಲೂ ಸ್ಥಾಪಿತವಾಗಿದ್ದವೆಂದು ತಮಿಳು ಸಾಹಿತ್ಯದಿಂದ ತಿಳಿದುಬರುವದು.) ಅಜಂತ ಚಿತ್ರಕಲೆ, ಅಮರಾವತಿ ಶಿಲ್ಪ ರೀತಿ ಶಾತವಾಹನರಿಂದಲೇ ಆರಂಭಿಸಲ್ಪಟ್ಟವು.

## ೩. ಕದಂಬರು ಮತ್ತು ಬಾದಾಮಿ ಚಾಳುಕ್ಯರು

ಕನ್ನಡ ನಾಡಿನಲ್ಲಿ ಶಾತವಾಹನರ ಅಧೀನರಾಗಿದ್ದ ಆಭೀರರು, ಚುಟು ವಂಶದವರು, ಪಲ್ಲವರು, ಕದಂಬರು ಸ್ವತಂತ್ರರಾದರು. ಪಲ್ಲವರು ಮೊದಲು "ಸಾತಾಹ ನಿಹಾರ" (ಬಳ್ಳಾರಿ) ಪ್ರಾಂತದಲ್ಲಿದ್ದು ನಾಲ್ಕನೆಯ ಶತಾಬ್ದದಲ್ಲಿ ಪೂರ್ವಕ್ಕೆ ಹೋಗಿ ಕಂಚಿಯುನ್ನು ಆಂಧ್ರ ದೇಶವನ್ನು ಗೆದ್ದರು. ಪಶ್ಚಿಮ ತೀರದವರೆಗೂ ಅವರ ಅಧಿಕಾರವು ವ್ಯಾಪಿಸಿದ್ದಿತು. ಆದರೆ ನಾಲ್ಕನೆಯ ಶತಮಾನದಲ್ಲಿ ಕದಂಬ ವಂಶಸ್ಥಾಪಕನಾದ ಮಯೂರ ಶರ್ಮನು ಪಲ್ಲವರನ್ನು ಸೋಲಿಸಿ ಪಶ್ಚಿಮ ತೀರದಿಂದ ಪ್ರೇಹಾರ (ಕೃಷ್ಣಾನದಿ) ವರೆಗಿನ ದೇಶಕ್ಕೆ ರಾಜನಾದನು. ತ್ರಿಕೂಟ, ಅಭೀರ, ಸೇಂದ್ರಕ, ಸಾತಾಹ ನಿಹಾರ, ಪುನ್ನಾಟ ದೇಶಗಳನ್ನು ಗೆದ್ದು, ಬನವಾಸಿ, ಚಂದ್ರವಳ್ಳಿ, ಉಚ್ಚಂಗಿ ರಾಜಧಾನಿಗಳನ್ನಾಗಿ ಮಾಡಿ, ಗಂಗಾ ಪ್ರಾಂತ್ಯದಿಂದ ವೈದಿಕ ಕುಟುಂಬಗಳನ್ನು ಕರಿಸಿ ನೆಲಸುವಂತೆ ಅನುಕೂಲ ಕಲ್ಪಿಸಿಕೊಟ್ಟನು. ಕದಂಬ ಕಾಕುತ್ಸ್ಥವರ್ಮನು ಐದನೆಯ ಶತಾಬ್ದದ ಮಧ್ಯ ಭಾಗದಲ್ಲಿ ಭರತಖಂಡದಲ್ಲೆಲ್ಲ ಪ್ರಸಿದ್ಧ ವ್ಯಕ್ತಿಯಾಗಿದ್ದನು. ಗುಪ್ತ, ತಳಕಾಡು ಗಂಗ, ಆಳುಪ, ಬಾಣ, ಪಲ್ಲವರೊಡನೆ ಸಂಬಂಧ ಬೆಳಸಿ, ಕುಬ್ಜನೆಂಬ ಸಂಸ್ಕೃತ ಕವಿಯ ಪೋಷಕನಾಗಿದ್ದನೆಂದು ತಾಳಗುಂದ ಶಾಸನ ಹೇಳುವದು. ತಲಕಾಡಿನ ಗಂಗ ವಂಶವು ನಾಲ್ಕನೆಯ ಶತಾಬ್ದದಲ್ಲಿ ಸ್ಥಾಪಿತವಾಗಿ ಕದಂಬರೊಡನೆ ಮೈತ್ರಿ ಬೆಳಸಿತು. ಕಾಕುತ್ಸ್ಥನ ಹಲ್ಮಿಡಿ ಶಾಸನ ಇದುವರೆಗೆ ಸಿಕ್ಕಿರುವ, ಕಾಲ ನಿರ್ಧರಿಸಬಹುದಾದ, ಕನ್ನಡ ಶಾಸನಗಳಲ್ಲಿ ಅತ್ಯಂತ ಪ್ರಾಚೀನವೆಂದು ಹೇಳ

ಬಹುದು. ವೈದಿಕ ಸಂಸ್ಕೃತಿ, ಶೈವ ವೈಷ್ಣವ ಮತಗಳು ಮತ್ತು ಸಂಸ್ಕೃತ ಭಾಷೆ ಕರ್ಣಾಟಕದಲ್ಲಿ ನಾಲ್ಕು, ಐದನೆ ಶತಾಬ್ದಗಳಲ್ಲಿಯೇ ರೂಢಿಗೆ ಬಂದಿದ್ದವು. ದಿಗಂಬರ ಸಂಪ್ರದಾಯದ ಜೈನ ಮತವೂ ಕದಂಬರಿಂದ ಪೋಷಿಸಲ್ಪಟ್ಟಿತು. ಕಾಕುತ್ಸ್ಥನ ಅನಂತರ ಕದಂಬ ರಾಜ್ಯ ಎರಡು ಶಾಖೆಗಳಾಗಿ ಪೂರ್ವ ಶಾಖೆಯ ಕದಂಬರಿಗೆ ಪಲ್ಲವರ ಸಹಾಯವೂ, ಬನವಾಸಿಯ ಕದಂಬರಿಗೆ ತಳಕಾಡು ಗಂಗರ ಸಹಾಯವೂ ಇದ್ದಿತು. ಕೊನೆಗೆ ಕದಂಬರ ವೀರವರ್ಮನು ಪೂರ್ವ ಶಾಖೆಯವರನ್ನು ಗೆದ್ದು ನರ್ಮದಾ ನದಿಯುವರೆಗೂ ಆಳುತ್ತಿದ್ದನು. ಅನಂತರ ಬನವಾಸಿ ಕದಂಬರ ಕಡೆಯ ರಾಜನಾದ ಹರಿವರ್ಮನು ಆಳಿದ ಮೇಲೆ ಬಾದಾಮಿಯ ಚಾಳುಕ್ಯರು ಬನವಾಸಿಯನ್ನು ಗೆದ್ದರು. ತಲಕಾಡು ಗಂಗರಲ್ಲಿ ದುರ್ವಿನೀತನು ಪ್ರಸಿದ್ಧನಾಗಿದ್ದು ಪಲ್ಲವರನ್ನು ಸೋಲಿಸಿ ತನ್ನ ಮಗಳ ಮಗನಾದ ಚಾಳುಕ್ಯ ವಿಷ್ಣುವರ್ಧನನನ್ನು ಸಿಂಹಾಸನಕ್ಕೇರಿಸಿದನು. ದುರ್ವಿನೀತನು ಅನೇಕ ಯಜ್ಞಗಳನ್ನು ಮಾಡಿ ವೈದಿಕ ಮತವನ್ನನುಸರಿಸುತ್ತಿದ್ದರೂ ದೇವನಂದಿ ಪೂಜ್ಯಪಾದನೆಂಬ ಜೈನಾಚಾರ್ಯನ ವ್ಯಾಕರಣಕ್ಕೆ ಶಬ್ದಾವತಾರ ಟೀಕೆಯನ್ನೂ, ಭಾರವಿ ಕವಿಯ ಕಿರಾತಾರ್ಜುನೀಯದ ೧೫ ಸರ್ಗಕ್ಕೆ ವ್ಯಾಖ್ಯಾನವನ್ನೂ, ಪೈಶಾಚಿ ಭಾಷೆಯಲ್ಲಿದ್ದ ಗುಣಾಢ್ಯನ ಬೃಹತ್ಕಥೆಗೆ ಸಂಸ್ಕೃತ ಭಾಷಾಂತರವನ್ನೂ ರಚಿಸಿ, ಕನ್ನಡ ಕವಿಯೂ ಆಗಿದ್ದನು.

ಬಾದಾಮಿಯ ಚಾಲುಕ್ಯರಲ್ಲಿ ಪ್ರಥಮ ಚಾರಿತ್ರಿಕ ವ್ಯಕ್ತಿಯಾದ ಒಂದನೆ ಪುಲಿಕೇಶಿ ಬಾದಾಮಿಯನ್ನು ವಶಮಾಡಿಕೊಂಡು ಕ್ರಿಸ್ತಶಕ ೫೫೪ರಲ್ಲಿ ಬಾದಾಮಿ ಕೋಟೆಯನ್ನು ಕಟ್ಟಿಸಿದನು. ಒಂದನೆ ಕೀರ್ತಿವರ್ಮ, ಅವನ ತಮ್ಮ ಮಂಗಳೀಶರು ದಕ್ಷಿಣದಲ್ಲಿ ಕದಂಬ, ಗಂಗ, ಅಳುಪರನ್ನೂ, ಉತ್ತರದಲ್ಲಿ ಹೈಹಯ, ಕಾಳಚೂರ್ಯರನ್ನೂ ಗೆದ್ದರು. ಭಾರತದ ಚರಿತ್ರೆಯಲ್ಲಿ ಹರ್ಷನಿಗೆ ಸಮನಾದ ಇಮ್ಮಡಿ ಪುಲಿಕೇಶಿ ದಕ್ಷಿಣ ದೇಶವನ್ನೆಲ್ಲ ವಿಂಧ್ಯ, ಗುಜರಾತ, ಕಳಿಂಗದಿಂದ ರಾಮೇಶ್ವರದ ವರೆಗೂ ಗೆದ್ದು, ಉತ್ತರಾಪಥನಾಥನಾದ ಹರ್ಷನನ್ನು ಸೋಲಿಸಿ, ಚಕ್ರವರ್ತಿ ಬಿರುದುಗಳನ್ನು ಧರಿಸಿ, ಮೂರು ಮಹಾರಾಷ್ಟ್ರಗಳಿಗೆ ಅಧಿಪತಿಯಾದನು. ಲಾಟದಲ್ಲಿ (ದಕ್ಷಿಣ ಗುಜರಾತ್) ಒಬ್ಬ ತಮ್ಮನನ್ನೂ, ವೆಂಗಿಯಲ್ಲಿ (ಆಂಧ್ರ) ಮತ್ತೊಬ್ಬ ತಮ್ಮನನ್ನೂ ಸ್ಥಾಪಿಸಿ, ಪರ್ಷಿಯ ದೇಶದೊಡನೆ ಸಂಬಂಧ ಬೆಳಸಿದ್ದನು. ಆ ಕಾಲದಲ್ಲಿ ಪ್ರವಾಸ ಮಾಡಿದ ಚೀಣ ಯಾತ್ರಿಕನಾದ ಯುವಾನ್‌ಚ್ವಾಂಗ್ ಪುಲಿಕೇಶಿ ಮತ್ತು ಕರ್ಣಾಟಕದ ಪ್ರಶಂಸೆ ಮಾಡಿರುವನು.

ಇಮ್ಮಡಿ ಪುಲಕೇಶಿ ಕಂಚಿಯ ಪಲ್ಲವರೊಡನೆ ಯುದ್ಧಮಾಡಿ ವೀರಸ್ವರ್ಗ ಪಡೆದಮೇಲೆ ಬಾದಾಮಿಯನ್ನು ೧೨ ವರ್ಷ ಪಲ್ಲವರು ಆಕ್ರಮಿಸಿಕೊಂಡರು. ವಿಕ್ರಮಾದಿತ್ಯನು ಸ್ವಪ್ರಯತ್ನದಿಂದ ಪಲ್ಲವರನ್ನು ಹಿಮ್ಮೆಟ್ಟಿಸಿ ಪಲ್ಲವ ರಾಜ್ಯವನ್ನು ಆಕ್ರಮಣ ಮಾಡಿದನು. ಅನಂತರ ಒಂದು ಶತಮಾನದವರೆಗೂ ಚಾಲುಕ್ಯ ಪಲ್ಲವ ಯುದ್ಧಗಳು ನಡೆದವು. ವಿನಯಾದಿತ್ಯ, ವಿಜಯಾದಿತ್ಯ, ಎರಡನೆ ವಿಕ್ರಮಾದಿತ್ಯ ಮತ್ತು ಎರಡನೆ ಕೀರ್ತಿವರ್ಮರು ಅನೇಕಸಲ ದಂಡಯಾತ್ರೆಗಳನ್ನು ಮಾಡಿ ಪಲ್ಲವರನ್ನು ಸದೆಬಡಿದರು; ಮತ್ತು ವಿನಯಾದಿತ್ಯನು ಉತ್ತರಾ

ಪಥನಾಥನಾದ ಆದಿತ್ಯಸೇನನನ್ನು ಗೆದ್ದು, ಗಂಗಾ-ಯಮುನಾ ಪ್ರಾಂತ್ಯವನ್ನು ಗೆದ್ದನು. ಚಾಲುಕ್ಯ ಶಿಲ್ಪವು ಕರ್ಣಾಟಕದಲ್ಲಿ ಮೊದಲು ಕಂಡುಬರುತ್ತದೆ. ಇದನ್ನನುಸರಿಸಿ ಪಲ್ಲವ ಶಿಲ್ಪರೀತಿ ಹುಟ್ಟಿತು. ಅಲ್ಲದೆ ಶಾತವಾಹನ ಚಾಳುಕ್ಯ ರಾಜರ ಪೋಷಣೆಯಲ್ಲಿ ಬೆಳೆದ ಅಜಂತ ಚಿತ್ರಕಲೆ ಪಲ್ಲವರಿಂದಲೂ, ಸಿಂಹಳ ರಿಂದಲೂ ಅನುಸರಿಸಲ್ಪಟ್ಟಿತು. ಅಷ್ಟೇ ಅಲ್ಲದೆ ಬೌದ್ಧ ಮತದೊಡನೆ ಏಷ್ಯಾ ಖಂಡದಲ್ಲೇ ವಿಸ್ತರಿಸಿ ಭಾರತೀಯ ಚಿತ್ರಕಲೆಗೆ ಆದರ್ಶವಾಯಿತು. ದಾಕ್ಷಿಣಾತ್ಯ ಸಂಗೀತ ಪದ್ಧತಿಗೆ ಮೂಲಲಕ್ಷಣ ಗ್ರಂಥವಾದ ಮತಂಗನ ಬೃಹದ್ದೇಶಿ ಸುಮಾರು ಎಂಟನೆಯ ಶತಾಬ್ದದಲ್ಲಿ ಹಂಪೆ ಮತಂಗಪರ್ವತದ ಪರಿಸರದಲ್ಲಿ ರಚಿತವಾಯಿತು. ಸಂಸ್ಕೃತ ಕವಿಯಿತ್ರಿಯಾದ ವಿಜ್ಜಿಕಾ ಅಥವಾ ವಿಜಯಾಂಕಾ ಚಾಲುಕ್ಯ ರಾಣಿ ಯಾಗಿದ್ದು, ಕಾಳಿದಾಸ ದಂಡಿಗಳ ನಂತರ ವೈದರ್ಭೀ ಶೈಲಿಗೆ ಆದರ್ಶಳಾಗಿದ್ದಳು. ಶ್ರೀ ಶಂಕರ ಭಗವತ್ಪಾದರು ಸುಮಾರು ಏಳನೆ ಶತಾಬ್ದದಲ್ಲಿ ಚಾಲುಕ್ಯ ಸಾಮಂತ ರಾದ ರಾಜವರ್ಮ, ಬಲವರ್ಮ ಮತ್ತು ಜಯಸಿಂಹರ ಹೆಸರುಗಳನ್ನು ತಮ್ಮ ಭಾಷ್ಯಗಳಲ್ಲಿ ಹೇಳುವದರಿಂದ ಚಾಳುಕ್ಯ ರಾಜ್ಯದಲ್ಲಿ ಅದ್ವೈತಮತ ಪ್ರಚಾರ ಮಾಡಿದರೆಂದು ಊಹಿಸಲಾಗಿದೆ. ಜೈನ, ಬೌದ್ಧ, ಶೈವ, ವೈಷ್ಣವ, ಶಾಕ್ತ ಮತಗಳು ಚಾಳುಕ್ಯ ಸಾಮ್ರಾಜ್ಯದಲ್ಲಿ ರಕ್ಷಿಸಲ್ಪಟ್ಟವು. ಪುಲಕೇಶಿಯ ತಮ್ಮನಾದ ವಿಷ್ಣುವರ್ಧನನು ವೆಂಗಿಯಲ್ಲಿ ಪೂರ್ವ ಚಾಲುಕ್ಯ ವಂಶವನ್ನು ಸ್ಥಾಪಿಸಿದನು. ಈ ಪೂರ್ವ ಚಾಲುಕ್ಯರೇ ಆಂಧ್ರ ಸಾಹಿತ್ಯಕ್ಕೆ ಮೂಲಕಾರಣರೆಂದು ನನ್ನೆಚೋಡನು ಹೇಳುವನು. ಅಂತೆಯೇ ಪುಲಕೇಶಿಯ ಮತ್ತೊಬ್ಬ ತಮ್ಮನಾದ ಜಯಸಿಂಹನು ಲಾಟದಲ್ಲಿ (ದಕ್ಷಿಣ ಗುಜರಾತ್) ವಂಶವನ್ನು ಸ್ಥಾಪಿಸಿ, ಮುಹಮ್ಮದೀಯರ ಧಾಳಿ ಗಳನ್ನು ತಡೆಗಟ್ಟಿದನು. ಚಾಲುಕ್ಯ ಪಲ್ಲವ ಯುದ್ಧಗಳಲ್ಲಿ ಎರಡು ರಾಜ್ಯಗಳೂ ನಷ್ಟಹೊಂದಿ ದುರ್ಬಲವಾದವು. ಕರ್ಣಾಟಕದಲ್ಲಿ ಬಾದಾಮಿ ಚಾಲುಕ್ಯರ ಅಧೀನರಾಗಿದ್ದ ರಾಷ್ಟ್ರಕೂಟರು ಎರಡನೆ ಕೀರ್ತಿವರ್ಮನನ್ನು ಸೋಲಿಸಿ ಸಾಮ್ರಾಜ್ಯವನ್ನು ಸ್ಥಾಪಿಸಿದರು. ತಮಿಳು ದೇಶವಲ್ಲಿ ಚೋಳರು ಪುನಃ ತಲೆಯೆತ್ತಿ ಪಲ್ಲವರಾಜ್ಯವನ್ನಾಕ್ರಮಿಸಿದರು. ರಾಷ್ಟ್ರಕೂಟ ದಂತಿದುರ್ಗನು ಚಾಳುಕ್ಯರ ಸೈನ್ಯವನ್ನು "ಕರ್ಣ್ಣಾಟಕ ಬಲ" ಎಂದು ಹೇಳಿರುವದರಿಂದ ಕರ್ಣಾಟಕ ಎಂಬುದು ಬಾದಾಮಿ ಚಾಳುಕ್ಯರ ಸಾಮ್ರಾಜ್ಯಕ್ಕೆ ಹೆಸರಾಗಿದ್ದಿತು.

## ೪. ಭಾರತದ ಕರ್ಣಾಟಕೀಯತೆ

ರಾಷ್ಟ್ರಕೂಟರು ಎಂಟನೆ ಶತಮಾನದಿಂದ ೧೧ ನೆ ಶತಾಬ್ದದವರೆಗೆ ವಿಶಾಲ ಸಾಮ್ರಾಜ್ಯವನ್ನು ಆಳುತ್ತಿದ್ದು ಭಾರತವನ್ನೆಲ್ಲ ಕರ್ಣಾಟಕ ಮಾಡಿದರು. ಅವರ ಸಮಕಾಲೀನರಾದ ಉತ್ತರ ಭಾರತದ ಪರಮಾರ, ಚೇದಿ, ಪಾಲರಾಜರಾಗಲಿ, ದಕ್ಷಿಣದೇಶದ ಚೇರ, ಚೋಳ, ಪಾಂಡ್ಯರಾಗಲಿ ರಾಷ್ಟ್ರಕೂಟರಷ್ಟು ಪ್ರಬಲರಾಗಿರ ಲಿಲ್ಲವೆಂಬುದು ಸತ್ಯವಾಗಿದೆ. ಭಾರತದ ಚರಿತ್ರೆಯಲ್ಲಿ ಈ ಮೂರು ಶತಾಬ್ದ ಗಳನ್ನು "ರಾಷ್ಟ್ರಕೂಟ ಯುಗ" ವೆಂದು ಕರೆಯುವುದು ಸಮಂಜಸವಾಗಿದೆ. ದಂತಿದುರ್ಗನು ಬಾದಾಮಿ ಚಾಳುಕ್ಯರನ್ನು ಗೆದ್ದ ಮೇಲೆ ಪಲ್ಲವ, ಚೇರ, ಚೋಳ

ಪಾಂಡ್ಯರನ್ನೂ, ಉತ್ತರದಲ್ಲಿ ಮಾಳವ ದೇಶವನ್ನೂ ಗೆದ್ದು ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅನಂತರ ಒಂದನೆ ಕೃಷ್ಣನು ಚಾಳುಕ್ಯರನ್ನು ಪೂರ್ತಿ ಸೋಲಿಸಿ ಪ್ರಪಂಚದಲ್ಲಿ ಅತ್ಯಾಶ್ಚರ್ಯಕರವಾದ ಎಲ್ಲೋರ ಕೈಲಾಸ ದೇವಾಲಯವನ್ನು ನಿರ್ಮಿಸಿದನು. ಧೃವನಿರುಪಮನು ದಕ್ಷಿಣ ಮತ್ತು ಪೂರ್ವ ದೇಶಗಳನ್ನು ಗೆದ್ದು ಉತ್ತರ ಭಾರತದಲ್ಲಿ ದಿಗ್ವಿಜಯ ನಡಿಸಿದನು. ಪುನಃ ಮೂರನೆಯ ಗೋವಿಂದನು ಮಾಳವ, ಗುಜರಾತ್, ಕನ್ಯಾಕುಬ್ಜ, ಗೌಡರಾಜರನ್ನೂ, ಆಂಧ್ರ, ಗಂಗರ ದೇಶಗಳನ್ನೂ ಗೆದ್ದು, ರಾಷ್ಟ್ರಕೂಟ ಪ್ರಶಸ್ತಿಯನ್ನು ಭಾರತದಲ್ಲೆಲ್ಲ ಹರಡಿದನು. ಅವನ ಮಗನಾದ ಅಮೋಘವರ್ಷ ನೃಪತುಂಗನ ಆಳಿಕೆ ಭಾರತದ ಚರಿತ್ರೆಯಲ್ಲಿ ಆದರ್ಶಪ್ರಾಯವಾದುದು. ಬಾಲ್ಯದಲ್ಲಿಯೇ ಪಟ್ಟಕ್ಕೆ ಬಂದರೂ ರಾಜನೀತಿಜ್ಞನೂ, ಧರ್ಮಾತ್ಮನೂ ಆಗಿದ್ದು ಸುಮಾರು ಅರವತ್ತು ವರ್ಷ ಆಳಿದನು. ವೆಂಗಿ ಚಾಳುಕ್ಯ, ಪಲ್ಲವ, ತಲಕಾಡು ಗಂಗರೊಡನೆ ಮೈತ್ರಿ ಬೆಳಸಿ, ಉತ್ತರ ಭಾರತದಲ್ಲೂ ಪ್ರಭಾವಶಾಲಿಯಾಗಿದ್ದನು. ಬಾಲ್ಯದಲ್ಲಿ ಜೈನಗುರುವಾದ ಮಹಾವೀರಾಚಾರ್ಯನ ಶಿಷ್ಯನಾಗಿದ್ದು ಅನಂತರ ಜಿನಸೇನರನ್ನು ಪರಮಗುರುಗಳೆಂದು ಆರಾಧಿಸುತ್ತಿದ್ದನು. ಸ್ವತಃ ಕವಿಯಾಗಿ ಕನ್ನಡದಲ್ಲಿ ಕವಿರಾಜಮಾರ್ಗವನ್ನೂ, ಸಂಸ್ಕೃತದಲ್ಲಿ ಪ್ರಶ್ನೋತ್ತರ ರತ್ನಮಾಲಿಕೆಯನ್ನೂ ರಚಿಸಿದನು. ಇವನ ಆಸ್ಥಾನದಲ್ಲಿ ವೀರಸೇನ, ಜಿನಸೇನ, ಶಾಕಟಾಯನ, ಉಗ್ರಾದಿತ್ಯ ಪಂಡಿತ, ಶ್ರೀವಿಜಯ, ಕುಮುದೇಂದು, ಮಹಾವೀರಾಚಾರ್ಯ ಮುಂತಾದ ಮಹಾಕವಿಗಳಿದ್ದರು. ಕನ್ನಡ ಭಾಷೆಯೇ ಅಲ್ಲದೆ ಅನೇಕ ಭಾಷೆಗಳನ್ನೊಳಗೊಂಡ "ಭೂವಲಯ" ಎಂಬ ಅದ್ಭುತ ಗ್ರಂಥ ಈ ಕಾಲದಲ್ಲಿ ಹುಟ್ಟಿತೆಂದು ಊಹಿಸಲಾಗಿದೆ. ತನ್ನ ದೇಶಕ್ಕೆ ಯಾವುದೋ ಗಂಡಾಂತರ ಒದಗಿದಾಗ ಅದನ್ನು ತಪ್ಪಿಸುವುದಕ್ಕಾಗಿ ನೃಪತುಂಗನು ತನ್ನ ಎಡಗೈ ಬೆರಳನ್ನು ಮಹಾಲಕ್ಷ್ಮಿಗೆ ಬಲಿಯಾಗಿ ಕತ್ತರಿಸಿ ಅರ್ಪಿಸಿದನು. ರಾಜರು ಸಾಮಾನ್ಯವಾಗಿ ಪ್ರಜೆಗಳ ರಕ್ತ ಸುರಿಸುವರು. ನೃಪತುಂಗನಂತೆ ಪ್ರಜಾಹಿತಕ್ಕಾಗಿ ತಮ್ಮ ರಕ್ತ ಸುರಿಸುವ ರಾಜರು ಪ್ರಪಂಚದಲ್ಲಿಯೇ ಇಲ್ಲವೆಂದು ಹೇಳಬಹುದು. ನೃಪತುಂಗನ ಕಾಲದಲ್ಲಿ ಸುಲೇಮಾನ್ ಮುಂತಾದ ಅರಬ್ಬೀ ವರ್ತಕರು ಪ್ರವಾಸಿಗಳು ಬಲ್ಹಾರ (ವಲ್ಲಭ) ರಾಜನಂತಹ ಖ್ಯಾತಿವಂತನಾದ ಚಕ್ರವರ್ತಿ ಚೀಣಾ, ಪರ್ಷಿಯಗಳಲ್ಲೂ ಇಲ್ಲವೆಂದೂ, ಅವನ ರಾಜ್ಯದಲ್ಲಿ ಮುಸ್ಲಿಮರಿಗೂ ಗೌರವ ಸಲ್ಲುತ್ತಿದ್ದಿತೆಂದೂ, ಆ ದೇಶದ ಭಾಷೆ "ಕನರಿ" (ಕನ್ನಡ) ಎಂದೂ ವರ್ಣಿಸಿರುವರು.

ನೃಪತುಂಗನ ಅನಂತರ ಇಮ್ಮಡಿ ಕೃಷ್ಣ ಮತ್ತು ಮುಮ್ಮಡಿ ಇಂದ್ರರು ಕರ್ಣಾಟಕದ ಪ್ರಭಾವವನ್ನು ಎತ್ತಿ ಹಿಡಿದರು. ಗುಣಭದ್ರನು ಉತ್ತರ ಪುರಾಣದಲ್ಲಿ ವರ್ಣಿಸಿದಂತೆ ಕರ್ಣಾಟಕ ಸೈನ್ಯದ ಗಜಗಳು ಗಂಗಾ ನದಿಯಲ್ಲಿ ಮಿಂದು ಮಲಯಾಚಲದಲ್ಲಿ ವಿಶ್ರಾಂತಿ ಪಡೆದವು. ಇಂದ್ರನು ಕನ್ಯಾಕುಬ್ಜದ ಮಹೀಪಾಲನನ್ನು ಸೋಲಿಸಿ ಉತ್ತರಾಪಥವನ್ನು ಗೆದ್ದನೆಂದು ಕ್ಷೇಮೀಶ್ವರನ ಚಣ್ಡಕೌಶಿಕ ನಾಟಕ ಮತ್ತು ಮಧ್ಯಪ್ರದೇಶದಲ್ಲಿರುವ ಜ್ಯೂರ ಪ್ರಶಸ್ತಿಗಳು ತಿಳಿಸುವವು. ಅನಂತರ ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ಭಾರತದ

ಮುಕ್ಕಾಲು ಭಾಗದಲ್ಲಿ ವಿಸ್ತರಣೆ ಹೊಂದಿತು. ಗುಜರಾತು ರಾಷ್ಟ್ರಕೂಟರಿಂದ ಆಳಲ್ಪಡುತ್ತಿದ್ದಿತು. ಮುಮ್ಮಡಿ ಕೃಷ್ಣ ಅಥವಾ ಕನ್ನರನು ಮಧ್ಯಪ್ರದೇಶದ ಕಾಳಚೂರ್ಯ, ಅವಂತಿಯ ಪರಮಾರ, ವೆಂಗಿ ದೇಶದ ಪೂರ್ವ ಚಾಳುಕ್ಯರನ್ನು ಸೋಲಿಸಿದುದೇ ಅಲ್ಲದೆ, ಗಂಗಭೂತುಗನ ಸಹಾಯದಿಂದ ಕನ್ನಡನಾಡಿನ ಮೇಲೆ ದಂಡೆತ್ತಿಬಂದ ಪರಾಂತಕ ಚೋಳನಮೇಲೆ ನಡೆದು, ತಕ್ಕೋಲ ಕಾಳಗದಲ್ಲಿ ಪರಾಂತಕನ ಹಿರಿಮಗನಾದ ರಾಜಾದಿತ್ಯನನ್ನು ಕೊಂದನು. ಅನಂತರ ದಕ್ಷಿಣ ದಿಗ್ವಿಜಯಮಾಡಿ ಚೇರ, ಚೋಳ, ಪಾಂಡ್ಯ, ಸಿಂಹಳ ರಾಜರನ್ನು ಸೋಲಿಸಿ, ಕರ್ಣಾಟಕ ರಾಜ್ಯವನ್ನು ದಕ್ಷಿಣ ಸಮುದ್ರದವರೆಗೂ ವಿಸ್ತರಿಸಿದನು. ಕೃಷ್ಣನು ಆಳುತ್ತಿದ್ದವರೆಗೂ ತಮಿಳರು ಕನ್ನಡಿಗರ ಅಧೀನರಾಗಿದ್ದರು. ಕೃಷ್ಣನ ಸಾಮಂತನಾದ ಅರಿಕೇಸರಿ ಪಂಪನ ಪೋಷಕನು. ಕೃಷ್ಣನೇ ಪೊನ್ನನಿಗೆ ಕವಿಚಕ್ರವರ್ತಿ ಬಿರುದನ್ನು ಕೊಟ್ಟನು. ಕೃಷ್ಣನ ಸಾಮಂತರಾಗಿದ್ದ ಗಂಗರ ದಂಡನಾಯಕನಾದ ಚಾಮುಂಡರಾಯನು ಆದಿಪುರಾಣ, ವೀರಮಾರ್ತಂಡೀ ಗ್ರಂಥಗಳನ್ನು ರಚಿಸಿ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರ ವಿಗ್ರಹದ ಜೀರ್ಣೋದ್ಧಾರ ಮಾಡಿದನು. ಇವನ ಗುರುಗಳಾದ ನಯಸೇನ, ಅಜಿತಸೇನ, ಆರ್ಯಸೇನ ಮುಂತಾದವರು ಗೊಮ್ಮಟಸಾರ ಇತ್ಯಾದಿ ಗ್ರಂಥಗಳನ್ನು ರಚಿಸಿದರು. ರನ್ನನಿಗೂ ಚಾಮುಂಡರಾಯನು ಪ್ರೋತ್ಸಾಹ ಕೊಟ್ಟನು. ಇಂದ್ರನಂದಿ, ಮಂಜುಳಾರ್ಯ, ಹಲಾಯುಧ, ಸೋಮದೇವ, ಸೂರಿ ಮುಂತಾದ ಪ್ರಸಿದ್ಧ ವಿದ್ವಾಂಸರು ಮುಮ್ಮಡಿ ಕೃಷ್ಣನ ಆಶ್ರಯದಲ್ಲಿದ್ದರು.

ಮೂರನೆಯ ಕೃಷ್ಣನ ನಂತರ ರಾಷ್ಟ್ರಕೂಟ ಸಾಮ್ರಾಜ್ಯವು ಕ್ಷೀಣಿಸಿತು. ರಾಷ್ಟ್ರಕೂಟರ ಸಾಮಂತರಾಗಿದ್ದ ಮಾಳವ ದೇಶದ ಪರಮಾರ ವಂಶದವರು ಖೊಟ್ಟಿಗ ಮತ್ತು ಕಕ್ಕಲರ ಕಾಲದಲ್ಲಿ ಮಾನ್ಯಖೇಟ ರಾಜಧಾನಿಯನ್ನು ನಾಶ ಮಾಡಿದರು. ಅಲ್ಲದೆ ಬಾದಾಮಿ ಚಾಳುಕ್ಯ ವಂಶದವನಾದ ಇಮ್ಮಡಿ ತೈಲಪನು ರಾಷ್ಟ್ರಕೂಟರನ್ನು ಗೆದ್ದು, ಕಲ್ಯಾಣಿ ಚಾಳುಕ್ಯ ಸಾಮ್ರಾಜ್ಯವನ್ನು ಕ್ರಿ.ಶ. ೯೭೩ ರಲ್ಲಿ ಸ್ಥಾಪಿಸಿದನು. ರಾಜಪುತ್ರ ವಂಶಸ್ಥರಾದ ಚೌಳುಕ್ಯ (ಸೋಳಂಕಿ), ರಾಠೋರ್, ಪರಮಾರರು ಕರ್ಣಾಟಕದ ಚಾಳುಕ್ಯ ರಾಷ್ಟ್ರಕೂಟ ವಂಶದವರು. ಕರ್ಣಾಟಕ ಕ್ಷತ್ರಿಯರಾದ ನಾನ್ಯದೇವ ಮತ್ತು ಸೇನರು ಕನ್ನಡಿಗರ ರಾಜ್ಯಗಳನ್ನು ನೇಪಾಳ ಬಂಗಾಳದಲ್ಲೂ ಸ್ಥಾಪಿಸಿದರು.

## ೫. ಕಲ್ಯಾಣಿ ಚಾಳುಕ್ಯರು, ಕಾಲಚೂರ್ಯರು, ಹೊಯ್ಸಳರು

ಕ್ರಿ.ಶ. ಹನ್ನೊಂದನೆಯ ಶತಾಬ್ದದಿಂದ ಹದಿನಾಲ್ಕನೆಯ ಶತಾಬ್ದದವರೆಗೆ ದಕ್ಷಿಣಭಾರತ ಕನ್ನಡಿಗರಿಂದಲೂ ತಮಿಳರಿಂದಲೂ ವಿಭಜಿಸಲ್ಪಟ್ಟಿತು. ಪಶ್ಚಿಮ ಭಾಗದಲ್ಲಿ ವಿಂಧ್ಯ ಪರ್ವತಗಳಿಂದ ನೀಲಗಿರಿ ಪರ್ವತದವರೆಗೂ ಕಲ್ಯಾಣಿ ಚಾಳುಕ್ಯ-ಹೊಯ್ಸಳರು, ಪೂರ್ವಭಾಗದಲ್ಲಿ ಚೋಳರು ಸಮಕಾಲೀನರಾಗಿದ್ದರು. ಇಮ್ಮಡಿ ತೈಲಪನು ರಾಷ್ಟ್ರಕೂಟ, ಕೊಂಕಣ, ಗಂಗ, ವೆಂಗಿ ಮುಂತಾದ ದಕ್ಷಿಣಾಪಥ ರಾಜರನ್ನು ಗೆದ್ದುದಲ್ಲದೆ ಪರಮಾರ ಮುಂಜನನ್ನು ಸೋಲಿಸಿ ಕೊಂದು,

ಗೂರ್ಜರರನ್ನು ಗೆದ್ದನು. ರನ್ನನಿಗೆ ಕವಿಚಕ್ರವರ್ತಿ ಬಿರುದನ್ನು ಕೊಟ್ಟನು. ಇವನ ದಿಗ್ವಿಜಯಗಳಲ್ಲಿ ಮಗನಾದ ಸತ್ಯಾಶ್ರಯ ಇರಿವಬೆಡಂಗನು ಭಾಗ ವಹಿಸಿದ್ದು ಸಾಹಸಭೀಮನೆಂದು ರನ್ನನಿಂದ ಸ್ತುತ್ಯನಾಗಿರುವನು. ಸತ್ಯಾಶ್ರಯನ ತೆಲುಗು ಶಾಸನಗಳು ಚೇಬ್ರೋಲಿನಲ್ಲಿ ಸಿಕ್ಕಿರುವುದರಿಂದ ಪಶ್ಚಿಮ ಚಾಳುಕ್ಯರು ಪೂರ್ವ ಚಾಳುಕ್ಯರ ಆಂಧ್ರ ದೇಶವನ್ನು ತಮ್ಮ ಅಧೀನ ಮಾಡಿಕೊಳ್ಳಲು ಆರಂಭಿಸಿದಂತೆ ಕಂಡುಬರುವದು. ಆದರೆ ರಾಜರಾಜ ಚೋಳನು ಪೂರ್ವ ಚಾಳುಕ್ಯರೊಡನೆ ವಿವಾಹ ಸಂಬಂಧ ಬೆಳಸಿ ಪಶ್ಚಿಮ ಚಾಳುಕ್ಯರ ಮೇಲೆ ಧಾಳಿಗಳನ್ನಾರಂಭಿಸಿದನು. ಚಾಳುಕ್ಯ ಸಾಮ್ರಾಜ್ಯಕ್ಕೆ ಸೇರಿದ್ದ ಗಂಗವಾಡಿ, ನೊಳಂಬವಾಡಿ, ಎಡತೊರೆನಾಡು ಮುಂತಾದ ಭಾಗಗಳನ್ನು ಚೋಳರು ಆಕ್ರಮಿಸಿದರು. ಆದರೆ, ಚಾಳುಕ್ಯ ಇಮ್ಮಡಿ ಜಯಸಿಂಹ ಜಗದೇಕಮಲ್ಲನು ಚೋಳರನ್ನು ಹಿಂದಕ್ಕೆ ಅಟ್ಟಿದನು. ಉತ್ತರದಲ್ಲಿ ಭೋಜನನ್ನು ಸೋಲಿಸಿ ಧಾರಾನಗರವನ್ನು ಸುಟ್ಟನು. ಇಮ್ಮಡಿ ಜಯಸಿಂಹನ ಆಸ್ಥಾನವು ಸರಸ್ವತಿಯ ಜನ್ಮಭೂಮಿಯೆಂದು, ವಾದಿರಾಜ, ವಾದೀಭಸಿಂಹ, ಅನಂತವೀರ್ಯ ಮುಂತಾದ ಜೈನಗುರುಗಳೂ, ಲಕುಳೀಶ್ವರ ಪಂಡಿತ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ ಇತ್ಯಾದಿ ಶೈವರೂ, ಗುಣಗಳ್ಳ, ನಾಗವರ್ಮ ಮುಂತಾದ ವೇದಾನ್ತಿಗಳೂ, ಬೌದ್ಧರೂ, ಚಂದ್ರರಾಜ, ದುರ್ಗಸಿಂಹ ಇತ್ಯಾದಿ ಕನ್ನಡ ಕವಿಗಳೂ ಜಯಸಿಂಹನ ಆಶ್ರಯದಲ್ಲಿದ್ದರೆಂದು ತಿಳಿದುಬರುತ್ತದೆ. ಅನಂತರ ಸುಮಾರು ಇನ್ನೂರು ವರ್ಷಗಳವರೆಗೂ ಚಾಳುಕ್ಯ-ಚೋಳ ಯುದ್ಧಗಳು ನಡೆಯುತ್ತಿದ್ದವು. ಕಲ್ಯಾಣಿ ಚಾಳುಕ್ಯ ಸೋಮೇಶ್ವರನು ರಾಜೇಂದ್ರ, ವೀರರಾಜೇಂದ್ರ, ಅಧಿರಾಜೇಂದ್ರರೊಡನೆ ಹೋರಾಡಿದನು. ಇವನ ಮಗನಾದ ಆರನೆ ವಿಕ್ರಮಾದಿತ್ಯನು ತನ್ನ ಅರ್ಧ ಶತಮಾನದ ಆಳಿಕೆಯಲ್ಲಿ ಕರ್ಣಾಟಕದ ಪ್ರಭಾವವನ್ನು ಕಾಶ್ಮೀರದವರೆಗೂ ಹರಡಿದನು. ಶಾಲಿವಾಹನ ಶಕೆಗೆ ಬದಲಾಗಿ ತನ್ನ ಚಾಳುಕ್ಯ ವಿಕ್ರಮಶಕೆಯನ್ನು ಸ್ಥಾಪಿಸಿದನು. ಬಿಲ್ಹಣನು ವಿದ್ಯಾಧಿಕಾರಿಯಾಗಿದ್ದು ಸಂಸ್ಕೃತದಲ್ಲಿ ವಿಕ್ರಮಾಂಕ ಚರಿತೆಯನ್ನು ರಚಿಸಿದನು. ಭಾರತೀಯರಿಗೆ ಮುಖ್ಯ ನ್ಯಾಯನಿಬಂಧನೆಯಾದ "ಮಿತಾಕ್ಷರ" ವನ್ನು ವಿಕ್ರಮಾದಿತ್ಯನ ಆಸ್ಥಾನ ವಿದ್ವಾಂಸನಾದ ವಿಜ್ಞಾನೇಶ್ವರ ಪಂಡಿತನು ರಚಿಸಿದನು. ಕರ್ಣಾಟಕದವರಾದ ಅಪರಾರ್ಕ, ವಿಜ್ಞಾನೇಶ್ವರ, ಹೇಮಾದ್ರಿ, ವಿದ್ಯಾರಣ್ಯರ ನ್ಯಾಯನಿಬಂಧನೆಗಳೇ ಭಾರತದಲ್ಲೆಲ್ಲ (ಬಂಗಾಳ ವಿನಾ) ಪ್ರಚಾರಕ್ಕೆ ಬಂದು, ಹಿಂದುಗಳ ನ್ಯಾಯ ಕೋಷ್ಟಕವಾಯಿತು. ವಿಕ್ರಮಾದಿತ್ಯನ ಆಳಿಕೆಯಲ್ಲಿ ಅಭಿನವ ಪಂಪ ಮುಂತಾದ ಕನ್ನಡ ಕವಿಗಳೂ ಇದ್ದು ರಾಜಧಾನಿಯಾದ ಕಲ್ಯಾಣಿ ಭಾರತದಲ್ಲೆಲ್ಲ ಪ್ರಸಿದ್ಧವಾಯಿತು.

ಆರನೆಯ ವಿಕ್ರಮನ ನಂತರ ಮೂರನೆಯ ಸೋಮೇಶ್ವರನು "ಅಭಿಲಕ್ಷಿತಾರ್ಥ ಚಿಂತಾಮಣಿ" ಅಥವಾ "ರಾಜಮಾನಸೋಲ್ಲಾಸ" ವೆಂಬ ವಿಶ್ವಕೋಶವನ್ನು ರಚಿಸಿ "ಸರ್ವಜ್ಞ ಸೋಮೇಶ್ವರ" ನೆಂದು ಪ್ರಸಿದ್ಧಿ ಪಡೆದನು. ಕರ್ಣಾಟಕ ಸಂಗೀತದಲ್ಲೂ ಆಚಾರ್ಯಪುರುಷನಾಗಿದ್ದನು. ಈ ಕಾಲದಲ್ಲಿ ಚಾಳುಕ್ಯರ ಸಾಮಂತರು ಪ್ರಬಲರಾದರು. ಕರ್ಣಾಟಕದ ಉತ್ತರ ಭಾಗದಲ್ಲಿ

ದೇವಗಿರಿಯ ಯಾದವರು, ಮಧ್ಯದಲ್ಲಿ ಕಾಲಚೂರ್ಯರು, ದಕ್ಷಿಣದಲ್ಲಿ ಹೊಯ್ಸಳರು, ಪೂರ್ವದಲ್ಲಿ ಓರುಗಲ್ಲಿನ ಕಾಕತೀಯರು ಚಾಳುಕ್ಯ ಸಾಮ್ರಾಜ್ಯ ವಿಭಜನೆಗೆ ಸಿದ್ಧರಾದರು.

ಚಾಳುಕ್ಯರ ಸಾಮಂತರಾಗಿ ತರ್ದವಾಡಿಯನ್ನು ಆಳುತ್ತಿದ್ದ ಕಾಲಚೂರ್ಯರು ವಿಕ್ರಮಾದಿತ್ಯನ ಕಾಲದಿಂದ ಪ್ರಬಲರಾಗುತ್ತಿದ್ದರು. ಮೂರನೆ ತೈಲಪನ ಕಾಲದಲ್ಲಿ ಬಿಜ್ಜಳನು ಸ್ವತಂತ್ರನಾಗಿ ಮಂಗಳವಾಡದಿಂದ ಬಂದು ಕಲ್ಯಾಣವನ್ನು ವಶಮಾಡಿಕೊಂಡು ಚಾಳುಕ್ಯರನ್ನು ಬನವಾಸಿ ಪ್ರಾಂತ್ಯಕ್ಕೆ ಅಟ್ಟಿದನು. ಬಿಜ್ಜಳನು ಮಾಳವ, ಚೋಳ, ಆಂಧ್ರ, ಹೊಯ್ಸಳ ರಾಜರನ್ನು ಗೆದ್ದು ಚಕ್ರವರ್ತಿಯಾಗಿ ಏಳು ವರ್ಷ ಮಾತ್ರ ಆಳಿದನು. ಕಾಲಚೂರ್ಯರು ಶಿವಾಂಶದಿಂದ ಹುಟ್ಟಿದವರೆಂದು ಹೇಳಿಕೊಳ್ಳುತ್ತಿದ್ದರು. ಬಿಜ್ಜಳನು ಕಾಳಾಮುಖ ಪಾಶುಪತ ಶೈವರಿಗೆ ಮತ್ತು ಏಕಾಂತದ ರಾಮಯ್ಯನಿಗೆ ಹೆಚ್ಚು ದಾನಗಳನ್ನು ಕೊಟ್ಟಿರುವುದರಿಂದ ಅವನು ಜೈನನಾಗಲಿ, ವೈಷ್ಣವನಾಗಲಿ ಆಗಿರಲಿಲ್ಲ. ಪಾಶುಪತ ಶೈವವನ್ನು ಅನುಸರಿಸುತ್ತಿದ್ದರೂ ಸರ್ವಮತಗಳನ್ನೂ ಪೋಷಿಸುತ್ತಿದ್ದನು. ಶೈವ ದ್ರೋಹ ಮಾಡಿದುದರಿಂದ ಅವನ ಕೊಲೆಯಾಯಿತೆಂದು ಕೆಲವು ಕಥೆಗಳಿದ್ದರೂ, ಅವನು ಹಿಂದಿನ ರಾಜರ್ಷಿಗಳಂತೆ ವೃದ್ಧಾಪ್ಯದಲ್ಲಿ ರಾಜ್ಯತ್ಯಾಗಮಾಡಿ ಮಗನಾದ ರಾಯಮುರಾರಿ ಸೋಮೇಶ್ವರನಿಗೆ ರಾಜ್ಯಭಾರವನ್ನು ಕೊಟ್ಟು ನಿವೃತ್ತನಾದನೆಂದು ಶಾಸನಗಳಿಂದ ತಿಳಿದುಬರುವದು. ಅನಂತರ ಸುಮಾರು ಇಪ್ಪತ್ತೈದು ವರ್ಷಗಳವರೆಗೂ ಕಾಲಚೂರ್ಯರ ಅಧಿಕಾರ ನಡೆದು ಕಲ್ಯಾಣಿಯೇ ರಾಜಧಾನಿಯಾಗಿದ್ದಿತು. ಪುನಃ ಕಲ್ಯಾಣಿ ಚಾಳುಕ್ಯ ವಂಶದ ನಾಲ್ಕನೆಯ ಸೋಮೇಶ್ವರನು ಕಾಲಚೂರ್ಯರನ್ನು ಗೆದ್ದು ಸು. ೧೨೦೦ ರ ವರೆಗೂ ಕಲ್ಯಾಣಿಯಲ್ಲಿ ಆಳುತ್ತಿದ್ದನು.

ಕರ್ಣಾಟಕದ ಉತ್ತರ ದಕ್ಷಿಣ ಭಾಗಗಳಲ್ಲಿ ಪ್ರಬಲರಾಗುತ್ತಿದ್ದ ದೇವಗಿರಿಯಾದವರು ಮತ್ತು ಹೊಯ್ಸಳರು ಚಾಳುಕ್ಯ ಕಾಲಚೂರ್ಯರನ್ನು ಅಡಗಿಸಿ ಕರ್ಣಾಟಕವನ್ನು ಹಂಚಿಕೊಂಡರು. ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿಯೇ ಹೊಯ್ಸಳ ವಿಷ್ಣುವರ್ಧನನು ಚೋಳರನ್ನು ಮೈಸೂರಿನಿಂದ ಅಟ್ಟಿ ತಲಕಾಡನ್ನು ತೆಗೆದುಕೊಂಡು, “ತಲಕಾಡುಗೊಂಡ”, “ನೊಳಂಬವಾಡಿಗೊಂಡ” ಎಂಬ ಬಿರುದುಗಳನ್ನು ಧರಿಸಿ, ವಿಜಯಸೂಚಕವಾಗಿ ಬೇಲೂರಿನಲ್ಲಿ ವಿಜಯನಾರಾಯಣ ದೇವಾಲಯವನ್ನೂ, ಅನೇಕ ಶೈವ ದೇವಾಲಯಗಳನ್ನೂ ನಿರ್ಮಿಸಿದನು. ಚಾಳುಕ್ಯರ ಸೈನ್ಯವನ್ನು ಸೋಲಿಸಿ ತುಂಗಭದ್ರೆವರೆಗೂ ಹೊಯ್ಸಳ ರಾಜ್ಯವನ್ನು ವಿಸ್ತರಿಸಿದನು.

ಇಮ್ಮಡಿ ವೀರಬಲ್ಲಾಳನು ಸೊರಟೂರು ಯುದ್ಧದಲ್ಲಿ ದೇವಗಿರಿಯ ಭಿಲ್ಲಮನನ್ನು ಸೋಲಿಸಿ, ಚಕ್ರವರ್ತಿ ಬಿರುದುಗಳನ್ನು ಧರಿಸಿ, ಹೊಯ್ಸಳರಲ್ಲಿ ಪ್ರಥಮ ಸ್ವತಂತ್ರ ಚಕ್ರವರ್ತಿಯಾದನು. ಹೊಯ್ಸಳ ವಾಸ್ತುಶಿಲ್ಪ, ಸಂಗೀತ, ಕನ್ನಡ ಸಾಹಿತ್ಯ ಇವನ ಕಾಲದಲ್ಲಿ ಉಚ್ಛ್ರಾಯ ಸ್ಥಿತಿ ಪಡೆದವು. ಜನ್ನ, ಹರಿಹರ, ರಾಘವಾಂಕ, ಪದ್ಮರಸ, ರಾಜಾದಿತ್ಯ ಇತ್ಯಾದಿ ಕನ್ನಡ ಕವಿಗಳು ಗ್ರಂಥರಚನೆ ಮಾಡಿದರು. ವೀರ ಬಲ್ಲಾಳನ ಕಾಲದಿಂದ ಹೊಯ್ಸಳ ಪ್ರಭಾವವು ತಮಿಳು ದೇಶದಲ್ಲಿ ವಿಸ್ತರಿಸಿತು. ವೀರಬಲ್ಲಾಳ, ನರಸಿಂಹ, ಸೋಮೇಶ್ವರರು ಎರಡನೆ

ಮತ್ತು ಮೂರನೆ ರಾಜರಾಜ, ರಾಜೇಂದ್ರರ ರಕ್ಷಕರಾಗಿದ್ದು, ಪೆರುಂಜಿಂಗ ಕಾಡವರಾಯ ಮತ್ತು ಪಾಂಡ್ಯರನ್ನು ಅಡಗಿಸಿ, ಶ್ರೀರಂಗದ ಹತ್ತಿರವೇ ಕಣ್ಣಾನೂರಿನಲ್ಲಿ ಹೊಯ್ಸಳ ರಾಜಧಾನಿಯನ್ನು ಸ್ಥಾಪಿಸಿ ಆಳುತ್ತಿದ್ದರು. ಸೋಮೇಶ್ವರನು ಪಾಂಡ್ಯ ತೆಲುಗು ಚೋಡರಿಂದ ಹತನಾದಮೇಲೆ ಸೋಮೇಶ್ವರನ ಹಿರಿಯಮಗ ನರಸಿಂಹನು ಕನ್ನಡ ದೇಶದಲ್ಲಿ, ಕಿರಿಯಮಗ ರಾಮನಾಥನು ತಮಿಳು ನಾಡಿನಲ್ಲಿ ಇದ್ದು ಹೊಯ್ಸಳ ಸಾಮ್ರಾಜ್ಯವನ್ನು ವಿಭಾಗಿಸಿಕೊಂಡರು. ಹೊಯ್ಸಳರಲ್ಲಿ ಕೊನೆ ಪ್ರಸಿದ್ಧ ರಾಜನಾದ ಮೂರನೆ ವೀರಬಲ್ಲಾಳನು ಪುನಃ ಕನ್ನಡ ತಮಿಳುನಾಡುಗಳನ್ನು ಒಟ್ಟುಗೂಡಿಸಿ ತಿರುವಣ್ಣಾಮಲೆಯಲ್ಲಿ ಒಂದು ರಾಜಧಾನಿಯನ್ನು ಸ್ಥಾಪಿಸಿದ್ದನು. ಕ್ರಿ. ಶ. ೧೩೧೦ರಲ್ಲಿ ಅಲ್ಲಾಉದೀನ್ ಖಿಲ್ಜಿ ಮಲ್ಲಿಕಾಪೂರನನ್ನು ಕಳುಹಿಸಿ ದೇವಗಿರಿ, ಓರುಗಲ್, ದ್ವಾರಸಮುದ್ರಗಳನ್ನು ಕೊಳ್ಳೆ ಮಾಡಿಸಿದನು. ವೀರಬಲ್ಲಾಳನು ದ್ವಾರಸಮುದ್ರವನ್ನು ಜೀರ್ಣೋದ್ಧಾರ ಮಾಡಿ ತುಂಗಭದ್ರೆವರೆಗೂ ಹೊಯ್ಸಳ ರಾಜ್ಯವನ್ನು ಭದ್ರಪಡಿಸಿದ್ದನು.

ಉತ್ತರ ಕರ್ಣಾಟಕದಲ್ಲಿ ದೇವಗಿರಿ ಯಾದವರು ಕನ್ನಡಿಗರೇ ಆಗಿದ್ದರು. ಭಿಲ್ಲಮನ ಅನಂತರ ಸಿಂಹಣನು ತುಂಗಭದ್ರೆವರೆಗೂ ಯಾದವ ರಾಜ್ಯವನ್ನು ವಿಸ್ತರಿಸಿ ಸಂಗೀತ ರತ್ನಾಕರವನ್ನು ರಚಿಸಿದ ಶಾರ್ಙ್ಗದೇವನ ಪೋಷಕನಾಗಿದ್ದನು. ಮರಾಠಿ ಸಾಹಿತ್ಯ ಕನ್ನಡ ರಾಜರ ಆಶ್ರಯದಲ್ಲೆ ಬೆಳೆಯಿತು. ತೆಲಗು ಸಾಹಿತ್ಯವು ಚಾಳುಕ್ಯರ ಸಾಮಂತರಾಗಿದ್ದ ಕಾಕತೀಯರಿಂದ ಪೋಷಿಸಲ್ಪಟ್ಟಿತು. ಯಾದವ ಸಿಂಹಣನ ಅನಂತರ ಕೃಷ್ಣನು ಬಸವೇಶ್ವರನ ವಂಶದವನಾದ ಹಾಲ ಬಸವಿ ದೇವನಿಗೆ ದಾನ ಕೊಟ್ಟಿರುವನು. ಕೃಷ್ಣನ ಮಗನನ್ನು ಮಹಾದೇವನು ಮೂಲೆಗೆ ಹಾಕಿ ಆಳಿದಮೇಲೆ ಕೃಷ್ಣನ ಮಗನಾದ ರಾಮಚಂದ್ರನು ಚಕ್ರವರ್ತಿಯಾದನು. ಇವನ ಆಳಿಕೆಯಲ್ಲಿ ಅಲ್ಲಾಉದ್ದೀನ್ ಖಿಲ್ಜಿ ಧಾಳಿಮಾಡಿ ರಾಮಚಂದ್ರನಿಂದ ಕಪ್ಪವನ್ನು ತೆಗೆದುಕೊಂಡನು. ರಾಮಚಂದ್ರನ ಮಗ ಶಂಕರನು, ಅಳಿಯ ಹರಪಾಲನು ಡಿಲ್ಲಿಸುಲ್ತಾನರಿಂದ ಕೊಲ್ಲಲ್ಪಟ್ಟರು. ಮಹಮದ್ ಬಿನ್ ತೊಗ್ಲಖನು ದೇವಗಿರಿಗೆ ದೌಲತಾಬಾದ್ ಎಂದು ಹೆಸರಿಟ್ಟು ಡಿಲ್ಲಿಯಿಂದ ರಾಜಧಾನಿಯನ್ನು ವರ್ಗಾಯಿಸಲು ಪ್ರಯತ್ನಪಟ್ಟನು.

## ೬. ವಿಜಯನಗರ

ಮಹಮದ್ ಬಿನ್ ತೊಗ್ಲಖನು ಬಹಾಉದ್ದೀನ್ ಗೂರ್ಶಾಸ್ಪ್ ಎಂಬವನ ದಂಗೆಯನ್ನಡಗಿಸಲು ದಕ್ಷಿಣಕ್ಕೆ ಬಂದು ದೇವಗಿರಿ ಮತ್ತು ಓರುಗಲ್ ರಾಜ್ಯಗಳನ್ನು ನಾಶಮಾಡಿ, ಬಹಾಉದ್ದೀನನಿಗೆ ಆಶ್ರಯ ಕೊಟ್ಟಿದ್ದ ಕಂಪಿಲಿ ರಾಜ್ಯಕ್ಕೆ ಮುತ್ತಿಗೆ ಹಾಕಿದನು. ಹಂಪಿಯ ಹತ್ತಿರ ಇರುವ ಕಂಪಿಲಿಗೆ ಆರು ತಿಂಗಳು ಮುತ್ತಿಗೆ ಹಾಕಿದಮೇಲೆ ಕಂಪಿಲಿ ರಾಮನಾಥ ಮತ್ತು ಕುಮಾರರಾಮರು ಬಹಾಉದ್ದೀನನ್ನು ಬಲ್ಲಾಳನ ಬಳಿಗೆ ಕಳುಹಿಸಿ, ಕೋಟೆಯಲ್ಲಿದ್ದ ಅಪಾರ ದ್ರವ್ಯವನ್ನು ಶೃಂಗೇರಿಗೆ ಸಾಗಿಸಿ, ವೀರಸ್ವರ್ಗವನ್ನು ಪಡೆದರು. ಬಲ್ಲಾಳನು ಬಹಾಉದ್ದೀನನ್ನು ತೊಗ್ಲಖನಿಗೆ ಬಿಟ್ಟುಕೊಟ್ಟು ತನ್ನ ದೇಶವನ್ನುಳಿಸಿಕೊಂಡನು. ಕಂಪಿಲಿಯಲ್ಲಿ

ಸೆರೆಸಿಕ್ಕಿದ ಕಂಪಿಲಿರಾಯನ ಬಂಧುಗಳನ್ನು ತೊಗ್ಲಖನು ಡಿಲ್ಲಿಗೆ ತೆಗೆದುಕೊಂಡು ಹೋಗಿ ಆಪ್ತರಕ್ಷಕರನ್ನಾಗಿ ನೇಮಿಸಿಕೊಂಡಿದ್ದನು. ಇವರಲ್ಲಿ ಇಬ್ಬರಾದ ಹರಿಹರ ಬುಕ್ಕರು ಕಂಪಿಲಿಯಲ್ಲಿ ನಡೆದ ದಂಗೆಯನ್ನಡಗಿಸಲು ದಕ್ಷಿಣಕ್ಕೆ ಕಳುಹಿಸಲ್ಪಟ್ಟರು. ಆದರೆ ಇವರು ವಿದ್ಯಾಶಂಕರ, ವಿದ್ಯಾರಣ್ಯರ ಪ್ರೋತ್ಸಾಹದಿಂದ ಸ್ವತಂತ್ರರಾಗಿ ೧೩೩೬ರಲ್ಲಿ ವಿಜಯನಗರವನ್ನು ಸ್ಥಾಪಿಸಿದರು. ಹೀಗೆ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ಕಾಕತೀಯರಾಗಲಿ, ಹೊಯ್ಸಳರಾಗಲಿ ಕಾರಣರಲ್ಲ. ಕಂಪಿಲಿ ರಾಮನಾಥನ ಬಲಿದಾನದಿಂದಲೂ, ವಿದ್ಯಾರಣ್ಯರ ಅನುಗ್ರಹದಿಂದಲೂ, ವೈದಿಕ ಧರ್ಮರಕ್ಷಣೆಗಾಗಿ ವಿಜಯನಗರ ಸ್ಥಾಪನೆಯಾಯಿತು. ಕರ್ಣಾಟಕ ಸಾಮ್ರಾಜ್ಯವೆಂದು ಸ್ಪಷ್ಟವಾಗಿ ಅದಕ್ಕೆ ಹೆಸರು ಬಂದಿತು. ಆದರೆ ತುಂಗಭದ್ರೆಗೆ ಉತ್ತರದಲ್ಲಿದ್ದ ಕನ್ನಡ ಭಾಗಗಳಾದ ಬಿಜಾಪುರ, ಬೀದರ್ ಬಹಮನಿಯವರ ಆಳಿಕೆಗೆ ಸೇರಿತು. ವಿಜಯನಗರದ ಚಕ್ರವರ್ತಿಗಳಿಗೂ ಬಹಮನಿ ರಾಜರಿಗೂ ಸುಮಾರು ಮುನ್ನೂರು ವರ್ಷ ಯುದ್ಧಗಳು ನಡೆಯುತ್ತಲೇ ಇದ್ದವು.

ವಿಜಯನಗರದ ಮೊದಲನೆ ಸಂಗಮ ವಂಶದ ರಾಜರಲ್ಲಿ ಪ್ರಸಿದ್ಧರಾದ ಹರಿಹರ ಬುಕ್ಕ, ಇಮ್ಮಡಿ ಹರಿಹರರು ಶ್ರೀ ವಿದ್ಯಾಶಂಕರ, ವಿದ್ಯಾರಣ್ಯ, ಸಾಯಣಾಚಾರ್ಯ, ಭಾರತೀತೀರ್ಥರ ಕ್ರಿಯಾಶಕ್ತಿಗಳಿಂದ ಪ್ರೇರಿತರಾಗಿ ತಮಿಳು ದೇಶದಲ್ಲಿ ಹಾವಳಿ ಮಾಡುತ್ತಿದ್ದ ಮಧುರೆ ಸುಲ್ತಾನನ್ನು ಕೊಂದು ದಕ್ಷಿಣ ದೇಶವನ್ನೆಲ್ಲಾ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಡಿಸಿದರು. ಹಿಂದೂ ಸಂಸ್ಕೃತಿಯ ಉದ್ಧಾರಕ್ಕಾಗಿ ವೇದಭಾಷ್ಯಗಳೇ ಮುಂತಾದ ಉದ್ಗ್ರಂಥಗಳು ರಚಿತವಾದವು. ಇಮ್ಮಡಿ ದೇವರಾಯನ ಕಾಲದಲ್ಲಿ ಆಂಧ್ರ ದೇಶವೂ ವಿಜಯನಗರಕ್ಕೆ ಸೇರಿತು. ಇಮ್ಮಡಿ ದೇವರಾಯನ ವೈಭವವನ್ನು ನಿಕೋಲೋ ಕಾಂಟೆ, ಅಬ್ದುರ್ ರಸಾಕ್ ಎಂಬ ಪ್ರವಾಸಿಗಳು ವಿಶೇಷವಾಗಿ ವರ್ಣಿಸಿರುವರು. ವೀರಶೈವ ಮತವು ಪುನರುಜ್ಜೀವನ ಪಡೆಯಿತು. ಸಂಸ್ಕೃತ, ಕನ್ನಡ, ತಮಿಳು, ತೆಲಗು ಸಾಹಿತ್ಯಗಳು ಇಮ್ಮಡಿ ದೇವರಾಯನಿಂದ ಪೋಷಿತವಾದುವು. ಕರ್ಣಾಟಕ ಸಂಗೀತ, ಚಿತ್ರ ಮತ್ತು ಶಿಲ್ಪಕಲೆಗಳು ಬೆಳೆದವು. ದೇವರಾಯನನಂತರ ಬಲಹೀನರಾದ ರಾಜರು ಆಳಿದುದರಿಂದ ಸಾಳುವ ವಂಶದ ನರಸಿಂಹನು ಚಕ್ರವರ್ತಿಯಾದನು. ಉತ್ತರ ಕರ್ಣಾಟಕದಲ್ಲಿ ಬಹಮನಿ ರಾಜ್ಯವು ಒಡೆದುಹೋಗಿ ಐದು ಬೇರೆ ಬೇರೆ ರಾಜ್ಯಗಳಾದವು. ಸಾಳುವರನಂತರ ಕೃಷ್ಣದೇವರಾಯನ ಆಳಿಕೆ ಸುವರ್ಣಯುಗವಾಗಿದ್ದಿತು. ಭಾರತದ ಚಕ್ರವರ್ತಿಗಳಲ್ಲೆಲ್ಲ ಅಗ್ರಗಣ್ಯನಾದ ಕೃಷ್ಣದೇವರಾಯನು ಬಿಜಾಪುರ, ಗೋಲ್ಕೊಂಡ ನವಾಬರನ್ನು ಗೆದ್ದು ಕಳಿಂಗದೇಶದವರೆಗೂ ದಿಗ್ವಿಜಯಮಾಡಿ ದಕ್ಷಿಣ ದೇಶದಲ್ಲೆಲ್ಲಾ ಕರ್ಣಾಟಕ ಸಾಮ್ರಾಜ್ಯವನ್ನು ಸ್ಥಾಪಿಸಿದನು. ವ್ಯಾಸರಾಯ, ಪುರಂದರದಾಸ, ಕನಕದಾಸ, ತಾಳ್ಳಪಾಕಂ ತಿರುಮಲ ಇತ್ಯಾದಿ ಭಕ್ತಾಗ್ರೇಸರರೇ ಅಲ್ಲದೆ ಕನ್ನಡ, ಸಂಸ್ಕೃತ, ತೆಲುಗು, ತಮಿಳು ಕವಿಗಳು ರಾಜಾಶ್ರಯವನ್ನು ಪಡೆದಿದ್ದರು. ಕೃಷ್ಣದೇವರಾಯನು ಸಂಸ್ಕೃತ, ತೆಲುಗಿನಲ್ಲಿ ಗ್ರಂಥರಚನೆ ಮಾಡಿದನು. ತೆಲುಗಿನಲ್ಲಿ ಅಷ್ಟದಿಗ್ಗಜಗಳೆನಿಸಿದ ಅಲ್ಲಸಾನಿ ಪೆದ್ದನ, ತಿಮ್ಮನ, ಧೂರ್ಜಟಿ ಮುಂತಾದವರಿಗೆ ಪ್ರೋತ್ಸಾಹಕೊಟ್ಟು ಪ್ರಬಂಧಯುಗವನ್ನಾರಂಭಿಸಿದನು. ಕನ್ನಡ

ಕವಿಯಾದ ತಿಮ್ಮಣ್ಣನಿಂದ ಗದಗು ಭಾರತವನ್ನು ಪೂರ್ತಿಮಾಡಿಸಿದನು. ಪ್ರಾಚೀನ ದೇವಾಲಯಗಳಿಗೆ "ರಾಯಗೋಪುರ" ಗಳನ್ನು ಕಟ್ಟಿಸಿ ಜೀರ್ಣೋದ್ಧಾರ ಮಾಡಿದನು. ವಿಜಯನಗರವು ಭಾರತದಲ್ಲೆಲ್ಲ ಪ್ರಸಿದ್ಧ ಪಟ್ಟಣವಾಯಿತು. ಕೃಷ್ಣದೇವರಾಯನ ಅನಂತರ ಆರವೀಡು ವಂಶದ ಪ್ರಭಾವ ಬೆಳೆದು, ರಾಯನ ಅಳಿಯ ರಾಮರಾಯನು ಸುಮಾರು ಐವತ್ತು ವರ್ಷ ಬಹಮನಿ ಸುಲ್ತಾನರೊಡನೆ ಹೋರಾಡುತ್ತ ವಿಜಯನಗರ ಸಾಮ್ರಾಜ್ಯವನ್ನು ರಕ್ಷಿಸಿದನು. ಆದರೆ ರಕ್ಕಸ ತಂಗಡಿ (ತಾಳಿಕೋಟೆ) ಯುದ್ಧದಲ್ಲಿ ಈತನು ಹತನಾಗಲು ತಮ್ಮಂದಿರು ರಾಜಧಾನಿಯನ್ನು ಪೆನುಕೊಂಡೆಗೂ, ಚಂದ್ರಗಿರಿಗೂ ವರ್ಗಾಯಿಸಿದರು. ತಾಳಿಕೋಟೆ ಯುದ್ಧದಿಂದ ವಿಜಯನಗರ ಪಟ್ಟಣ ನಾಶವಾದರೂ ಸಾಮ್ರಾಜ್ಯ ನಾಶವಾಗಲಿಲ್ಲ. ಅನಂತರ ಸುಮಾರು ಒಂದು ಶತಮಾನದವರೆಗೂ ವಿಜಯನಗರ ಚಕ್ರವರ್ತಿಗಳು ಆಳುತಿದ್ದರು. ಆದರೆ ಬಿಜಾಪುರ, ಗೋಲ್ಕೊಂಡ ನವಾಬರುಗಳಿಂದ ದುರ್ಬಲರಾದ ಈ ರಾಜರು ತಮ್ಮ ಹೆಸರಿನಲ್ಲಿ ತಲೆಯೆತ್ತಿ ಸ್ವತಂತ್ರರಾಗುತ್ತಿದ್ದ ಪಾಳೆಯಗಾರರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ದಕ್ಷಿಣ ಕರ್ಣಾಟಕದಲ್ಲಿ ಕೆಳದಿಯ ಪಾಳೆಗಾರರು, ಮೈಸೂರಿನ ಒಡೆಯರು ಬಹುಮಟ್ಟಿಗೆ ಸ್ವತಂತ್ರರಾದರು. ಉತ್ತರ ಕರ್ಣಾಟಕದಲ್ಲಿ ಬಿಜಾಪುರ ಸುಲ್ತಾನರ ಆಳಿಕೆ ಸ್ಥಾಪಿತವಾಯಿತು. ವಿಜಯನಗರದ ಕೊನೆಯ ರಾಜನಾದ ಶ್ರೀರಂಗನು ಚಂದ್ರಗಿರಿಯಿಂದ ಓಡಿಬಂದು ಬೇಲೂರು ಕೆಳದಿ ಪಾಳೆಯಗಾರರ ರಕ್ಷಣೆ ಪಡೆದನು. ಇವನ ಅಧಿಕಾರಿಯೇ ಬ್ರಿಟಿಷರಿಗೆ ಮದ್ರಾಸ್ (ಚೆನ್ನಪಟ್ಟಣ) ಕೊಟ್ಟನು ಮತ್ತು ಶ್ರೀರಂಗರಾಯನು ಶಿವಾಜಿಗೆ ತನ್ನ ಪ್ರತಿನಿಧಿಯೆಂದು ನಿರೂಪಕೊಟ್ಟನು. ಕೆಳದಿಯ ಶಿವಪ್ಪನಾಯಕ ಮತ್ತು ಶಿವಾಜಿ ವಿಜಯನಗರದ ಧ್ಯೇಯವಾದ ಹಿಂದೂ ಸಂಸ್ಕೃತಿ ರಕ್ಷಣೆಗೆ ಕಂಕಣಬದ್ಧರಾದರು.

## ೭. ಮೈಸೂರು ಮತ್ತು ಮರಾಠರು

ವಿಜಯನಗರ ಸಾಮ್ರಾಜ್ಯದ ಕ್ಷೀಣದಶೆಯಲ್ಲಿ ಅನೇಕ ಪಾಳೆಯ ಪಟ್ಟುಗಳು ಸ್ವತಂತ್ರವಾದವು. ದಕ್ಷಿಣ ಕರ್ಣಾಟಕದಲ್ಲಿ ಮೈಸೂರಿನ ಒಡೆಯರು, ಕೆಳದಿಯ ಪಾಳೆಯಗಾರರು ಪ್ರಬಲರಾದರು. ಮೈಸೂರಿನ ರಾಜ ಒಡೆಯರು ವಿಜಯನಗರದ ಪ್ರತಿನಿಧಿಯಿಂದ ಶ್ರೀರಂಗಪಟ್ಟಣವನ್ನು ತೆಗೆದುಕೊಂಡರು. ಕಂಠೀರವ ನರಸರಾಜನು ಬಿಜಾಪುರ ಕೆಳದಿಯವರೊಡನೆ ಹೋರಾಡಿ ಹಾಸನ, ಬೆಂಗಳೂರು ಜಿಲ್ಲೆಗಳವರೆಗೂ ರಾಜ್ಯವನ್ನು ವಿಸ್ತರಿಸಿದನು. ಶ್ರೀರಂಗಪಟ್ಟಣದಲ್ಲಿ ಟಂಕಸಾಲೆಯನ್ನು ಸ್ಥಾಪಿಸಿ ಸ್ವಾತಂತ್ರ್ಯ ಸೂಚಕವಾಗಿ ಕಂಠೀರಾಯಿಹಣ ನಾಣ್ಯಗಳನ್ನು ಚಲಾವಣೆಗೆ ತಂದನು. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಕೊಂಡುಕೊಂಡು ಔರಂಗಜೇಬನಿಂದ "ರಾಜಾ ಜಗದೇವ್" ಎಂಬ ಬಿರುದನ್ನೂ ಸಿಂಹಾಸನವನ್ನೂ ಪಡೆದು ಆಡಳಿತದ ವ್ಯವಸ್ಥೆ ಮಾಡಿದರು. ತಾವೇ ಗ್ರಂಥಕರ್ತರೂ ಆಗಿದ್ದು ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಸಂಚಿ ಹೊನ್ನಮ್ಮ ಇತ್ಯಾದಿ ಕನ್ನಡ ಕವಿಗಳಿಗೆ ಪೋಷಕರಾಗಿದ್ದರು. ಮೈಸೂರಿನ ಪಶ್ಚಿಮ

ಭಾಗದಲ್ಲಿ ಕೆಳದಿ ರಾಜ್ಯ ಪ್ರಬಲವಾಗಿದ್ದಿತು. ಶಿವಪ್ಪನಾಯಕನು ಬಿಜಾಪುರ ಸುಲ್ತಾನರನ್ನು ಎದುರಿಸಿ ಪಶ್ಚಿಮ ತೀರದ ರಕ್ಷಣೆಗಾಗಿ ನೌಕಾಬಲವನ್ನು ಸ್ಥಾಪಿಸಿ ಕಂದಾಯದ ಶಿಸ್ತನ್ನು ಮಾಡಿದ್ದನು. ಕರ್ಣಾಟಕದ ಉತ್ತರ ಭಾಗಗಳು ಬಿಜಾಪುರ ಸುಲ್ತಾನರ ವಶದಲ್ಲಿದ್ದು ಅವರ ಅಧಿಕಾರಿಯಾಗಿದ್ದ ಶಾಹಜಿಯ ಕಾರ್ಯಕ್ಷೇತ್ರವಾಗಿದ್ದಿತು. ಅಕ್ಬರನ ಕಾಲದಿಂದ ಮೊಗಲ್ ಚಕ್ರವರ್ತಿಗಳು ದಕ್ಷಿಣ ದೇಶಗಳನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲು ಯತ್ನಿಸುತ್ತಿದ್ದರು. ಶಹಜಿ ಷಾಹಜಹಾನನೊಡನೆ ಯುದ್ಧ ನಡೆಸಿ ದಕ್ಷಿಣಾಪಥ ರಕ್ಷಕನೆಂಬ ಬಿರುದನ್ನು ಪಡೆದಿದ್ದನು. ೧೬೩೭ರಿಂದ ಶಹಜಿ ಬಿಜಾಪುರದ ದಂಡನಾಯಕರಾದ ರಣದುಲ್ಲಖಾನ್, ಅಫ್‌ಸಲ್‌ಖಾನರೊಡನೆ ಕರ್ಣಾಟಕದ ಮೇಲೆ ಧಾಳಿ ಮಾಡಿ, ಕೆಳದಿ, ಶಿರಾ, ಬೆಂಗಳೂರುಗಳನ್ನು ಹಿಡಿದು, ಕಂಠೀರವ ನರಸನಿಂದ ಕಪ್ಪವನ್ನು ತೆಗೆದುಕೊಂಡು, ಬೆಂಗಳೂರು, ಕೋಲಾರ, ಬಾಲಾಪುರ ಪ್ರಾಂತಗಳಿಗೆ ಅಧಿಕಾರಿಯಾದನು. ಬೆಂಗಳೂರಿನಲ್ಲಿ ಇರುತ್ತಿದ್ದಾಗ ಅವನ ಮಗ ಬಾಲಕನಾದ ಶಿವಾಜಿ ಮೂರುವರ್ಷ ಜೊತೆಯಲ್ಲಿದ್ದನು. ಈ ಕಾಲದಲ್ಲಿ ಮರಾಠಿ ಭಾಷೆ ಕರ್ಣಾಟಕದಲ್ಲಿ ವ್ಯಾಪಿಸಲಾರಂಭಿಸಿತು. ವಿಜಯನಗರ ಪತನಾನಂತರ ಮೊಗಲರನ್ನೂ, ಬಿಜಾಪುರದವರನ್ನೂ ಎದುರಿಸಲು ಶಹಜಿಯೇ ಸಮರ್ಥನು. ಶಹಜಿ ಶಿವಮೊಗ್ಗ ಜಿಲ್ಲೆಯಲ್ಲಿರುವ ಹೊದಗೆರೆಯಲ್ಲಿ ಮರಣ ಹೊಂದಿದನು. ಶಿವಾಜಿ ವಿಜಯನಗರದ ಅವಶೇಷವನ್ನು ನೋಡಿ ಕೊನೆಯ ರಾಜನಾದ ಶ್ರೀರಂಗನಿಗೆ ಸಹಾಯಮಾಡಿ ಸ್ವರಾಜ್ಯವನ್ನು ಸ್ಥಾಪಿಸಲು ಸ್ಫೂರ್ತಿಪಡೆದನು. ರಾಯರೇಶ್ವರ ಶಿವಾಲಯದಲ್ಲಿ ಹೈಂದವ ಸ್ವರಾಜ್ಯವನ್ನು ನಿರ್ಮಾಣಮಾಡಲು ಪ್ರತಿಜ್ಞೆ ಮಾಡಿದನು. ಬೆಂಗಳೂರು, ಶಿರಾ ಮುಂತಾದ ಸ್ಥಳಗಳನ್ನು ಗೆದ್ದು ಸತಾರದಿಂದ ಧಾರ್ವಾಡದವರೆಗೂ ಒಂದು ಪ್ರಾಂತ್ಯವನ್ನು ಮಾಡಿ ಒಬ್ಬ ಮಂತ್ರಿಯನ್ನು ನೇಮಿಸಿದನು. ಸಾಂಭಾಜಿ ಮತ್ತು ರಾಜಾರಾಮರು ಔರಂಗಸೇಬನೊಡನೆ ಹೋರಾಡುತ್ತಿದ್ದಾಗ ಕೊಲ್ಲಾಪುರ ಒಂದು ಕೇಂದ್ರವಾಯಿತು. ಶಾಹು ಛತ್ರಪತಿಯಾದಮೇಲೆ ನಿಸಾಮುಲ್ ಮುಲ್ಕನನ್ನು ಎದುರಿಸಲು ಫತೇಸಿಂಗ್ ಭೋಂಸ್ಲೆಯನ್ನು ಅಕಲಕೋಟೆಯಲ್ಲೂ, ಘೋರ್ಪಡೆಯನ್ನು ತುಂಗಭದ್ರಾ ಪ್ರಾಂತದಲ್ಲೂ ನೇಮಿಸಿದನು. ಪೇಷ್ವೆ ಒಂದನೆ ಬಾಜಿರಾಯನು ಹೈದರಾಬಾದಿನ ನಿಸಾಮುಲ್ ಮುಲ್ಕನನ್ನು ಎದುರಿಸಲು ಮತ್ತು ತಂಜಾವೂರಿನ ಸರ್ಫೋಜಿಯನ್ನು ರಕ್ಷಿಸಲು ಘೋರ್ಪಡೆಗೆ ವಿಶೇಷಾಧಿಕಾರ ಕೊಟ್ಟನು. ಬಹಿರ್ಜಿ ಹಿಂದೂರಾವ್, ಅವನ ಮಗ ಸಿದ್ಧೋಜಿ ಮತ್ತು ಮೊಮ್ಮಗ ಗುತ್ತಿಯ ಮುರಾರಿರಾವ್ ಕರ್ಣಾಟಕದಲ್ಲಿ ಪ್ರಬಲರಾದರು. ಬಾಜಿರಾಯನೇ ದಂಡೆತ್ತಿ ಬಂದು, ಬೆಳಗಾಂ, ಲಕ್ಷ್ಮೇಶ್ವರ, ಕೆಳದಿ, ಬೆದ್ನೂರು, ಚಿತ್ರದುರ್ಗಗಳನ್ನು ಗೆದ್ದು, ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ, ೨೧ ಲಕ್ಷ ಪೊಗದಿ ಪಡೆದು ಹಿಂತಿರುಗಿದನು. ಪುನಃ ೧೭೩೯ರಲ್ಲಿ ಪೋರ್ಚುಗೀಸರನ್ನು ಮಟ್ಟಹಾಕಿ ಕರ್ಣಾಟಕವನ್ನು ವ್ಯವಸ್ಥೆಗೆ ತಂದನು. ಕರ್ಣಾಟಕದಲ್ಲಿ ಆರ್ಕಾಟ್, ಶಿರಾ, ಕಡಪ, ಕರ್ನೂಲು, ಸವಣೂರು ನವಾಬರುಗಳೂ, ಮೈಸೂರು, ಬೆದ್ನೂರು, ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿ ಪಾಳೆಯಗಾರರುಗಳೂ ಇದ್ದರು. ಇವರೆಲ್ಲರ ಮೇಲೆ ತನಗೆ

ಅಧಿಕಾರವಿದೆಯೆಂದು ನಿಸಾಮುಲ್ ಮುಲ್ಕನು ವಾದಿಸುತ್ತಿದ್ದನು. ಆರ್ಕಾಟ್ ನವಾಬರಿಂದ ತಂಜಾವೂರು ಮರಾಠ ರಾಜರಿಗೆ ಅಪಾಯ ಒದಗಿದಾಗ ಬಾಲಾಜಿ ಬಾಜಿರಾಯನು ಮುರಾರಿರಾವ್ ಘೋರ್ಪಡೆಯನ್ನು ಕಳುಹಿಸಿ ರಕ್ಷಿಸಿದನು. ೧೭೫೩ರಲ್ಲಿ ಪೇಷ್ವೆಯು ಧಾರ್ವಾಡ, ಹೊಳೆಹೊನ್ನೂರು, ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ, ಹರಿಹರ, ಬಾಗಲಕೋಟೆ, ಮುಂದರ್ಗಿ ಈ ಸ್ಥಳಗಳನ್ನು ವಶಮಾಡಿಕೊಂಡನು. ಪುನಃ ೧೭೫೪ರಲ್ಲಿ ಬಿದನೂರು ಮೇಲೆ ನಡೆದನು. ಸವಣೂರು ನವಾಬನು ದಂಗೆ ಏಳಲು ಅವನನ್ನು ಅಡಗಿಸಿ ಬಂಕಾಪುರ, ಕೊಡಗೋಳ, ಹುಬ್ಬಳ್ಳಿ, ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿ, ಬಸವಾಪಟ್ಟಣ ತೆಗೆದುಕೊಂಡು ಕೃಷ್ಣಾ ನದಿಯಿಂದ ತುಂಗಭದ್ರೆವರೆಗಿನ ಕರ್ಣಾಟಕಕ್ಕೆ ಗೋಪಾಲರಾವ್ ಪಟ್ವರ್ಧನ್ ಮತ್ತು ದಾಸ್ತೆ ಇವರನ್ನು ನೇಮಿಸಿದನು. ೧೭೫೭ರಲ್ಲಿ ಪೇಷ್ವೆ ಮತ್ತು ಸದಾಶಿವರಾವ್ ಭಾವು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಗುಂಡು ಹೊಡೆಯಲು ಶ್ರೀರಂಗನಾಥ ದೇವಾಲಯದ ಚಿನ್ನದ ಕಲಶ ನಾಶವಾಯಿತು. ಆಗ ಮೈಸೂರಿನ ರಾಜನು ೩೨ ಲಕ್ಷ ಕೊಡಲು ೧೪ ಜಿಲ್ಲೆಗಳನ್ನು ಬಿಟ್ಟುಕೊಟ್ಟನು. ಇವುಗಳ ಮೇಲ್ವಿಚಾರಣೆಗೆ ಬಲವಂತ್ರಾವ್ ಮೆಹೆಂದಲೆ ಪ್ರತಿನಿಧಿಯಾದನು.

## ೮. ಹೈದರ್ ಮತ್ತು ಟೀಪು

ಉತ್ತರ ಕರ್ಣಾಟಕ ಮರಾಠಿಯವರಿಂದ ಆಕ್ರಮಿಸಲ್ಪಡುತ್ತಿದ್ದಾಗ ಮೈಸೂರರಸರು ದುರ್ಬಲರಾಗಿದ್ದು ಕಳಲೆ ದೇವರಾಜ, ಕರಾಚುರಿ ನಂಜರಾಜರಿಗೆ ಸರ್ವಾಧಿಕಾರವನ್ನು ವಹಿಸಿಬಿಟ್ಟಿದ್ದರು. ನಂಜರಾಜನು ಹೈದರನ ಪ್ರತಿಭೆಯನ್ನು ಕಂಡುಹಿಡಿದು ಮುಂದಕ್ಕೆ ತಂದನು. ೧೭೬೨ರಲ್ಲಿ ಹೈದರ್ ಬಿದನೂರು, ಸವಣೂರು, ಕರ್ನೂಲು, ಕಡಪಾ, ಗುತ್ತಿಗಳನ್ನು ಗೆದ್ದು, ಕೃಷ್ಣಾ ನದಿಯವರೆಗೂ ಮೈಸೂರು ರಾಜ್ಯವನ್ನು ವಿಸ್ತರಿಸಿದನು. ಪೇಷ್ವೆ ಒಂದನೆ ಮಾಧವರಾಯನು ಹೈದರನ ಹಿಡಿತಕ್ಕೆ ಸಿಕ್ಕಿದ ಭಾಗಗಳನ್ನು ಗೆದ್ದನು. ಮಾಧವರಾಯನು ಹೈದರನನ್ನು ಸರ್ವಾಧಿಕಾರದಿಂದ ತೆಗೆದುಹಾಕಿ ಮೈಸೂರು ರಾಜನನ್ನು ಪ್ರತಿಷ್ಠಿಸಬೇಕೆಂದಿದ್ದನು. ಆದರೆ ರಘುನಾಥ ರಾಯನು (ರಘೋಬ) ಪೇಷ್ವೆಯನ್ನು ಎದುರಿಸಲು ಹೈದರನ ಪಕ್ಷವನ್ನು ವಹಿಸಿದನು. ಆದ್ದರಿಂದ ಹೈದರನು ತುಂಗಭದ್ರ ಉತ್ತರ ಭಾಗವನ್ನೆಲ್ಲ ಮರಾಠರಿಗೆ ಬಿಟ್ಟುಬಿಡಬೇಕೆಂದು ಕರಾರು ಮಾಡಿಕೊಂಡು ಮಾಧವರಾಯನು ಪುಣೆಗೆ ಹಿಂತಿರುಗಿದನು. ಹುಟ್ಟು ಕನ್ನಡಿಗನಾದ ಹೈದರ್ ಬ್ರಿಟಿಷರಿಗೆ ಕಂಟಕಪ್ರಾಯನಾಗಿದ್ದನು. ತನ್ನ ದಿಗ್ವಿಜಯದಿಂದ ಕನ್ನಡನಾಡನ್ನು ಉದ್ಧರಿಸಲು ಯತ್ನಿಸಿದನು. ಮದ್ರಾಸಿಗೂ ಮುತ್ತಿಗೆ ಹಾಕಿ ಬ್ರಿಟಿಷರಿಗೆ ಎಂದೂ ಇಲ್ಲದಷ್ಟು ಅಪಮಾನ ಮಾಡಿದನು. ಪುಂಡು ಪಾಳೆಯಪಟ್ಟುಗಳನ್ನೊಂದೊಂದಾಗಿ ಗೆದ್ದು ಮೈಸೂರಿನ ರಾಜ್ಯವನ್ನು ವಿಸ್ತರಿಸಿದನು ಹೈದರನು ಎಷ್ಟು ಎಚ್ಚರಿಸಿದರೂ ನಿಸಾಮನಾಗಲಿ, ಪೇಷ್ವೆಯಾಗಲಿ ಭಾರತ ದೇಶಕ್ಕೆ ದ್ರೋಹಿಗಳಾದ ಬ್ರಿಟಿಷರನ್ನು ಒಟ್ಟಾಗಿ ಎದುರಿಸಲು ಹೈದರನಿಗೆ ಸಹಾಯಮಾಡಲಿಲ್ಲ. ಮರಾಠರೂ, ನಿಸಾಮನೂ ಬ್ರಿಟಿಷರೊಡನೆ ಸಾಲ್ಬಾಯ್ ಕರಾರು ಮಾಡಿಕೊಂಡುದರಿಂದ ಹೈದರೊಬ್ಬನೇ ಹೋರಾಡಬೇಕಾ

ಯಿತು. ಆದರೂ ಧೈರ್ಯಗೆಡದೆ ಟೀಪುವನ್ನು ಕಲ್ಲಿಕೋಟೆ, ಮಂಗಳೂರು ಕಡೆಗೆ ಕಳುಹಿಸಿ ತಾನು ಮದ್ರಾಸಿನ ಮೇಲೆ ದಂಡೆತ್ತಿ ಹೋಗುತ್ತಿದ್ದಾಗ ಚಿತ್ತೂರು ಬಳಿಯಲ್ಲಿ ಮರಣಹೊಂದಿದನು. ಟೀಪು ಬ್ರಿಟಿಷರ ಪರಮಶತ್ರುವಾದನು. ಬ್ರಿಟಿಷರನ್ನು ಸೋಲಿಸಿ ಮಂಗಳೂರು ಕರಾರಿನಂತೆ ದಕ್ಷಿಣ ಕನ್ನಡ ಮತ್ತು ಮಲಬಾರನ್ನು ವಶಮಾಡಿಕೊಂಡನು. ಅನಂತರ ಮರಾಠರ ಮೇಲೆ ನಡೆದು ನರ್ಗುಂದ, ಬಾದಾಮಿ, ಅಥಣಿ, ಆದೋಣಿ, ಸವಣೂರನ್ನು ಗೆದ್ದು, ಪೂರ್ವದಲ್ಲಿ ಪಾಂಡಿಚೆರಿವರೆಗೂ ಬ್ರಿಟಿಷರನ್ನು ಸೋಲಿಸುತ್ತ ಹೋಗಿ ಫ್ರೆಂಚರ ಸಹಾಯ ಕೇಳಿದನು. ಆಗ ಕಾರನ್‌ವಾಲಿಸನು ನಿಸಾಮ ಮತ್ತು ಮರಾಠರ ಸೈನ್ಯಗಳೊಡನೆ ಬೆಂಗಳೂರು ಕೋಟೆಯನ್ನು ಹಿಡಿದು, ೧೭೯೨ರಲ್ಲಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಟೀಪು ಅರ್ಧರಾಜ್ಯವನ್ನು ಬಿಟ್ಟುಕೊಡಬೇಕಾಯಿತು. ಆಗ ಮರಾಠರ ಪರವಾಗಿ ಸಂಧಾನ ನಡೆಸಿದ ಹರಿಪಂತನನ್ನು ಗುಟ್ಟಾಗಿ ಟೀಪು ಭೇಟಿಮಾಡಿ "ನಾನು ನಿಮ್ಮ ಶತ್ರುವಲ್ಲನೆಂಬುದನ್ನು ತಿಳಿಯಿರಿ. ನಿಮ್ಮ ನಿಜವಾದ ಶತ್ರುಗಳು ಬ್ರಿಟಿಷರು. ಎಚ್ಚರಿಕೆಯಾಗಿರಿ." ಎಂದು ಹೇಳಿದನು. (ಐತಿಹಾಸಿಕ ಸಂಗ್ರಹ ಭಾಗ ೨). ಟೀಪು ನೆಪೋಲಿಯನ್ನನೊಡನೆ ಸಂಧಾನ ನಡಿಸಲೆತ್ನಿಸುತ್ತಿದ್ದಾಗ ವೆಲ್ಲಸ್ಲಿ ಟೀಪುವನ್ನು ಮಟ್ಟಹಾಕಬೇಕೆಂದು ಸರ್ವಪ್ರಯತ್ನ ಮಾಡಿದನು. ಮಹದ್ಜಿ ಸಿಂಧ್ಯನು ಟೀಪುವಿನೊಡನೆ ಪತ್ರ ವ್ಯವಹಾರ ನಡೆಸಿ, ಹಿಂದೂದೇಶದ ಎಲ್ಲ ರಾಜರೂ ಸೇರಿ ಬ್ರಿಟಿಷರನ್ನು ಓಡಿಸಬೇಕೆಂದಿದ್ದನೆಂದು ಕಂಡುಬಂದಿದೆ. ಆದರೆ ನಾನಾಫಡ್ನೀಸನು ಬ್ರಿಟಿಷ ರಾಯಭಾರಿಯಾದ ಮಾಲೆಟ್ ಮಾತು ಕೇಳಿ ತಟಸ್ಥನಾಗಿದ್ದನು. ಟೀಪು ೧೭೯೯ರಲ್ಲಿ ವೀರಸ್ವರ್ಗ ಪಡೆದ ಮೇಲೆ ಸಂಕುಚಿತ ಮೈಸೂರನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಗೆ ಬ್ರಿಟಿಷರು ಕೊಟ್ಟರೂ, ವಜ್ರಮುಷ್ಟಿಯಲ್ಲಿ ಹಿಡಿದಿದ್ದರು. ಆಗ ನಾನಾಫಡ್ನೀಸನು ತಿಳುವಳಿಕೆ ಹೊಂದಿ ಎರಡನೆ ಬಾಜೀರಾಯನಿಗೆ "ಟೀಪು ಕಥೆ ಮುಗಿಯಿತು. ಪೂರ್ವ ಭಾರತ ದೇಶವೆಲ್ಲ ಬ್ರಿಟಿಷರ ವಶವಾಗಿದೆ. ಇನ್ನು ಪೂನ ಬಲಿಗೆ ಸಿದ್ಧವಾಗುತ್ತಿದೆ." ಎಂದು ಎಚ್ಚರಿಸಿದನು. ಬ್ಯಾಸ್ಸೀನ್ ಕರಾರಿನಿಂದ ಪೇಷ್ವೆ ಸಾಮ್ರಾಜ್ಯ ಅಸ್ತಮಿಸುತ್ತ ಬಂದಿತು. ೧೮೧೮ರಲ್ಲಿ ಎರಡನೆ ಬಾಜೀರಾಯನು ಬ್ರಿಟಿಷರಿಗೆ ಶರಣಾಗತನಾಗಿ ವಿರಾಮ ವೇತನವನ್ನು ಸ್ವೀಕರಿಸಿದನು. ಬ್ರಿಟಿಷರ ಹೊಸ ವ್ಯವಸ್ಥೆಯಲ್ಲಿ ಕನ್ನಡನಾಡು ಹರಿದು ಹಂಚಿಹೋಯಿತು. ಮದ್ರಾಸು, ಬೊಂಬಾಯಿ, ಹೈದರಾಬಾದು, ಮತ್ತು ಮೈಸೂರು ಸರ್ಕಾರಗಳಿಗೆ ಕೆಲ ಕೆಲವು ಭಾಗಗಳು ಸೇರಿದವು.

## ೯. ಸ್ವಾತಂತ್ರ್ಯಸಂಗ್ರಾಮದ ಆರಂಭ

ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಬ್ರಿಟಿಷರ ಸಬ್ಸಿಡಿಯರಿ ಪದ್ಧತಿ ಮತ್ತು ದತ್ತು ಸ್ವೀಕಾರ ನಿರಾಕರಣೆ ನೀತಿಗಳಿಂದ ಅನೇಕ ದೇಶೀಯ ಸಂಸ್ಥಾನಗಳು ಅದೃಶ್ಯವಾದವು. ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜಒಡೆಯರ ಅಧಿಕಾರವನ್ನು ಕಿತ್ತುಕೊಂಡು ೫೦ ವರ್ಷ ಕಂಪೆನಿ ಸರ್ಕಾರ ನಡೆಯಿತು. ಸತಾರ, ನರ್ಗುಂದ,ಕಿತ್ತೂರು ಇವೇ ಮೊದಲಾದ ಸಣ್ಣ ಸಂಸ್ಥಾನಗಳಲ್ಲಿ ಹೋರಾಟ ನಡೆದರೂ

ಬ್ರಿಟಿಷರ ಸೈನ್ಯ ದಂಗೆಗಳನ್ನು ಅಡಗಿಸಿದವು. ೧೮೫೭ನೆಯ ಸಿಪಾಯಿ ದಂಗೆಯಲ್ಲೂ ಬ್ರಿಟಿಷರ ಮೇಲೆ ವಿಶೇಷ ಆಗ್ರಹವಿದ್ದರೂ ರಾಷ್ಟ್ರೀಯ ಭಾವನೆ ಇದ್ದಿತೆಂಬುದಕ್ಕೆ ಆಧಾರಗಳಿಲ್ಲ. ದೇಶೀಯ ರಾಜರೇ ಬ್ರಿಟಿಷರಿಗೆ ಸಹಾಯ ಮಾಡಿದರು. ಯೂರೋಪಿನಲ್ಲೂ ರಾಷ್ಟ್ರೀಯಭಾವನೆ ೧೯ನೆ ಶತಮಾನಕ್ಕೆ ಹಿಂದೆ ಇರಲಿಲ್ಲ. ಪಾಶ್ಚಾತ್ಯ ಸಂಪರ್ಕದಿಂದ ಮೊದಲು ಸಮಾಜಸುಧಾರಣೆ, ಮತ ವಿಷಯಗಳಲ್ಲಿ ಮಾತ್ರ ಸ್ವದೇಶಾಭಿಮಾನ ವ್ಯಕ್ತವಾಯಿತು. ಶ್ರೀರಾಮಕೃಷ್ಣ-ವಿವೇಕಾನಂದ ಚಳುವಳಿ, ಆರ್ಯಸಮಾಜ, ಬ್ರಹ್ಮೋಸಮಾಜ, ಥಿಯಾಸೊಫಿ ಇತ್ಯಾದಿ ಸಂಸ್ಥೆಗಳು ಸ್ವದೇಶಾಭಿಮಾನವನ್ನು ಉದ್ದೀಪಿಸಿದವು. ಕಾಂಗ್ರೆಸ್ ಸಂಸ್ಥೆಕೂಡ ೧೮೮೫ರಿಂದ ೧೯೦೫ವರೆಗೆ ಬ್ರಿಟಿಷರನ್ನು ಬೇಡಿಕೊಳ್ಳುವ ಮನೋಭಾವ ಪಡೆದಿದ್ದಿತು. ಬಂಗಾಳದ ವಿಭಜನೆ ಫಲವಾಗಿ ಸ್ವದೇಶೀ ಚಳುವಳಿ ಮತ್ತು ಬಹಿಷ್ಕಾರಗಳು ಆರಂಭವಾದವು, ಹಿಂಸಾಕೃತ್ಯಗಳು ಹೆಚ್ಚಿದವು. ೧೯೧೯ರಲ್ಲಿ ತಟಸ್ಥವಿರೋಧ (Passive Resistance) ನೀತಿಯನ್ನು ಬಿಟ್ಟು ಅಸಹಕಾರ (Non-Co-operation) ನೀತಿಯನ್ನು ಕಾಂಗ್ರೆಸ್ ಅನುಸರಿಸಿತು. ತಿಲಕ್, ಆನಿಬೆಸಂಟ್ ಮುಂತಾದವರು ತೋರಿಸಿದ್ದ ಕಾರ್ಯಕ್ರಮಕ್ಕೆ ಮಹಾತ್ಮ ಗಾಂಧಿಯವರು ಹೊಸರೂಪ ಕೊಟ್ಟರು. ಸ್ವಾತಂತ್ರ್ಯ ಸಂಗ್ರಾಮ ಗಾಂಧಿಜಿಯ ನೇತೃತ್ವದಲ್ಲಿಯೇ ಸಾರ್ವಜನಿಕ ಚಳುವಳಿ (Mass Movement) ಯಾಯಿತೆಂದು ಹೇಳಬಹುದಾದ್ದರಿಂದ ಸ್ವಾತಂತ್ರ್ಯ ಸಂಗ್ರಾಮದ ನಿಜವಾದ ಚರಿತ್ರೆಯು ಗಾಂಧಿ ಯುಗದಲ್ಲಿ ಆರಂಭವಾಯಿತೆಂದು ಹೇಳಬಹುದು.

ರಾಷ್ಟ್ರೀಯ ಕಾಂಗ್ರೆಸ್ ಭಾಷಾವಾರು ಪ್ರಾಂತ್ಯಗಳನ್ನನುಸರಿಸಿ ಕಾಂಗ್ರೆಸ್ ಕಮಿಟಿಗಳನ್ನು ರಚಿಸಿದರೂ ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಪ್ರವೇಶಿಸುವುದಿಲ್ಲವೆಂಬ ತತ್ತ್ವವನ್ನನುಸರಿಸಿದ್ದುದರಿಂದ ಕರ್ಣಾಟಕದ ಏಕೀಕರಣಕ್ಕೆ ತಡೆಯಾಯಿತು. ಆದರೆ ೧೯೧೫ರಲ್ಲಿ ಕನ್ನಡಸಾಹಿತ್ಯ ಪರಿಷತ್ತು ಭಾಷಾದೃಷ್ಟಿಯಿಂದ ಕನ್ನಡಿಗರನ್ನು ಒಟ್ಟುಗೂಡಿಸಲು ಸ್ಥಾಪಿತವಾಯಿತು. ರಾಷ್ಟ್ರೀಯ ಚಳುವಳಿಯ ಅಂಗವಾಗಿ ಕರ್ಣಾಟಕ ಏಕೀಕರಣವನ್ನು ಸಾಧಿಸಲು ಕನ್ನಡ ವೃತ್ತಪತ್ರಿಕೆಗಳು ಪಣತೊಟ್ಟವು. ೧೮೬೫ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ಕರ್ಣಾಟಕ ಪ್ರಕಾಶಿಕ, ಉತ್ತರ ಕರ್ಣಾಟಕದ "ಸುಬುದ್ಧಿ ಪ್ರಕಾಶ", "ಕರ್ನಾಟಕ ವೈಭವ", ಮಂಗಳೂರಿನ "ಸುವಾಸಿನಿ" ಮುಂತಾದ ವೃತ್ತ ಪತ್ರಿಕೆಗಳು ಕನ್ನಡದ ಅಭಿಮಾನವನ್ನು ಬೆಳಗಿದವು. ಎಂ. ವೆಂಕಟಕೃಷ್ಣಯ್ಯ, ಡಿ. ವಿ. ಗುಂಡಪ್ಪ, ದಿವಾಕರ್, ಹುಕ್ಕೇರಿಕರ್, ಹನುಮಂತರಾವ್ ಮೊಹರೆ, ಆಲೂರು ವೆಂಕಟರಾಯರು, ತಾತಾಚಾರ್ಯಶರ್ಮ, ಪಿ. ಆರ್. ರಾಮಯ್ಯ ಮುಂತಾದವರ ಪಾತ್ರವು ಚಿರಸ್ಮರಣೀಯವಾಗಿದೆ. ಕೆರೂರು ವಾಸುದೇವಾಚಾರ್ಯ, ಬಳ್ಳಾರಿ ನಾಗೇಶಶಾಸ್ತ್ರೀ, ಕಬ್ಬೂರ್ ಮಾಧವರಾವ್, ಮುದವೀಡು ಕೃಷ್ಣರಾಯರು ಕನ್ನಡಿಗರನ್ನು ಜಾಗೃತಿಗೊಳಿಸಿ ಅಮೋಘಸೇವೆಯನ್ನು ಸಲ್ಲಿಸಿರುವರು.

# ೧೦ ಕರ್ಣಾಟಕದ ಉದಯ

ಉತ್ತರ ಕರ್ಣಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ ಲೋಕಮಾನ್ಯ ತಿಲಕರ ಹಾದಿಯನ್ನು ಹಿಡಿದು ೧೯೨೦ರ ವರೆಗೂ ನಡೆಯಿತು. ಅನಂತರ ರಾಷ್ಟ್ರೀಯ ಕಾಂಗ್ರೆಸ್ ಗಾಂಧಿಜಿಯವರ ನೇತೃತ್ವದಲ್ಲಿ ಅನುಸರಿಸಿದ ಚಳುವಳಿಗಳಲ್ಲಿ ಕನ್ನಡಿಗರು ಭಾಗವಹಿಸಿದರು. ಮೊದಲನೆ ಕರ್ಣಾಟಕ ಕಾನ್ಫರೆನ್ಸ್ ೧೯೨೦ರಲ್ಲಿ ಸೇರಿತು. ೧೯೨೭ರಲ್ಲಿ ಮದ್ಯದ ಅಂಗಡಿಗಳಿಗೆ ಸರ್ಪಕಾವಲು ಹಾಕಿದಾಗ ಧಾರ್ವಾಡದಲ್ಲಿ ಗುಂಡಿನ ಸುರಿಮಳೆಯಾಗಿ ದಿವಾಕರ್, ಕಬ್ಬೂರರು ಬಂಧಿತರಾದರು. ೧೯೨೮ರಲ್ಲಿ ದಿವಾಕರರು ನೆಹ್ರು ಕಮಿಟಿಗೆ "ಸಂಯುಕ್ತ ಕರ್ಣಾಟಕ" ರಚನೆ ಪರವಾಗಿ ವರದಿಯನ್ನು ಒಪ್ಪಿಸಿದರು. ಕರನಿರಾಕರಣೆ ಮತ್ತು ಉಪ್ಪಿನ ಸತ್ಯಾಗ್ರಹ ನಡೆದಾಗ ಅಂಕೋಲ, ಕಾರ್ವಾರ, ಸಿದ್ದಾಪುರ, ಹಿರೇಕೆರೂರು ಇತ್ಯಾದಿ ಸ್ಥಳಗಳಲ್ಲಿ ೧೯೩೦-೩೨ ರಲ್ಲಿ ಬಾರ್ಡೋಲಿಯಂತೆಯೇ ಶಿಸ್ತಿನಿಂದ ಹೋರಾಟ ಜರುಗಿತು. ೧೯೪೦ರಲ್ಲಿ ವೈಯುಕ್ತಿಕ ಸತ್ಯಾಗ್ರಹದಲ್ಲಿ ಉತ್ತರ ಕರ್ಣಾಟಕದವರು ಭಾಗವಹಿಸಿದರು. ೧೯೪೨ರಲ್ಲಿ "ಭಾರತ ಬಿಡಿ" ಚಳುವಳಿಯಲ್ಲಿ ಮಶ್ರುವಾಲರ ಸಲಹೆಗಳನ್ನನುಸರಿಸಿ ಮಂಗಳೂರು, ಧಾರ್ವಾಡ, ಬೆಳಗಾಂ, ಕೊಡಗು, ಬಿಜಾಪುರ ಜಿಲ್ಲೆಗಳಲ್ಲೆಲ್ಲ ಅದ್ಭುತವಾದ ಸ್ವಾತಂತ್ರ್ಯಸಂಗ್ರಾಮ ನಡೆಯಿತು.

ಮೈಸೂರಿನಲ್ಲಿ ಮಹಾರಾಜರ ಆಶ್ರಯದಲ್ಲಿ ಪ್ರಜಾಪ್ರಭುತ್ವಕ್ಕಾಗಿ ೧೯೨೦ ರಿಂದ ಹೋರಾಟವು ಆರಂಭವಾಯಿತೆಂದು ಹೇಳಬಹುದು. ಮುದವೀಡು ಕೃಷ್ಣರಾವ್, ತಾರಾನಾಥ ಮುಂತಾದವರ ಭಾಷಣಗಳಿಂದ ಜಾಗೃತಿ ಉಂಟಾಯಿತು. ೧೯೨೦ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಂಗವಾಗಿ ಶ್ರೀ ಸೆಟ್ಲೂರರ ನಾಯಕತ್ವದಲ್ಲಿ ಕಾಂಗ್ರೆಸ್ ಸಮಿತಿ ರಚನೆಯಾಯಿತು. ಮದ್ರಾಸಿನ ಜಸ್ಟಿಸ್ ಪಾರ್ಟಿಯಂತೆ ಮೈಸೂರಲ್ಲಿ ಪ್ರಜಾಮಿತ್ರ ಮಂಡಲಿ, ಪ್ರಜಾಪಕ್ಷಗಳು ಸ್ಥಾಪಿತವಾದವು. ೧೯೩೭ರಲ್ಲಿ ಪ್ರಜಾಸಂಯುಕ್ತಪಕ್ಷ ಹುಟ್ಟಿತು. ಬ್ರಜೇಂದ್ರನಾಥ್ ಸೀಲ್ ಸಮಿತಿಯಂತೆ ೧೯೨೩ರಲ್ಲಿ ಮಾಡಿದ ಸುಧಾರಣೆಗಳು ಅಸಮರ್ಪಕವಾಗಿದ್ದವು. ಆದರೆ ದಿವಾನರ ಧೋರಣೆ ಹಿಂದೆ ಇದ್ದಂತೆಯೇ ಇದ್ದು ಪ್ರಜಾಪ್ರಭುತ್ವ ತತ್ವವನ್ನು ಕೂಡ ನಿರಾಕರಿಸಿದರು. ಆದ್ದರಿಂದ ಸಂಯುಕ್ತ ಪ್ರಜಾಪಕ್ಷ ಮೈಸೂರ್‌ಸ್ಟೇಟ್ ಕಾಂಗ್ರೆಸ್ಸಾಗಿ ಮಾರ್ಪಟ್ಟು ಸರ್ಕಾರದ ದಬ್ಬಾಳಿಕೆಯನ್ನು ಖಂಡಿಸಿತು. ೧೯೨೮ರಲ್ಲಿ ಸುಲ್ತಾನ್‌ಪೇಟೆ ಗಣಪತಿ ಪ್ರಕರಣ, ಧ್ವಜ ಸತ್ಯಾಗ್ರಹ, ೧೯೩೭ರಲ್ಲಿ ನಾರಿಮನ್ ಸಂಬಂಧದ ಗುಂಡಿನ ಮಳೆ, ೧೯೩೮ರ ವಿದುರಾಶ್ವತ್ಥ ಪ್ರಕರಣ, ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ಸಿನ ಪ್ರಥಮಾಧಿವೇಶನ, ೧೯೩೯ರಲ್ಲಿ ಟಿ. ಸಿದ್ದಲಿಂಗಯ್ಯನವರ ಬಂಧನ, ತಗಡೂರರಿಂದ ಹ್ಯಾಮಿಲ್ಟನ್ ಭವನ ಸತ್ಯಾಗ್ರಹ ಮುಂತಾದ ಸಂದರ್ಭಗಳಲ್ಲಿ ಅನೇಕರು ಕಷ್ಟನಷ್ಟ ಹೊಂದಿದರು. ೧೯೪೦ನೆಯ ಸುಧಾರಣೆಗಳು ತೃಪ್ತಿಕರವಾಗಿಲ್ಲದಿದ್ದರೂ ಮೈಸೂರು ಕಾಂಗ್ರೆಸ್ ಶಾಸನ ಸಭೆಗಳ ಮೂಲಕ ಪ್ರಜಾಪ್ರಭುತ್ವದ ಹೋರಾಟವನ್ನು ಮುಂದುವರಿಸಬೇಕೆಂದು ನಿಶ್ಚಯಿಸಿತು. "ಭಾರತ ತ್ಯಜಿಸಿ" ಎಂಬ ಘೋಷಣೆ ೧೯೪೨ ಆಗಸ್ಟ್ ೭ರಲ್ಲಿ ಬೊಂಬಾಯಿ

ನಿಂದ ಹೊರಟಾಗ ಮೈಸೂರು ಸಂಸ್ಥಾನದಲ್ಲಿ ಹರತಾಳ, ನಾಯಕರ ಬಂಧನ ಮುಂತಾದವು ನಡೆದವು. ದಾವಣಗೆರೆ, ಈಸೂರು, ಶ್ರವಣಬೆಳಗೊಳಗಳಲ್ಲಿ ಗುಂಡಿನ ಸುರಿಮಳೆ ನಡೆಯಿತು. ೧೯೪೭ ಆಗಸ್ಟ್ ೧೦ರಲ್ಲಿ ಮೈಸೂರು ಮಹಾರಾಜರು ಭಾರತದ ಒಕ್ಕೂಟ ಸೇರಿದರು. ಸೆಪ್ಟಂಬರ್ ೧೯೪೭ರಲ್ಲಿ ಮೈಸೂರು ಕಾಂಗ್ರೆಸ್ ಸತ್ಯಾಗ್ರಹ ಆರಂಭಿಸಿ ಅಕ್ಟೋಬರಿನಲ್ಲಿ ವಿಜಯ ಪಡೆಯಿತು. ಶ್ರೀ ಚೆಂಗಲರಾಯರೆಡ್ಡಿ ವಿಜಯದಶಮಿ ದಿನ (೨೮-೧೦-೧೯೪೭)ರಲ್ಲಿ ಮಂತ್ರಿಮಂಡಲ ರಚಿಸಿದರು.

ಭಾರತಕ್ಕೆಲ್ಲ ಅನ್ವಯಿಸುವಂತೆ ರಾಜ್ಯಾಂಗ ವ್ಯವಸ್ಥೆಯಾದಮೇಲೆ ಭಾರತೀಯ ಕಾನೂನುಗಳೆಲ್ಲ ಮೈಸೂರಿಗೂ ಅನ್ವಯಿಸುವುವೆಂದು ೨೬-೧೧-೧೯೪೯ರಲ್ಲಿ ಮಹಾರಾಜರು ಘೋಷಿಸಿದರು. ೧೯೫೦ನೆಯ ಜನವರಿ ೨೬ರಲ್ಲಿ ಭಾರತವು ಪ್ರಜಾಪ್ರಭುತ್ವದ ಗಣರಾಜ್ಯವಾಗಿ, ಮೈಸೂರು "ಬಿ" ತರಗತಿಯ ಪ್ರಾಂತ್ಯದಲ್ಲಿ ರಾಜಪ್ರಮುಖರ ಅಧಿಕಾರವು ಜಾರಿಗೆ ಬಂದು, ೧೯೫೦ನೆಯ ಫೆಬ್ರವರಿ ೬ನೆ ತಾರೀಖಿನಲ್ಲಿ ಹೊಸ ಮಂತ್ರಿಮಂಡಲ ರಚನೆಯಾಯಿತು. ಆಂಧ್ರ ಪ್ರಾಂತ ರಚನೆಗಾಗಿ ಪೊಟ್ಟಿ ಶ್ರೀರಾಮುಲು ಉಪವಾಸ ವ್ರತವನ್ನು ಕೈಗೊಂಡು, ೧೯೫೨ ಡಿಸೆಂಬರ್ ೧೫ರಲ್ಲಿ ಪ್ರಾಣವನ್ನರ್ಪಿಸಿದ ಮೇಲೆ ಕೇಂದ್ರ ಸರ್ಕಾರ ೧೯೫೩ರಲ್ಲಿ "ಆಂಧ್ರ ಸ್ಟೇಟ್ ಆಕ್ಟ್" ಮಾಡಿ, ಬಳ್ಳಾರಿಯ ಏಳು ತಾಲ್ಲೋಕುಗಳು ಮೈಸೂರಿಗೆ ಸೇರಬೇಕೆಂದು ನಿರ್ಧರಿಸಿತು. ಅಂತೆಯೇ ೧೯೫೩ ಅಕ್ಟೋಬರ್ ೧ ರಿಂದ ಈ ತಾಲ್ಲೋಕುಗಳು ಮೈಸೂರಿನೊಡನೆ ವಿಲೀನವಾದವು. ಉತ್ತರ ಕರ್ಣಾಟಕದ ಭಾಗಗಳು ಸೇರಬೇಕೆಂಬ ಚಳುವಳಿ ಪ್ರಬಲವಾಯಿತು. ಮೈಸೂರು ಸರ್ಕಾರ ಶೇಷಾದ್ರಿ ಕಮಿಟಿಯನ್ನು ನೇಮಿಸಿ ಅಂಕಿ ಅಂಶಗಳ ಸಂಗ್ರಹಣೆಮಾಡಿ ಆರ್ಥಿಕ ದೃಷ್ಟಿಯಿಂದ ಕಂಡು ಬಂದ ಅಡಚಣೆಗಳನ್ನು ವ್ಯಕ್ತಪಡಿಸಿತು. ಇಷ್ಟರಲ್ಲಿ ಭಾರತದ ಪ್ರಾಂತ್ಯಗಳನ್ನೆಲ್ಲ ಪುನರ್ನಿರ್ಮಾಣಮಾಡಲು ಕೇಂದ್ರ ಸರ್ಕಾರವು ಭಾಷಾ ತತ್ತ್ವ ಮತ್ತು ಆಡಳಿತ ಸೌಕರ್ಯಗಳೆರಡನ್ನೂ ಗಣನೆಗೆ ತಂದುಕೊಂಡು ಸಲಹೆ ಮಾಡಲು ಫಸಲ್ ಆಲಿ ಕಮಿಷನನ್ನು ನೇಮಿಸಿತು. ಇದರ ವರದಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ "೧೯೫೬ನೆಯ ಸ್ಟೇಟ್ ರಿ-ಆರ್ಗನಿಸೇಷನ್ ಆಕ್ಟ್" ಭಾರತ ರಿಪಬ್ಲಿಕ್ಕಿನ ಏಳನೆ ವರ್ಷದಲ್ಲಿ ಜಾರಿಗೆ ಬಂದಿದೆ. ಭಾರತದಲ್ಲಿ ೧೫ ಪ್ರಾಂತ್ಯಗಳೂ, ಏಳು ಕೇಂದ್ರ ಸರ್ಕಾರದಾಳಿಕೆಗೆ ಸೇರಿದ ಭಾಗಗಳೂ ಇರಬೇಕೆಂದೂ, ರಾಜಪ್ರಮುಖ ಪದವಿ ಹೋಗಬೇಕೆಂದೂ, ಪ್ರಾಂತ್ಯಗಳಲ್ಲಿ ಎ, ಬಿ ಎಂಬ ವ್ಯತ್ಯಾಸವಿರಕೂಡದೆಂದೂ, ಪ್ರಾಂತ್ಯಗಳೆಲ್ಲ ಐದು ಮಂಡಲಗಳಲ್ಲಿ (ಜೋನ್ಸ್) ಸೇರಬೇಕೆಂದೂ ವ್ಯವಸ್ಥೆಯಾಯಿತು. ಹೊಸ ಮೈಸೂರು ಅಥವಾ ಕರ್ಣಾಟಕದಲ್ಲಿ ಈಗಿನ ಮೈಸೂರು ಸಂಸ್ಥಾನದ ಜಿಲ್ಲೆಗಳು, ಚಂದಗಡ್ ತಾಲೋಕು ಬಿಟ್ಟು ಬೆಳಗಾಂ, ಬಿಜಾಪುರ, ಧಾರ್ವಾಡ, ಉತ್ತರ ಕನ್ನಡ, ಗುಲ್ಬರ್ಗ (ಕೋಡಂಗಲ್ ಮತ್ತು ಕಂಡೂರ್ ತಾಲ್ಲೋಕು ವಿನಾ), ಆಲಂಪುರ, ಗದ್ವಾಲ ತಾಲ್ಲೋಕುಗಳನ್ನು ಬಿಟ್ಟು ರಾಯಚೂರು, ಈಗಿನ ಬೀದರ್ ಜಿಲ್ಲೆಯ ಬೀದರ್, ಭಾಲ್ಕಿ, ಹುಮ್ನಾಬಾದ್, ಸಂತ್ಪುರ (ಔರಾದ್) ತಾಲ್ಲೋಕುಗಳು; ಕಾಸರಗೋಡು, ಅಮಿನ್‌ದೀವಿ ವಿನಾ,

ದಕ್ಷಿಣ ಕನ್ನಡ, ಕೊಡಗು ಮತ್ತು ಕೊಳ್ಳೇಗಾಲ ಸೇರಬೇಕೆಂದು ತೀರ್ಮಾನ ವಾಯಿತು. ಮೂರು ಕೋಟಿ ಕನ್ನಡಿಗರು ಸಾವಿರದೈನೂರು ವರ್ಷದ ಚರಿತ್ರೆಯಲ್ಲಿ ಕಾಲಾನುಗುಣವಾಗಿ ತಮ್ಮ ಅದೃಷ್ಟದ ಉಬ್ಬರವಿಳಿತಗಳನ್ನು ಅನುಭವಿಸಿ, ಸ್ವತಂತ್ರ ಭಾರತದಲ್ಲಿ ಗಣ್ಯಸ್ಥಾನವನ್ನು ಪಡೆಯುವ ಸುಯೋಗವನ್ನು ಶ್ರೀ ಚಾಮುಂಡೇಶ್ವರಿ-ಭುವನೇಶ್ವರಿ ಅನುಗ್ರಹದಿಂದ ಇಂದು ಪಡೆದಿರುವರು.

---



ಚಾಮುಂಡಿ ಬೆಟ್ಟದಲ್ಲಿ ಬಸವನ ಶಿಲಾಪ್ರತಿಮೆ



ಬೆಂಗಳೂರು ಲಾಲ್‌ಬಾಗಿನ ಒಂದು ದೃಶ್ಯ



ವೈದ್ಯೇಶ್ವರ ದೇವಾಲಯ, ತಲಕಾಡು

# ಕನ್ನಡ ನಾಡಿನ ಸ್ವರೂಪ

ಲೇಖಕರು :

ಶ್ರೀಮಾನ್ ಎಚ್. ರಾಮರಾಯರು, ಬೆಂಗಳೂರು.

## ೧. ಸ್ಥಾನ ಮತ್ತು ಪ್ರಾಚೀನತೆ

ನಮ್ಮ ಜೀವನಕ್ಕೆ ಬೇಕಾದ ಸಕಲ ಸಂಪತ್ತನ್ನೂ ನೀಡಿ, ನಮ್ಮನ್ನು ಪೋಷಿಸಿ ರಕ್ಷಿಸಿಕೊಂಡು ಬರುತ್ತಿರುವ ನಮ್ಮ ತಾಯಿನಾಡಾದ ಈಗ ರೂಪುಗೊಂಡಿರುವ ಕರ್ಣಾಟಕದ ಸ್ಥಾನ-ಸ್ವರೂಪ-ಜನಜೀವನಗಳನ್ನು ಸಂಕ್ಷಿಪ್ತವಾಗಿ ತಿಳಿಯೋಣ.

ಕರ್ಣಾಟಕವು ದಕ್ಷಿಣಾಪಥದ (ದಖನ್ನಿನ) ಮಧ್ಯಭಾಗದಲ್ಲಿ ಪಶ್ಚಿಮದ ಕಡೆಗೆ ಇದೆ. (ನಕ್ಷೆ ೧)

ಭಾರತದ ಒಂದು ಅಂಗವಾಗಿ, ಭಾರತೀಯ ಸನಾತನ ಧರ್ಮ ಸಂಸ್ಕೃತಿಗಳಿಂದ ಪುಷ್ಟಿಗೊಂಡು, ಅವುಗಳಿಗೆ ಗ್ಲಾನಿ ಬಂದಾಗ ನಾಡಿನ ಮಹಾಪುರುಷರ ಮೂಲಕ ಅವುಗಳನ್ನು ರಕ್ಷಿಸಿ, ಎತ್ತಿ ಹಿಡಿದು ನಿಲ್ಲಿಸಿ, "ಧರಣಿ ಮಂಡಲ ಮಧ್ಯದೊಳಗೆ" ಮೆರೆಯುತ್ತಿದೆ ಈ ಕರ್ಣಾಟಕ ದೇಶ.

ಕರ್ಣಾಟಕವು ಮಹಾಭಾರತದ ಕಾಲದಿಂದಲೂ ಪ್ರಸಿದ್ಧವಾಗಿದೆ. ಮೈಸೂರು ಅರಸರ ಬಿರುದಾವಳಿಯಲ್ಲಿ ಒಂದಾದ "ಕರ್ಣಾಟಕ ರತ್ನ ಸಿಂಹಾಸನಾಧೀಶ್ವರ" ಎಂಬ ಬಿರುದಿನಲ್ಲಿಯೂ, ಶೃಂಗೇರೀ ಮಠದ ಶ್ರೀಗಳವರ "ಕರ್ಣಾಟಕ ಸಿಂಹಾಸನಾ ಸ್ಥಾಪನಾಚಾರ್ಯ" ಎಂಬ ಬಿರುದಿನಲ್ಲಿಯೂ ಚರಿತ್ರೆಯ ಅನೇಕ ಅಂಶಗಳು ಅಡಕವಾಗಿವೆ.

ಒಂಭತ್ತನೇ ಶತಮಾನದಲ್ಲಿದ್ದ ನೃಪತುಂಗನು ಕರ್ಣಾಟಕದ ಎಲ್ಲೆಯನ್ನು ವಿವರಿಸುತ್ತಾ—

> "ಕಾವೇರಿಯಿಂದಮಾ ಗೋ
> ದಾವರಿ ವರಮಿರ್ದ ನಾಡದಾ ಕನ್ನಡಂ"

—ಎಂದು ಹೇಳಿದ್ದಾನೆ. ಈಗಲೂ ಕರ್ಣಾಟಕದ ಉತ್ತರ—ದಕ್ಷಿಣದ ಎಲ್ಲೆಗಳು ಸರಿಸುಮಾರು ಹಾಗೆಯೇ ಇವೆ. (ನಕ್ಷೆ ೨)

ಅಕ್ಷಾಂಶ, ರೇಖಾಂಶ ರೀತ್ಯಾ, ಕರ್ಣಾಟಕವು ಉತ್ತರಾರ್ಧಗೋಳದ ಉಷ್ಣವಲಯದಲ್ಲಿ ಅಕ್ಷಾಂಶ ೧೧ ೧/೨°—೧೯° ಗಳ ಮಧ್ಯೆ ಮತ್ತು ರೇಖಾಂಶ ೭೪°—೭೮ ೧/೨°ಗಳ ನಡುವೆ ಸ್ಥಾಪಿತವಾಗಿದೆ. ಕಾಲಗಣನೆಯಲ್ಲಿ ೮೨ ೧/೨° ರೇಖಾಂಶದ ಕಾಲವನ್ನೇ ಇಂಡಿಯಾ ದೇಶಕ್ಕೆಲ್ಲಾ ಏಕಮಾತ್ರ ಕಾಲ

ವೆಂದು (Indian Standard Time) ನಿರ್ಧರಿಸಿದ್ದಾರೆ. ಕರ್ಣಾಟಕದ ಪಶ್ಚಿಮ ತೀರದ ಸ್ಥಳೀಯ ಕಾಲವು ಈ ಕಾಲಕ್ಕಿಂತ ೩೪ ನಿಮಿಷಗಳಷ್ಟು ಹಿಂದಿರುವುದು.

ಪಂಚದ್ರಾವಿಡ ದೇಶಗಳೆಂದೆನಿಸಿಕೊಂಡಿರುವ ಆಂಧ್ರ-ತಮಿಳು-ಕೇರಳ-ತುಳು-ಕನ್ನಡ ದೇಶಗಳಲ್ಲಿ, ತುಳು-ಕನ್ನಡಗಳು ಸೇರಿ ಕರ್ಣಾಟಕ ವಾಗಿದೆ.

ಕರ್ಣಾಟಕದ ಎಲ್ಲೆಗಳು :—ಪಶ್ಚಿಮದಲ್ಲಿ ಅರಬ್ಬೀಸಮುದ್ರ, ಉತ್ತರದಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರ-ತಮಿಳು ನಾಡುಗಳು, ದಕ್ಷಿಣದಲ್ಲಿ ತಮಿಳು-ಕೇರಳ ದೇಶಗಳು ಇವೆ.

## ೨. ಮೇಲ್ಮೈ

ಕರ್ಣಾಟಕವನ್ನು (೧) ತೀರಪ್ರದೇಶ ಮತ್ತು (೨) ಎರಡು ಘಟ್ಟಗಳ ನಡುವೆ ಇರುವ ಪ್ರಸ್ಥಭೂಮಿಯೆಂದು ಸಾಮಾನ್ಯವಾಗಿ ಎರಡು ಭಾಗಗಳನ್ನಾಗಿ ಮಾಡಬಹುದು.

### (೧) ತೀರ ಮತ್ತು ತೀರಪ್ರದೇಶ

ತೀರ :—ಕರ್ಣಾಟಕಕ್ಕೆ ಸುಮಾರು ೨೦೦ ಮೈಲಿಗಳ ಉದ್ದದ ತೀರವಿದೆ. ಈ ತೀರವು ಒಡೆದಿಲ್ಲ. ಬಹು ಸಾಮಾನ್ಯವಾಗಿದೆ. ಇಂತಹ ತೀರದಲ್ಲಿ ಅಲೆಗಳ ಹೊಡೆತ ಬಡಿತಗಳು ಹೆಚ್ಚು. ಸ್ವಾಭಾವಿಕವಾದ ಬಂದರುಗಳಿಗೆ ಅವಕಾಶವಿಲ್ಲ. ಆದರೂ ಮಂಗಳೂರು, ಮಲ್ಪೆ, ಭಟ್ಕಲ್, ಕಾರವಾರ್‌ಗಳಲ್ಲಿ ಸಣ್ಣ ಹಡಗುಗಳಿಗೋಸ್ಕರ ಕೃತಕ ಬಂದರುಗಳನ್ನು ಕಟ್ಟಬಹುದು. (ನಕ್ಷೆ ೩)

ತೀರದಿಂದ ಸಮುದ್ರದ ಕಡೆಗೆ ೪೦-೫೦ ಮೈಲಿಗಳಷ್ಟು ಅಗಲವಿರುವ ವಿಶಾಲವಾದ ಖಂಡಾವರಣ ಪ್ರದೇಶವಿವೆ. ಇಲ್ಲಿಯ ಆಳವು ೬೦೦ ಅಡಿಗಳಿಗಿಂತಲೂ ಕಡಮೆ. ಇಂತಹ ಪ್ರದೇಶದಲ್ಲಿ ಆಹಾರಕ್ಕೆ ಉಪಯೋಗಿಸುವ ಮೀನುಗಳು ವಿಶೇಷವಾಗಿ ಅಭಿವೃದ್ಧಿಯಾಗುತ್ತವೆ. ತೀರದ ಜನರಿಗೆ ಮೀನು ಮುಖ್ಯವಾದ ಆಹಾರವಾಗಿದೆ. ಬಂದರುಗಳನ್ನೂ, ಮೀನು ಹಿಡಿಯತಕ್ಕ ಕ್ರಮಗಳನ್ನೂ ಸುಧಾರಿಸಿಕೊಂಡರೆ ದೇಶದ ಆಹಾರ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಬಿಡಿಸಿಕೊಳ್ಳಬಹುದು.

ತೀರಪ್ರದೇಶ :—ಪಶ್ಚಿಮ ಘಟ್ಟಗಳು, ಪಶ್ಚಿಮ ತೀರಕ್ಕೆ ಬಹಳ ಹತ್ತಿರವಿರುವುದರಿಂದ ತೀರ ಪ್ರದೇಶವು ಕಿರಿದಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಂತೂ ಹತ್ತು-ಹದಿನೈದು ಮೈಲಿಗಳಷ್ಟೇ ಅಗಲ. ಘಟ್ಟಗಳು ಉತ್ತರ ಕನ್ನಡ ಜಿಲ್ಲೆಯನ್ನು ಬಿಟ್ಟು ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶಿಸುವಾಗ, ಕೊಲ್ಲೂರು ಕಣಿವೆಯ ಹತ್ತಿರ ಒಮ್ಮೆಲೇ ಸ್ವಲ್ಪ ಪೂರ್ವಕ್ಕೆ ತಿರುಗಿ, ಅಲ್ಲಿಂದ ಆಗ್ನೇಯಾಭಿಮುಖವಾಗಿ ನೀಲಗಿರಿಯವರೆಗೆ ಹಬ್ಬಿರುವುದರಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೪೦-೫೦ ಮೈಲಿಗಳಷ್ಟು ಸ್ವಲ್ಪ ವಿಶಾಲವಾಗಿದೆ. (ನಕ್ಷೆ ೪)

ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಗೋಕರ್ಣದಿಂದ ದಕ್ಷಿಣಕ್ಕೆ ಇರುವ ತೀರ ಪ್ರದೇಶಕ್ಕೆ "ಪರಶುರಾಮ ಕ್ಷೇತ್ರ" ಎಂದು ಹೆಸರು.

"ಕೊಡಲಿರಾಮನ ಸಿಡಿಲಿಗಳುಕಿ ಹಿಂದೋಡಿ
ಕಡಲಾರೆ-ನೀನಲೆಗಳನ್ನೊಡೆದು ಮೂಡಿ
ಪಡೆದ ಶಾಸನದಾದೆ ತುಳುನಾಡ ರಾಣಿ
ಬೆಡಗಿಂದ ಧರೆಗಾದೆ ಕೊರಳ ಕಟ್ಟಾಣಿ"

—ಎಂದು ಈ ಪ್ರದೇಶವನ್ನು ಕುರಿತು ಕವಿಗಳೊಬ್ಬರು* ಹೇಳಿದ್ದಾರೆ.

ಪರಶುರಾಮನು ತಾನು ಗೆದ್ದ ಭೂಮಂಡಲವನ್ನೆಲ್ಲಾ ಕಾಶ್ಯಪನಿಗೆ ಧಾರೆ ಎರೆದುಬಿಟ್ಟಮೇಲೆ, ತನಗೆ ಸ್ಥಳವಿಲ್ಲದಿರಲು, ಸಹ್ಯಾದ್ರಿಗೆ (ಪಶ್ಚಿಮ ಘಟ್ಟಗಳ ಕೊಡಚಾದ್ರಿಗೆ) ಬಂದು, ಆಗ ಘಟ್ಟಗಳ ಬುಡಕ್ಕೆ ಬಡಿಯುತ್ತಿದ್ದ ಸಮುದ್ರವನ್ನು ಪ್ರಾರ್ಥಿಸಲು ಸಮುದ್ರವು ಹಿಂದಕ್ಕೆ ಸರಿದು ಎಡೆಮಾಡಿಕೊಟ್ಟಿತು ಎಂಬುದು ಪುರಾಣಪ್ರಸಿದ್ಧಿ.

ಆಧುನಿಕ ಭೂಶಾಸ್ತ್ರಜ್ಞರೂ, ಸಮುದ್ರವು ಹಿಂದಕ್ಕೆ ಸರಿದು ಪಶ್ಚಿಮತೀರ ಪ್ರದೇಶವು ಏರ್ಪಟ್ಟಿದೆಯೆಂದು ತಮ್ಮ ಶಾಸ್ತ್ರಗಳ ಆಧಾರದ ಮೇಲೆ ಹೇಳುತ್ತಾರೆ. ಪುರಾಣಗಳೂ, ಆಧುನಿಕ ಶಾಸ್ತ್ರಗಳೂ ಈ ವಿಷಯದಲ್ಲಿ ಒಂದೇ ರೀತಿಯಾಗಿ ಹೇಳುತ್ತಿರುವುದು ಗಮನಾರ್ಹವಾಗಿದೆ.

ಸಮುದ್ರವು ಹಿಂದಕ್ಕೆ ಸರಿದು ತೀರವು ಏರ್ಪಟ್ಟಿರುವುದರಿಂದ, ಅದು ಸಾಮಾನ್ಯವಾಗಿದ್ದು ಸ್ವಾಭಾವಿಕ ಬಂದರುಗಳಿಗೆ ಅವಕಾಶ ಕೊಟ್ಟಿಲ್ಲ.

## (೨) ಘಟ್ಟಗಳು ಮತ್ತು ಪ್ರಸ್ಥಭೂಮಿ

ಕಿರಿದಾದ ಪಶ್ಚಿಮ ತೀರಪ್ರದೇಶವನ್ನು ಬಿಟ್ಟು ಪೂರ್ವಕ್ಕೆ ಬರಲು, ಘಟ್ಟಗಳು ಒಮ್ಮೆಲೇ ೪-೫ ಸಾವಿರ ಅಡಿಗಳಷ್ಟು ಎತ್ತರವಾಗಿ ಗೋಡೆಯಂತೆ ಹಬ್ಬಿವೆ. ಇವು ದಖನ್ ಪ್ರಸ್ಥಭೂಮಿಯ ಪಶ್ಚಿಮದ ಅಂಚಾದ್ದರಿಂದ ಪಶ್ಚಿಮ ಘಟ್ಟಗಳೆನಿಸಿಕೊಂಡಿವೆ. ಘಟ್ಟಗಳನ್ನು ದಾಟಿ ಪೂರ್ವಕ್ಕೆ ಬರಲು, ಭೂಮಿಯು ಇಳಿಜಾರಾಗಿ ೨-೩ ಸಾವಿರ ಅಡಿ ಎತ್ತರವಿರುವ ಪ್ರಸ್ಥಭೂಮಿಯಲ್ಲಿ ಪರ್ಯವಸಾನ ವಾಗುವುದು. ಪ್ರಸ್ಥಭೂಮಿಯ ಪೂರ್ವದ ಅಂಚೇ ಪೂರ್ವಘಟ್ಟದ ಸಾಲುಗಳು.

ಪಶ್ಚಿಮಘಟ್ಟಗಳು ಹೆಚ್ಚು ಎತ್ತರವಾಗಿ ಒಂದೇ ಸಮನಾಗಿ ಹಬ್ಬಿವೆ. ಪೂರ್ವ ಘಟ್ಟಗಳು ಅಷ್ಟು ಎತ್ತರವಾಗಿಲ್ಲ ಮತ್ತು ಅಲ್ಲಲ್ಲೀ ಒಡೆದೊಡೆದು ಹಬ್ಬಿವೆ. ಪ್ರಸ್ಥಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ಪೂರ್ವದಿಂದ ಪ್ರಸ್ಥಭೂಮಿಯ ಮೇಲಕ್ಕೆ ಬರಲು ಪೂರ್ವಘಟ್ಟಗಳು ಅಡಚಣೆಯನ್ನು ತಂದೊಡ್ಡುವುದಿಲ್ಲ. ಆದರೆ ಪಶ್ಚಿಮ ಘಟ್ಟಗಳು ಪ್ರಸ್ಥಭೂಮಿ—ತೀರಪ್ರದೇಶಗಳ ಸಂಪರ್ಕ ವ್ಯವಹಾರಕ್ಕೆ ಅಡಚಣೆಯೇ ಸರಿ. ಈಗಿನ ಇಂಜನಿಯರಿಂಗ್ ಸಾಹಸದಿಂದ ನಾಲ್ಕೈದು ಘಾಟಿಗಳ ಮೂಲಕ ರಸ್ತೆಗಳು ಆಗಿವೆ. ರೈಲುಮಾರ್ಗ ಇನ್ನೂ ಆಗುವುದರಲ್ಲಿದೆ.

* ಶ್ರೀ ಎಂ. ಎನ್. ಕಾಮತ್.

## ಉತ್ತರ ಕರ್ಣಾಟಕ – ದಕ್ಷಿಣ ಕರ್ಣಾಟಕ

ಕರ್ಣಾಟಕ ದೇಶವನ್ನು ೧೫° ಅಕ್ಷಾಂಶವು ಸರಿಸುಮಾರಾಗಿ ಅರ್ಧಭಾಗ ಮಾಡುತ್ತಿದೆ. ಇದು ತುಂಗಭದ್ರಾನದಿಯು ಹರಿಯತಕ್ಕ ಪ್ರದೇಶ. ಈ ಅಕ್ಷಾಂಶ ದಿಂದ ಉತ್ತರಕ್ಕೆ ಇರುವ ಪ್ರದೇಶವನ್ನು ಉತ್ತರ ಕರ್ಣಾಟಕವೆಂದೂ, ದಕ್ಷಿಣಕ್ಕೆ ಇರುವ ಪ್ರದೇಶವನ್ನು ದಕ್ಷಿಣ ಕರ್ಣಾಟಕವೆಂದೂ ಕರೆಯಬಹುದು. ಭೂರಚನೆ, ಮೇಲ್ಮೈ, ಮಳೆ-ಬೆಳೆಗಳು, ಜನರ ನಡೆ-ನುಡಿ, ಉಡಿಗೆ-ತೊಡಿಗೆ, ಆಹಾರ ವ್ಯವಹಾರಗಳಲ್ಲಿ ವ್ಯತ್ಯಾಸಗಳು ಸ್ವಲ್ಪಮಟ್ಟಿಗೆ ಎದ್ದು ಕಾಣುತ್ತಿರುತ್ತವೆ.

ಉತ್ತರ ಕರ್ಣಾಟಕದಲ್ಲಿ ಪ್ರಸ್ಥಭೂಮಿಯು ಸುಮಾರು ೨,೦೦೦ ಅಡಿ ಎತ್ತರವಿದ್ದು ಪೂರ್ವಕ್ಕೆ ಒಂದೇಸಮನಾಗಿ ಇಳಿಜಾರಾಗಿದೆ. ಬೆಟ್ಟದ ಸಾಲು ಗಳಿಲ್ಲ. ಪೂರ್ವಘಟ್ಟಗಳು ಇನ್ನೂ ಪೂರ್ವಕ್ಕೆ ಆಂಧ್ರದೇಶದಲ್ಲಿವೆ.

ಆದರೆ, ದಕ್ಷಿಣಕ್ಕೆ ಬರುಬರುತ್ತಾ ಪೂರ್ವ ಪಶ್ಚಿಮ ಘಟ್ಟಗಳು ಒಂದ ನ್ನೊಂದನ್ನು ಸಮೀಪಿಸುತ್ತಾ ದಕ್ಷಿಣ ಕರ್ಣಾಟಕದ ಎಲ್ಲೆಗಳಾಗಿವೆ. ಇವು ಸಮೀಪಿಸಿದಂತೆಲ್ಲಾ ಪ್ರಸ್ಥಭೂಮಿ ಕಿರಿದಾಗಿಯೂ, ಎತ್ತರವಾಗಿಯೂ (೩,೦೦೦ ಅಡಿಗಳು) ಆಗಿ, ಅನೇಕ ಬೆಟ್ಟದ ಸಾಲುಗಳನ್ನು ಹೊಂದಿ ಮೇಲ್ಮೈ ಹಳ್ಳ-ತಿಟ್ಟು ಗಳಿಂದ ಕೂಡಿದೆ.

ಪಶ್ಚಿಮ ಘಟ್ಟಗಳೂ ಪೂರ್ವ ಘಟ್ಟಗಳೂ ಕರ್ಣಾಟಕದ ದಕ್ಷಿಣದಲ್ಲಿರುವ ನೀಲಗಿರಿಯಲ್ಲಿ ಸಂಧಿಸುತ್ತವೆ. ನೀಲಗಿರಿಯ ಪ್ರದೇಶವು ೬-೮ ಸಾವಿರ ಅಡಿ ಗಳಷ್ಟು ಎತ್ತರವಾಗಿದೆ. ಅಷ್ಟು ಎತ್ತರದ ವಾತಾವರಣದಲ್ಲಿ ಧೂಳಿನ ಕಣಗಳೂ, ಆವಿಯ ಕಣಗಳೂ ಹೆಚ್ಚಾಗಿಲ್ಲದೇ ಇರುವುದರಿಂದ ಆಕಾಶವು ಮಂಕು ಮಂಕಾ ಗಿರದೆ ಹೆಚ್ಚು ನೀಲಿಯಾಗಿರುತ್ತದೆ. ಆಕಾಶದ ಬಣ್ಣವನ್ನು ಪ್ರತಿಫಲಿಸುವ ಬೆಟ್ಟಗಳ ಶಿಖರಗಳೂ ಹೆಚ್ಚು ನೀಲಿಯಾಗಿ ಕಾಣುತ್ತಿರುತ್ತವೆ. ಬಹುಶಃ ಈ ಕಾರಣದಿಂದ ಆ ಬೆಟ್ಟಗಳಿಗೆ ನೀಲಗಿರಿಯೆಂಬ ಹೆಸರು ಬಂದಿರ ಬಹುದು.

ಕರ್ಣಾಟಕದ ಪ್ರಸ್ಥಭೂಮಿಯು ತ್ರಿಕೋಣಾಕಾರವಾಗಿ, ಪಾದವನ್ನು ಉತ್ತರದಲ್ಲಿ ಹೊಂದಿ, ಶೃಂಗವನ್ನು ದಕ್ಷಿಣದ ನೀಲಗಿರಿಯಲ್ಲಿ ಹೊಂದಿದೆ.

### ಭೂರಚನೆ

ಪಶ್ಚಿಮ ತೀರಪ್ರದೇಶದ ರಚನೆಯನ್ನು ಸಮುದ್ರವು ಹಿಂದಕ್ಕೆ ಸರಿದು ಆಗಿದೆಯೆಂದು ಹಿಂದೆ ತಿಳಿದೆವು.

ಘಟ್ಟಗಳೂ ಅವುಗಳ ಮಧ್ಯೆ ಇರುವ ಪ್ರಸ್ಥಭೂಮಿಯೂ ಕೋಟ್ಯಾಂತರ ವರ್ಷಗಳ ಹಿಂದೆ ಏರ್ಪಟ್ಟು ಬಹು ಪುರಾತನವಾಗಿದೆಯೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಒಂದೊಂದು ಮನ್ವಂತರದ ಕೊನೆಯಲ್ಲಿ ಪ್ರಳಯವೇರ್ಪಟ್ಟು, ಕೆಲವು ಭೂಭಾಗಗಳು ಮುಳುಗಿ ಹೋಗಿ, ಮುಂದಿನ ಮನ್ವಾದಿಯಲ್ಲಿ ಹೊಸ ಭೂಭಾಗ

ಗಳು ಎದ್ದು ಬಂದು ಹೊಸ ಬೆಟ್ಟಗಳೂ, ಹೊಸ ಪ್ರಸ್ಥಭೂಮಿಗಳೂ ಏರ್ಪಡುತ್ತವೆ ಯೆಂದು ಪುರಾಣಗಳು ಸಾರುತ್ತಿವೆ. ಈಗ ನಡೆಯುತ್ತಿರುವ ಶ್ವೇತವರಾಹಕಲ್ಪದ ಏಳನೇ ವೈವಸ್ವತ ಮನ್ವಾದಿಯಲ್ಲಿ ಹಿಮಾಲಯಾ, ಆಲ್ಪ್ಸ್ ಮುಂತಾದ ಪರ್ವತ ಶ್ರೇಣಿಗಳು ಎದ್ದು "ಇತ್ತೀಚಿನವು" ಎಂದೆನಿಸಿಕೊಂಡಿವೆ. ನಮ್ಮ ದಖ್ಖ ಪ್ರಸ್ಥಭೂಮಿಯಾದರೋ, ಮೊದಲನೇ ಮನ್ವಾದಿಯಲ್ಲಿಯೇ ಏರ್ಪಟ್ಟು, ಬಿಸಿಲು, ಮಳೆ, ಗಾಳಿಗಳಿಗೆ ಸಿಕ್ಕಿ ಸವೆಯುತ್ತಿದೆಯೇ ಹೊರತು, ಹೆಚ್ಚಿನ ಅವಾಂತರಗಳಿಗೆ ಒಳಪಟ್ಟಿಲ್ಲ. ಕರ್ಣಾಟಕದ ಉತ್ತರದಲ್ಲಿ, ಪ್ರಸ್ಥಭೂಮಿಯ ಮೇಲೆ ಹರಿಯುವ ಗೋದಾವರೀ ನದಿಗೆ "ವೃದ್ಧಗಂಗಾ" ಎಂದು ನಮ್ಮವರು ಕರೆಯುತ್ತಾರೆ. ಗಂಗಾ ನದಿಗಿಂತಲೂ ಮೊದಲೇ ಹುಟ್ಟಿ ಹರಿಯುತ್ತಿದೆ ಎಂದು ಅರ್ಥ ಬರುವ ಹೆಸರು ಇದಕ್ಕೆ ಎಷ್ಟು ಸಮಂಜಸವಾಗಿದೆ ಎನ್ನುವುದನ್ನು ಕಾಣಬಹುದು.

ಪುರಾತನ ಪ್ರಸ್ಥಭೂಮಿಗಳಲ್ಲಿ ಕಲ್ಲಿದ್ದಲು, ಸೀಮೆ ಎಣ್ಣೆ ಸಾಮಾನ್ಯವಾಗಿ ಸಿಗುವುದಿಲ್ಲ. ಆದರೆ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ವಜ್ರ, ಮ್ಯಾಂಗನೀಸ್, ಅಣು ಶಕ್ತಿ ಪ್ರಯೋಗದಲ್ಲಿ ಉಪಯೋಗಿಸುವ ಥೋರಿಯಮ್, ಸರ್ಕೋನಿ ಯಮ್, ಯುರೇನಿಯಮ್ ಮುಂತಾದ ಪ್ರಶಸ್ತ ಲೋಹಗಳು ಸಿಗುತ್ತವೆ. ಈ ತಿಳಿವಳಿಕೆಯಿಂದ ನಮ್ಮ ಕರ್ಣಾಟಕದ ಖನಿಜ ಸಂಪತ್ತೇನಿರಬಹುದೆಂಬುದನ್ನು ನಿರೀಕ್ಷಿಸಬಹುದು.

## ಎರೆ ಪ್ರದೇಶ

ಉತ್ತರ ಕರ್ಣಾಟಕದಲ್ಲಿ ಕರಿಯ ಮಣ್ಣಿನ ಎರೆ ಪ್ರದೇಶವು ಹೆಚ್ಚಾಗಿದೆ. ಅದರ ರಚನೆಯು ವಿಚಿತ್ರವಾಗಿದೆ. ಬಹುಕಾಲದ ಹಿಂದೆ—ಹಿಮಾಲಯಾ ಪರ್ವತ ಗಳು ಹುಟ್ಟಿಬರುವುದಕ್ಕೂ ಮುಂಚೆ—ದಖ್ಖ ಪ್ರಸ್ಥಭೂಮಿಯ ವಾಯವ್ಯ ಭಾಗ ದಲ್ಲಿ, ಎಂದರೆ ಉತ್ತರ ಕರ್ಣಾಟಕ, ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶ ಗಳಲ್ಲಿ ಭೂಮಿಯು ಅನೇಕ ಕಡೆ ಬಿರುಕುಬಿಟ್ಟು, ಶಿಲಾರಸವು ಬುಸುಬುಸನೆ ಉಕ್ಕಿ ಬಂದು ಭೂಮಿಯ ಮೇಲೆಲ್ಲಾ ಹರಡಿಕೊಂಡಿತು. ಬೆಟ್ಟಗುಡ್ಡಗಳ ಮೇಲೂ ಕಾಣಿಸಿಕೊಂಡಿತು. ಹೊರಹೊಮ್ಮಿದೊಡನೆಯೇ ಈ ಶಿಲಾರಸವು ಬಿಸಿಲು ಮಳೆ ಗಾಳಿಗಳ ಹೊಡೆತಕ್ಕೆ ಸಿಕ್ಕಿ ಈಗಿನ ಕರಿಯಮಣ್ಣಿನ ಎರೆಯ ಪ್ರದೇಶವಾಗಿದೆ ಯೆಂದು ಶಾಸ್ತ್ರಜ್ಞರು ಹೇಳುತ್ತಾರೆ.

ಈ ಎರೆಭೂಮಿ ಬಹು ಫಲವತ್ತಾದ ಜಿಗಟು ಪ್ರದೇಶ. ಮಳೆಯು ಬಂದಾಗ ಈ ಭೂಮಿಯು ನೀರನ್ನು ಚೆನ್ನಾಗಿ ಹೀರಿ ಬಹು ಮೆದುವಾಗುವುದು. ಇಂಗಿದ ನೀರು ಬಹಳ ಆಳದವರೆಗೂ ಇಳಿದುಹೋಗುವುದು. ಭೂಮಿಯು ಮೇಲೆ ಹೆಪ್ಪು ಕಟ್ಟಿಬಿಡುವುದರಿಂದ, ಇಂಗಿದ ನೀರು ಬೇಗನೆ ಆವಿಯಾಗುವುದಿಲ್ಲ. ಪೈರನ್ನು ಇಟ್ಟಾಗ ಅವುಗಳ ಬೇರಿಗೆ ನೀರನ್ನು ತಡೆದು ನಿಲ್ಲಿಸಿಕೊಂಡಿರುವ ಭೂಮಿಯು ನಿಧಾನವಾಗಿ ಊಡುವುದು. ಹೀಗಿರುವುದರಿಂದ ಉತ್ತರ ಕರ್ಣಾಟಕದಲ್ಲಿ ಈ ಭೂಮಿಯು ಇರುವ ಕಡೆ ಒಂದೆರಡು ಹದ ಮಳೆಯಾದರೂ ಸಾಕು, ಹುಲುಸಾದ ಬೆಳೆಯನ್ನು ಬೆಳೆಯಬಹುದು.

ದಕ್ಷಿಣ ಕರ್ನಾಟಕದಲ್ಲಿ ಭೂಮಿಯು ಕೆಂಪು ಮಣ್ಣಿನಿಂದ ಕೂಡಿದೆ. ನರಜು ಪ್ರದೇಶ. ನೀರನ್ನು ಹೀರುವುದೂ ಕಡಮೆ, ಹೀರಿದರೂ ಆವಿಯ ರೂಪದಲ್ಲಿ ಕಳೆದು ಕೊಳ್ಳುವುದೂ ಬೇಗ. ಒಳ್ಳೆ ಬೆಳೆಗಳನ್ನು ತೆಗೆಯಲು ಮಳೆ ಹೆಚ್ಚಾಗಿ ಬೇಕಾಗು ವುದು.

## ೩. ವಾಯುಗುಣ

ಕರ್ಣಾಟಕವು ಉಷ್ಣವಲಯದ "ಸವನ್ನ" ಪ್ರದೇಶದಲ್ಲಿದೆ. ವರ್ಷದ ಸರಾಸರಿ ತಾಪವು ೭೫° ಫ್ಯಾ. ತೀರಪ್ರದೇಶದಲ್ಲಿ ತಾಪದ ಸಮಧಾತುತ್ವವು ಕಂಡುಬರುತ್ತದೆ. ಎಂದರೆ, ಬೇಸಗೆಯ ತಾಪಕ್ಕೂ ಚಳಿಗಾಲದ ತಾಪಕ್ಕೂ ಹೆಚ್ಚು ವ್ಯತ್ಯಾಸವಿರುವುದಿಲ್ಲ. ತೀರದ ಜನರಿಗೆ ಹೆಚ್ಚು ಬಟ್ಟೆಗಳ ಆವಶ್ಯಕತೆ ಯಿಲ್ಲ.

ಪ್ರಸ್ಥಭೂಮಿಯ ಮೇಲೆ, ಒಳನಾಡಿನಲ್ಲಿ, ತಾಪದ ವೈಪರೀತ್ಯವು ಕಂಡು ಬರುತ್ತದೆ; ಎಂದರೆ ಬೇಸಗೆಯ ತಾಪಕ್ಕೂ ಚಳಿಗಾಲದ ತಾಪಕ್ಕೂ ಹೆಚ್ಚು ವ್ಯತ್ಯಾಸವು ಕಂಡುಬರುತ್ತದೆ. ಉತ್ತರ ಕರ್ಣಾಟಕದಲ್ಲಿ ಬೇಸಗೆಯ ಬೇಗೆಯು ಬಹಳ. ದಕ್ಷಿಣ ಕರ್ಣಾಟಕವು ಹೆಚ್ಚು ಎತ್ತರವಿರುವುದರಿಂದ ಬೇಸಗೆಯ ಬೇಗೆಯು ಸ್ವಲ್ಪ ಕಡಮೆಯಾಗಿರುವುದು.

ಬೇಸಗೆಯ ಬೇಗೆಯನ್ನು ಕಳೆದುಕೊಳ್ಳಲು, ನೀಲಗಿರಿ, ನಂದಿ, ಚಂದ್ರ ದ್ರೋಣವೆಂಬ (ಬಾಬಾಬುಡನ್) "ಮಲೆವೀಡು" ಗಳಿವೆ. ಪೂರ್ವ ಪಶ್ಚಿಮ ಘಟ್ಟಗಳು ಇಂತಹ ಇನ್ನೂ ಅನೇಕ ಮಲೆವೀಡುಗಳಿಗೆ ಎಡೆಮಾಡಿಕೊಡಬಲ್ಲವು.

### ಗಾಳಿ ಮತ್ತು ಮಳೆ

ಕರ್ಣಾಟಕವು ಈಶಾನ್ಯ ವಾಣಿಜ್ಯ ಸಹಾಯಕ ಮಾರುತಗಳಿಗೆ ಒಳಪಟ್ಟಿದೆ. ಇವು ಈಶಾನ್ಯ ದಿಕ್ಕಿನಿಂದ ಮೆಲ್ಲನೆ* ಬೀಸುವ ಭೂಮಾರುತಗಳು ಮತ್ತು ಶೀತ ಅಕ್ಷಾಂಶಗಳಿಂದ ಉಷ್ಣ ಅಕ್ಷಾಂಶಗಳ ಕಡೆಗೆ ಬರುತ್ತಿರುವಂತಹವು. ಹೀಗಿರು ವುದರಿಂದ ಮೋಡಗಳೆದ್ದು ಮಳೆ ಬರುವ ಸಂಭವವಿಲ್ಲ. ಆಕಾಶವು ನಿರ್ಮಲವಾಗಿರು ವುದು. ಈ ಪರಿಸ್ಥಿತಿಯು ಚಳಿಗಾಲವಾದ ಡಿಸೆಂಬರಿನಿಂದ ಏಪ್ರಿಲ್‌ವರೆಗೆ ಎದ್ದು ಕಾಣುತ್ತಿರುವುದು. ತಾಪವು ಹಿತಕರವಾಗಿರುವುದು. ಪ್ರಯಾಣ ಪ್ರವಾಸಗಳಿಗೂ, ಮೇಳ ಜಾತ್ರೆಗಳಿಗೂ ತಕ್ಕ ಕಾಲವಾಗಿರುತ್ತದೆ.

ಏಪ್ರಿಲ್-ಮೇ ವೇಳೆಗೆ ಉತ್ತರಾಯಣವನ್ನು ಕೈಗೊಂಡಿರುವ ಸೂರ್ಯನು ಸಮಭಾಜಕವೃತ್ತವನ್ನು ದಾಟಿ ಕರ್ಣಾಟಕದ ನೆತ್ತಿಯ ಮೇಲೆ ಬಂದಿರುವನು. ಅಲ್ಲಲ್ಲೇ ಸ್ಥಳೀಯವಾಗಿ ಬೇಸಗೆಯ ಮೋಡಗಳೆದ್ದು ಪರಿಸರಣ ರೀತಿಯ† ಸ್ವಲ್ಪ ಮಳೆಯಾಗುವುದು. (ಅಶ್ವಿನಿ-ಭರಣಿ ಮಳೆಗಳು)

---

* ಘಂಟೆಗೆ ೧೦-೧೫ ಮೈಲಿಗಳ ವೇಗ.

† ನೆಲವು ಕಾದಾಗ, ವಾಯುವೂ ಕಾದು, ನೀರನ್ನು ಹೆಚ್ಚಾಗಿ ಹೀರಿಕೊಂಡು ಮೇಲ ಕ್ಕೇರುವುದು. ಏರಿ ತಣ್ಣಗಾದಾಗ ಮೋಡಗಳೆದ್ದು ಮಳೆ ಬರುವುದು.

ಸೂರ್ಯನು ಉತ್ತರಕ್ಕೆ ಮುಂದುವರಿದು ಜೂನ್ ೨೧ರ ವೇಳೆಗೆ ಭಾರತದ ಮಧ್ಯಭಾಗದಲ್ಲಿ ಹಾದುಹೋಗುತ್ತಿರುವ ಕರ್ಕಾಟಕ ಸಂಕ್ರಾಂತಿವೃತ್ತದ ಮೇಲಕ್ಕೆ ಬಂದಿರುವನು. ಅಂದಿಗೆ ಉತ್ತರಾಯಣವು ಕೊನೆಗೊಂಡು ದಕ್ಷಿಣಾಯನವು ಪ್ರಾರಂಭವಾಗುವುದು. ಇಡೀ ಭಾರತವೇ ಸೂರ್ಯನ ನೇರವಾದ ಪ್ರಖರ ಕಿರಣಗಳಿಗೆ ಒಳಪಟ್ಟು ಬೆಂದು ಬೆಂಗಾಡಾಗಿ ಹೋಗಿರುವುದು. ಕೆರೆ ಕಟ್ಟೆಗಳು ಒಣಗಿ ಹೋಗಿರುವುವು. ಜೀವರಾಶಿಯೇ ಮಳೆಗೆ ಹಾತೊರೆಯುತ್ತಿರುವುದು. (ನಕ್ಷೆ ೫)

ಈ ವೇಳೆಗೆ ಸರಿಯಾಗಿ ಭಾರತದ ವಾತಾವರಣದಲ್ಲಿ ಒಂದು ದೊಡ್ಡ ಕ್ರಾಂತಿಯೇ ಏರ್ಪಡುವುದು. ದೇಶದ ಮೇಲೆ ವಾಯುಮಂಡಲದ ಒತ್ತಡವು ಕಡಮೆಯಾಗುವುದರಿಂದ ಸಾಮಾನ್ಯವಾಗಿ ಬೀಸುತ್ತಿರುವ ಈಶಾನ್ಯ ಗಾಳಿಗಳೂ ಅಲ್ಲಿಯೇ ಅಡಗಿ ಹೋಗುವುವು. ಅದೇ ಸಮಯದಲ್ಲಿ ದಕ್ಷಿಣಾರ್ಧಗೋಳದ ಆಗ್ನೇಯ ಮಾರುತಗಳು ಸಮಭಾಜಕವೃತ್ತವನ್ನು ದಾಟಿ, ಉತ್ತರಾರ್ಧಗೋಳಕ್ಕೆ ಬಂದಿರುವುದರಿಂದ, ತಮ್ಮ ಬಲಗಡೆಗೆ ತಿರುಗಿ (ಮಾನ್‌ಸೂನ್) ಮುಂಗಾರು ಗಾಳಿಗಳೆಂದೆನಿಸಿಕೊಂಡು ನೈರುತ್ಯ ದಿಕ್ಕಿನಿಂದ ಭಾರತದೊಳಕ್ಕೆ ಬೀಸುವುವು.

ಭಾರತದ ಸನ್ನಿವೇಶದ ಭಾಗ್ಯ :—ಭಾರತವು ದಕ್ಷಿಣಕ್ಕೆ ೮° ಅಕ್ಷಾಂಶದ ವರೆವಿಗೂ ಚಾಚಿಕೊಂಡಿರುವ ಪರ್ಯಾಯದ್ವೀಪವಾದ್ದರಿಂದ ಮೂರು ಕಡೆ ವಿಶಾಲವಾದ ಜಲಭಾಗಗಳಿವೆ. ಉತ್ತರದ ಎಲ್ಲೆಯಲ್ಲಿ ಅಗಾಧವಾದ ಹಿಮಾಲಯಾ ಪರ್ವತಸ್ತೋಮಗಳಿವೆ. ಈ ಜಲರಾಶಿ—ಈ ಪರ್ವತ ಸ್ತೋಮ—ಇವುಗಳ ಹೊಂದಾಣಿಕೆಯಿಂದ ಭಾರತದಲ್ಲಿ ಮಾನ್‌ಸೂನ್ ಗಾಳಿಗಳು ಬಲಯುತವಾಗಿ, ಹೆಚ್ಚಾಗಿ ಮಳೆಯನ್ನು ತರುವುವು.

ಬೇಸಗೆಯಲ್ಲಿ ದೇಶದ ಮೇಲೆ ಒತ್ತಡವು ಕಡಮೆಯಾಗಿರುವಾಗ, ಉತ್ತರದ ಶೀತಮಾರುತಗಳು ಬರದಂತೆ ಹಿಮಾಲಯಾ ಪರ್ವತಗಳು ತಡೆದುಬಿಡುತ್ತವೆ. ಹಿಮಾಲಯಗಳಿರದೆ ಶೀತಮಾರುತಗಳು ಬಂದಿದ್ದರೆ, ದಕ್ಷಿಣದ ಮಾನ್‌ಸೂನ್ ಗಾಳಿಗಳು ಈಗಿನ ಹಾಗೆ ರಭಸವಾಗಿ ಬೀಸುತ್ತಿರಲಿಲ್ಲ. ದೇಶದಲ್ಲೆಲ್ಲಾ ಮಳೆಯನ್ನು ಹರಡುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಎರಡನೆಯದಾಗಿ, ದಕ್ಷಿಣದಲ್ಲಿ ಹಿಂದೂ ಮಹಾಸಾಗರವಿರುವುದರಿಂದ, ಉಷ್ಣವಲಯದ ಮಾನ್‌ಸೂನ್ ಗಾಳಿಗಳು ಈ ಜಲರಾಶಿಯ ಮೇಲೆ ೩-೪ ಸಾವಿರ ಮೈಲಿಗಳ ಪ್ರಯಾಣಮಾಡಿ ನೀರನ್ನು ಚೆನ್ನಾಗಿ ಹೀರಿಕೊಂಡು ಬಂದಿರುವುವು.

ಪ್ರತಿ ವರ್ಷವೂ ಜೂನ್ ೩-೪ನೇ ತಾರೀಖಿಗೆ ಸರಿಯಾಗಿ, ಮಾನ್‌ಸೂನ್ ಗಾಳಿಗಳು ಕರ್ಣಾಟಕದ ಪಶ್ಚಿಮತೀರಕ್ಕೆ ಮೋಡಗಳನ್ನು ಹೊತ್ತುಬರುವುವು. ಆ ಕಾಲದ ಪ್ರಕೃತಿಯ ಪರಿಸ್ಥಿತಿಯ ಪ್ರಾಚೀನ ವರ್ಣನೆಯೊಂದು ಹೀಗಿದೆ:

ಋಗ್ವೇದದಲ್ಲಿ ಇಂದ್ರ, ವೃತ್ರಾಸುರರ ಕಥೆ

ದೇವಲೋಕದ ಹಸುಗಳು ಮೇವಿಗೆ ಹೋಗಿ ಸಂಜೆ ಮನೆಗೆ ಬರುತ್ತಿವೆ. ದಾರಿಯಲ್ಲಿ ವೃತ್ರಾಸುರನು ಅವುಗಳನ್ನು ಅಡ್ಡಗಟ್ಟಿ, ತನ್ನ ಪರ್ವತದ ಗುಹೆಗಳಿಗೆ ಒಯ್ದು ಬಚ್ಚಿಡುವನು. ಹಸುಗಳು ಸಂಜೆಯ ವೇಳೆಗೆ ಬಾರದಿರಲು ದೇವ

ಲೋಕದಲ್ಲಿ ಹಾಹಾಕಾರವು ಏಳುವುದು. ಇಂದ್ರನಿಗೆ ದೂರು ಹೋಗುವುದು. ಇಂದ್ರನು ಈ ಲೋಕಕಂಟಕತನಕ್ಕೆ ಕುಪಿತನಾಗಿ ರೋಷಾವೇಶದಿಂದ ಬಂದು ಬೆಟ್ಟಗಳಲ್ಲಿ ಅಡಗಿಕೊಂಡಿರುವ ವೃತ್ರಾಸುರನನ್ನು ಹುಡುಕಿ, ಹೊರಗೆಡಹಿ, ವಜ್ರಾಯುಧದಿಂದ ಅವನನ್ನು ಸಂಹರಿಸಿ, ಬಂಧನದಲ್ಲಿರುವ ಹಸುಗಳನ್ನು ಬಿಡಿಸುವನು. ಈ ಆನಂದದ ಸಮಯದಲ್ಲಿ ಲೋಕಕಲ್ಯಾಣಕ್ಕೋಸ್ಕರ ಅವು ಅಮೃತವನ್ನು ಕರೆಯುವುವು.

ಈ ವರ್ಣನೆಯು ಪಶ್ಚಿಮ ಕರಾವಳಿಯ ಕಾರ್ಗಾಲದ ವೈಭವಕ್ಕೆ ಸರಿಹೋಲುವುದು. ಸಮುದ್ರದ ಕಡೆಯಿಂದ ಮೋಡಗಳು ಬರುತ್ತಿದ್ದರೆ ದೇವಲೋಕದ ಹಸುಗಳೋ ಇವು ಎಂಬಂತೆ ಇರುವುವು. ಆ ಕಾಲದ ಗಾಳಿ ಮತ್ತು ಗಾಳಿಯು ಹೊಡೆದೆಬ್ಬಿಸಿದ ಸಮುದ್ರದ ಮೊರೆ, ಇವುಗಳ ಮತ್ತೊಂದು ಆಧುನಿಕ ವರ್ಣನೆಯು ಹೀಗಿದೆ:—

ಬರಲಿದೆ ! ಅಹಹಾ ! ದೂರದಿ ಬರಲಿದೆ
ಬುಸುಗುಟ್ಟುವ ಪಾತಾಳದ ಹಾವೊ ?
ಹಸಿವಿನ ಭೂತವು ಕೂಯುವ ಕೂವೊ ?
ಹೊಸತಿಯ ಕಾಲನ ಕೋಣನ—ಓವೋ !
ಉಸಿರಿನ ಸುಯ್ಯೋ—ಸೂಸೂಕರಿಸುತ

*     *     *     *

ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳಿಗೆ ಬಾಳಿಗೆ ಎರಗಿಸಿ,
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್,
ಕುಡಿ ನೀರನು ಒಣಗಿದ ನೆಲ ಕೆರೆವೋಲ್
ಬಂತೈ ಬೀಸುತ ! ಬೀಸುತ ಬಂತೈ !
ತೆಂಕಣಗಾಳಿಯು ಕೊಂಕಣ ಸೀಮೆಗೆ
ಬಂತೈ ! ಬಂತೈ ! ಬಂತೈ ! ಬಂತೈ !

—ಪಂಜೆ ಮಂಗೇಶರಾವ್

ಮಾನ್‌ಸೂನ್ ಗಾಳಿಗಳು ಕಿರಿದಾದ ತೀರಪ್ರದೇಶವನ್ನು ದಾಟಿದ ಕೂಡಲೇ ಗೋಡೆಯಂತಿರುವ ಘಟ್ಟಗಳನ್ನು ಏರಬೇಕಾಗುವುದು. ಗಾಳಿಗಳು ಬಹು ರಭಸವಾಗಿ ಬೀಸುತ್ತಿರುವುದರಿಂದಲೇ ಮೋಡಗಳು ಏದುತ್ತಾ ಏಳುವುವು. ಏರುವಾಗ ತಣ್ಣಗಾಗಿ ವಿಪುಲವಾದ ಮಳೆಯನ್ನು ಬಿಟ್ಟುಕೊಡುವುವು ; ಮತ್ತು ಮೋಡಗಳ ವಿದ್ಯುಚ್ಛಕ್ತಿಯ ಮೊತ್ತವು ಹೆಚ್ಚಾಗಿ, ಆಗಾಗ "ಛಿಳಿರೆಂದು ಬೀಳುವುದು ಸಿಡಿಲು ಧರೆಗೆ."

ಘಟ್ಟಗಳನ್ನು ದಾಟಿ ಪೂರ್ವಕ್ಕೆ ಬಂದ ಹಾಗೆಲ್ಲಾ ಭೂಮಿಯ ಇಳಿಜಾರನ್ನು ಅನುಸರಿಸಿ ಗಾಳಿಗಳೂ ಕೆಳಕ್ಕೆ ಇಳಿಯುವುವು. ಇಳಿಯುವಾಗ ವಾಯುಮಂಡಲದ ತಾಪವು ಏರಿ ಮಳೆ ಬಹಳ ಮಟ್ಟಿಗೆ ಕಡಿಮೆಯಾಗುವುದು.

ಸಾಮಾನ್ಯವಾಗಿ ದೇಶದ ಮುಂಗಾರು ಮಳೆಯ ರೀತಿಯನ್ನು ತಿಳಿಯುವುದಾದರೆ ಪಶ್ಚಿಮ ತೀರದಲ್ಲಿ ಮತ್ತು ಪಶ್ಚಿಮ ಘಟ್ಟಗಳ ಮೇಲೆ ಮಳೆ ವಿಪರೀತ.

ಮಧ್ಯಭಾಗದಲ್ಲಿ ಮಳೆ ಕಡಮೆ. ಪೂರ್ವಘಟ್ಟಗಳನ್ನು ಮತ್ತೆ ಏರುವ ಕಡೆ ಮಧ್ಯ ಭಾಗಕ್ಕಿಂತ ಸ್ವಲ್ಪ ಮಳೆ ಹೆಚ್ಚು. ಉತ್ತರ ಕರ್ಣಾಟಕದಲ್ಲಿ ಪಶ್ಚಿಮ ಘಟ್ಟಗಳನ್ನು ದಾಟಿ ಪೂರ್ವಕ್ಕೆ ಬಂದರೆ ಭೂಮಿಯು ಒಂದೇ ಸಮನಾಗಿ ಇಳಿಜಾರಾಗಿರುವುದ ರಿಂದಲೂ, ಬೆಟ್ಟಗುಡ್ಡಗಳನ್ನು ಹೊಂದದೇ ಇರುವುದರಿಂದಲೂ ಮಳೆಯು ತೀರ ಕಡಮೆಯಾಗಿ ೧೦—೧೫ ಅಂಗುಲಗಳಷ್ಟು ಬರುವುದು. ದಕ್ಷಿಣ ಕರ್ಣಾಟಕವು ಹೆಚ್ಚು ಎತ್ತರವಾಗಿರುವುದರಿಂದಲೂ, ಬೆಟ್ಟಗುಡ್ಡಗಳಿಂದ ಕೂಡಿರುವುದರಿಂದಲೂ ಉತ್ತರಕ್ಕಿಂತ ಮಳೆಯು ೨೦—೩೦ ಅಂಗುಲದಷ್ಟು ಸ್ವಲ್ಪ ಹೆಚ್ಚಾಗಿ ಬರುವುದು.

ಈ ಮುಂಗಾರು ಗಾಳಿಗಳು ಜೂನಿನಿಂದ ಅಕ್ಟೋಬರ್ ವರೆಗೆ ಬೀಸುತ್ತಿರು ವುವು. ಈ ವೇಳೆಗೆ ದಕ್ಷಿಣಾಯನವನ್ನು ಕೈಕೊಂಡಿರುವ ಸೂರ್ಯನು ಸಮ ಭಾಜಕ ವೃತ್ತವನ್ನು ದಾಟಿ ಹೋಗಿರುವನು. ಉತ್ತರ ಹಿಂದೂಸ್ಥಾನದಲ್ಲಿ ಚಳಿಯು ತಲೆದೋರಿ ವಾಯುಮಂಡಲದ ಒತ್ತಡವು ಹೆಚ್ಚಾಗಿ ಮುಂಬರುತ್ತಿರುವ ಮಾನ್ ಸೂನ್ ಗಾಳಿಗಳಿಗೆ ದೇಶದೊಳಕ್ಕೆ ಬರಲು ಅಡ್ಡಿಯಾಗುವುದು. ಆ ವೇಳೆಗೆ ಅಡಗಿಹೋಗಿದ್ದ ಈಶಾನ್ಯಮಾರುತಗಳು ತಲೆಎತ್ತಿಕೊಂಡು ತಮ್ಮ ಹಕ್ಕನ್ನು ಮೆಲ್ಲ ಮೆಲ್ಲನೆ ಸ್ಥಾಪಿಸಿಕೊಳ್ಳುತ್ತಿರುವುವು. ಹಿಮ್ಮೆಟ್ಟಿ ಬಂದ ಮುಂಗಾರು ಗಾಳಿಗಳು ಈಶಾನ್ಯ ಮಾರುತಗಳನ್ನೇ ಅನುಸರಿಸಿ ಬರುವುವು. ಇವೇ ಹಿಂಗಾರು ಗಾಳಿಗಳು. ಈ ಸಂಧಿಸಮಯದಲ್ಲಿಯೂ ಗುಡುಗು ಮಿಂಚುಗಳು ಕಾಣಿಸಿಕೊಳ್ಳುವುವು. ಈಶಾನ್ಯದಿಂದ ಬರುವ ಗಾಳಿಗಳಾದ್ದರಿಂದ ಕರ್ಣಾಟಕದ ಪೂರ್ವಭಾಗಕ್ಕೆ ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಸ್ವಲ್ಪ ಮಳೆಯಾಗುವುದು.

ಕರ್ಣಾಟಕವು ಬದುಕುವುದು ಈ ಮುಂಗಾರು ಹಿಂಗಾರು ಮಳೆಗಳಿಂದಲೇ.

ಮುಂಗಾರು, ಬೇಸಗೆಯಲ್ಲಿ ಬೆಂದು ತಪ್ತವಾಗಿ ಚಾತಕ ಪಕ್ಷಿಯಂತೆ ಬಾಯಿಬಿಟ್ಟುಕೊಂಡು ಮೋಡಗಳನ್ನೇ ನೋಡುತ್ತಿರುವ ಕರ್ಣಾಟಕಕ್ಕೆ ನೀರೆರೆದು ಭೂಮಿಯನ್ನು ತಂಪಾಗಿ ಮಾಡಿ ಒಣಗಿ ಸೊರಗಿ ಹೋಗಿರುವ ಹುಲ್ಲುಗಾವಲು ಗಳನ್ನು ಪುನಃ ಹಚ್ಚಗೆ ಮಾಡುವುದು. ಇದರ ಒಂದೆರಡು ಮಳೆಗಳಾದ ತತ್ ಕ್ಷಣವೇ ಇಡೀ ಕರ್ಣಾಟಕವೇ ಎದ್ದು ಉತ್ತು ಬಿತ್ತುವುದರಲ್ಲಿ ತ್ವರೆಗೊಂಡು, ದೇಶದ ಮುಖ್ಯ ಜೀವನಾಧಾರಗಳಾದ ರಾಗಿ, ಜೋಳಗಳನ್ನೂ ಇವುಗಳೊಂದಿಗೆ ದ್ವಿದಳ ಧಾನ್ಯಗಳನ್ನೂ ಬೆಳೆಯುವುದು.

ಹಿಂಗಾರು, ಪೂರ್ವ ಪ್ರದೇಶಗಳಿಗೆ ಮಳೆ ತರುವುದು. ಈ ಮಳೆಯಿಂದಲೇ ಬೈಲುಸೀಮೆಯಲ್ಲಿ ಕೆರೆ ಕಟ್ಟೆಗಳು ತುಂಬಬೇಕಾದರೆ. ಮುಂಗಾರಿನಷ್ಟು ಮಳೆ ಇದರಲ್ಲಿ ಆಗದೇ ಹೋದರೂ, ಇದು ಮುಂದೆ ಬರುವ ಬಿಸಿಲುಕಾಲ ಕಳೆಯು ವವರೆಗೆ ಕೆರೆ ಕಟ್ಟೆಗಳಲ್ಲಿ ನೀರಿರುವಂತೆ ಮಾಡುವುದಕ್ಕೂ ಹುಲ್ಲುಗಾವಲುಗಳು ಹಚ್ಚಗಿರುವಂತೆ ಮಾಡುವುದಕ್ಕೂ ಬಹು ಸಹಕಾರಿಯಾಗಿರುತ್ತದೆ.

ಈ ಮುಂಗಾರು ಹಿಂಗಾರುಗಳು, ಕ್ಲಿಪ್ತ ಕಾಲಗಳಲ್ಲಿ ಬರುವುದಾದರೂ, ನೆಚ್ಚಿನವುಗಳಲ್ಲ. ಒಂದೊಂದು ವರ್ಷ ಬಲಹೀನವಾಗಿದ್ದು ನಿರೀಕ್ಷಿಸಿರುವಷ್ಟು ಮಳೆ ಬರುವುದಿಲ್ಲ. ಕೆಲವು ವರ್ಷಗಳಲ್ಲಿ ಕೊಚ್ಚಿಕೊಂಡು ಹೋಗುವಷ್ಟು ಮಳೆ. ಈ ಮಳೆಗಳ ಭವಿಷ್ಯವನ್ನು ತಿಳಿಯಹೇಳಲು ಸಾಕಷ್ಟು ವಿಷಯ ಸಂಗ್ರಹವಾಗಿಲ್ಲ.

ಆದರೆ ಹಿಮಾಲಯಗಳ ಮೇಲೆ ಯಾವ ವರ್ಷ ಹಿಮವು ಹೆಚ್ಚಾಗಿ ಬೀಳುವುದೋ ಆ ವರ್ಷ ಮಾನ್‌ಸೂನ್ ಗಾಳಿಗಳು ಬಲಹೀನವಾಗಿದ್ದು ಮಳೆ ಬರುವುದು ಕಡಮೆ ಎಂಬ ಸೂಚನೆಯು ಹೊರ ಹೊಮ್ಮಿದೆ. ದುರ್ದೈವದಿಂದ ಈ ಮಳೆಗಳು ಬಾರದೇ ಇದ್ದರೆ ದೇಶದ ಸೆರಗಿನಲ್ಲಿ ಕ್ಷಾಮ ದೇವತೆಯನ್ನು ಕಟ್ಟಿಟ್ಟಂತೆಯೇ.

## ೪. ನದಿಗಳು

ಪಶ್ಚಿಮಘಟ್ಟಗಳು ಒಂದು ದೊಡ್ಡ ಜಲವಿಭಾಗಸ್ಥಾನ. ಅಲ್ಲಿಂದ ಪಶ್ಚಿಮಕ್ಕೂ ಪೂರ್ವಕ್ಕೂ ಅನೇಕ ನದಿಗಳು ಹುಟ್ಟಿ ಹರಿಯುವುವು.

ಪಶ್ಚಿಮಕ್ಕೆ ಹರಿಯುವ ನದಿಗಳು ಘಟ್ಟಗಳನ್ನು ಇಳಿದು ಕಿರಿದಾದ ತೀರ ಪ್ರದೇಶದಲ್ಲಿ ಹರಿದು ಬೇಗನೇ ಸಮುದ್ರವನ್ನು ಸೇರಿಬಿಡುವುವು. ಒಂದನ್ನೊಂದು ಸೇರಿ ದೊಡ್ಡ ನದಿಗಳಾಗಲು ಅವಕಾಶವಿಲ್ಲ. ಮಳೆಯೇ ಹೆಚ್ಚಾಗಿ ಬೀಳುವ ತೀರ ಪ್ರದೇಶದಲ್ಲಿ ಅವು ಹರಿಯುತ್ತಿರುವುದರಿಂದ ವ್ಯವಸಾಯಕ್ಕೆ ಉಪಯೋಗಿಸುವ ಅವಶ್ಯಕತೆಯಿಲ್ಲ. ಆದರೆ ಈ ನದಿಗಳು ಘಟ್ಟಗಳಿಂದ ಒಯ್ಯುವ ಮಣ್ಣನ್ನು ಗದ್ದೆಗಳಿಗೂ ತೋಟಗಳಿಗೂ ಉಪಯೋಗಿಸುತ್ತಾರೆ. ತೀರ ಪ್ರದೇಶದಲ್ಲಿ ದೋಣಿಯ ವ್ಯಾಪಾರಕ್ಕೆ ಅನುಕೂಲವಾಗಿವೆ. ಈ ನದಿಗಳು ಘಟ್ಟಗಳನ್ನು ಬಿಡುವಕಡೆ ಜಲಪಾತಗಳನ್ನು ಹೊಂದಿರುವುದರಿಂದ, ಇನ್ನು ಮುಂದೆ ವಿದ್ಯುಚ್ಛಕ್ತಿಯ ಉತ್ಪಾದನೆಯಲ್ಲಿ ಇವು ಅನುವಾಗಬಹುದು. ಇವುಗಳಲ್ಲೆಲ್ಲಾ ಶರಾವತಿಯು ಅದರ ಭವ್ಯ ಜಲಪಾತಗಳಿಗೂ, ವಿದ್ಯುಚ್ಛಕ್ತಿಯ ಉತ್ಪಾದನೆಗೂ ಪ್ರಸಿದ್ಧಿಯಾಗಿದೆ.

ಘಟ್ಟಗಳಿಂದ ಪೂರ್ವಕ್ಕೆ ಹರಿಯುವ ನದಿಗಳು ಮಳೆ ಕಡಮೆಯಾಗಿರುವ ಮಳೆಯ ನೆರಳಿನ ಪ್ರದೇಶಗಳಲ್ಲಿ ಹರಿದು ಲೋಕೋಪಕಾರಿಗಳಾಗಿವೆ. ಪ್ರಸ್ಥಭೂಮಿಯನ್ನು ಬಿಡುವ ಕಡೆಗಳಲ್ಲಿ ರಭಸವಾಗಿಯೋ ಧುಮುಕಿಯೋ ಮುಂದುವರಿಯುತ್ತವೆ. ಉತ್ತರದಲ್ಲಿ ಕೃಷ್ಣಾ, ದಕ್ಷಿಣದಲ್ಲಿ ಕಾವೇರೀ ಮುಖ್ಯನದಿಗಳು.

ಲೋಕದಮಾತೆ ಕಾವೇರಿಯ ವಿಚಾರವಾಗಿ—

ನೋಡು ಕಾವೇರಿಯು
ನಾಡಿನ ಜನರಿಗೆ
ಬೇಡಿದ ಫಲವನು
ನೀಡುತ ಪೊರೆವುದು

—ಎಂದು ಓದಿದ್ದೇವೆ. ಪೂರ್ವಕ್ಕೆ ಹರಿಯುವ ಎಲ್ಲ ನದಿಗಳಿಗೂ ಇದು ಅನ್ವಯವಾಗುತ್ತದೆ.

ಬಲ್ಲಾಳರಾಯನದುರ್ಗದಿಂದ ನಂದೀದುರ್ಗಕ್ಕೆ ಒಂದು ಗೆರೆಯನ್ನೂ, ಅದನ್ನು ಸಮಕೋಣದಲ್ಲಿ ಕತ್ತರಿಸುವ ಹಾಗೆ ಬೆಂಗಳೂರಿನ ನೇರದಲ್ಲಿ ಮತ್ತೊಂದು ಗೆರೆಯನ್ನೂ ಎಳೆದರೆ ಕರ್ಣಾಟಕದ ಮುಖ್ಯ ನದಿಗಳ ಜಲಾನಯನ ಪ್ರದೇಶಗಳನ್ನು ಬಿಡಿಸಿದಂತಾಗುತ್ತದೆ. (ನಕ್ಷೆ ೬)

ಅಡ್ಡಗೆರೆಯ ಜಲವಿಭಾಗಸ್ಥಾನದಿಂದ ಉತ್ತರಕ್ಕೆ ಕೃಷ್ಣಾನದಿಯ ಜಲಾನಯನ, ತುಂಗಭದ್ರಾ. ವೇದಾವತಿಗಳು ಕೂಡಿ ಕೃಷ್ಣೆಯನ್ನು ಕರ್ನೂಲಿನ ಹತ್ತಿರ

ಸೇರುವುವು. ಕೃಷ್ಣಾನದಿಯ ಇತರ ಉಪನದಿಗಳಲ್ಲಿ ಭೀಮಾ, ಘಟಪ್ರಭಾ, ಮಲಪ್ರಭಾ ಮುಖ್ಯವಾದುವು. ಜಲವಿಭಾಗ ಸ್ಥಾನದಿಂದ ದಕ್ಷಿಣಕ್ಕೆ ಕಾವೇರಿಯ ಜಲಾನಯನ. ಕಾವೇರಿಗೆ ಎಡಭಾಗದಿಂದ ಹೇಮಾವತಿ, ಶಿಂಷಾ, ಅರ್ಕಾವತಿ, ಬಲಭಾಗದಿಂದ ಲಕ್ಷ್ಮಣತೀರ್ಥ, ಕಪಿಲಾ, ಹೊನ್ನುಹೊಳೆ ಬಂದು ಸೇರುವುವು.

ನಂದೀಬೆಟ್ಟದಿಂದ ಉತ್ತರಕ್ಕೆ ಉತ್ತರ ಪಿನಾಕಿನಿ, ದಕ್ಷಿಣಕ್ಕೆ ದಕ್ಷಿಣ ಪಿನಾಕಿನಿ ನದಿಗಳು ಕರ್ಣಾಟಕದಲ್ಲಿ ಸ್ವಲ್ಪಭಾಗ ಹರಿದು ಆಂಧ್ರ ತಮಿಳು ನಾಡುಗಳಲ್ಲಿ ಮುಂದುವರಿದು ಸಮುದ್ರವನ್ನು ಸೇರುವುವು.

ಕರ್ಣಾಟಕದ ನದಿಗಳೆಲ್ಲವೂ ವೃಷ್ಟಿಪೋಷಿತಗಳು. ಮಳೆಗಾಲದಲ್ಲಿ ಉಕ್ಕಿ ಹರಿಯುವುವು. ಬೇಸಗೆಯಲ್ಲಿ ಕೆಲವು ಬತ್ತಿ ಹೋಗುವುವೆಂದೇ ಹೇಳಬಹುದು.

## ೫. ಬೆಳೆಗಳು

### ಸ್ವಾಭಾವಿಕ

ನಲವತ್ತು ಅಂಗುಲಕ್ಕಿಂತಲೂ ಮಳೆ ಹೆಚ್ಚಾದರೆ ಕಾಡುಗಳು ಪ್ರಾರಂಭವಾಗುವುವು. ಮಳೆ ಹೆಚ್ಚಾದಷ್ಟೂ ಕಾಡುಗಳ ದಟ್ಟತೆಯೂ ಹೆಚ್ಚು ವುದು. ಪಶ್ಚಿಮ ತೀರದಲ್ಲಿ ಮತ್ತು ಪಶ್ಚಿಮಘಟ್ಟಗಳ ಮೇಲೆ ನಿತ್ಯಹರಿದ್ವರ್ಣ ವನಗಳು ಕಂಡುಬರುವುವು. ಘಟ್ಟಗಳನ್ನು ಬಿಟ್ಟು ಪೂರ್ವಕ್ಕೆ ಸ್ವಲ್ಪ ಬರಲು ತೇಗದ ಮತ್ತು ಗಂಧದ ಮರಗಳಿರುವ ಕಾಡುಗಳು ಸಿಗುವುವು. ಮಧ್ಯಪ್ರದೇಶಕ್ಕೆ ಬರಲು ಕಾಡುಗಳು ಹಠಾತ್ತನೆ ಕೊನೆಗಾಣುವುವು. ಹುಲ್ಲಿನ ಮತ್ತು ಕುರುಚಲು ಗಿಡಗಳ ಪ್ರದೇಶವು ಪ್ರಾರಂಭವಾಗುವುದು. ಪೂರ್ವಘಟ್ಟಗಳು ಬೋಳಾಗಿಯೇ ಇವೆಯೆಂದು ಹೇಳಬಹುದು.

### ವ್ಯವಸಾಯದ ಬೆಳೆಗಳು

ಪಶ್ಚಿಮತೀರದಲ್ಲಿ ಭತ್ತ, ಕಬ್ಬು, ತೆಂಗು, ಅಡಿಕೆ, ಬಾಳೆ ಮುಖ್ಯ ಬೆಳೆಗಳು. ಮಲೆನಾಡಿನಲ್ಲಿ ಮೇಲಿನವುಗಳೊಂದಿಗೆ ಯಾಲಕ್ಕಿ ಮೆಣಸುಗಳನ್ನು ಬೆಳೆಯುವರು. ದಕ್ಷಿಣ ಕರ್ಣಾಟಕದ ಪಶ್ಚಿಮಘಟ್ಟದ ಕೆಲವು ಭಾಗಗಳಲ್ಲಿ ಕಾಫಿಯ ತೋಟ ಗಳನ್ನು ಅಭಿವೃದ್ಧಿಪಡಿಸಿದ್ದಾರೆ. ಮಧ್ಯ, ಪೂರ್ವಭಾಗಗಳಲ್ಲಿ ರಾಗಿ, ಜೋಳ ಮುಖ್ಯ ಬೆಳೆಗಳು. ಉತ್ತರ ಕರ್ಣಾಟಕದ ಎರೆ ಭೂಮಿಯಲ್ಲಿ ಹತ್ತಿಯನ್ನು ಬೆಳೆಯುವರು. ಚಳಿಗಾಲದಲ್ಲಿ ಗೋಧಿ ಬೆಳೆಯನ್ನು ಇಡುವರು. ಎಣ್ಣೆಯ ಬೀಜಗಳನ್ನು ಸಾಮಾನ್ಯವಾಗಿ ಎಲ್ಲಕಡೆಯಲ್ಲಿಯೂ ಬೆಳೆಯುವರು.

## ೬. ಖನಿಜಗಳು

ಕೋಲಾರ, ಬಳ್ಳಾರಿ ಜಿಲ್ಲೆಗಳಲ್ಲಿ ಚಿನ್ನವೂ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಹೊನ್ನಾವರದ ಹತ್ತಿರ ಕಬ್ಬಿಣವೂ,

ಶಿವಮೊಗ್ಗೆ, ಬಳ್ಳಾರಿಗಳಲ್ಲಿ ಮ್ಯಾಂಗನೀಸೂ, ಮೈಸೂರಿನಲ್ಲಿ ಕ್ರೋಮೈಟೂ ಸಿಗುವುವು.

### ಕೈಗಾರಿಕೆಗಳು

ಅಸಿದ್ಧ ವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ಮಾಡುವುದೇ ಕೈಗಾರಿಕೆಯ ಉದ್ದೇಶ. ಕೈಗಾರಿಕೆ ನಡೆಯಲು ಶಕ್ತಿವಿಶೇಷವು ಅತ್ಯವಶ್ಯಕ. ಕರ್ಣಾಟಕ ದಲ್ಲಿ ಕಲ್ಲಿದ್ದಲು, ಸೀಮೆಎಣ್ಣೆ ಸಿಗದೇ ಇದ್ದರೂ, ನದಿಗಳು ಪ್ರಸ್ಥಭೂಮಿಯನ್ನು ಬಿಡುವ ಕಡೆಗಳಲ್ಲಿ ಜಲಪಾತಗಳನ್ನು ಹೊಂದಿವೆ. ಈ ಸನ್ನಿವೇಶಗಳನ್ನು ಉಪ ಯೋಗಿಸಿಕೊಂಡು ವಿದ್ಯುಚ್ಛಕ್ತಿಯನ್ನು ವಿಶೇಷವಾಗಿ ಉತ್ಪಾದನೆ ಮಾಡಿಕೊಳ್ಳ ಬಹುದು. ಮೈಸೂರಿನ ಪ್ರಗತಿಗೆ ವಿದ್ಯುಚ್ಛಕ್ತಿಯೇ ಮುಖ್ಯ ಕಾರಣ. ಕರ್ಣಾಟಕದಲ್ಲಿ ಅಸಿದ್ಧ ವಸ್ತುಗಳು ಹೇರಳವಾಗಿ ಸಿಗುತ್ತವೆ. ಅಸಿದ್ಧವಸ್ತುಗಳು ಬರುವುದಕ್ಕೂ, ಸಿದ್ಧವಸ್ತುಗಳು ಹಂಚಿಹೋಗುವುದಕ್ಕೂ ರೈಲು, ರಸ್ತೆಗಳು ಇರಬೇಕು. ಕರ್ಣಾಟಕವು ಜನನಿಬಿಡವಾಗಿರುವ ಪ್ರದೇಶ; ಜನರಲ್ಲಿ ಕುಶಲತೆ ಇದೆ. ಇವೆಲ್ಲಕ್ಕೂ ಮೇಲಾಗಿ ಜನಸೇವೆಯನ್ನು ಕೈಕೊಂಡಿರುವ ಪ್ರಬಲವಾದ ಸರ್ಕಾರವಿದ್ದಲ್ಲಿ ಕೈಗಾರಿಕೆಗಳು ಅಭಿವೃದ್ಧಿಗೆ ಬರುವುವು.

### ರೈಲುಮಾರ್ಗ

ಕರ್ಣಾಟಕದಲ್ಲಿ ಮೀಟರ್‌ಗೇಜಿನ ರೈಲೇ ಹೆಚ್ಚಾಗಿರುವುದು. ದೇಶದ ಪ್ರಗತಿಗೆ ೧. ಚಾಮರಾಜನಗರ-ಸತ್ಯಮಂಗಲಂ, ೨. ಬೆಂಗಳೂರು-ಹೊಸೂರು, ೩. ಹಾಸನ-ಮಂಗಳೂರು ರೈಲುಗಳನ್ನು ಹಾಕುವುದು ಅತ್ಯವಶ್ಯಕ. ಇವುಗಳಲ್ಲಿ ಮುಖ್ಯವಾದುದು ಚಾಮರಾಜನಗರ-ಸತ್ಯಮಂಗಲಂ ರೈಲ್ವೆ. ಇದು ಆದಲ್ಲಿ ತಮಿಳುನಾಡಿಗೂ ಬೊಂಬಾಯಿಗೂ ಹತ್ತಿರವಾದ ಮತ್ತು ಸುಲಭವಾದ ಮಾರ್ಗ ವಾಗಿ, ಕರ್ಣಾಟಕದ ವ್ಯಾಪಾರವು ಅಭಿವೃದ್ಧಿ ಹೊಂದುವುದು. ಮೈಸೂರು ಪಟ್ಟಣವು ಕಳೆಕಟ್ಟಿಕೊಂಡು ಬೆಳೆಯುವುದು.

## ೭. ಜನಜೀವನ

ವ್ಯವಸಾಯವೇ ಮುಖ್ಯ ಜೀವನಾಧಾರವಾದ್ದರಿಂದ ಹೆಚ್ಚು ಜನರು (ಶೇಕಡ ೮೦ರಷ್ಟು) ಹಳ್ಳಿಗಳಲ್ಲಿದ್ದು ಜೀವನವನ್ನು ನಡೆಸುತ್ತಿದ್ದಾರೆ. ಹಳ್ಳಿಗಳನ್ನು ಕೇಂದ್ರಗಳನ್ನಾಗಿ ಮಾಡಿಕೊಂಡು, ಜೀವನವನ್ನು ಧರ್ಮನೀತಿಗಳ ತಳಹದಿಯ ಮೇಲೆ ನಿಲ್ಲಿಸಿ, ಎಲ್ಲ ರೀತಿಯಲ್ಲಿಯೂ ಸ್ವಾವಲಂಬನೆಯನ್ನೇ ಗುರಿಯಾಗಿಟ್ಟು ಕೊಂಡು ಬಂದಿರುವುದು ಭಾರತದ ವೈಶಿಷ್ಟ್ಯ. ಪರರ ಆಳ್ವಿಕೆಯಲ್ಲಿ ಜೀವನದ ಗುರಿಯೇ ತಪ್ಪಿಹೋಗಿ, ಪರಾವಲಂಬನೆಯು ಹೆಚ್ಚಾಗಿ, ದೇಶದ ಸಂಪತ್ತನ್ನು ಉತ್ಪಾದನೆ ಮಾಡುವ ಕಾರ್ಯಕ್ಕೆ ಧಕ್ಕೆ ಬಂದಂತಾಗಿದೆ. ವಿದ್ಯೆ ಕಲಿಯುವುದು ಪಟ್ಟಣಗಳನ್ನು ಸೇರಿ ಸುಖಜೀವನವನ್ನು ನಡೆಯಿಸುವುದಕ್ಕೋಸ್ಕರವೆಂದಾಗಿದೆ. ಈಚೀಚೆಗೆ ಹಳ್ಳಿಗಳ ಜನಸಂಖ್ಯೆಯು ಕಡಮೆಯಾಗುತ್ತಿದೆ. ಪಟ್ಟಣಗಳ ಜನ

ಸಂಖ್ಯೆಯು ಏರುತ್ತಿದೆ. ವಿದ್ಯಾವಂತರು, ತಿಳಿದಂತಹವರು ಹಳ್ಳಿಗಳನ್ನು ಬಿಡುತ್ತಿದ್ದರೆ ಹಳ್ಳಿಗಳು ಅಂಧಕಾರ ಕೂಪಗಳಲ್ಲಿಯೇ ಇರುವುವು. ಮತ್ತೊಂದು ಕಡೆ ಪಟ್ಟಣಗಳ ಸಮಸ್ಯೆಗಳೂ ಹೆಚ್ಚಾಗುವುವು. ನಮ್ಮ ಹಿರಿಯರು ಒಂದು ಕೆರೆ, ಕಟ್ಟೆ ಅಥವಾ ಕಾಲುವೆ, ಒಂದು ದೇವಸ್ಥಾನ ಇವುಗಳ ಸುತ್ತಲೂ ಹಳ್ಳಿಯ ಜೀವನವನ್ನು ಕಟ್ಟುತ್ತಿದ್ದರು. ದೇಶದಲ್ಲಿ ಕೆರೆಕಟ್ಟೆಗಳು ಎಷ್ಟಿವೆ, ನದಿಗಳಿಗೆ ಎಷ್ಟು ಅಣೆಕಟ್ಟುಗಳನ್ನು ಹಾಕಿ ಸಣ್ಣ ಸಣ್ಣ ಜಲಾಶಯಗಳನ್ನು ಏರ್ಪಡಿಸಿಕೊಂಡಿದ್ದರು ಎಂಬುದನ್ನು ನೋಡಿದರೆ ನಮ್ಮ ಜನರ ಸಾಹಸ, ಸಹಕಾರ, ಬುದ್ಧಿ ಚಾತುರ್ಯಗಳು ಎದ್ದು ಕಾಣುವುವು.

ದೇಶದ ಸಮಸ್ಯೆಗಳಲ್ಲಿ ಬಹು ಮುಖ್ಯವಾದುವು ಆಹಾರ ಮತ್ತು ಬಟ್ಟೆಯವು.

ಆಹಾರವನ್ನು ಹೆಚ್ಚಾಗಿ ಬೆಳೆಯಲು ನಮ್ಮ ಜನರ ಅನುಭವದೊಂದಿಗೆ ಆಧುನಿಕ ಶಾಸ್ತ್ರಜ್ಞಾನವು ಬೆರೆಯಬೇಕು. ಈ ಜ್ಞಾನವು ಜನರ ಬಾಗಿಲಿಗೆ ಹೋಗಿ ಬೀಳುವಂತಾಗಬೇಕು. ಇದು ಋಜುಮಾರ್ಗ.

ನಮ್ಮ ಜನರ ಜೀವನವನ್ನು ಪರಿಗಣಿಸಿದರೆ ಸಂಕ್ರಾಂತಿ ಹಬ್ಬದಿಂದ (ಜನವರಿ) ಮೂರು ತಿಂಗಳು ಕೆಲಸವಿಲ್ಲದ ಕಾಲ. ಯಾವ ಕೆಲಸವನ್ನು ಜನರಿಗೆ ಹಚ್ಚಿ ದೇಶದ ಸಂಪತ್ತನ್ನು ಹೆಚ್ಚಿಸಬೇಕೆಂಬುದೇ ಮುಖ್ಯ ಪ್ರಶ್ನೆ. ಪರಕೀಯರು ತಮ್ಮ ಆಳ್ವಿಕೆಯಲ್ಲಿ ಜನರ ಕೈಕಸಬನ್ನು ಕಿತ್ತು ದೇಶವನ್ನು ದಾರಿದ್ರ್ಯದಲ್ಲಿ ದೂಡಿದರು. ನವಕೋಟಿ ನಾರಾಯಣರು ಮೆರೆಯುತ್ತಿದ್ದ ದೇಶದಲ್ಲಿ ದರಿದ್ರ ನಾರಾಯಣರು ಅಲೆಯುತ್ತಿವರುರು. ದಾರಿದ್ರ್ಯವೇ ಎಲ್ಲ ಪಾಪಕ್ಕೂ ಮೂಲ ಕಾರಣವೆಂದು ಹೇಳುತ್ತಾರೆ. ವಾಸ್ತವವಾಗಿ ಅಂಧಕಾಸುರ, ನರಕಾಸುರರ ಸಂಹಾರವಾಗಬೇಕು.

ಆಹಾರೋತ್ಪಾದನೆಗೆ, ಕೈಕಸಬಿಗೆ, ತಕ್ಕ ಪ್ರೋತ್ಸಾಹವನ್ನು ಕೊಟ್ಟು ಜನರ ಜೀವನದ ಮಟ್ಟವನ್ನು ಏರಿಸುವುದಕ್ಕಿಂತ ಪ್ರಶಸ್ತ ಕಾರ್ಯ ಮತ್ತೊಂದಿಲ್ಲ.

---



ತುಂಗಾ ಜಲಾಶಯದ ಪ್ರವಾಹ



ಘಟಪ್ರಭಾ ಜಲಾಶಯದ ಎಡಪಕ್ಕದ ನಾಲೆ
(ಇದು ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಹರಿಯುತ್ತದೆ)

# ಕನ್ನಡ ನಾಡಿನ ಆದಿವಾಸಿಗಳು

ಲೇಖಕರು :
ಶ್ರೀಮಾನ್ ಡಿ. ಕೃಷ್ಣ ಐಯ್ಯಂಗಾರ್ ಅವರು, ಬೆಂಗಳೂರು

## ೧. ಆದಿವಾಸಿಗಳು ಯಾರು ?

ದಕ್ಷಿಣ ಭಾರತದಲ್ಲಿ ವಾಸಮಾಡುವ ಮಾನವ ಕುಲವನ್ನು ಮಾನವ ಶಾಸ್ತ್ರಜ್ಞರು, ಆದಿವಾಸಿಗಳು (Aborigines), ದ್ರಾವಿಡರು, ಆರ್ಯರು ಎಂದು ಮೂರು ಪಂಗಡಗಳಾಗಿ ವಿಂಗಡಿಸಿದ್ದಾರೆ. ಇತಿಹಾಸಕಾರರು ಆರ್ಯರ ಮತ್ತು ದ್ರಾವಿಡರ ವಿಷಯವಾಗಿ ಪರಿಶೋಧನೆ ನಡೆಸಿ ಗ್ರಂಥ ಪ್ರಕಟಣೆ ಮಾಡಿದರೇ ವಿನಹ, ದ್ರಾವಿಡರಿಗಿಂತ ಮುಂಚೆ ಇಲ್ಲಿ ವಾಸವಾಗಿದ್ದ ಜನರ ವಿಷಯವಾಗಿ ಬಹುಕಾಲ ಉಪೇಕ್ಷೆಯಿಂದ ಇದ್ದರು. ಇದಕ್ಕೆ ಮುಖ್ಯ ಕಾರಣ ಈ ಮೂಲ ನಿವಾಸಿಗಳು ಬೆಟ್ಟ, ಕಾಡು, ಗುಡ್ಡಗಳನ್ನು ಸೇರಿದ್ದುದಾಗಿರಬಹುದು. ದೇಶವನ್ನು ಆಕ್ರಮಿಸಿದ ಜನಾಂಗವು ಇವರನ್ನು ಮೂಲೆಗೊತ್ತಿರಬೇಕು. ಆದರೂ ಇವರು ಒಂದಾನೊಂದು ಕಾಲದಲ್ಲಿ ನಮ್ಮ ಭೂಮಿಯ ಯಜಮಾನರಾಗಿದ್ದುದು ನಿಜವಲ್ಲವೆ? ಅವರ ಸುಖ-ದುಃಖ, ಕಷ್ಟ-ನಷ್ಟ, ಚಲನ-ವಲನಗಳು ನಮ್ಮ ಚರಿತ್ರೆಯ ವಿಷಯವಾಗಬೇಡವೆ? ನಮ್ಮ ಮಧ್ಯೆ ಅವರು ವಾಸಿಸುತ್ತಿರುವಾಗ ಅವರನ್ನು ಅಲಕ್ಷ್ಯದಿಂದ ಕಾಣುವುದು ಸರಿಯೆ? ಅವರ ಮೂಲ, ವಂಶ, ಜೀವನ ಪದ್ಧತಿ—ಮುಂತಾದುವುಗಳನ್ನು ತಿಳಿಯಬೇಡವೆ? ಈ ದೃಷ್ಟಿಯಿಂದ ಪಾಶ್ಚಿಮಾತ್ಯ ಮಾನವ ಶಾಸ್ತ್ರಕಾರರು ಮೂಲ ನಿವಾಸಿಗಳಿದ್ದ ಸ್ಥಳಕ್ಕೆ ಹೋಗಿ ಪರಿಶೀಲನೆ ನಡೆಸಿ, ವಿಷಯ ಸಂಗ್ರಹ ಮಾಡಿ ಮಾರ್ಗದರ್ಶಕರಾಗಿದ್ದಾರೆ. ಶಾಸ್ತ್ರ ರೀತಿಯಲ್ಲಿ ಅವರ ಚರಿತ್ರೆ ಬರೆದು ಪ್ರಕಟಿಸಿದ್ದಾರೆ. ಆದಿವಾಸಿಗಳ ಹುಟ್ಟಿನ ಬಗೆ ಹೇಗೆ? ಅವರು ಕಾಡಿನಲ್ಲಿ ಏಕೆ ಉಳಿದರು? ಅವರ ಪೂರ್ವ ಚರಿತ್ರೆ ಏನು? —ಇವೇ ಮುಂತಾದ ಪ್ರಶ್ನೆಗಳಿಗೆ ವಿಮರ್ಶಕಾರರು ಸಮಂಜಸವಾದ ಉತ್ತರಗಳನ್ನು ಸಂಗ್ರಹಿಸಿ ಕ್ರೋಢೀಕರಿಸಿದ್ದಾರೆ. ಇಂತಹ ವಿಷಯ ಸಂಗ್ರಹಕ್ಕೆ ಆದಿವಾಸಿಗಳಲ್ಲಿ ವಂಶಪರಂಪರೆಯಾಗಿ ಬಂದ ಕೆಲವು ಕಥೆಗಳು ಸಹಾಯಕವಾಗಿವೆ.

## ೨. ಕನ್ನಡ ನಾಡಿನಲ್ಲಿ

ಮೈಸೂರು ಸಂಸ್ಥಾನದ ಬೆಟ್ಟ, ಗುಡ್ಡ, ಕಾಡುಗಳಲ್ಲಿ ವಾಸವಾಗಿರುವ ಇರುಳರು, ಕಾಡು ಕುರುಬರು, ಕಾಡು ಗೊಲ್ಲರು, ಹಸಲರು, ಮಲೇರು, ಬಿಳಿಗಿರಿ ರಂಗನ ಬೆಟ್ಟದ ಸೋಲಿಗರು, ನೀಲಗಿರಿ ಬೆಟ್ಟಗಳಲ್ಲಿರುವ ತೋಡರು, ಬಡಗರು, ಕೊಡಗಿನ ಎರವರು, ದಕ್ಷಿಣ ಕನ್ನಡ ಜಿಲ್ಲೆಯ ಕೊರಗರು, ಕುಡಿಯರು, ಬಳ್ಳಾರಿ

ಜಿಲ್ಲೆಯ ಕೋಟರು, ಕೋಯರು, ಕೋಡರು, ಮುರಿಯರು, ಪನಿಯರು—ಮುಂತಾದವರೆಲ್ಲ ಆದಿವಾಸಿಗಳು. ಇವರನ್ನು ವಿಂಗಡಿಸುವಾಗ ನರವಿಜ್ಞಾನಿಗಳು ಇವರ ಬಣ್ಣ, ಕೂದಲು, ಎತ್ತರ, ತಲೆಯ ಆಕಾರ, ಮೂಗಿನ ಮತ್ತು ಮುಖದ ಅಳತೆ ಮುಂತಾದ ಲಕ್ಷಣಗಳನ್ನು ಪರಿಶೀಲಿಸಿದ್ದಾರೆ. ಇವರ ಕಪ್ಪು ಬಣ್ಣ, ಉದ್ದವಾದ ತಲೆ, ಚಪ್ಪಟೆಯ ಮೂಗು, ಗಿಡ್ಡನಾದ ದೇಹ--ಮುಂತಾದ ಕುರುಹುಗಳಿಂದ ಇವರು ದ್ರಾವಿಡರಿಗಿಂತ ಹಿಂದೆ ಇಲ್ಲಿ ವಾಸಿಸುತ್ತಿದ್ದ ಮೂಲ ನಿವಾಸಿಗಳೆಂದು ನಿರ್ಧರಿಸಲಾಗಿದೆ. ಆದಿವಾಸಿಗಳ ವಿಷಯವಾಗಿ ಅನೇಕ ಸಂಗತಿಗಳನ್ನು ಇತಿಹಾಸಕಾರರು, ವಿಜ್ಞಾನಿಗಳು ಹೊರಗೆಡಹಿದ್ದಾರೆ. ಆದಿವಾಸಿಗಳಿಗೆ ಇತ್ತೀಚಿಗೆ ಹೊರಗಿನ ಸಂಪರ್ಕ ಹೆಚ್ಚಾಗುತ್ತಿದೆ. ಹಿಂದಿನ ಪದ್ಧತಿಗಳಲ್ಲಿ ಅವರಿಗೆ ವಿಶ್ವಾಸ ಕಡಿಮೆಯಾಗುತ್ತಿದೆ. ಕಾಡಿನ ವಾಸವನ್ನು ಬಿಟ್ಟು ಅವರು ಹಳ್ಳಿಗಳನ್ನು ಸೇರುತ್ತಿದ್ದಾರೆ. ಅನೇಕ ಪಂಗಡಗಳು ಆದಿವಾಸಿಗಳೆಂಬುದನ್ನು ಬಿಟ್ಟು ಹಿಂದುಳಿದ ಪಂಗಡಕ್ಕೆ ಸೇರಿಕೊಳ್ಳುತ್ತಿದ್ದಾರೆ.

೧೯೧೧ನೆಯ ಇಸವಿಯ ಸೆನ್ಸಸ್ ವರದಿಯ ಪ್ರಕಾರ ಆದಿವಾಸಿಗಳ ಸಂಖ್ಯೆ ೭೨ ಸಾವಿರವಿದ್ದಿತು. ೧೯೨೧ನೆಯ ಇಸವಿ ವೇಳೆಗೆ ಅವರ ಸಂಖ್ಯೆ ೬೨ ಸಾವಿರವಾಯಿತು. ೧೯೩೧ರ ವೇಳೆಗೆ ೨೩ ಸಾವಿರಕ್ಕೆ ಇಳಿಯಿತು. ಈಗ ಇನ್ನೂ ಕಡಿಮೆಯಾಗಿದೆ. ೧೯೪೦ನೆಯ ಇಸವಿಯಲ್ಲಿ ಆದಿವಾಸಿಗಳ ಗುಂಪಿಗೆ ಸೇರಿದ್ದ ಲಂಬಾಣಿ, ಕೊರಚರು, ಕೊರಮರು ಮತ್ತು ವಡ್ಡರು, ತಾವು ಇನ್ನು ಮುಂದೆ ಹಿಂದುಳಿದ ಪಂಗಡಕ್ಕೆ ಸೇರಿ ಗ್ರಾಮಗಳಲ್ಲಿ ನೆಲೆಸುತ್ತೇವೆಂದು ಸರ್ಕಾರಕ್ಕೆ ತಿಳಿಸಿದರು. ಅಂತೂ ಆದಿವಾಸಿಗಳ ಸಂಖ್ಯೆ ಶಿಥಿಲವಾಗುತ್ತಿದೆ. ಆದರೂ ಕೂಡ ಇತಿಹಾಸಕಾಲಕ್ಕಿಂತ ಮುಂಚೆ ಇದ್ದ ಈ ಮಾನವ ಕುಲಗಳ ಉತ್ಪತ್ತಿ ಹೇಗೆ? ಅವರ ಸಂಸ್ಕೃತಿ ಹೇಗಿತ್ತು? —ಇವೇ ಮುಂತಾದ ವಿಷಯಗಳು ವೈಜ್ಞಾನಿಕರ ಕುತೂಹಲವನ್ನು ಕೆರಳಿಸಿವೆ. ಇವನ್ನು ತಿಳಿಯಲು ಸಾರ್ವಜನಿಕರು ಉತ್ಸಾಹಿಗಳಾಗಿದ್ದಾರೆ. ಈ ದೃಷ್ಟಿಯಿಂದ ಆದಿವಾಸಿಗಳ ಇತಿಹಾಸವನ್ನು ತಿಳಿಯುವುದು ಆವಶ್ಯಕ.

## ೩. ವಾಸ

ಆದಿವಾಸಿಗಳು ಕನ್ನಡ ನಾಡಿನ ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶದಲ್ಲಿ ಸಣ್ಣ ಸಣ್ಣ ಗುಡಿಸಲುಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಮಾಡುತ್ತಿದ್ದಾರೆ. ಈ ಗುಡಿಸಲುಗಳು ಬಹಳ ಚಿಕ್ಕವು. ಸುಮಾರು ೮ ಅಡಿ ಅಗಲ, ೧೦-೧೨ ಅಡಿ ಉದ್ದವಾಗಿರಬಹುದು. ಉದ್ದವಾದ ಬಿದಿರು ದಬ್ಬೆಗಳ ತುದಿಯನ್ನು ನೆಲಕ್ಕೆ ನಾಟಿ ಬಂಡಿಯ ಕಮಾನಿನಂತೆ ಮಾಡಿ, ಮೇಲುಗಡೆ ಹುಲ್ಲು, ಸೊಪ್ಪು, ಎಲೆ ಮುಂತಾದುವನ್ನು ಹೊದ್ದಿಸಿರುವರು. ಇವುಗಳನ್ನು ಎರಡು ಭಾಗಮಾಡಿ ಒಂದನ್ನು ಅಡಿಗೆಮಾಡುವುದಕ್ಕೂ, ಇನ್ನೊಂದನ್ನು ಮಲಗುವುದಕ್ಕೂ ಉಪಯೋಗಿಸುತ್ತಾರೆ. ಇಂತಹ ಗುಡಿಸಲುಗಳಲ್ಲಿ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ವಾಸಮಾಡುತ್ತಿದ್ದಾರೆ. ಹೀಗೆ ಎಂಟು ಹತ್ತು ಗುಡಿಸಲುಗಳು ಒಂದುಕಡೆ

ಇರುವುದುಂಟು. ಇದನ್ನು 'ಪೋಡು' ಎಂದು ಕರೆಯುತ್ತಾರೆ. ನೀಲಗಿರಿ ಬೆಟ್ಟದ ತೋಡರು ವಾಸಮಾಡುವ ಸ್ಥಳ ವಿಚಿತ್ರರೀತಿಯದಾಗಿದೆ. ಬೆಟ್ಟದ ಕಣಿವೆ ಪ್ರದೇಶ ದಲ್ಲಿ ನೀರು, ಹುಲ್ಲು ಇದ್ದು ತಂಪಾಗಿರುವಕಡೆ ಚಕ್ರಾಕಾರದ ಕಲ್ಲಿನ ಗೋಡೆ ಯನ್ನು ಎಬ್ಬಿಸಿ, ಅದರ ಮೇಲೆ ಶಂಕುವಿನಾಕಾರದ ಗುಡಿಸಲನ್ನು ಕಟ್ಟಿದ್ದಾರೆ. ಕಲ್ಲು ಗೋಡೆಯಲ್ಲಿ ಒಬ್ಬ ಮನುಷ್ಯನು ಮಾತ್ರ ತೂರಿಹೋಗುವುದಕ್ಕೆ ಸಾಕಾಗು ವಷ್ಟು ಜಾಗವನ್ನು ಬಿಟ್ಟಿದ್ದಾರೆ. ಇದೇ ಬಾಗಿಲು. ಒಂದೊಂದು ಕಡೆ ಇಂತಹ ಹತ್ತು ಹನ್ನೆರಡು ಗುಡಿಸಲುಗಳಿರುತ್ತವೆ. ಇದಕ್ಕೆ 'ಮಾಡ' ಎಂದು ಹೆಸರಿಡ ಲಾಗಿದೆ. ಕಾಡುಕುರುಬರೂ, ಎರವರೂ, ಕುಡಿಯರೂ, ಕೊರಗರೂ ಸಹ ಇಂತಹ ಗುಡಿಸಲುಗಳಲ್ಲಿಯೇ ವಾಸಮಾಡುತ್ತಿದ್ದಾರೆ. ಕಾಡುಕುರುಬರ ಗುಡಿಸಲುಗಳ ಗುಂಪಿಗೆ 'ಹಾದಿ' ಎಂದು ಹೆಸರು. ಸಾಂಕ್ರಾಮಿಕ ರೋಗ ಬಂದಾಗ ಆದಿವಾಸಿ ಗಳು ತಮ್ಮ ಗುಡಿಸಲುಗಳಿಗೆ ಬೆಂಕಿ ಇಟ್ಟು ಸುಟ್ಟು ಹಾಕುವರು. ಬೇರೆ ಕಡೆಗೆ ಹೋಗಿ ನೆಲೆಸುವರು. ಹೀಗೆ ಸ್ಥಳಬದಲಾಯಿಸುವುದು ಅವರಿಗೆ ಬಹು ಸುಲಭ.

'ಪೋಡು' 'ಮಾಡ' 'ಹಾದಿ' ಎಂಬ ಪದಗಳನ್ನು ಗ್ರಾಮ ಎಂದು ಅರ್ಥ ಬರುವಹಾಗೆ ಉಪಯೋಗಿಸಲಾಗಿದೆ. ಸೋಲಿಗರು ಈ ಪೋಡುಗಳಿಗೆ ಬೇರೆ ಬೇರೆ ಹೆಸರನ್ನು ಕೊಟ್ಟಿದ್ದಾರೆ. ಇಜ್ಜಲುಪಾಳ್ಯ, ಎಂಜಲಗೆರೆ, ಗುಂಡಲ್ ಬುರುಡೆ, ಮುತ್ತುಗದ ಗದ್ದೆ—ಇವೆಲ್ಲ ಸೋಲಿಗರ ಪೋಡುಗಳು. ಕಾಡುಗೊಲ್ಲರ ಗುಡಿಸಲುಗಳು ಬಹು ಅನಾಗರಿಕವಾಗಿವೆ. ಬಡಗರು ಬೆಟ್ಟದ ತುದಿಯಲ್ಲಿ ಸಾಲುಸಾಲಾಗಿ ಕಟ್ಟಿರುವ ಗುಡಿಸಲುಗಳಲ್ಲಿರುವರು. ಕೊಡಗಿನ ಎರವರು ಹುಲ್ಲು, ಜೊಂಡು, ತೆಂಗಿನಚಾಪೆ ಹೊದಿಸಿದ ಗುಡಿಸಲುಗಳನ್ನು ಕಟ್ಟಿಕೊಂಡಿ ದ್ದಾರೆ. ಬೊಂಬಿನ ದಬ್ಬೆಗಳಿಂದ ಹೆಣೆದ ಚಾಪೆಗಳನ್ನು ಗೋಡೆಗೆ ಪ್ರತಿಯಾಗಿ ಕಟ್ಟಿ ಅವುಗಳ ಮೇಲೆ ಮಣ್ಣು ಗಾಜು ಮಾಡುವರು. ತೋಡರ ಗುಡಿಸಲುಗಳು ಸುತ್ತ ಮುತ್ತಲ ಪ್ರದೇಶಕ್ಕಿಂತ ಎತ್ತರದಲ್ಲಿವೆ. ಅವರ 'ಮಾಡ' ಗಳಲ್ಲಿ ಒಂದರಿಂದ ಆರರವರೆಗೆ ಗುಡಿಸಲುಗಳಿರುತ್ತವೆ. ಇವುಗಳ ಸುತ್ತ ಭದ್ರವಾದ ಗೋಡೆಯನ್ನು ಕಟ್ಟುವರು. ಅದರಲ್ಲಿ ಎರಡು ಮೂರು ಕಡೆ ಒಬ್ಬ ಮನುಷ್ಯನು ತೂರಿಹೋಗುವಷ್ಟು ಚಿಕ್ಕ ಕಂಡಿ ಇರುವುದು. ಇಂತಹ ಪ್ರತಿಯೊಂದು ಗ್ರಾಮ (ಮಾಡ)ದಲ್ಲಿ ಕನಿಷ್ಠ ಪಕ್ಷ ಒಂದು ಹೈನಿನ ಮನೆ (ಆಕಳು ದೊಡ್ಡಿ) ಇರುವುದು. ಇದೊಂದು ಕ್ಷೀರಕೇಂದ್ರ. ಸಾಮಾನ್ಯವಾಗಿ ತೋಡರು ಬಹು ಅಂದವಾದ, ಆಕರ್ಷಕವಾದ ಸ್ಥಳವನ್ನೇ ತಮ್ಮ ವಾಸಸ್ಥಳಕ್ಕೆ ಆರಿಸುವರು. ಹೀಗೆ ಆದಿವಾಸಿ ಗಳು ಪ್ರಕೃತಿಸಂಪತ್ತಿನ ನಡುವೆ ವಾಸಿಸುತ್ತಿದ್ದಾರೆ.

## ೪. ಮೂಲ ನಿವಾಸ

ಆದಿವಾಸಿಗಳು ಎಲ್ಲಿಂದ ಬಂದರು? ಇವರ ಮನೆತನ ಹೇಗೆ ಪ್ರಸರಿಸಿತು? ಇವರ ಮೂಲವೇನು? —ಇವೇ ಮುಂತಾದ ವಿಷಯವನ್ನು ನಿರ್ಧರಿಸುವುದಕ್ಕೆ ಇತಿಹಾಸದ ಆಧಾರ ದೊರೆಯುವುದಿಲ್ಲ. ಆದರೆ ವಿಮರ್ಶಕಾರರು ಈ ಜನಾಂಗ ದಲ್ಲಿ ವಂಶಪಾರಂಪರ್ಯವಾಗಿ ಬಂದ ಕೆಲವು ಕರಟು ಕಥೆಗಳನ್ನು ಸಂಗ್ರಹಿಸಿದ್ದಾರೆ.

ಗುಂಪಿಗೆ ಮುಖ್ಯವಾದ ಒಂದೊಂದು ಸಂಕೇತವಿದೆ. ಸುರೇನ ಕುಲದವರು ಮುಖ್ಯವಾಗಿ ಸೂರ್ಯನನ್ನು ಪೂಜಿಸಬೇಕು. ಬೇಲೂರು ಕುಲದವರು ಬೆಳ್ಳಿ ಕಾಲಂದಿಗೆ ಹಾಕಿಕೊಳ್ಳಕೂಡದು. ಹನ್ನೆರಡು ಕುಲದವರಿಗೆ ಹನ್ನೆರಡು ಸಂಖ್ಯೆ ಮುಖ್ಯ. ಹುಟ್ಟಿದ ಹನ್ನೆರಡನೆಯ ದಿನ ಹನ್ನೆರಡು ಜನರನ್ನು ಕರೆದು ಹನ್ನೆರಡು ಎಲೆ, ಹನ್ನೆರಡು ಅಡಿಕೆ ಕೊಟ್ಟು ಸತ್ಕರಿಸಬೇಕು. ಮದುವೆಯ ಚಪ್ಪರಕ್ಕೆ ಹನ್ನೆರಡು ಕಂಬ ನೆಡಬೇಕು.

ಸಾಮಾನ್ಯವಾಗಿ ಈ ಆದಿವಾಸಿಗಳಿಗೆ ಕುಳ್ಳದೇಹ, ತುಂಬಿದ ಮುಖ, ಸೊಂಪಾಗಿ ಬೆಳೆದ ಕೂದಲು, ಬಲವಾದ ದವಡೆ, ಗಟ್ಟಿಯಾದ ಹಲ್ಲು, ಗಟ್ಟಿಮುಟ್ಟಾದ ಕೈಕಾಲುಗಳು, ಚಪ್ಪಟೆಯ ಮೂಗು, ಕಪ್ಪಾದ ಬಣ್ಣ—ಇಷ್ಟೆಲ್ಲ ಅವರ ಶರೀರ ರಚನೆ. ಇವರು ಕಷ್ಟಸಹಿಷ್ಣುಗಳು. ನಡುವಿಗೊಂದು ತುಂಡುಪಂಚೆ, ತಲೆಗೊಂದು ತುಂಡು. ಮೈ ಕೈಕಾಲುಗಳೆಲ್ಲ ಬೆತ್ತಲೆಯಾಗಿವೆ, ವಯಸ್ಸಾದ ಗಂಡಸರು ಮೇಲುಹೊದಿಕೆಗಾಗಿ ದುಪ್ಪಟಿ ಇಟ್ಟುಕೊಂಡಿದ್ದಾರೆ. ಹೆಂಗಸರು ಸೀರೆ ಉಡುವರು, ರವಿಕೆ ತೊಡುವುದು ಅಪರೂಪ. ಆದರೆ ಇತ್ತೀಚೆಗೆ ಹೊರಗಿನ ಸಂಪರ್ಕ ಬೆಳೆದ ಮೇಲೆ ಯುವಕರು ಅಂಗಿ ತೊಡುತ್ತಿದ್ದಾರೆ. ಯುವತಿಯರು ರವಿಕೆ ಹಾಕಿಕೊಳ್ಳುತ್ತಿದ್ದಾರೆ. ಓಲೆ, ಮೂಗುಬಟ್ಟು, ಬಳೆ, ಕೈಕಡಗ—ಮುಂತಾದುವನ್ನು ತೊಡುವರು.

## ೬. ಕೆಲವು ಪದ್ಧತಿಗಳು

### (ಅ) ಜನನ ಕಾಲದಲ್ಲಿ

ಆದಿವಾಸಿಗಳ ಮಕ್ಕಳ ಜನನಕಾಲದಲ್ಲಿ ಕೆಲವು ಪಂಗಡಗಳು ಒಂದು ವಿಜಾತೀಯ ಪದ್ಧತಿಯನ್ನು ಅನುಸರಿಸುತ್ತಿವೆ. ಗರ್ಭವತಿಯಾದ ಹೆಂಗಸಿನ ಪ್ರಸವಕಾಲದಲ್ಲಿ ಅವಳ ಗಂಡನು ಆರೋಗ್ಯ ದೃಢಕಾಯನಾಗಿದ್ದರೂ, ಯಾವ ಬೇನೆಯಿಲ್ಲದಿದ್ದರೂ ಹೆಂಡತಿಯ ಬಟ್ಟೆಯನ್ನು ಹೊದ್ದುಕೊಂಡು ಹಣೆಗೆ ಕುಂಕುಮ ಇಟ್ಟುಕೊಂಡು ಕತ್ತಲೆಕೋಣೆಯನ್ನು ಸೇರುವನು. ಇತರ ಹೆಂಗಸರು ಬಾಣಂತಿಯರಿಗೆ ಕೊಡುವ ಔಷಧಿ, ಆಹಾರ ಎಲ್ಲವನ್ನೂ ಇವನಿಗೆ ಕೊಟ್ಟು ಉಪಚರಿಸುವರು. ಹಡೆದ ಮಗುವಿಗೆ ಸ್ನಾನಮಾಡಿಸಿ ಅವನ ಬಳಿ ತಂದು ಮಲಗಿಸುವುದೂ ಉಂಟು. ಮಗುವನ್ನು ಹಡೆದ ಹೆಂಗಸಿಗೆ ಯಾವ ಉಪಚಾರವೂ ಇಲ್ಲ. ಗಂಡನಿಗೆ ಇಂಗು, ಬೆಲ್ಲ, ಮೆಣಸು, ಶುಂಠಿ, ಬೆಳ್ಳುಳ್ಳಿ—ಮುಂತಾದುವನ್ನು ಕೊಡುವರು. ಹೀಗೆ ತಂದೆಗೆ ಮೂರುದಿವಸ ಉತ್ತಮ ಆಹಾರವನ್ನು ಕೊಟ್ಟ ಮೇಲೆ ನಾಲ್ಕನೆಯ ದಿವಸ ಮಗುವಿಗೂ ತಂದೆ ತಾಯಿಗಳಿಗೂ ಸ್ನಾನಮಾಡಿಸಿ ಶುಚಿಯಾದ ಬಟ್ಟೆಗಳನ್ನು ಕೊಡುವರು. ಮಗುವಿನ ಜನನಕ್ಕೆ ತಂದೆಯು ಮುಖ್ಯಕಾರಣ ಎಂಬುದನ್ನು ವ್ಯಕ್ತಪಡಿಸುವುದಕ್ಕಾಗಿ ಈ ಪದ್ಧತಿ ಇವರಲ್ಲಿ ಆಚರಣೆಯಲ್ಲಿ ಬಂದಿರಬೇಕು.

ಕಾಡುಗೊಲ್ಲರು ಮಗುವಿನ ಜನನ ವಾರ್ತೆ ಕೇಳಿದರೆ ಭಯಪಡುವರು. ಹೆಂಗಸಿನ ಜೀವಕ್ಕೆ ಸಂಚಕಾರ ತರುವ ಪ್ರಸಂಗವಿದೆಂದು ಜಿಗುಪ್ಸೆಪಡುವರು.

ಪ್ರಸವವೇದನೆ ಕಾಣಿಸಿಕೊಂಡ ತಕ್ಷಣ ತಾಯಿಯು ಕಾಡಿಗೆ ಹೋಗುವಳು. ಅಲ್ಲೊಂದು ಹುಲ್ಲು ಜೋಪಡಿ ಅವಳಿಗೆ ಸಿದ್ಧವಾಗಿರುವುದು. ಬೇಡರ ಸೂಲಗಿತ್ತಿಯೊಬ್ಬಳು ಉಪಚಾರಕ್ಕೆ ಕಾದಿರುವಳು. ಪ್ರಸವವಾದ ಮೂರುತಿಂಗಳ ಕಾಲ ತಾಯಿಗೆ ಸೂತಕ. ಆ ಕಾಲದಲ್ಲಿ ಅವಳನ್ನು ಯಾರೂ ಮುಟ್ಟಕೂಡದು. ಮುಟ್ಟಿದರೆ ಅವರೂ ಅಶುಚಿಯಾಗುವರು. ಯಾರಾದರೂ ಮುಟ್ಟಿದರೆ ತಾಯಿ ಮಗು ಇಬ್ಬರೂ ಮನೆ ಸೇರುವುದಕ್ಕೆ ಮುಂಚೆ ದೇವತೆಯೊಬ್ಬಳ ಅಪ್ಪಣೆ ಪಡೆಯಬೇಕು. ಕುಲದ ಯಜಮಾನ ಈ ಕುಲದೇವತೆಯ ಪ್ರತಿನಿಧಿಯಾಗಿ ಅಪ್ಪಣೆ ಕೊಡುವನು. ಪ್ರಸವವಾದ ೯, ೧೬, ೩೦ನೆಯ ದಿನಗಳಲ್ಲಿ ತಾಯಿ ಮಗುವನ್ನು ಪ್ರತ್ಯೇಕ ಗುಡಿಸಲಿಗೆ ಸೇರಿಸಬೇಕು. ಮೂರು ತಿಂಗಳು ತುಂಬಿದ ತಕ್ಷಣ ತಾಯಿ ಮಗುವಿಗೆ ಸ್ನಾನ ಮಾಡಿಸಿ, ಹೊಸ ಬಟ್ಟೆ ಉಡಿಸಿ, ದೇವಾಲಯಕ್ಕೆ ಕರೆದುಕೊಂಡು ಹೋಗುವರು. ಪೂಜೆ ಸಲ್ಲಿಸಿ ಮಗುವಿಗೆ ಜೆನ್ನಿಗೆ ಕುರಿಯ ಹಾಲನ್ನು ಕುಡಿಸುವರು. ಜೆನ್ನಿಗೆ ಕುರಿ ಎಂದರೆ, ದೇವರಿಗೆ ಮೀಸಲಾಗಿ ಬಿಟ್ಟಿರುವ ಕುರಿ. ದೇವರಿಗೆ ಕೊಡುವಷ್ಟು ಪ್ರಾಶಸ್ತ್ಯವನ್ನು ಅವರು ಈ ಕುರಿಗೆ ಕೊಡುತ್ತಾರೆ.

ಕೊಡಗಿನ ಎರವರಲ್ಲಿ ಮಕ್ಕಳ ಜನನಕ್ಕೆ ಸಂಬಂಧಪಟ್ಟಂತೆ ಅನೇಕ ಸಂಪ್ರದಾಯಗಳಿವೆ. ಮಗಳು ಗರ್ಭವತಿ ಎಂದು ತಿಳಿದ ಕೂಡಲೇ ಅವಳ ತಂದೆ ತಾಯಿಗಳು ಗರ್ಭದ ಏಳನೆಯ ತಿಂಗಳಿನಲ್ಲಿ ಅವಳನ್ನು ತಮ್ಮ ಗುಡಿಸಲಿಗೆ ಕರೆದುಕೊಂಡು ಹೋಗುವರು. ಪ್ರಸವಕಾಲದಲ್ಲಿ ಅವಳನ್ನು ಪ್ರತ್ಯೇಕ ಗುಡಿಸಿಲಲ್ಲಿಡುವರು. ಮಗುವಿನ ಜನನವಾದ ಮೇಲೆ ತಾಯಿಗೆ ಶುಂಠಿ, ಬೆಲ್ಲ, ಇಂಗು ಕಷಾಯ ಎಲ್ಲವನ್ನೂ ಕೊಡುವರು. ಹನ್ನೊಂದು ದಿವಸ ಅವಳಿಗೆ ಸೂತಕ. ಹನ್ನೆರಡನೆಯ ದಿವಸ ಸ್ನಾನಮಾಡಿಸಿ, ಆಮೇಲೆ ನಾಮಕರಣ, ತೊಟ್ಟಿಲಿಡುವುದು ಮುಂತಾದ ಶುಭಕಾರ್ಯ ನಡೆಸುವರು.

ತೋಡರಲ್ಲಿ ಜನನಕಾಲದ ಶಿಷ್ಟಾಚಾರಗಳು ಬಹಳ. ಗರ್ಭದ ಐದನೆಯ ತಿಂಗಳಿನಲ್ಲಿ ಗರ್ಭವತಿಯ ಮಣಿಕಟ್ಟನ್ನು ಸ್ವಲ್ಪ ಸುಡುವುದು ಒಂದು ಬಗೆಯ ಶುಭಕರ್ಮ. ಇದಾದ ಕೂಡಲೇ ೧೫ ದಿವಸಗಳಕಾಲ ಅವಳನ್ನು ಪ್ರತ್ಯೇಕ ಗುಡಿಸಲಿನಲ್ಲಿಟ್ಟು ಮಜ್ಜಿಗೆ ಅನ್ನ ಕೊಡುವರು. ಅನಂತರ ಅವಳೂ, ಅವಳ ಪತಿಯೂ ಬಿಲ್ಲು ಬಾಣ ಹಿಡಿದುಕೊಂಡು ಕಾಡಿನಲ್ಲಿರುವ ಒಂದು ಮರದ ಬಳಿಗೆ ಬರುವರು. ಅಲ್ಲಿ ಸ್ವಲ್ಪ ಹೊತ್ತು ಇದ್ದು ಹಿಂತಿರುಗಿ ಬಂಧುಗಳಿಗೆ ನಮಸ್ಕಾರ ಮಾಡುವರು. ಎಲ್ಲರೂ ಹೋದಮೇಲೆ, ಗಂಡಹೆಂಡಿರು ಪ್ರತ್ಯೇಕ ಗುಡಿಸಲಿನಲ್ಲಿರುವರು. ಮಾರನೆಯದಿನ ಕುಲಸ್ಥರಿಗೆ ಊಟ ಕೊಡಬೇಕು. ಪ್ರಸವಕಾಲದಲ್ಲಿ ಹೆಂಡತಿಯು ಗಂಡನಿಗೆ ಒರಗಿಕೊಂಡು ಕುಳಿತುಕೊಳ್ಳುವಳು. ಸೂಲಗಿತ್ತಿಯೂ ಇರುವಳು. ಪ್ರಸವವಾಗುವುದು ನಿಧಾನವಾದರೆ ಕುಲಸ್ಥನೊಬ್ಬನು ಮಡಕೆಯಲ್ಲಿ ನೀರು ತಂದಿಟ್ಟು ಒಂದು ಹುಲ್ಲುಕಡ್ಡಿಯಿಂದ ನೀರನ್ನು ತೊಳಸುವನು. ದೇವರನು ಕುರಿತು ಪ್ರಾರ್ಥಿಸುವನು. ಔಷಧಿಯನ್ನು ಕುಡಿಸುವುದುಂಟು. ಪ್ರಸವವಾದ ೨-೩ ದಿವಸಗಳ ನಂತರ ತಾಯಿ ಮಗುವನ್ನು ಪ್ರತ್ಯೇಕ ಗುಡಿಸಲಿಗೊಯ್ಯುವರು. ಅಲ್ಲಿ ಅನೇಕ ಕರ್ಮಾಚರಣೆ ಮಾಡುವರು. ಮಗುವಿಗೆ ವಿಭೂತಿ ಇಡುವುದು,

ಎಲೆಯ ಛತ್ರಿ ಹಿಡಿಯುವುದು, ಎಮ್ಮೆ ಕರುವಿನ ಮೇಲೆ ನೀರು ಸುರಿಯುವುದು— ಇವೇ ಮುಂತಾದ ಅನಿಷ್ಟನಿವಾರಕ ಕರ್ಮಗಳನ್ನು ಆಚರಿಸುವರು. ವಿವಿಕ್ತವಾದ ಗುಡಿಸಲಿನಲ್ಲಿ ತಾಯಿಮಗುವನ್ನಿಟ್ಟು, ಮಗುವನ್ನು ತಾಯಿ ವಿನಾ ಇನ್ನಾರೂ ನೋಡದ ಹಾಗೆ ಅದರ ಮುಖಕ್ಕೆ, ಬಟ್ಟೆ ಮುಸುಕು ಹಾಕುವರು. ಮಗು ಹುಟ್ಟಿದ ಮೂರನೆಯ ತಿಂಗಳಿನಲ್ಲಿ ಮುಸುಕು ತೆಗೆಯುವ ಶಿಷ್ಟಾಚಾರ ನಡೆಯುವುದು. ಹುಟ್ಟಿದ ಮಗುವು ಗಂಡಾಗಿದ್ದರೆ ತಂದೆಯೇ ಬಂದು ಮುಂಜಾನೆ ಮುಸುಕು ತೆಗೆಯಬೇಕು. ಅನಂತರ ತಂದೆ ಮಗು ಇಬ್ಬರೂ ಹೈನಿನ ಮನೆಯ ಹೊಸಲಿಗೆ ಬಗ್ಗಿ ನಮಸ್ಕಾರ ಮಾಡಬೇಕು. ಹೆಣ್ಣಾಗಿದ್ದರೆ ತಾಯಿ ಕ್ಷೀರ ಶಾಲೆಯ ನಿಯಮಿತ ಸ್ಥಳಕ್ಕೆ ಮಗುವನ್ನು ಎತ್ತಿಕೊಂಡು ಬಂದು ಅಲ್ಲಿ ಮುಸುಕು ತೆಗೆಯುವಳು. ಅನಂತರ ಮಗುವಿನ ನಾಮಕರಣ. ಮಗುವಿನ ಸೋದರ ಮಾವನು ಹೆಸರನ್ನು ಸೂಚಿಸಬೇಕು. ಈ ಕರ್ಮಗಳೆಲ್ಲ ಮುಗಿದ ಮೇಲೆ ಕುಲಸ್ಥರಿಗೆಲ್ಲ ಊಟ ಕೊಡಿಸಬೇಕು.

### (ಆ) ಹೆಣ್ಣು ಋತುವಾದಾಗ

ಸೋಲಿಗರಲ್ಲಿ ಹುಡುಗಿಯು ದೊಡ್ಡವಳಾದ ಮೇಲೆ, ಪೋಡಿನಿಂದ ಕವಣೆ ಕಲ್ಲು ಹೋಗುವಷ್ಟು ದೂರದಲ್ಲಿ ಇವಳಿಗಾಗಿ ಒಂದು ಹಸುರೆಲೆಯ ಗುಡಿಸಲು ನಿರ್ಮಾಣವಾಗುವುದು. ಅದರಲ್ಲಿ ಅವಳನ್ನು ಏಳರಿಂದ ಮೂವತ್ತು ದಿನಗಳು ಏಕಾಂತವಾಸದಲ್ಲಿಡುವರು. ಇವಳ ಜೊತೆಯಲ್ಲಿ ಯಾರಾದರೂ ವಯಸ್ಸಾದ ಹೆಂಗಸೊಬ್ಬಳು ಇರುವಳು. ಮತ್ಯಾರೂ ಇರಕೂಡದು; ಮಾತನಾಡಲೂ ಕೂಡದು. ಯಾರಿಗೂ ಅವಳ ಸಂಪರ್ಕವಿರುವುದಿಲ್ಲ. ಆಮೇಲೆ ಅವಳ ಸೋದರಮಾವ ಹೊಸ ಬಟ್ಟೆ, ಎಲೆ ಅಡಿಕೆ ತಂದುಕೊಡುವನು. ಸ್ನಾನವಾದ ಮೇಲೆ ಅವಳು ಶುದ್ಧಳಾಗುವಳು.

ಕಾಡುಗೊಲ್ಲರ ಹುಡುಗಿ ದೊಡ್ಡವಳಾದಾಗ, ಅವಳನ್ನು ಪ್ರತ್ಯೇಕ ಗುಡಿಸಲಿನಲ್ಲಿಡಲಾಗುವುದು. ಪ್ರತಿದಿನವೂ ಅವಳು ಸ್ನಾನಮಾಡಬೇಕು. ಪ್ರತ್ಯೇಕ ಗುಡಿಸಲಿಗೆ ಹೋಗಬೇಕು. ಹಳೆಯ ಗುಡಿಸಲನ್ನು ಸುಡಬೇಕು. ಕೆಲವು ಹೆಂಗಸರು ಮಾತ್ರ ಅವಳ ಜೊತೆಯಲ್ಲಿರುವರು. ಹುಡುಗಿಗೆ ಸಿಹಿ ತಿಂಡಿಯನ್ನೂ, ಪುಷ್ಟಿಯಾದ ಆಹಾರವನ್ನೂ ಕೊಡುವರು. ಮಲಗುವುದಕ್ಕೆ ಬೇವಿನ ಸೊಪ್ಪಿನ ಹಾಸಿಗೆ ಮಾಡಿಕೊಡಲಾಗುವುದು. ನಿರ್ದಿಷ್ಟ ಕಾಲವಾದ ಮೇಲೆ ಅವಳಿಗೆ ಸ್ನಾನ ಮಾಡಿಸಿ, ಪಂಚಗವ್ಯಕೊಡುವರು. ಬೇವಿನ ಎಲೆಯನ್ನು ಅಗಿಯುವುದಕ್ಕೆ ಅವಳಿಗೆ ಕೊಡುತ್ತಾರೆ. ಹೀಗೆ ಮೂರು ತಿಂಗಳಕಾಲ ಅವಳು ಕಟ್ಟುನಿಟ್ಟಾಗಿರಬೇಕು.

ಬಡಗರ ಹುಡುಗಿ ಮೈನೆರೆದ ತಕ್ಷಣ, ಮಡಕೆಯ ಮಸಿಯನ್ನು ಎಣ್ಣೆಯಲ್ಲಿ ಕಲಸಿ ಸೂಜಿಯಿಂದ ತೆಗೆದು ಹಣೆಯ ಮೇಲೆ ಹಸರು ಚುಚ್ಚುವರು. ಇನ್ನು ಕೆಲವು ಆದಿವಾಸಿಗಳ ಪಂಗಡಗಳಲ್ಲಿ ಹುಡುಗಿ ದೊಡ್ಡವಳಾದ ಕೂಡಲೇ ಕಬ್ಬಿಣದ ಚಾಕು, ಎಕ್ಕದ ಗಿಡವನ್ನು ತಂದು ಅವಳ ಗುಡಿಸಿಲಿನಲ್ಲಿ ದೋಷನಿವಾರಣೆಗಾಗಿ

ಇಡುವರು. ಐದನೆಯ ದಿವಸ ಮದುವೆಯಾದ ಇಬ್ಬರು ಹೆಂಗಸರು ಅವಳಿಗೆ ಸ್ನಾನ ಮಾಡಿಸುವರು. ಕೊಬ್ಬರಿ, ಎಲೆ ಅಡಿಕೆ, ಖರ್ಜೂರ, ನೆನೆಸಿದ ಕಡಲೆ ಮುಂತಾದುವನ್ನು ಕೊಡುವರು. ಬೆಲ್ಲದ ಉಂಡೆಯನ್ನು ಕೊಡುವರು. ಅನಂತರ ಕುಲಕ್ಕೆ ಊಟ ಕೊಡಬೇಕು.

## (ಇ) ಮದುವೆಯಲ್ಲಿ

ಆದಿವಾಸಿಗಳ ಮದುವೆಯ ವಿಧಾನ ವಿಜಾತೀಯವಾಗಿದೆ. ಸೋದರಮಾವ ಸೋದರತ್ತೆಯ ಮಗಳನ್ನು ವಿವಾಹ ಮಾಡಿಕೊಳ್ಳುವ ಪದ್ಧತಿ ಅವರಲ್ಲಿದೆ. ಬಹು ಪತ್ನೀತ್ವವು ಇವರಲ್ಲಿ ವಾಡಿಕೆಯಲ್ಲಿದೆ. ಬಹು ಪತೀತ್ವವಿಲ್ಲ. ಒಂದೇ ಕುಲದಲ್ಲಿ ಹೆಣ್ಣು ಕೊಟ್ಟು ತರುವ ರೂಢಿ ಇದೆ. ಇವರ ಮದುವೆ ಶಾಸ್ತ್ರ ಸುಲಭ. ಸೋಲಿಗರಲ್ಲಿ ಮದುವಣಿಗನು ತಾನು ಪ್ರೀತಿಸಿರುವ ಯುವತಿಯೊಡನೆ ಯಾರೂ ಕಾಣದಂತೆ ಕಾಡಿಗೆ ಓಡಿ ಹೋಗುವನು. ಅಲ್ಲಿ ಮರದ ಬುಡದಲ್ಲಿಯೋ ಅಥವಾ ಪೊದೆಯಲ್ಲಿಯೋ ಮೂರು ದಿನ ಇದ್ದು ತನ್ನ ಗುಡಿಸಲಿಗೆ ಹಿಂತಿರುಗುವನು. ಇವರೇ ದಂಪತಿಗಳೆಂದು ಎಲ್ಲರೂ ಪರಿಗಣಿಸಿ ಅವರನ್ನು ಎದುರುಗೊಳ್ಳುವರು. ಮೆರವಣಿಗೆ ಮಾಡುವರು. ಇವರ ಗೌರವಾರ್ಥವಾಗಿ ಎಲ್ಲರಿಗೂ ಊಟ ಕೊಡುವರು. ಆಮೇಲೆ ಕುಲದ ಯಜಮಾನ ಬಂದು ಹೆಣ್ಣಿನ ಕತ್ತಿಗೆ ಗಂಡಿನಿಂದ ತಾಲಿ ಕಟ್ಟಿಸುವನು.

ಕಾಡುಗೊಲ್ಲರಲ್ಲಿ ಗಂಡಿನ ತಂದೆ ತಾಯಿಗಳು ಮದುವೆ ಗೊತ್ತುಮಾಡುವರು. ಒಂದು ಒಳ್ಳೆಯ ದಿನ ಹುಡುಗನ ತಂದೆ ತಾಯಿಗಳು ವಧುವಿನ ಗುಡಿಸಲಿಗೆ ಹೋಗುವರು. ವಧುವಿನ ತಾಯಿಗೆ ಅಕ್ಕಿ ಹಿಟ್ಟಿನಿಂದ ತುಂಬಿದ ಮಡಕೆ ಕೊಡಲಾಗುವುದು. 'ತೆರ' ವೆಂಬ ಕನ್ಯಾಶುಲ್ಕವನ್ನು ಕೊಡುವರು. ಆಮೇಲೆ ತಾಂಬೂಲ ಹಂಚುವರು. ಆಗ ಉಗುನಿಯ ಹಂಬಿಗೆ ಅರಿಶಿನದ ದಾರವನ್ನು ಕಟ್ಟಲಾಗುವುದು. ಮೂರನೆಯ ದಿನ ಉಗುನಿಯ ಹಂಬು ಬೆಳೆದಿದ್ದರೆ ಅದು ವಿವಾಹದ ಶುಭ ಸೂಚನೆಯೆಂದು ಪರಿಗಣಿಸಲಾಗುವುದು. ಆಮೇಲೆ ವಧುವಿನ ಮನೆಯಲ್ಲಿ ಐದು ದಿವಸ ಮದುವೆ. ಹನ್ನೆರಡು ಕಂಬದ ಚಪ್ಪರ ಹಾಕುವರು. ದಂಪತಿಗಳನ್ನು ದೇವಾಲಯದ ಮುಂದೆ ಕೂರಿಸಿ ಪೂಜಾರಿಯು ಬೆನ್ನಿಗೆ ಕುರಿಯ ಹಾಲನ್ನು ಅವರ ಮೇಲೆ ಪ್ರೋಕ್ಷಿಸುವನು. ಕರೀಮಣಿ ತಾಲಿಯನ್ನು ವಧುವಿನ ಕತ್ತಿಗೆ ಕಟ್ಟುವನು. ಕಣಿಗಲು ಹೂವನ್ನು ವರನ ತಲೆಯ ಮೇಲಿಡುವನು. ವರನ ತಂದೆ ತೆರದ ಹಣ ಪೂರ್ತಿಯಾಗಿ ಕೊಡುವನು.

ಕೊಡಗಿನ ಎರವರಲ್ಲಿ ಗಂಡಿನ ತಂದೆ ತಾಯಿಗಳೇ ವಧುವನ್ನು ಚುನಾಯಿಸುವರು. ಹುಡುಗನ ತಂದೆ ತಾಯಿ, ಕುಲದ ಯಜಮಾನ ಕನಲಡಿ, ವಧುವಿನ ಮನೆಗೆ ಹೋಗಿ ಸೀರೆ ಮತ್ತು ಮಂಗಳ ದ್ರವ್ಯಗಳನ್ನು ಕೊಟ್ಟು, ತಾವು ಬಂದಿರುವ ವಿವಾಹದ ಸಂಗತಿ ತಿಳಿಸುವರು. ವಧುವನ್ನು ಕರೆತರುವರು. ವಿವಾಹ ಸಾಂಗವಾಗಿ ನೆರವೇರುವಂತೆ ದೇವರು ಕರುಣಿಸಲಿ ಎಂದು ಎಲ್ಲರೂ ಪ್ರಾರ್ಥಿ

ಸುವರು. ಯಜಮಾನನು ವಧುವಿಗೆ ಹೊಸ ಸೀರೆ ಕೊಟ್ಟು ತಾಳಿ ಕಟ್ಟುವನು. ಒಂದು ಹಣ ಕೊಟ್ಟು ಮದುವೆಯ ದಿನವನ್ನು ಗೊತ್ತುಮಾಡುವನು. ಆದಿನ ಮದುವೆ ನಡೆಯುವುದು. ಕುಲಸ್ಥರಿಗೆ ಸಂತರ್ಪಣೆ ಆಗುವುದು. ಮದುವೆಯ ವೆಚ್ಚ ವಹಿಸಲಾಗದಿದ್ದ ಬಡವರಾಗಿದ್ದರೆ ಯುವಕ ಯುವತಿಯರು ಕಾಡಿಗೆ ಓಡಿ ಹೋಗಿ ಒಂದೆರಡು ದಿನ ಇದ್ದು ಹಿಂತಿರುಗುವರು. ವಧುವಿನ ತಂದೆ, ಮಗಳನ್ನು ಮನೆಗೆ ಸೇರಿಸದೆ ಕುಲದ ಯಜಮಾನನನ್ನು ಕರೆಸುವನು. ದಂಪತಿಗಳು ತಮ್ಮ ತಪ್ಪನ್ನು ಒಪ್ಪಿಕೊಂಡು, ತಪ್ಪುಕಾಣಿಕೆ ಸಲ್ಲಿಸುವರು. ಅನಂತರ ವರನು ವಧುವಿಗೆ ತಾಳಿ ಕಟ್ಟುವನು.

ನೀಲಗಿರಿಯ ಬಡಗರಲ್ಲಿ ಯುವಕನು ತಾನು ಪ್ರೀತಿಸಿದ ಯುವತಿಯನ್ನು ಪಡೆಯುವಂತೆ ಪ್ರತಿಜ್ಞೆ ಮಾಡುವನು. ಹಾಗೆ ಪಡೆಯಲು ಅಸಾಧ್ಯವಾದರೆ, ಅದೇ ಪ್ರಯತ್ನದಲ್ಲಿ ತನ್ನನ್ನೇ ಬಲಿದಾನ ಕೊಡಲು ಸಿದ್ಧವಾಗಿರುವುದಾಗಿ ಸಾರುವನು. ಅವನಿಗೆ ಬೇಕಾದ ಸಹಾಯ ಸಲಕರಣೆಗಳನ್ನು ಇತರ ಯುವಕರು ಒದಗಿಸಿ ಕೊಡುವರು. ಸಾಮಾನ್ಯವಾಗಿ ಇಂತಹ ಅಪಹರಣಕ್ಕೆ ಅಡ್ಡಿ ಏನಿರುವುದಿಲ್ಲ. ಬಳ್ಳಾರಿ ಜಿಲ್ಲೆಯ ಲಂಬಾಡಿಗಳಲ್ಲಿ ನವ ದಂಪತಿಗಳು ಏಳು ಸಲ ಒರಳು ಕಲ್ಲನ್ನು ಪ್ರದಕ್ಷಿಣೆ ಮಾಡುವರು. ಆಗ ಹೆಂಗಸರು ಹಾಡು ಹೇಳುವರು. ಒಂದೊಂದು ಪ್ರದಕ್ಷಿಣೆ ಮಾಡುವಾಗ ಒಂದೊಂದು ಚರಣವನ್ನು ಹೇಳುವರು. ಇದನ್ನು ಬ್ರಾಹ್ಮಣರ ಸಪ್ತಪದಿ ಪದ್ಧತಿಗೆ ಹೋಲಿಸಬಹುದು. ಕಾಡು ಕುರುಬರು ವಿವಾಹಕ್ಕೆ ಸಂಬಂಧಪಟ್ಟಂತೆ ಯಾವ ಶುಭಕಾರ್ಯವನ್ನೂ ನಡೆಸುವುದಿಲ್ಲ. ಗಂಡು ಹೆಣ್ಣು ತಾವು ಒಂದಾಗಿರುವುದಾಗಿ ಮಾತನಾಡಿಕೊಂಡು ಒಂದು ಕಡೆ ಸೇರಿ ಒಬ್ಬರ ಮೇಲೊಬ್ಬರು ಮಡಕೆಯಲ್ಲಿ ನೀರು ಸುರಿದು ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿಕೊಳ್ಳುವರು. ಆ ಮೇಲೆ ಕುಲಕ್ಕೆ ಊಟ ಕೊಡುವರು. ಕಾಡು ಕುರುಬರಲ್ಲಿ ಬಹು ಪತ್ನೀತ್ವ ಆಚರಣೆಯಲ್ಲಿದೆ.

ಆದಿವಾಸಿಗಳಲ್ಲಿ ಸಾಮಾನ್ಯವಾಗಿ ಪ್ರೌಢ ವಿವಾಹ ಪದ್ಧತಿ ಆಚರಣೆಯಲ್ಲಿದೆ. ವಿಧವಾ ವಿವಾಹವೂ ನಡೆಯುವುದು. ಇದನ್ನು 'ಕೂಡಿಕೆ'ಯೆಂದು ಕರೆಯುವರು. ಒಬ್ಬನು ಅಕ್ಕತಂಗಿಯರಿಬ್ಬರನ್ನೂ ಮದುವೆಮಾಡಿಕೊಳ್ಳಬಹುದು. ವಿಧವೆಯು ತನ್ನ ಪತಿಯ ತಮ್ಮನನ್ನು ವಿವಾಹಮಾಡಿಕೊಳ್ಳಕೂಡದು. ದಕ್ಷಿಣ ಕನ್ನಡ ಜಿಲ್ಲೆಯ ಮಲೇರು ಗುಂಪಿನಲ್ಲಿ ಮದುವೆ ಪದ್ಧತಿ ಬಹು ಸುಲಭ. ಹೆಚ್ಚು ವೆಚ್ಚವೂ ಇಲ್ಲ. ಇದಕ್ಕೆ ಕುಲದ ಯಜಮಾನನೂ ಪುರೋಹಿತನೂ ಒಟ್ಟಿಗೆ ಸೇರಿ ವಧೂವರರನ್ನು ಕರೆದು ಇನ್ನು ಮೇಲೆ ನೀವು ದಂಪತಿಗಳು ಎಂದು ಹೇಳಿಬಿಡುವರು. ಇರುಳರಲ್ಲಿ ಏಕಪತ್ನಿ ಪದ್ಧತಿ ಇದೆ. ವರನು ತಾನು ವಿವಾಹವಾಗಲಿರುವ ವಧುವನ್ನು ಆರಿಸಿ ಅವಳ ತಂದೆಗೆ ತೆರದ ಹಣ ಕೊಡುವನು. ತಾಲಿಕಟ್ಟುವ ಪದ್ಧತಿ ಇವರಲ್ಲಿ ಇಲ್ಲ. ಕುಲದೂಟ ಕೊಡುವರು. ಹಾಜರಾಗಿರುವ ಅತಿಥಿಗಳು ವರನಿಗೆ ಹಣ ಕೊಡುವರು. ಅವನು ಅದನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ವಧುವಿನ ಮನೆಗೆ ಹೋಗಿ ಅವಳನ್ನು ತನ್ನ ಮನೆಗೆ ಕರೆದುಕೊಂಡು ಬರುವನು. ತೋಡರ ವಿವಾಹ ಕ್ರಮದಲ್ಲಿ ಮುಖ್ಯ

ಹಾಗಿ ಎರಡು ಪದ್ಧತಿ ಇವೆ. ಒಂದು ವಧುವಿಗೆ ನಡುವಿನ ಸುತ್ತ ಕಟ್ಟಿಕೊಳ್ಳಲು ಬಟ್ಟೆ ಕೊಡುವುದು. ಇನ್ನೊಂದು ವಧುವಿನ ಸಂಬಂಧಿಗಳಿಗೆ ಗೌರವ ಸೂಚಿಸಿ ನಮಸ್ಕಾರ ಮಾಡುವುದು.

## (ಈ) ಉತ್ತರಕ್ರಿಯೆಯಲ್ಲಿ

ಸತ್ತವರನ್ನು ಹೂಳುವ ಪದ್ಧತಿ ಆದಿವಾಸಿಗಳಲ್ಲಿದೆ. ಒಂದೆರಡು ಗುಂಪಿನವರು ಮಾತ್ರ ಸುಡುತ್ತಾರೆ. ನೆಲವನ್ನು ಅಗೆದು ಗುಂಡಿ ತೆಗೆದು ದಕ್ಷಿಣಕ್ಕೆ ಶವದ ತಲೆಯಿಟ್ಟು, ಎಡದ ಮಗ್ಗುಲಾಗಿ ಮಲಗಿಸಿ ಹೂಳುವರು. ಗುಂಡಿಗೆ ಮಣ್ಣು ತುಂಬಿದ ಮೇಲೆ ಕಲ್ಲು ಜೋಡಿಸುವುದುಂಟು. ಇದಕ್ಕೆ 'ಕಲ್ಲುಸೇವೆ' ಎಂದು ಕರೆಯುತ್ತಾರೆ. ಕುಷ್ಠರೋಗಿಗಳನ್ನೂ, ದುಷ್ಟ ಪ್ರಾಣಿಗಳಿಂದ ಕೊಲ್ಲಲ್ಪಟ್ಟವರನ್ನೂ, ಹೂಳುವಾಗ ಕಲ್ಲು ಜೋಡಿಸಲೇಬೇಕೆಂಬ ನಿಯಮವಿದೆ. ಇದನ್ನು ಕಲ್ಲುಮಲ್ಲಯ್ಯ ಎಂದು ಹೇಳುತ್ತಾರೆ. ಸತ್ತವರ ಆತ್ಮ ತೃಪ್ತಿಗಾಗಿ, ಆಡು, ಕುರಿ, ಕೋಳಿ, ಎಮ್ಮೆ ಮುಂತಾದ ಪ್ರಾಣಿಗಳನ್ನು ಬಲಿಕೊಡುವರು. ಕೆಲವು ಗುಂಪುಗಳಲ್ಲಿ ಸತ್ತವನ ಮಗನು ಮೊದಲು ಬಂದು ಕಲ್ಲನ್ನು ಸಮಾಧಿಯ ಮೇಲೆ ಇಡುವನು. ಅನಂತರ ಜೊತೆಯಲ್ಲಿ ಬಂದವರೆಲ್ಲಾ ಕಲ್ಲು ಇಟ್ಟು ಜೋಡಿಸುವರು. ಸತ್ತವನ ಹೆಂಡತಿಯು ತಾಲಿ ತೆಗೆಯುವುದಿಲ್ಲ. ಆದರೆ ಬೇರೆ ಕೂಡಿಕೆ ಮಾಡಿಕೊಂಡಾಗ ಮಾತ್ರ ತಾಲಿಯನ್ನು ತೆಗೆದು ಗಂಡನ ಕಡೆಯವರಿಗೆ ಕೊಟ್ಟುಬಿಡಬೇಕು. ಸತ್ತವರಿಗೆ ಸೂತಕ ಇರುವ ಪದ್ಧತಿ ಇದೆ. ಸೂತಕ ಕಳೆದ ಮೇಲೆ ಕುಲಕ್ಕೆ ಊಟ ಕೊಡುವರು.

ತೋಡರ ಉತ್ತರ ಕ್ರಿಯಾ ಪದ್ಧತಿ ಬಹು ವಿಸ್ತಾರ. ಇವರಲ್ಲಿ ಸತ್ತವರನ್ನು ಸುಡುವರು. ಸತ್ತಮೇಲೆ ಹೆಣವನ್ನು ಬೇರೆ ಗುಡಿಸಲಿಗೆ ಸಾಗಿಸುವರು. ಅದರಲ್ಲಿ ಮೂರು ಭಾಗಗಳಿರುತ್ತವೆ. ಅಲ್ಲಿ ಹೆಣವಿರುವಾಗ ಆ ಪಂಗಡದ ಹೆಂಗಸರು ಅದನ್ನು ನೋಡುವುದಕ್ಕೆ ಮೊದಲನೆಯ ಕೊಠಡಿಗೆ ಬಂದು ಹೋಗುವರು. ಗಂಡಸರು ಎರಡನೆಯ ಕೊಠಡಿವರೆಗೂ ಬಂದು ಹೋಗುವರು. ಬಹು ಮುಖ್ಯರಾದವರು ಹೆಣವಿಟ್ಟ ಕೊಠಡಿಯೊಳಕ್ಕೇ ಬರಬಹುದು. ಹೆಣವನ್ನು ಕರಿಬಟ್ಟೆಯಿಂದ ಸುತ್ತುವರು. ಉತ್ತರಕ್ರಿಯೆಗೆ ಒಂದು ದಿನವನ್ನು ಗೊತ್ತುಮಾಡಿ ಆದಿನ ಎಮ್ಮೆಯ ಹಾಲನ್ನು ಕರೆದು ತಂದು ದೊನ್ನೆಯಲ್ಲ ಬಿಟ್ಟು ಹೆಣದ ಬಾಯಿಗೆ ಮೂರು ಸಲ ಬಿಡುವರು. ಅನಂತರ ಹೆಣವನ್ನು ಚಟ್ಟದ ಮೇಲಿಟ್ಟು ಸ್ಮಶಾನಕ್ಕೆ ತರುವರು. ಚಿತೆಯ ಮಗ್ಗುಲಲ್ಲಿ ಚಟ್ಟವನ್ನು ಇಟ್ಟು ಅಲ್ಲಿಗೆ ಬಂದವರೆಲ್ಲಾ ಹೆಣಕ್ಕೆ ತಮ್ಮ ಹಣೆಯನ್ನು ಸೋಕಿಸಿ ತಮ್ಮ ಗೌರವ ಸೂಚಿಸುವರು. ಅನಂತರ ಚಟ್ಟವನ್ನು ಅಲ್ಲಿಯೇ ಕಟ್ಟಿರುವ ಗುಡಿಸಲಿನಲ್ಲಿಡುವರು. ಹೆಂಗಸರೆಲ್ಲಾ ಅದರ ಸುತ್ತ ನೆರೆದು ಜೋಡಿಜೋಡಿಯಾಗಿ ಹೆಣದ ಹತ್ತಿರಹೋಗಿ ಅದಕ್ಕೆ ತಮ್ಮ ಹಣೆ ತಾಗಿಸಿ ಅಳುವರು. ಗಟ್ಟಿಯಾಗಿ ರೋದನಮಾಡುವರು. ಹೀಗಾಗುತ್ತಿರುವಾಗ ಗಂಡಸರು ಅಲ್ಲಿ ಒಂದು ಚಿತೆಯನ್ನು ಸಿದ್ಧಪಡಿಸುವರು. ಅನಂತರ ಒಂದು ಎಮ್ಮೆಯನ್ನು ತಂದು ಅದರ ಕತ್ತಿಗೆ ಗಂಟೆ ಕಟ್ಟಿ, ಬೆನ್ನಿಗೆ ಬೆಣ್ಣೆ ತಿಕ್ಕಿ, ಹೆಣದ

ಮುಂದೆ ನಿಲ್ಲಿಸಿ ಬಲಿಕೊಡುವರು. ಬಲಿಕೊಟ್ಟ ಎಮ್ಮೆಯ ತಲೆಯಹತ್ತಿರ ಹೆಣವನ್ನು ಇಡುವರು. ಹೆಣದ ಬಲಗೈಯಲ್ಲಿ ಎಮ್ಮೆಯ ಕೊಂಬನ್ನು ಹಿಡಿಸು ತ್ತಾರೆ. ಸತ್ತವರು ಹೆಂಗಸಾದರೆ ಹೆಣವನ್ನು ಎಮ್ಮೆಯ ಕಾಲಿನ ಬಳಿ ಇಡು ತ್ತಾರೆ. ಅಲ್ಲಿರುವವರೆಲ್ಲಾ ಎಮ್ಮೆಯನ್ನೂ, ಹೆಣವನ್ನೂ ಪ್ರದಕ್ಷಿಣೆಮಾಡಿ ಕೊಂಬಿಗೆ ತಮ್ಮ ಹಣೆಯನ್ನು ತಾಕಿಸಿ ತಮ್ಮ ಗೌರವ ಸೂಚಿಸುವರು. ಆಮೇಲೆ ಜೋಡಿಯಾಗಿ ಎದುರುಬದುರಾಗಿ ನಿಂತು ರೋದಿಸುತ್ತಾರೆ. ಹೀಗೆ ಮಾಡುವು ದರಿಂದ ವಿಜಾತೀಯ ಧ್ವನಿಯೊಂದು ಕೇಳಿಬರುವುದು.

ಅನಂತರ ಚಟ್ಟವನ್ನು ಚಿತೆಯ ಹತ್ತಿರ ಇಟ್ಟು ಆಗತ್ಯವಾದ ಕೆಲವು ಪದಾರ್ಥಗಳನ್ನು ಗಂಟುಕಟ್ಟಿ ಚಟ್ಟದ ಮೇಲೂ, ಹೆಣದ ಹೊದ್ದಿಕೆಯ ಒಳಗೂ ಇಡುವರು. ಹೀಗೆ ಇಡುವ ಪದಾರ್ಥಗಳಲ್ಲಿ ಅಕ್ಕಿ, ಕಾಳು, ಬೆಲ್ಲ, ಜೇನು, ತೆಂಗಿನಕಾಯಿ, ಹೊಗೇಸೊಪ್ಪು, ಬೆಣ್ಣೆ, ಇತರ ತಿಂಡಿಪದಾರ್ಥಗಳೆಲ್ಲ ಇವೆ. ಆಗ ಹೆಣಕ್ಕೆ ಅಲಂಕಾರಮಾಡುವರು. ಆಭರಣ ಇಡುವರು. ನೆರದಿದ್ದವರು ಕೊಟ್ಟಹಣವನ್ನು ಸೇರಿಸಿ ಹೆಣದ ಕಾಲಿನ ಬಳಿ ಇಡುತ್ತಾರೆ. ಆಮೇಲೆ ಅರುಣಿಯಿಂದ ಬೆಂಕಿಮಾಡಿ ಚಿತೆಯ ಮೇಲುಭಾಗವನ್ನು ಹೊತ್ತಿಸುವರು. ಅದರ ಮೇಲೆ ಬೆಣ್ಣೆಯನ್ನು ಹಾಕುತ್ತಾರೆ. ಚಟ್ಟದ ಮೇಲೆ ಇಟ್ಟ ಪದಾರ್ಥ ಗಳನ್ನೆಲ್ಲಾ ತೆಗೆದಿಟ್ಟು ಹೆಣವನ್ನು ಚಿತೆಯ ಮೇಲಕ್ಕೆ ಏರಿಸುವರು. ಹೆಣದ ತಲೆಯಿಂದ ಒಂದು ಹಿಡಿ ಕೂದಲನ್ನು ತೆಗೆದು ಎರಡನೆಯ ಉತ್ತರಕ್ರಿಯೆಗಾಗಿ ಶೇಖರಿಸಿಡುವರು. ಹೀಗೆ ಮಾಡುತ್ತಿರುವಾಗ ಚಿತೆಯೆಲ್ಲಾ ಚೆನ್ನಾಗಿ ಹತ್ತಿ ಕೊಂಡು ಹೆಣವು ಸುಟ್ಟುಬೂದಿಯಾಗುವುದು. ಹೀಗೆ ಉತ್ತರಕ್ರಿಯೆಗೆ ಸಂಬಂಧಪಟ್ಟ ಅನೇಕ ಸಂಪ್ರದಾಯಗಳು ತೋಡರಲ್ಲಿ ಬಳಕೆಯಲ್ಲಿ ಬಂದಿವೆ.

ಕೊಡಗಿನ ಎರವರು ಸತ್ತವರನ್ನು ಹೂಳುತ್ತಾರೆ. ಹೂಳುವುದಕ್ಕೆ ಮುಂಚೆ ಹೆಣಕ್ಕೆ ಸ್ನಾನಮಾಡಿಸಿ, ಹೊಸಬಟ್ಟೆಯನ್ನು ಹೊದಿಸಿ ದಕ್ಷಿಣಕ್ಕೆ ತಲೆಮಾಡಿ, ಗುಂಡಿಯಲ್ಲಿ ಮಲಗಿಸಿ ಹತ್ತಿರ ಅನ್ನಹಾಲು ಇಟ್ಟು ಸಮಾಧಿಮಾಡುವರು. ಸತ್ತ ಎಂಟು ಹತ್ತನೆಯ ದಿನಗಳಲ್ಲಿ ಸಮಾಧಿಯ ಹತ್ತಿರ ಅನ್ನನೀರು ಇಡುತ್ತಾರೆ. ಇದನ್ನು 'ಕಾಕಬಲಿ' ಎಂದು ಹೇಳುವರು. ಸಮಾಧಿಮಾಡಿ ಬಂದ ಮೇಲೆ ಗುಡಿಸಿಲನ್ನು ಸಾರಿಸಿ ಚೊಕ್ಕಟಮಾಡುವರು. ಎಲ್ಲರೂ ಸ್ನಾನಮಾಡಿ ಆದ ಮೇಲೆ, ಮಾಂಸ, ಮದ್ಯ, ಆಹಾರವನ್ನು ಪಿತೃಪ್ರೀತ್ಯರ್ಥವಾಗಿ ಎಲ್ಲರಿಗೂ ಹಂಚುವರು. ಕುಲದ ಯಜಮಾನ ಕೆನಲಡಿಯು ಸತ್ತವನಿಗೆ ಉತ್ತಮಸ್ಥಾನ ಕೊಡುವಂತೆ ದೇವರನ್ನು ಪ್ರಾರ್ಥಿಸುವನು. ಹತ್ತಿರದ ಸಂಬಂಧಿಗಳು ಸತ್ತವರ ತೃಪ್ತಿಗಾಗಿ ಗುಡಿಸಲ ಹೊರಗಡೆ ಆಹಾರವನ್ನಿಡುವರು. ಕಾಗೆಗಳು ಬಂದು ಅದನ್ನು ತಿಂದುಹೋದರೆ ಸತ್ತವರ ಪ್ರೇತ ತೃಪ್ತಿಯಾಯಿತೆಂದು ಅವರ ಭಾವನೆ. ಬಂದು ತಿನ್ನದೇ ಹೋದರೆ ಏನೋ ಅಪಶಕುನ ಎಂಬ ಶಂಕೆ ಅವರಿಗೆ. ದೇವತೆ ಗಳೂ, ಪಿತೃಗಳೂ ಕೋಪಗೊಂಡಿರಬೇಕೆಂದು ತಿಳಿದು ಪುನಃ ಉತ್ತರಕ್ರಿಯೆ ಮಾಡುವುದುಂಟು. ಸತ್ತವರು ಹೆಂಗಸಾದರೆ ಹೆಣವನ್ನು ಕುಳ್ಳಿರಿಸಿ ಸಮಾಧಿಮಾಡುತ್ತಾರೆ.

ಕಾಡುಕುರುಬರಲ್ಲಿ ಮಕ್ಕಳು ಸತ್ತರೆ ಹೂಳುವರು. ದೊಡ್ಡವರಾದರೆ ಸುಡುವರು. ಏಳು ದಿವಸ ಸೂತಕ ಇರುವರು. ಎಂಟನೆಯ ದಿವಸ ತಿಥಿಮಾಡಿ ಕುಲಕ್ಕೆ ಊಟಕೊಡುತ್ತಾರೆ. ಸತ್ತವರ ಪ್ರೇತವು ಕುಲಸ್ಥರ ಕನಸಿನಲ್ಲಿ ಕಾಣಿಸಿಕೊಳ್ಳುವುದೆಂಬ ನಂಬಿಕೆ ಅವರಿಗಿದೆ. ಪ್ರೇತದ ತೃಪ್ತಿಗಾಗಿ ಅವರ ಮನೆದೇವರಾದ ಬೆಟ್ಟದ ಚಿಕ್ಕಮ್ಮನಿಗೆ ಪೂಜೆ, ನೈವೇದ್ಯ ಮಾಡುತ್ತಾರೆ. ಕಾಡುಗೊಲ್ಲರಲ್ಲಿ ಗುಡಿಸಲಿನಲ್ಲಿ ಸತ್ತರೆ ಆ ಗುಡಿಸಲು ವಾಸಕ್ಕೆ ಯೋಗ್ಯವಲ್ಲವೆಂದು ಸುಟ್ಟುಬಿಡುತ್ತಾರೆ. ಸಾಯುವ ಸಮಯದಲ್ಲಿ ಹೊರಗಿಡಬೇಕು. ಸತ್ತಮೇಲೆ ಸ್ನಾನ ಮಾಡಿಸಬೇಕು. ಹೊಸ ಬಟ್ಟೆಯನ್ನು ಹೊದಿಸಿ ಅದರ ಮೇಲೆ ತಾಮ್ರದ ಮತ್ತು ಬೆಳ್ಳಿಯ ನಾಣ್ಯ ಇಡಬೇಕು. ಅನಂತರ ಚಟ್ಟದಲ್ಲಿಟ್ಟು ಸಾಗಿಸುವರು. ಸತ್ತವನ ಮಗನು ನೀರಿನ ಗಡಿಗೆ ಹೊತ್ತು ಹೆಣವನ್ನು ಮೂರು ಸಲ ಪ್ರದಕ್ಷಿಣೆಮಾಡಿ ಹೆಣದ ಮುಂದೆ ಗಡಿಗೆಯನ್ನು ಕುಕ್ಕುವನು. ಹೆಣ ಮುಟ್ಟಿದವರಿಗೆ ಮೂರು ದಿನ ಸೂತಕ. ಸತ್ತದಿನ ಪ್ರೇತ ತೃಪ್ತಿಗಾಗಿ ಮನೆಯ ಮುಂದೆ ಮೊಸರನ್ನು ಇಡುವರು. ನಾಲ್ಕನೆಯ ದಿನ ಆರು ಹೂವನ್ನು ದೇವಾಲಯದ ಪೂಜಾರಿಗೆ ಕೊಡುತ್ತಾರೆ. ಸತ್ತವರ ನೆನಪಿಗಾಗಿ ಗ್ರಾಮದ ಪಕ್ಕದಲ್ಲಿ ಮಾಸ್ತಿಗಲ್ಲನ್ನು ನೆಡುವುದುಂಟು.

ದಕ್ಷಿಣ ಕನ್ನಡದ ಕೊರಗರು ಸತ್ತವರನ್ನು ಹೂತು ಹದಿನಾರನೆಯ ದಿವಸ ಸಮಾಧಿಯ ಮೇಲೆ ಕಲ್ಲನ್ನು ನೆಡುವರು. ಅನ್ನ ಮದ್ಯವನ್ನು ಸಮಾಧಿಯ ಮೇಲೆ ಇಡುತ್ತಾರೆ. ನೀಲಗಿರಿಯ ಇರುಳರಲ್ಲಿ ಯಾರಾದರೂ ಸತ್ತಾಗ ಇಬ್ಬರು ಕಾಡು ಕುರುಬರು ಬಂದು ಒಬ್ಬರನ್ನೊಬ್ಬರು ಕ್ಷೌರಮಾಡುವರು. ಅವರಿಗೆ ಊಟಮಾಡಿಸಿ ಹೊಸ ಬಟ್ಟೆ ಕೊಡಲಾಗುವುದು. ಅವರು ಅದನ್ನು ತಲೆಗೆ ಕಟ್ಟಿಕೊಂಡು ಹೆಣದ ಮುಂದೆ ನಿಂತು ನೃತ್ಯ ಮಾಡುವರು. ಇತರ ಹೆಂಗಸರು ಗಂಡಸರಾದಿಯಾಗಿ ಎಲ್ಲರೂ ಹೆಣವನ್ನು ಪ್ರದಕ್ಷಿಣೆಮಾಡಿ ನೃತ್ಯಮಾಡುವರು. ಸತ್ತವನ ಬಟ್ಟೆಯನ್ನೇ ಹೆಣಕ್ಕೆ ಹೊದಿಸಿ ಗುಳಿಯಲ್ಲಿ ಕೂಡಿಸಿ ಸಮಾಧಿ ಮಾಡುವರು. ಗುಳಿಯಲ್ಲಿ ಒಂದು ಗೂಡನ್ನು ಮಾಡಿ ಅದರಲ್ಲಿ ಹೊಸಬಟ್ಟೆಯಿಟ್ಟು ಮುಚ್ಚುವರು. ಸಮಾಧಿ ಎತ್ತರವಾಗಿ ಕಾಣುವಂತೆ ಮಣ್ಣುದಿಣ್ಣೆ ಮಾಡುವರು.

## ೭. ಸಮಾಜರಚನೆ

ಆದಿವಾಸಿಗಳು ಕೀಳುದರ್ಜೆಯವರೆಂಬ ಭಾವನೆ ಕೆಲವರಿಗಿದೆ. ಇವರನ್ನು ಸಾಮಾನ್ಯವಾಗಿ ಮುಟ್ಟುವುದಿಲ್ಲ. ಉತ್ತಮರು ಇವರ ಸಂಪರ್ಕಮಾಡುವುದಿಲ್ಲ. ಬಳಕೆ ಭೋಜನ ಇಟ್ಟುಕೊಂಡಿಲ್ಲ. ಸಾಮಾಜಿಕ ನಿಯಮಗಳು ಇವರಲ್ಲಿ ಬಹಳವಾಗಿವೆ. ಸೋಲಿಗರ ಒಂದೊಂದು ಪೋಡಿನಲ್ಲಿ ೧೦-೧೫ ಸಂಸಾರಗಳಿವೆ. ಒಂದೊಂದು ಸಂಸಾರದಲ್ಲಿ ನಾಲ್ಕೈದು ಜನರಿದ್ದಾರೆ. ವಾಸದ ಗುಡಿಸಲು ಚಿಕ್ಕದಾದುದರಿಂದ ಮಕ್ಕಳು, ಬಾಣಂತಿಯರು ಮಾತ್ರ ಒಳಗೆ ಮಲಗುವರು. ಉಳಿದವರು ಹೊರಗೆ ಮಲಗುತ್ತಾರೆ. ಪೋಡಿಗೊಬ್ಬ ಯಜಮಾನನಿರುವನು. ಅವನೇ ಎಲ್ಲ ವ್ಯವಹಾರವನ್ನೂ ಇತ್ಯರ್ಥಪಡಿಸುವನು. ಇವನ ಸಹಾಯಕ್ಕೆ ಕೊಲ್ಕಾರನೊಬ್ಬನಿದ್ದಾನೆ. ಕಟ್ಟೇಮನೆ ಇವರ ನ್ಯಾಯಾಸ್ಥಾನ. ಇವನ ತೀರ್ಪೇ ಕೊನೆ



ಎರವರ ಯುವತಿ



ಎರವರ ಯುವಕ

ಯದು. ಮದುವೆಯಾಗದೆ ಹೆಂಗಸು ಮಗುವನ್ನು ಹಡೆದರೆ ಯಜಮಾನನು ವಿಚಾರಣೆ ನಡೆಯಿಸಿ, ಮಗುವಿಗೆ ಕಾರಣನಾದವನನ್ನು ಕಂಡುಹಿಡಿದು, ಅವಳನ್ನು ಮದುವೆಯಾಗುವಂತೆ ತೀರ್ಪುಕೊಡುವನು. ಅವನಿಗೆ ದಂಡ ವಿಧಿಸುವನು. ಸೋಲಿಗರಲ್ಲಿ ಪಾದರಕ್ಷಾ ಪ್ರಯೋಗವು ದೊಡ್ಡ ತಪ್ಪು. ಹೊಡೆದವನು ಮೂರು ರೂಪಾಯಿ ದಂಡ ತೆರಬೇಕು. ಕುಲಕ್ಕೆ ಊಟ ಕೊಡಬೇಕು.

ಕಾಡುಗೊಲ್ಲರ ಹಟ್ಟಿಯ ಯಜಮಾನನಿಗೆ ವಿಶೇಷ ರೀತಿಯ ಅಧಿಕಾರವಿದೆ. ಸಂಸಾರದ ವ್ಯಾಜ್ಯಗಳ ತೀರ್ಪನ್ನು ಅವನೇ ಕೊಡುವನು. ಜೊತೆಗೆ ಅವನು ಪೂಜಾರಿ. ಬೇನೆಗಳಿಗೆ ಔಷಧಿಕೊಡುತ್ತಾನೆ. ಮತೀಯ ಸಂಬಂಧ ವ್ಯವಹಾರ ತೀರ್ಪಿಗೆ ಅವರಲ್ಲಿ ಒಂದು ಮಂಡಲಿಯಿದೆ. ಇದರಲ್ಲಿ ಬೇರೆ ಬೇರೆ ಹಟ್ಟಿಯ ಪೋಡಿನ ಅಥವಾ ಮಾಡದ ಯಜಮಾನರು ಇರುವರು. ತಪ್ಪಿತಸ್ಥನ ಕಡೆಯ ವರೂ ಹಾಜರಿರುವರು. ಮಂಡಲಿಯ ಮುಂದೆ ವಿಚಾರಣೆ ನಡೆಯುವಾಗ ಸಾಕ್ಷಿ ಹೇಳುವವರು ಅವರ ದೇವರ ಮೇಲೆ ಆಣೆ ಇಟ್ಟು ಹೇಳಬೇಕು. ಕೆಲವರು ಜುಂಜಪ್ಪನ ಮೇಲೆ ಆಣೆ ಇಡುವರು. ಇನ್ನು ಕೆಲವರು ಕ್ಯಾತೀದೇವರು, ನಂಜುಂಡೇಶ್ವರ, ಪಟ್ಟಲದಮ್ಮ, ಮಾರಿಯಮ್ಮ—ಮುಂತಾದ ಕುಲದೇವತೆಗಳ ಮೇಲೆ ಆಣೆಯಿಟ್ಟು ಮಾತನಾಡುವುದುಂಟು.

ತೋಡರ ಸಂಸಾರಗಳು ರಕ್ತಸಂಬಂಧದಿಂದ ಕೂಡಿವೆ. ಕೆಲವು ಸಂಸಾರ ಗಳಿಗೆ ವಿಶೇಷರೀತಿಯ ಪ್ರಾಶಸ್ತ್ಯವಿದೆ. ಯಜಮಾನರ ಕುಲಕ್ಕೆ ಸೇರಿದ ಸಂಸಾರ ಗಳು ಪ್ರತ್ಯೇಕವಾಗಿವೆ. ಮಂತ್ರ, ಮಾಟ, ಶೂನ್ಯಕ್ಕೆ ಹೆಸರಾಂತ ಸಂಸಾರಗಳು ಬೇರೆ ಇವೆ. ಸಾಮಾನ್ಯವಾಗಿ ಪುರುಷನಿಂದ ವಂಶಾನುಕ್ರಮ ಬರುವುದು. ಮಗನು ತಂದೆಯ ಕುಲಕ್ಕೆ ಸೇರಿದವನು. ಇವರಲ್ಲಿ ದತ್ತು ಪದ್ಧತಿ ಇಲ್ಲ. ಅನಾಥರನ್ನು ಸಮಾಜವೇ ರಕ್ಷಿಸುವುದು. ಮಕ್ಕಳಿಲ್ಲದವನು ಪುನಃ ವಿವಾಹ ಮಾಡಿ ಕೊಳ್ಳಬಹುದು. ಕುಲಸ್ಥರ ಮಂಡಲಿಯನ್ನು ನಿರ್ಮಿಸುವಾಗ ಪ್ರಾಶಸ್ತ್ಯ ಪಡೆದ ಸಂಸಾರಗಳಿಂದಲೇ ಸದಸ್ಯರನ್ನು ಆರಿಸಲಾಗುವುದು.

ಆದಿವಾಸಿಗಳಲ್ಲಿ ವ್ಯಭಿಚಾರವಿಲ್ಲ. ಹೆಂಡತಿಯು ಗಂಡನ ವಿಷಯದಲ್ಲಿ ವಿಧೇಯತೆಯಿಂದ ಇರುವಳು. ವ್ಯಭಿಚಾರಿಯಾದ ಹೆಂಗಸನ್ನು ಗಂಡನು ಚಾವಟಿಯಿಂದ ಹೊಡೆಯುವನು. ಅವಳ ಪ್ರಿಯನಿಗೂ ಅದೇ ಶಿಕ್ಷೆ. ಗಂಡನೂ ಹೊಡೆಯದಿದ್ದಲ್ಲಿ, ಕುಲದ ಯಜಮಾನನೇ ಆ ಕೆಲಸಮಾಡುವನು. ಇನ್ನು ಕೆಲವು ಪಂಗಡಗಳಲ್ಲಿ ವ್ಯಭಿಚಾರಮಾಡಿದವರನ್ನು ಜಾತಿಯಿಂದ ಹೊರಗೆ ಹಾಕು ವರು. ಒಟ್ಟಿನಲ್ಲಿ ವ್ಯಭಿಚಾರವು ದೋಷಯುತವಾದುದೆಂದು ಆದಿವಾಸಿಗಳು ಪರಿಗಣಿಸಿದ್ದಾರೆ.

## ೮. ಜೀವನ ಮತ್ತು ಉದ್ಯೋಗ

ಆದಿವಾಸಿಗಳ ಜೀವನ ಸುಲಭ ಮತ್ತು ಸರಳ. ಇವರಲ್ಲಿ ಕೆಲವರು ವ್ಯವ ಸಾಯದ ಕಸಬನ್ನು ಕೈಗೊಂಡಿದ್ದಾರೆ. ಮತ್ತೆ ಕೆಲವರು ಕಾಡಿನಲ್ಲಿ ಬೆಳೆಯುವ

ನೆಲ್ಲಿಕಾಯಿ, ಅರಳೀಕಾಯಿ, ಮೆಣಸು, ಯಾಲಕ್ಕಿ, ಜೇನು ಮುಂತಾದುವನ್ನು ಸಂಗ್ರಹಿಸಿ, ಸುತ್ತಮುತ್ತಲ ಹಳ್ಳಿಗೆ ಹೋಗಿ ವಿನಿಮಯಮಾಡಿಕೊಂಡು ಬಂದು ಜೀವಿಸುವುದುಂಟು. ತೋಡರು ಎಮ್ಮೆಗಳನ್ನು ಸಾಕಿ, ಅವುಗಳ ಹಾಲು ಬೆಣ್ಣೆಗಳಿಂದ ಜೀವನ ಮಾಡುವರು. ಸೋಲಿಗರ ವ್ಯವಸಾಯ ಸುಲಭ. ತಾವು ವಾಸಮಾಡುವ ಗುಡಿಸಲಿನ ಪಕ್ಕದ ಇಳಿಜಾರು ಭೂಮಿಯನ್ನು ಮಳೆ ಬಂದ ತಕ್ಷಣ ಗುದ್ದಲಿ ಪಿಕಾಸಿಗಳಿಂದ ಹದಮಾಡಿ ರಾಗಿ, ತೊಗರಿ, ಅವರೆ ಮುಂತಾದುವನ್ನು ಬಿತ್ತುವರು. ತಗ್ಗಾದ ಜಾಗದಲ್ಲಿ ಬಾಳೆ ನೆಟ್ಟು ಬೆಳೆಸುವರು. ಕಾಯಿಪಲ್ಯ ಹಾಕುವುದುಂಟು. ಬೆಳಸನ್ನು ಎಲ್ಲರೂ ಹಂಚಿಕೊಳ್ಳುವರು. ಹೀಗೆ ನಾಲ್ಕಾರು ವರುಷ ಸಾಗುವಳಿಮಾಡಿದ ಮೇಲೆ ಆ ಸ್ಥಳವನ್ನು ಬಿಟ್ಟು ಬೇರೆ ಭೂಮಿಯನ್ನು ಸಾಗುವಳಿಗೆ ಚುನಾಯಿಸುವರು. ಅವರು ಭೂಮಿ ಉಳುವುದಿಲ್ಲ. ಹಾಗೆ ಉಳುವುದು ಭೂಮಿ ತಾಯಿಯ ಎದೆ ಸೀಳಿ ಸಂಕಟಪಡಿಸಿದಂತೆ ಎಂಬುದಾಗಿ ಅವರು ಭಾವಿಸುವರು.

ಸೋಲಿಗರು ಒಳ್ಳೆಯ ಬೇಟೆಗಾರರು. ಕಾಡಿನ ವಾಸದಿಂದ ಕಾಡು ಮೃಗಗಳ ರೀತಿ ನೀತಿಗಳನ್ನು ಅರಿತಿದ್ದಾರೆ. ಕಡವೆ, ಸಾರಗ, ಹಂದಿ, ಕಾಡೆಮ್ಮೆ, ಕಾಡು ಬೆಕ್ಕು, ನರಿ ಮುಂತಾದುವನ್ನು ಕೊಂದು ತಿನ್ನುತ್ತಾರೆ. ಬಿಲ್ಲು ಬಾಣಗಳನ್ನು ಉಪಯೋಗಿಸುತ್ತಾರೆ. ಕಾಡಾನೆ ಎದುರಿಗೆ ಬಂದರೂ ಸೋಲಿಗರು ವೇಗವಾಗಿ ಓಡಿಹೋಗಿ ತಪ್ಪಿಸಿಕೊಳ್ಳಬಲ್ಲ ಚಮತ್ಕಾರ ಅವರಿಗಿದೆ. ಹುಲಿ, ಚಿರತೆ, ಆನೆ, ಇವುಗಳನ್ನು ಅವರು ಕೊಲ್ಲುವುದಿಲ್ಲ. ಈ ಮೃಗಗಳು ದೇವರಿಗೆ ಸೇರಿದ್ದು ಎಂದು ಅವರು ಭಾವಿಸುತ್ತಾರೆ. ಅವಕ್ಕೆ ದೂರದಿಂದಲೇ ನಮಸ್ಕಾರ ಮಾಡುವರು.

ಕಾಡುಗೊಲ್ಲರು ಕುರಿ ಹಸುಗಳ ಪಾಲನೆಮಾಡುತ್ತಾರೆ. ವ್ಯವಸಾಯ ಅಷ್ಟಾಗಿ ಅವರಲ್ಲಿ ಇಲ್ಲ. ಸ್ವಂತಕ್ಕೆ ಬೇಕಾಗುವ ಅಲ್ಪ ಸ್ವಲ್ಪ ದವಸವನ್ನು ಅವರು ಬೆಳೆಯುತ್ತಾರೆ. ಮೀನು ಹಿಡಿಯುವರು. ಇವರು ಅಂತಹ ಬೇಟೆಗಾರರಲ್ಲ. ಮೊಲ, ಕೋಳಿ, ಕುರಿ, ಹೆಗ್ಗಣ ಮುಂತಾದುವನ್ನು ತಿನ್ನುತಾರೆ. ಪಶುಪಾಲನೆ ಇಲ್ಲದ ಗೊಲ್ಲನಿಲ್ಲ. ಅದೇ ಅವನ ಮುಖ್ಯ ಉದ್ಯೋಗ. ಕಾಡು ಕುರುಬರು ಮರ ಕಡಿಯುತ್ತಾರೆ. ಅರಣ್ಯದ ಇತರ ಕೆಲಸಗಳನ್ನು ಮಾಡುತ್ತಾರೆ. ಕೆಲವರು ರಾಗಿಯನ್ನು ಬೆಳೆಯುವರು. ಕಾಡಿನಲ್ಲಿ ಜೇನು, ರಾಳ, ಗೇರು ಬೀಜ ಮುಂತಾದುವನ್ನು ಸಂಗ್ರಹಿಸಿ ಮಾರುತ್ತಾರೆ. ಹುಲ್ಲೇಕರು, ಕಡವೆ, ಮೊಲ ಇವುಗಳನ್ನು ಹಿಡಿಯುವುದಕ್ಕೆ ಸಹಾಯಮಾಡುವ ನಾಯಿಗಳನ್ನು ಇವರು ಸಾಕುತ್ತಾರೆ. ನವಿಲು ಮತ್ತು ಇತರ ಪಕ್ಷಿಗಳನ್ನು ಹಿಡಿಯುವುದಕ್ಕೆ ಸುಲಭವಾದ ಹಗ್ಗದ ಉರುಲುಗಳನ್ನು ಹಾಕುವುದರಲ್ಲಿ ಇವರು ಚತುರರು.

ಕೊಡಗಿನ ಎರವರು ಕಷ್ಟಸಹಿಷ್ಣುಗಳು. ಕೂಲಿ ಕೆಲಸವೇ ಅವರ ಜೀವನಾಧಾರ. ಅಹನ್ಯಹನಿ ಕಾಲಕ್ಷೇಪಮಾಡುವುದೇ ಅವರ ಅಭ್ಯಾಸ. ನಾಳೆಯ ಯೋಚನೆಯೇ ಅವರಿಗಿರುವುದಿಲ್ಲ. ಇನ್ನೊಬ್ಬರ ಅಧೀನದಲ್ಲಿರಲು ಅವರು ಇಷ್ಟಪಡುವುದಿಲ್ಲ. ತಮ್ಮ ಹೆಂಡತಿಯೊಡನೆ ಕಾಡಿಗೆ ಹೊರಟುಹೋಗುವರು.

ಅಲ್ಲಿ ಹಣ್ಣು, ಜೇನು, ಗೆಡ್ಡೆ, ಗೆಣಸು, ಮೀನು—ಮುಂತಾದುವನ್ನು ಸಂಗ್ರಹೆ ಮಾಡಿ ತಿನ್ನುವರು. ಎರವರು ಉಳುವುದಕ್ಕೆ, ಬಿತ್ತುವುದಕ್ಕೆ, ನಾಟು ಹಾಕು ವುದಕ್ಕೆ, ರೇಖೆಮಾಡುವುದಕ್ಕೆ, ಶುಭ ದಿನಗಳನ್ನೇ ಆರಿಸುವರು. ಯಾವ ಬೆಳೆಗೆ ಯಾವ ಮಳೆ ಒಳ್ಳೆಯದು, ಲಾಭಕರ ಎಂಬುದನ್ನು ಅವರು ಚೆನ್ನಾಗಿ ಬಲ್ಲರು. ಸಾಗುವಳಿ ಉಪಕರಣಗಳನ್ನು ಅವರು ಪೂಜಿಸುತ್ತಾರೆ.

ನೀಲಗಿರಿಯ ತೋಡರ ಮುಖ್ಯ ಕಸಬು ಎಮ್ಮೆ ಸಾಕುವುದು. ಇದೇ ಅವರ ಸರ್ವಸ್ವ. ಇದೊಂದು ಕಲೆ. ಅವರಿಗೆ ಎಮ್ಮೆಗಳನ್ನು ಕಟ್ಟುವುದಕ್ಕೆ ಪ್ರತ್ಯೇಕ ಗುಡಿಸಲುಗಳು ಅವರಲ್ಲಿವೆ. ಇವನ್ನು ಹೈನು ಗುಡಿಸಲು ಎಂದು ಕರೆಯುತ್ತಾರೆ. ದೇವಾಲಯಕ್ಕೆ ಇರುವಷ್ಟು ಪ್ರಾಶಸ್ತ್ಯ ಈ ಗುಡಿಸಲಿಗೆ ಅವರು ಕೊಡುತ್ತಾರೆ. ತೋಡರು ಆಚರಿಸುವ ಸಮಸ್ತ ಕಾರ್ಯಗಳೂ ಹೈನು ಶಾಖೆಗೆ ಸಂಬಂಧಪಟ್ಟಂತೆ ಇವೆ. ಇದೊಂದು ಕರೋಹಟ್ಟಿ. ಇಲ್ಲಿಗೆ ಎಲ್ಲ ತೋಡರೂ ಹೋಗುವುದಿಲ್ಲ. ಹೆಂಗಸರಂತೂ ಹೋಗುವಂತೆಯೇ ಇಲ್ಲ. ಹಾಲನ್ನು ಮೊಸರುಮಾಡಿ ಬೆಣ್ಣೆ ತೆಗೆಯುವುದು ಇವರ ಕುಶಲಕಲೆ. ಆ ಮೇಲೆ ಮಜ್ಜಿಗೆ ಹಚ್ಚುವುದು ಇವರ ಶುಭಕಾರ್ಯ. ಇದಕ್ಕೆ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಿರು ತ್ತಾರೆ. ಅಲ್ಲಿಗೇ ಬಂದು ಎಲ್ಲರೂ ಮಜ್ಜಿಗೆಯನ್ನು ಪಡೆದು ಹೋಗಬೇಕು. ಹಾಲು ಕರೆಯುವುದಕ್ಕೆ ಒಂದು ನಿಯಮವಿದೆ. ಎಲ್ಲರೂ ಈ ಕೆಲಸಮಾಡು ವಂತಿಲ್ಲ. ಯಾರು ನಿಯತವಾಗಿ ಈ ಕೆಲಸ ಮಾಡುವರೋ ಅವರೇ ಅದನ್ನು ಮಾಡಬೇಕು. ತೋಡರಲ್ಲಿ ಆಚರಣೆಯಲ್ಲಿರುವ ಎಲ್ಲ ಶುಭ, ಅಶುಭ ಕಾರ್ಯಕ್ಕೂ ಈ ಹೈನಿನ ಸಂಬಂಧವಿದ್ದೇ ಇದೆ. ಇಂತಹ ಪ್ರತಿಯೊಂದು ಕಾರ್ಯಕ್ಕೂ ಎಮ್ಮೆ ಯನ್ನು ಬಲಿಕೊಡುವ ಅಭ್ಯಾಸ ಅವರಲ್ಲಿದೆ. ಎಮ್ಮೆಯ ಪಾಲನೆ, ಪೋಷಣೆ, ಹೈನುಮನೆಯ ಕಾರ್ಯ—ಇವೆಲ್ಲ ತೋಡರ ನಿತ್ಯದ ಕೆಲಸ. ಪ್ರತ್ಯೇಕ ಪವಿತ್ರ ಎಮ್ಮೆ ಗಳೂ, ಪವಿತ್ರ ಕ್ಷೀರಶಾಲೆಗಳೂ ಇವರಲ್ಲಿವೆ. ಒಂದೊಂದು ಹೈನಿಗೂ ಪ್ರತ್ಯೇಕ ಹೆಸರನ್ನು ತೋಡರು ಕೊಟ್ಟಿರುತ್ತಾರೆ.

ತೋಡರು ಎಮ್ಮೆಯನ್ನು 'ಐರ್' ಎಂದೂ, ಕೋಣನನ್ನು 'ಏರ್' ಎಂದು ಕರೆಯುತ್ತಾರೆ, ಪ್ರತಿಯೊಂದು ಕರೆಯುವ ಎಮ್ಮೆಯನ್ನೂ ಒಂದೊಂದು ಹೆಸರಿ ನಿಂದ ಕೂಗುವರು. ಎಮ್ಮೆಗೆ ಅವರು ಹೆಚ್ಚಿನ ಪವಿತ್ರತೆಯನ್ನು ಕೊಟ್ಟಿದ್ದಾರೆ. ಅವರಲ್ಲಿ ಎಮ್ಮೆಯ ಗುಂಪುಗಳು ಬಹಳವಾಗಿವೆ. ಮೊಸರನ್ನು ಕಡೆಯು ವುದರಿಂದ ಅವರ ಪ್ರಾತರ್ವಿಧಿಯು ಪ್ರಾರಂಭವಾಗುವುದು. ಅನಂತರ ಹಾಲು ಕರೆಯುವರು. ಹೀಗೆ ಕರೆಯುವುದಕ್ಕೆ ದಪ್ಪ ಬೊಂಬಿನ ಅಂಡೆಯನ್ನು ಉಪಯೋಗಿಸುತ್ತಾರೆ. ಅದನ್ನು ಮಡಕೆಗೆ ಸುರಿದು ಹೈನುಮನೆಯಲ್ಲಿಡುತ್ತಾರೆ. ಸಾಮಾನ್ಯವಾಗಿ ಕರೆಯುವುದು, ಕಡೆಯುವುದು, ಕಾಯಿಸುವುದು, ಹೆಪ್ಪು ಹಾಕು ವುದು, ಮಜ್ಜಿಗೆ ಹಂಚುವುದು ಮುಂತಾದ ಕ್ಷೀರಶಾಲೆಯ ಕಾರ್ಯಗಳೆಲ್ಲಾ ನಿಯತವಾದ ಒಬ್ಬ ತೋಡನಿಂದಲೇ ಮಾಡಲ್ಪಡುವುದು. ಮಧ್ಯಾಹ್ನ ಮೂರು ಗಂಟೆಗೆ ನಿಯತವಾದ ತೋಡನು ಹೈನುಗೃಹಕ್ಕೆ ಹೋಗಿ ಹೊಸಲಿಗೆ ತಲೆ ಮುಟ್ಟಿಸಿ ನಮಸ್ಕಾರಮಾಡುವನು. ಹಾಲನ್ನು ಕಾಯಿಸುವಾಗ ದೇವರನ್ನು

ಕುರಿತು ಪ್ರಾರ್ಥಿಸುವನು. ಅನಂತರ ಹಾಲಿಗೆ ಹೆಪ್ಪು ಹಾಕುವನು. ಎರಡು ಹೊತ್ತು ಕಡೆಯುವ ವಾಡಿಕೆ ಅವರಲ್ಲಿದೆ.

ಹೈನು ಕಸಬಿಗೆ ಸಂಬಂಧಪಟ್ಟಹಾಗೆ ತೋಡರು ಅನೇಕ ಶುಭ ಕಾರ್ಯಗಳನ್ನು ನೇರವೇರಿಸುವರು. ಕರು ಹುಟ್ಟಿದರೆ ಹಬ್ಬಮಾಡುವರು. ಎಮ್ಮೆಗೆ ಉಪ್ಪು ತಿನ್ನಿಸುವುದೊಂದು ವ್ರತಾಚರಣೆ ಅವರಲ್ಲಿದೆ. ವರ್ಷಕ್ಕೆ ಐದು ಸಾರಿ ಎಮ್ಮೆಗೆ ಉಪ್ಪು ತಿನ್ನಿಸುವರು. ಪ್ರತಿಯೊಂದು ಸಲವೂ ಹಬ್ಬವನ್ನು ಆಚರಿಸುವರು. ಪ್ರತಿಯೊಂದು ಹೈನು ಗುಡಿಸಿಲಿನಲ್ಲೂ ಒಂದು ಪ್ರಾರ್ಥನಾ ಮಂದಿರವಿದೆ. ಅವರ ಪ್ರಾರ್ಥನೆಯ ಅರ್ಥ ಹೀಗಿದೆ : " ದೇವರೇ, ಎಮ್ಮೆಗಳನ್ನು ಚೆನ್ನಾಗಿಡು. ಅವುಗಳಿಗೆ ರೋಗಗಳು ಬಾರದಿರಲಿ. ವಿಷ ಜಂತುಗಳು ಅವನ್ನು ಕಾಡದಿರಲಿ. ಕಾಡೆಮ್ಮೆಗಳು ಅವನ್ನು ನೋಯಿಸದಿರಲಿ. ಪ್ರವಾಹ, ಬೆಂಕಿ—ಮುಂತಾದವುಗಳಿಂದ ಅವಕ್ಕೆ ದುಃಖ ಒದಗದಿರಲಿ. ಹುಲ್ಲು, ನೀರು ಅವಕ್ಕೆ ಸಮೃದ್ಧವಾಗಿ ದೊರೆಯುವಂತೆ ಅನುಗ್ರಹಮಾಡು, ದೇವರೇ !"

## ೯. ಮತ

ಆದಿವಾಸಿಗಳು ಸರ್ವ ಚೇತನವಾದಿಗಳು. ಇವರಲ್ಲಿ ಜಾತಿ ಭೇದವಿಲ್ಲ, ಪಂಗಡಗಳಿವೆ. ಹಿಂದೂ ಮತೀಯರಾದ ಉತ್ತಮರಲ್ಲಿ ಇವರು ಊಟ ಮಾಡುವರು. ಹರಿಜನರ ಸಂಪರ್ಕ ಇವರಿಗಿರುವುದಿಲ್ಲ. ಇವರು ಪೂಜಿಸುವ ದೇವರು ಅನೇಕ. ಸೋಲಿಗರು ಜಡೇಸ್ವಾಮಿ, ಗಂಗಾಧರೇಶ್ವರ, ಕ್ಯಾತೇದೇವರು, ಹುಲೀರಪ್ಪ, ಮುಂತಾದ ದೇವರುಗಳನ್ನೂ, ಮಂದಲ ಗಿರಿಯಮ್ಮ, ಮಾರಿಯಮ್ಮ, ಎಲ್ಲಮ್ಮ, ಬೈರಮ್ಮ—ಮುಂತಾದ ದೇವತೆಗಳನ್ನೂ ಪೂಜಿಸುತ್ತಾರೆ. ಇವರ ಬಹು ಮುಖ್ಯ ದೇವರು ಬಿಳಿಗಿರಿರಂಗಸ್ವಾಮಿ. ಇವರಿಗೆ ದೇವರಲ್ಲಿ ಬಹು ಭಕ್ತಿ. ಈ ದೇವರನ್ನು ಅವರು ' ಭಾವ ' ಎಂದು ಸಂಭೋದಿಸುತ್ತಾರೆ. ಇದಕ್ಕೊಂದು ಕಥೆ ಇದೆ.

ಸೋಲಿಗರ ಕುಲದ ಯಜಮಾನ ಬೊಮ್ಮೇಗೌಡ. ಅವನಿಗೆ ಏಳು ಜನ ಹೆಣ್ಣು ಮಕ್ಕಳು. ಕೊನೆಯವಳು ಕುಸುಮಾಲೆ, ಬಹು ರೂಪವತಿ. ದೇವರಲ್ಲಿ ಇವಳಿಗೆ ಬಹು ಭಕ್ತಿ. ತನ್ನನ್ನು ವರಿಸಬೇಕೆಂದು ಬಿಳಿಗಿರಿರಂಗಸ್ವಾಮಿಯಲ್ಲಿ ಮೊರೆ ಇಟ್ಟಳು. ಅವಳ ಭಕ್ತಿಗೆ ಸ್ವಾಮಿಯು ಮೆಚ್ಚಿ ಅವಳನ್ನು ವರಿಸಿದನು. ತನ್ನ ಊಳಿಗಕ್ಕೆ ಸೋಲಿಗರನ್ನೇ ನೇಮಿಸಿಕೊಂಡನು. ಹೀಗಿರುವಾಗ ಬೊಮ್ಮೇಗೌಡ ತನ್ನ ಮಗಳನ್ನು ಕಳುಹಿಸಿಕೊಡಬೇಕೆಂದು ಒಂದುಸಲ ದೇವರನ್ನು ಬೇಡಿದನು. ಆಗ ದೇವರು ಮಗಳಿಗೆ ಬದಲಾಗಿ ಒಂದು ಕೊಳಗ ಹಣವನ್ನು ತುಂಬಿಕೊಟ್ಟು ಕಳುಹಿಸಿದನು. ಅದನ್ನು ತರುವಾಗ ಬಿರುಗಾಳಿ ಎದ್ದು ಹಣವೆಲ್ಲಾ ತೂರಿಹೋಗಿ ಕೊಳಗದಲ್ಲಿ ಹನ್ನೆರಡೂವರೆ ಹಣ ಮಾತ್ರ ನಿಂತಿತು. ಸೋಲಿಗರಲ್ಲಿ ಇದೇ ಈಗ ಕನ್ಯಾಶುಲ್ಕವಾಗಿ ನಿಂತಿತು. ತಮ್ಮ ಕುಲದ ಹೆಣ್ಣನ್ನು ಸ್ವೀಕರಿಸಿದ ಸ್ವಾಮಿ ತಮ್ಮವರೆಂಬ ಭಾವನೆ ಸೋಲಿಗರಿಗಿದೆ. ಈ ದೇವಸ್ಥಾನದ ಕೆಲಸಗಳಲ್ಲಿ ಅವರು ನೆರವಾಗುವರು. ಸ್ವಾಮಿಯ ರಥೋತ್ಸವದ

ದಿವಸ ಸೋಲಿಗರು ಮೊದಲು ಬಂದು ರಥವನ್ನು ಎಳೆಯಬೇಕು. ಬಿಳಿಗಿರಿ ರಂಗಸ್ವಾಮಿಯು ಕಾಡಿನಲ್ಲೆಲ್ಲಾ ತಿರುಗುತ್ತಾನೆಂಬ ನಂಬಿಕೆ ಇವರಿಗಿದೆ. ಸೋಲಿಗರು ಸೂರ್ಯನನ್ನು "ಹೊತ್ತು" ಎಂದೂ, ಚಂದ್ರನನ್ನು 'ಮೊರೆ' ಎಂದೂ, ನಕ್ಷತ್ರಗಳನ್ನು 'ತಾರಕಿ' ಎಂದೂ ಕರೆಯುವರು. ಯಂತ್ರ, ಮಂತ್ರ, ಮಾಟ, ಶೂನ್ಯ ಇವುಗಳಲ್ಲಿ ಇವರಿಗೆ ನಂಬಿಕೆ ಇದೆ. ವರ್ಷಕ್ಕೊಂದು ಸಲ ಕಾರಯ್ಯ, ಮಾದೇಶ್ವರನನ್ನು ಪೂಜಿಸುವರು. ಕನ್ನಾಕರಡಿ ಕಟ್ಟಿ ಮೆರಸುವರು. ಕೊಂಡ ಹಾಯುವ ಪದ್ಧತಿ ಇದೆ. ಮೌನವಾಗಿ ಪ್ರಾರ್ಥಿಸುವರು. ಪದಗಳನ್ನು ಹಾಡುವುದುಂಟು. ಏಕನಾದ, ಮದ್ದಳೆ ಉಪಯೋಗಿಸುವರು. ನರ್ತನ ಮಾಡುವುದುಂಟು.

ಕಾಡುಗೊಲ್ಲರು ಜುಂಜಪ್ಪ, ಬೂತೇದೇವರು, ಚಿಕ್ಕಣ್ಣಸ್ವಾಮಿ, ಚಿತ್ರದೇವರು—ಮುಂತಾದ ದೇವರನ್ನು ಪೂಜಿಸುವರು. ಚಿಕ್ಕಣ್ಣಸ್ವಾಮಿ ದೇವಾಲಯದಲ್ಲಿ ಚಿನ್ನ ಬೆಳ್ಳಿಯಿಂದ ಮಾಡಿದ ಚೇಳು, ಹಾವು ಮುಂತಾದುವನ್ನು ಇಟ್ಟು ಪೂಜಿಸುವರು. ಬೂತಪ್ಪನ ಜಾತ್ರೆಗೆ ಎಲ್ಲರೂ ಸೇರುವರು. ಆಡು ಕುರಿಗಳನ್ನು ಬಲಿಕೊಡುವುದುಂಟು. ಕಾಡು ಕುರುಬರಿಗೆ ಮಂತ್ರ ಮಾಟದಲ್ಲಿ ನಂಬಿಕೆ ಹೆಚ್ಚು. ರೋಗ ಬಂದರೆ ಔಷಧಿ ಕೊಡುವುದಿಲ್ಲ. ದೆವ್ವ ಅಥವಾ ಭೂತ ಹಿಡಿದಿದೆ ಎಂದು ಮಾಂತ್ರಿಕನಿಂದ ಪೂಜೆ ಮಾಡಿಸುವರು. ಪ್ರಾಣಿಗಳನ್ನು ಬಲಿಕೊಡುವರು. ಸಿಡುಬು ಕಂಡರೆ ಬಹು ಭಯ. ಇದನ್ನು ದೊಡ್ಡಮ್ಮನೆಂದು ಪೂಜಿಸಿ ಬಲಿಕೊಡುವರು. ಕೊಡಗು ದೇಶದ ಎರವರು ಕುಟ್ಟತಮ್ಮ, ಕಾಳಿ, ಚಾಮುಂಡಿ, ಕಾವೇರಿ—ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಕುಲದ ಯಜಮಾನನು ಮರದ ನೆರಳಿನಲ್ಲಿ ಚೊಕ್ಕಟವಾದ ಸ್ಥಳದಲ್ಲಿ ಅಕ್ಕಿ, ತೆಂಗಿನಕಾಯಿ ಇಟ್ಟು ದೀಪ ಹಚ್ಚುವನು. ಸೂರ್ಯನಿಗೆ ಎದುರಾಗಿ ನಿಂತು ದೇವರನ್ನು ಪ್ರಾರ್ಥಿಸುವನು. ವಿಗ್ರಹಾರಾಧನೆ ಇವರಲ್ಲಿ ಇಲ್ಲ. ಒಂದು ಮರದ ಕೆಳಗೆ ಕಲ್ಲನ್ನು ನೆಟ್ಟು ಅದನ್ನು "ಗುಳಿಕನ್" ಎಂದು ಪೂಜಿಸುವರು. ಅದಕ್ಕೆ ಮದ್ಯ ನಿವೇದನೆಮಾಡುವರು. ಕಾವೇರಿ, ಲಕ್ಷ್ಮಣತೀರ್ಥ ನದಿಗಳನ್ನೂ ಪೂಜಿಸುತ್ತಾರೆ. ಕನಲಡಿಯ ಮೇಲೆ ದೆವ್ವ ಬೂತ ಬಂದು ಹಿಂದೆ ನಡೆದುದನ್ನೆಲ್ಲಾ ಹೇಳುವುದು. ಮಾಟಗಾರನು ರೋಗಿಯ ಮುಂದೆ ಬಣ್ಣದ ನೀರು ಹಿಡಿದು ಮಂತ್ರ ಹೇಳುತ್ತಾನೆ. ರೋಗಿಯನ್ನು ಕೂರಿಸಿ ಕುಂಕುಮ ಇಟ್ಟು ಪೂಜೆ ಹಾಕುವುದುಂಟು. ತಮಟೆ ಬಡಿಯುತ್ತಾ ರೋಗಿಯ ಸುತ್ತ ಕುಣಿಯುತ್ತಾ, ವಿಜಾತೀಯ ಹಾಡುಗಳನ್ನು ಹೇಳುವ ಅಭ್ಯಾಸವಿದೆ ಇವರಲ್ಲಿ.

ತೋಡರು ತಮ್ಮ ದೇವರುಗಳೆಲ್ಲಾ ತಮ್ಮಂತೆಯೇ ಭೂಮಿಯ ಮೇಲೆ ಇದ್ದು ಬಾಳಿದವರೆಂದು ನಂಬಿದ್ದಾರೆ. ತಮ್ಮಂತೆಯೇ ತಮ್ಮ ದೇವರೂ, ಎಮ್ಮೆ, ಹೈನು, ಪವಿತ್ರ ಎಮ್ಮೆ—ಮುಂತಾದುವನ್ನು ಪಡೆದಿದ್ದರೆಂಬ ನಂಬಿಕೆ ಅವರಿಗಿದೆ. ದೇವರುಗಳು ಮಂಡಲಿಗಳನ್ನು ಹೊಂದಿದ್ದರು. ಒಬ್ಬರನ್ನೊಬ್ಬರು ಸಲಹೆ ಕೇಳುತ್ತಿದ್ದರು. ಗುಡ್ಡದ ತುದಿಯಲ್ಲಿದ್ದರಂತೆ. ತೋಡರ ಆದಿದೇವರ ಹೆಸರು 'ಪಿತಿ' ಅಥವಾ 'ಪೂತಿ'. ಪೂತಿಯ ಮಗ, 'ಓ಼'. ಪಿತಿ ಶಬ್ದಕ್ಕೆ

ಪೃಥ್ವಿ ಎಂಬ ಸಂಸ್ಕೃತ ಪದದ ಹೋಲಿಕೆಯಿದೆ. ' ಟೆಯಿಕಿರ್ಝಿ ' ಎಂಬುದು ಅವರ ಮುಖ್ಯದೇವತೆ. ಇವಳು ಎಲ್ಲೆಲ್ಲಿಯೂ ಇರುವಳೆಂಬುದು ಅವರ ನಂಬಿಕೆ. ಈ ದೇವತೆಯ ಹೆಸರಿನ ಬೆಟ್ಟವೂ, ಗ್ರಾಮವೂ, ನೀಲಗಿರಿಯಲ್ಲಿವೆ. ನೀಲಗಿರಿ ಬೆಟ್ಟಗಳಲ್ಲಿ ' ನೋಡ್ರ ' ಎಂಬುದೊಂದು ಬೆಟ್ಟ ಇದೆ. 'ಟೆಯಿಕಿರ್ಝಿ'ಯು ಒಂದು ದಿನ ಅಲ್ಲಿರುವಾಗ, ಮೈಸೂರು ಕಡೆಯಿಂದ ಕೆಲವು ಜನರು ಜಗಳವಾಡುವುದಕ್ಕೆ ಬಂದರೆಂದೂ, ಆಗ ಕಾಡಿನ ಮರಗಳಿಂದ ದೊಡ್ಡ ಶಬ್ದವಾದುದನ್ನು ಕೇಳಿ ಆ ಜನಗಳೆಲ್ಲಾ ಅಲ್ಲಿಯೇ ನಿಲ್ಲಲು ದೇವತೆಯು ಇದನ್ನು ಕಂಡು ಕೋಪಗೊಂಡು, ಆ ಜನರು ನಿಂತಲ್ಲಿಯೇ ಕಲ್ಲಾಗುವಂತೆ ಶಾಪ ಕೊಟ್ಟಳೆಂದೂ ಕಥೆ ಇದೆ. ಈಗಲೂ ಆ ಬೆಟ್ಟದ ಕಲ್ಲನ್ನು ಕಂಡು, ಅವುಗಳೆಲ್ಲಾ ಹಿಂದೆ ಮನುಷ್ಯರಾಗಿದ್ದವರೆಂದು ಅವರು ಹೇಳುವರು.

' ಟೆಯಿಕಿರ್ಝಿ 'ಯ ಮಗ ' ಕೊರಾಟೊ '. ಇವನು ಬ್ರಹ್ಮಚಾರಿ. ಇವನ ಕೈಯಲ್ಲಿ ಯಾವಾಗಲೂ ಕಬ್ಬಿಣದ ಕೋಲು ಇರುವುದು. ಒಂದು ದಿವಸ ಇವನು ತನ್ನ ಕೋಲಿನಿಂದ ಒಬ್ಬ ಕಾಡು ಕುರುಬ ಯುವತಿಯ ತಲೆಗೆ ತಾಡಿಸಿದನಂತೆ. ಅವಳು ಗರ್ಭವತಿಯಾಗಿ ಸುಂದರವಾದ ಹೆಣ್ಣು ಮಗುವನ್ನು ಪಡೆದಳಂತೆ. ' ಕೊರಾಟೊ'ವು ಮಗುವನ್ನು ಸಾಕಲು ತಾನು ತೆಗೆದುಕೊಂಡು ತಾಯಿಯನ್ನು ಕಳುಹಿಸಿಬಿಟ್ಟನಂತೆ. ಇಂತಹ ಅನೇಕ ಕಥೆಗಳು ಅವರಲ್ಲಿವೆ.

ತೋಡರ ಬಹು ಮುಖ್ಯದೇವರು ಐದು : ' ಆೞ ಮುಂಗಾನೋ ', 'ಗಾಡಿಂಗಾತೋ', ' ಬೆಲಿಗೋಷು', 'ದೆಕುಲಾರಿಯಾ' ಮತ್ತು ' ಕುಜವಾಡಾ '. ತೋಡರು ಬೆಳಿಗ್ಗೆ ಸಾಯಂಕಾಲ ಎರಡು ಹೊತ್ತೂ ಪ್ರಾರ್ಥನೆ ಸಲ್ಲಿಸುವರು. ಅವರ ಪ್ರಾರ್ಥನೆ ಯಾರಿಗೂ ಅರ್ಥವಾಗುವುದಿಲ್ಲ. ಗಂಟಲಿನ ಶಬ್ದ ವಿನಹ ಮಾತಿನ ಉಚ್ಚಾರವೇ ಕೇಳುವುದಿಲ್ಲ. ಅವರ ಪ್ರತಿಯೊಂದು ಮಾಡ (ಗ್ರಾಮ) ದಲ್ಲಿ ಒಂದೊಂದು ಪ್ರಾರ್ಥನಾ ಮಂದಿರ ಇದೆ. ಪ್ರತಿಯೊಂದು ಹೈನಿನಲ್ಲಿಯೂ ಒಂದು ಪ್ರಾರ್ಥನಾ ಸ್ಥಳವಿದೆ.

ತೋಡರ ಪ್ರತಿಯೊಂದು ಕುಲದವರೂ ಒಂದೊಂದು ಕುಲದೇವರನ್ನು ಪೂಜಿಸುವರು. ಅವರಿಗೇನಾದರೂ ಕಷ್ಟವುಂಟಾದರೆ, ದೇವರು ಕೋಪಗೊಂಡಿರಬೇಕೆಂಬ ಅನುಮಾನ ಅವರಿಗೆ. ಯಜಮಾನನ ಮೇಲೆ ಅವರ ದೇವರು ಬಂದು ಹೀಗೆಲ್ಲಾ ಹೇಳುವುದೆಂಬ ನಂಬಿಕೆ ಅವರಿಗಿದೆ. ಇತ್ತೀಚೆಗೆ ತೋಡರಲ್ಲಿ ಮತೀಯ ಭಾವನೆ ಕಡಿಮೆಯಾಗುತ್ತಿದೆ. ಹಿಂದಿನ ಪದ್ಧತಿಗಳು ಒಂದೊಂದಾಗಿ ಮಾಯವಾಗುತ್ತಿವೆ. ಹಿಂದೂ ಮತವೇ ಅವರದು. ಅದರ ಪ್ರಭಾವಕ್ಕೆ ಈಗ ಒಳಗಾಗುತ್ತಿದ್ದಾರೆ. ನಂಜುಂಡೇಶ್ವರ, ಬೇಟೇಕಾರಸ್ವಾಮಿ, ಮಾರಮ್ಮ, ' ಕಾರ್‌ಮುದ್ರಂಗನ್ ' ಮುಂತಾದ ಹಿಂದೂ ದೇವರುಗಳನ್ನು ಅವರು ಪೂಜಿಸುವರು.

ದಕ್ಷಿಣ ಕನ್ನಡ ಜಿಲ್ಲೆಯ ಕೊರಗರು ಸೂರ್ಯನನ್ನು ಪೂಜಿಸುವರು. ಸೂರ್ಯನನ್ನು'ಐತ್ಯ', ಚಂದ್ರನನ್ನು 'ಟೋಮ' ಎಂದು ಕರೆಯುತ್ತಾರೆ. ಹಾಗೆಯೇ 'ಗುರ್ವ' 'ಶಾನ್ಯ' ಎಂಬ ಹೆಸರಿನಿಂದ ಗುರು, ಶನಿ ಮುಂತಾದ ನವಗ್ರಹಗಳನ್ನು

ಪೂಜಿಸುವರು. ತಮ್ಮ ದೇವರುಗಳಿಗೆ ಅವರು ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಿಲ್ಲ. ಕಾಡಿನ ಮರದಡಿಯಲ್ಲಿ ಚೊಕ್ಕಟವಾದ ಸ್ಥಳವನ್ನು ಚುನಾಯಿಸಿ ಅಲ್ಲಿ ಕಲ್ಲು ನೆಟ್ಟು ಪೂಜಿಸುತ್ತಾರೆ. ಅನ್ನ, ತೆಂಗಿನಕಾಯಿ, ಬಾಳೆಹಣ್ಣು, ಮದ್ಯ, ಎಲ್ಲವನ್ನೂ ದೇವರಿಗೆ ಅರ್ಪಿಸುವರು. 'ಓ, ದೇವರೇ, ಇಲ್ಲಿರುವ ಗುಡಿಸಲನ್ನು ನಿನ್ನ ಪ್ರೀತಿಗಾಗಿ ಕಟ್ಟಿರುವೆವು. ದಯವಿಟ್ಟು ನಮ್ಮನ್ನು ಕಾಪಾಡು' ಎಂದು ಅರ್ಥ ಬರುವಂತೆ ಪ್ರಾರ್ಥನೆ ಸಲ್ಲಿಸುವರು.

## ೧೦. ಭಾಷೆ

ಮಿಶ್ರಯುತ ಭಾಷೆ ತೋಡರದು. ಅದರಲ್ಲಿ ತಮಿಳು, ಮಲೆಯಾಳ, ಕನ್ನಡ ಪದಗಳಿವೆ. ಇದೊಂದು ವಿಜಾತೀಯ ಭಾಷೆ. ಸುಲಭವಾಗಿ ಅರ್ಥವಾಗುವುದಿಲ್ಲ. ತೋಡರು ಇತರರೊಡನೆ ಮಾತನಾಡುವಾಗ ಒಂದು ಭಾಷೆಯನ್ನು ಬಳಕೆಯಲ್ಲಿಟ್ಟುಕೊಂಡಿದ್ದಾರೆ. ತಮ್ಮತಮ್ಮಲ್ಲಿಯೇ ಮಾತನಾಡುವಾಗ ಮತ್ತೊಂದು ಭಾಷೆ ಉಪಯೋಗಿಸುತ್ತಾರೆ. ಪ್ರಾರ್ಥನೆಗೆ ಸಂಬಂಧಪಟ್ಟ ಭಾಷೆಯಲ್ಲಿರುವ ಪದಗಳೇ ಬೇರೆಯಾಗಿವೆ. ಅವರ ಹೈನುಮನೆಗೆ ಸಂಬಂಧಪಟ್ಟ ಹಾಗೆ ಬೇರೆ ಬೇರೆ ಪದಗಳಿವೆ. ಅವರ ಕಥೆಗಳಲ್ಲಿ ಬರುವ ಮಾತುಗಳೂ ಪ್ರತ್ಯೇಕವಾಗಿವೆ. ಬಡಗರೊಡನೆ ಮಾತನಾಡುವಾಗ ಅವರು ಹೆಚ್ಚು ತಮಿಳನ್ನೇ ಉಪಯೋಗಿಸುತ್ತಾರೆ. ಆದರೆ ತಾವು ತಾವೇ ಮಾತನಾಡುತ್ತಿರುವಾಗ ಕೆಲವು ಸಾಂಕೇತಿಕ ಪದಗಳನ್ನು ಉಪಯೋಗಿಸುವರು. ಇಂತಹ ಪದಗಳನ್ನು ಅರ್ಥ ಮಾಡಿಕೊಳ್ಳುವುದು ಬಹು ಕಷ್ಟ.

ಸೋಲಿಗರ ಭಾಷೆ ಕನ್ನಡ. ಕನ್ನಡವಾದರೂ ಸುಲಭವಾಗಿ ಅರ್ಥವಾಗುವುದಿಲ್ಲ. ಅದೊಂದು ಬಗೆಯ ವಿಜಾತೀಯ ಉಚ್ಚಾರ ಅವರದು. ಕೆಲವು ಮಾತುಗಳ ಅರ್ಥ ತಿಳಿಯುವುದೇ ಇಲ್ಲ. ನೀಲಗಿರಿಯ ಬಡಗರು ಮಾತನಾಡುವ ಭಾಷೆ ಕನ್ನಡದಂತೆಯೇ ಇದೆ. ಕೊಡಗಿನ ಎರವರ ಭಾಷೆ ಮಿಶ್ರ ಭಾಷೆ. ಆದರೆ ಅವರ ಮಾತುಗಳಲ್ಲಿ ಕನ್ನಡ ಪದಗಳು ಹೆಚ್ಚಾಗಿವೆ. ದಕ್ಷಿಣ ಕನ್ನಡದ ಕೊಡಗರು ಕುಡಿಯರು, ಕನ್ನಡ ಮತ್ತು ತುಳು ಮಿಶ್ರವಾದ ಮಾತುಗಳನ್ನಾಡುವರು. ಅದು ಅರ್ಥವಾಗುವುದು ಕಷ್ಟ. ಅವರು ಬಳಕೆಯಲ್ಲಿಟ್ಟುಕೊಂಡಿರುವ ಪದಗಳು ಪ್ರತ್ಯೇಕ ರೀತಿಯದಾಗಿವೆ. ಪಶ್ಚಿಮ ಮಲೆನಾಡು ಪ್ರದೇಶದ ಹಸಲರು, ಮಲೇರು ಕನ್ನಡ ಮಾತುಗಳನ್ನಾಡುವರು. ಇನ್ನು ಕೆಲವು ಆದಿವಾಸಿಗಳು ತೆಲುಗು ಭಾಷೆಯಾಡುವರು.

## ೧೧. ಆಹಾರ

ಸಾಮಾನ್ಯವಾಗಿ ಆದಿವಾಸಿಗಳೆಲ್ಲ ಮಾಂಸಾಹಾರಿಗಳು. ರಾಗಿ ಹಿಟ್ಟು, ಅಂಬಲಿ, ಗೆಡ್ಡೆಗೆಣಸು, ಸೊಪ್ಪು, ತೊಗರಿ, ಅವರೆ, ಮುಸುಕಿನ ಜೋಳ, ಮುಂತಾದುವನ್ನು ಊಟಕ್ಕಾಗಿ ಉಪಯೋಗಿಸುವರು. ಇವರು ಬೆಳೆಯುವ ಧಾನ್ಯ ಸ್ವಲ್ಪ. ಕಾಡಿನಲ್ಲಿ ದೊರೆಯುವ ಗೆಡ್ಡೆ ಗೆಣಸು, ಹಣ್ಣು, ಜೇನು ಇವನ್ನೆ

ಇವರು ಹೆಚ್ಚಾಗಿ ಉಪಯೋಗಿಸುವರು. ಇವರು ತರುವ ಕೆಲವು ಗೆಡ್ಡೆಗಳು ವಿಜಾತೀಯವಾಗಿವೆ. ಬಹು ರುಚಿಯಾಗಿಯೂ ಇವೆ. ಒಂದು ತರಹೆಯ ಗೆಡ್ಡೆಯನ್ನು ಸುಟ್ಟು ನೀರಿನಲ್ಲಿ ನೆನೆಯಿಸಿದರೆ, ಒಂದಕ್ಕೆ ನಾಲ್ಕರಷ್ಟು ಗಾತ್ರವಾಗುವುದು. ಹತ್ತಿಯಂತೆ ಮೆತ್ತಗಾಗಿರುವುದು. ತಿನ್ನುವುದಕ್ಕೆ ರುಚಿಯಾಗಿಯೂ ಇರುವುದು. ಕಡವೆ, ಸಾರಗ, ನರಿ, ಹಂದಿ, ಎಮ್ಮೆ, ಹಕ್ಕಿ ಮುಂತಾದುವನ್ನು ಕೊಂದು ತಿನ್ನುವರು. ಮದ್ಯಸೇವನೆ ಮಾಡುತ್ತಾರೆ. ಕೆಲವರು ಭಂಗಿ ಸೇದುತ್ತಾರೆ. ಕಾಡಿನಲ್ಲಿ ದೊರೆಯುವ ಹಲಸಿನ ಹಣ್ಣು, ಬಾಳೆಯ ಹಣ್ಣು, ಜೇನು ಮುಂತಾದುವನ್ನು ಹಬ್ಬ ಹರಿದಿನಗಳಲ್ಲಿ ಉಪಯೋಗಿಸುವರು. ವೀಳೆಯದೆಲೆ, ತಂಗಡಿ ಚಕ್ಕೆ ತಿನ್ನುವರು. ಆದಿವಾಸಿಗಳು ಆಹಾರಕ್ಕಾಗಿ ಅಷ್ಟು ತಾಪತ್ರಯ ಪಡುವುದಿಲ್ಲ. ಕಾಡು ಗೊಲ್ಲರ ಮುಖ್ಯಾಹಾರ, ರಾಗಿ, ಕುರಿ, ಕೋಳಿ, ಮೊಲ, ಹೆಗ್ಗಣ ಮುಂತಾದುವು. ಇವರು ಮದ್ಯಸೇವನೆ ಮಾಡುವುದಿಲ್ಲ. ಕಾಡು ಕುರುಬರು ಕಾಡು ಪ್ರಾಣಿಗಳನ್ನು ಕೊಂದು ತಿನ್ನುವರು. ರಾಗಿ ಬೆಳೆದು ಉಪಯೋಗಿಸುತ್ತಾರೆ. ಕೊಡಗಿನ ಎರವರು ಕಾಗೆಗಳನ್ನು ಹಿಡಿದು ತಿನ್ನುತ್ತಾರೆ. ತೋಡರ ಮುಖ್ಯಾಹಾರ ರಾಗಿ, ಹಾಲು, ಮೊಸರು, ಬೆಣ್ಣೆ, ಮಜ್ಜಿಗೆ. ಹಬ್ಬ ಹರಿದಿನಗಳಲ್ಲಿ ಎಮ್ಮೆಯನ್ನು ಕೊಂದು ತಿನ್ನುವರು. ಇತ್ತೀಚೆಗೆ ಆದಿವಾಸಿಗಳ ಆಹಾರದಲ್ಲಿ ಬದಲಾವಣೆಯುಂಟಾಗುತ್ತಿದೆ. ಕಾಡಿನಲ್ಲಿ ದೊರೆಯುವ ಪದಾರ್ಥಗಳನ್ನು ಸಂಗ್ರಹಿಸಿ, ಹಳ್ಳಿಯ ಜನರಿಗೆ ಮಾರಿ, ಅಕ್ಕಿ, ಉಪ್ಪು, ಮೆಣಸಿನಕಾಯಿ, ಸಂಬಾರದ ಪದಾರ್ಥಗಳನ್ನು ತೆಗೆದುಕೊಂಡು ಹೋಗುವರು. ಎಲೆ, ಅಡಿಕೆ, ಹೊಗೆಸೊಪ್ಪು, ಬೀಡಿ ಮುಂತಾದ ಚಟವೂ ಹೆಚ್ಚುತ್ತಿದೆ.

## ೧೨. ಆಸ್ತಿ

ಕಾಡಿನಲ್ಲಿ ಹುಟ್ಟಿ ಬೆಳೆದು ಜೀವನ ಮಾಡುವ ಅಭ್ಯಾಸವಿರುವ ಇವರಿಗೆ ಆಸ್ತಿಯನ್ನು ಹೊಂದಿರಬೇಕೆಂಬ ಹಂಬಲ ಅಷ್ಟಾಗಿಲ್ಲ. ಇದ್ದುದರಲ್ಲಿ ತೃಪ್ತಿ. ಅವರ ಆಸ್ತಿ ಎಂದರೆ ಒಂದು ಹರಕು ಮುರುಕು ಗುಡಿಸಲು; ನಾಲ್ಕಾರು ಮಡಿಕೆ ಕುಡಿಕೆ; ನಾಲ್ಕಾರು ಸೇರು ಕಾಳು ಕಡ್ಡಿ ; ಒಂದೆರಡು ಹಿತ್ತಾಳೆ ಸಾಮಾನು; ಎಮ್ಮೆ, ಕುರಿ, ಆಡು, ನಾಯಿ, ಹಂದಿ. ಕೆಲವು ಕಡೆ ಅವರು ಸಾಗುಮಾಡುತ್ತಿರುವ ಅರ್ಧ ಎಕರೆ ಜಮೀನು ಅವರ ಸ್ಥಿರಾಸ್ತಿ. ಇದನ್ನು ಅವರು ಮಾರುವ ಹಾಗಿಲ್ಲ. ಕೊಳ್ಳುವವರು ಮೊದಲೇ ಇಲ್ಲ. ಬೇಕಾದರೆ ಇಟ್ಟುಕೊಳ್ಳಬಹುದು. ಬೇಡವಾದರೆ ಅದನ್ನು ಬಿಟ್ಟು ಇನ್ನೊಂದು ಕಡೆ ಹೋಗಬಹುದು. ನಾಗರಿಕ ದೃಷ್ಟಿಯಲ್ಲಿ ಆಸ್ತಿ ಎಂದು ಪರಿಗಣಿಸಬಹುದಾದ ಬೆಲೆಯುಳ್ಳ ಪದಾರ್ಥ ಅವರಲ್ಲಿ ಇಲ್ಲ. ಆದಿವಾಸಿಗಳಲ್ಲಿ ಕೆಲವರು ಸ್ಥಳದಿಂದ ಸ್ಥಳಕ್ಕೆ ಹೋಗುವರು. ಆಸ್ತಿ ಮಾಡುವ ಅಭ್ಯಾಸ ಅವರಲ್ಲಿ ಇಲ್ಲ. ತೋಡರಲ್ಲಿ ಮಾತ್ರ ಕೆಲವರು ಕಲ್ಲಿನ ಗೋಡೆಯ ಮೇಲೆ ಗುಡಿಸಲು ಕಟ್ಟಿ ಎಮ್ಮೆಗಳನ್ನು ಸಾಕಿಕೊಂಡು ಇರುವ ಅಭ್ಯಾಸವಿದೆ. ಅವರಲ್ಲಿ ಕೂಡ ಆಸ್ತಿ ಮಾಡಿ ಕೂಡಿಡಬೇಕೆಂಬ ಉದ್ದೇಶ ಕಡಿಮೆ. ಆದರೆ, ಇವರು ಮಾನವರಾದ್ದರಿಂದ ಸುಖಜೀವನ ಮಾಡಬೇಕೆಂಬ

ಹಂಬಲ ಅವರಲ್ಲಿದೆ. ಕಾಡಿನಲ್ಲಿ ಹಿಂದೆ ಇದ್ದಂತೆ ಸುಖ ಜೀವನ ಆಗುತ್ತಿಲ್ಲ. ಇವರನ್ನೂ ಸೂರೆ ಮಾಡಿ ತಿನ್ನುವ ಜನರು ಹುಟ್ಟಿಕೊಂಡಿದ್ದಾರೆ. ಈ ಆದಿವಾಸಿಗಳು ಸಂಗ್ರಹ ಮಾಡುವ ಕಾಡಿನ ಪದಾರ್ಥಗಳನ್ನು ದಳ್ಳಾಳಿಗಳು ಅವರಿಂದ ಸುಲಭವಾಗಿ ಪಡೆದು ಅವರನ್ನು ಸೂರೆ ಮಾಡುತ್ತಿದ್ದಾರೆ. ಮೋಸ ಮಾಡುತ್ತಿದ್ದಾರೆ. ಹೊರಗಿನ ಸಂಪರ್ಕ ಹೆಚ್ಚಾಗುತ್ತಿದೆ. ಈ ಎಲ್ಲ ಕಾರಣಗಳಿಂದ ಆದಿವಾಸಿಗಳ ಜೀವನ ಕಷ್ಟವಾಗುತ್ತಿದೆ.

## ೧೩. ಸಂಸ್ಕೃತಿ

ಆದಿವಾಸಿಗಳೆಲ್ಲ ಅನಕ್ಷರಸ್ಥರು. ಆದರೆ, ಅನಾಗರಿಕರಲ್ಲ. ಹಿಂಸಾ ಕಾರ್ಯದಲ್ಲಿ ಅವರು ತೊಡಗುವುದಿಲ್ಲ. ಕಾಡಿನಲ್ಲಿದ್ದರೂ, ನಾಗರಿಕರೆಂದೆನಿಸಿಕೊಳ್ಳುವ ಪಟ್ಟಣಿಗರ ಸಂಪರ್ಕ ಅವರಿಗಿಲ್ಲದಿದ್ದರೂ, ಅವರಲ್ಲಿ ಸಂಸ್ಕೃತಿಯ ಕುರುಹುಗಳಿವೆ. ದೈವಭಕ್ತಿ, ಗುರುಹಿರಿಯರಲ್ಲಿ ವಿಧೇಯತೆ, ಗೌರವ, ಎಲ್ಲವೂ ಅವರಲ್ಲಿವೆ. ಸಾಮಾಜಿಕ ಕಟ್ಟಳೆ, ನಿಯಮಕ್ಕೆ ಅವರು ಬದ್ಧರಾಗಿದ್ದಾರೆ. ಪೂಜೆ, ಪ್ರಾರ್ಥನೆ ಸಲ್ಲಿಸುತ್ತಾರೆ. ದೇವರನ್ನು ಪೂಜಿಸುವುದರಿಂದ, ಅವನು ತಮ್ಮನ್ನು ಕಾಪಾಡುವನೆಂಬ ನಂಬಿಕೆ ಅವರಿಗಿದೆ. ಅವರ ಪ್ರಾರ್ಥನಾ ಹಾಡುಗಳು ಸೊಗಸಾಗಿವೆ. ಅವರಲ್ಲಿ ಕೆಲವರು ವೇಣುವಾದನ ಮಾಡುವರು. ಭಕ್ತಿಯುತ ಹಾಡನ್ನು ಹಾಡುವರು. ತಮಟೆ, ಮದ್ದಳೆ, ಕೊಳಲು, ಇವುಗಳನ್ನು ಅವರು ಪ್ರಾರ್ಥಿಸುವಾಗ ಉಪಯೋಗಿಸುವರು. ಓಲಗದಂತಹ ಒಂದು ವಾದ್ಯವನ್ನು ಅವರು ಉಪಯೋಗಿಸುತ್ತಾರೆ. ಕೆಲವು ಹಬ್ಬಗಳಲ್ಲಿ ರಾತ್ರಿಯೆಲ್ಲಾ ಕುಳಿತು ಇವರು ಪ್ರಾರ್ಥನೆ ಮಾಡುತ್ತಾರೆ.

ಕಾಡು ಕುರುಬರು ಬಹು ನಂಬಿಕೆಯಾದ ಜನರು. ಹಳ್ಳಿಯ ರೈತರು ಕೆಲವು ವೇಳೆ ಕಾಡು ಕುರುಬರನ್ನು ಕಣದಲ್ಲಿ ದವಸ ಕಾಯುವುದಕ್ಕೆ ನೇಮಿಸುವರು. ತಮಗೆ ಎಷ್ಟೇ ಕಷ್ಟವಾದರೂ, ಎಷ್ಟೇ ಹಸಿವಿದ್ದರೂ, ತಮ್ಮ ಯಜಮಾನನು ತಮ್ಮ ವಶಕ್ಕೆ ಕೊಟ್ಟಿರುವ ಪದಾರ್ಥಕ್ಕೆ ಸ್ವಲ್ಪವೂ ಲೋಪಬಾರದಂತೆ ನೋಡಿಕೊಳ್ಳುವರು. ಆದಿವಾಸಿಗಳಲ್ಲಿ ಸುಳ್ಳು, ಮೋಸ, ಕಳ್ಳತನ ಇರುವುದಿಲ್ಲ. ಅವರು ಹಿಂಸಾ ಕೃತ್ಯದಲ್ಲಿ ತೊಡಗುವುದಿಲ್ಲ. ಅವರಲ್ಲಿ ಬಳಕೆಯಲ್ಲಿರುವ ಕಟ್ಟುನಿಯಮಗಳು, ನಾಗರಿಕ ಸಮಾಜದಲ್ಲಿ ಕೂಡ ಇರುವುದಿಲ್ಲ. ಆದಿವಾಸಿಗಳ ಕುಲದ ಯಜಮಾನ ಮತ್ತು ಇತರ ಮಂಡಲಿಗಳು ಕೊಡುವ ತೀರ್ಮಾನಗಳು ಆಧುನಿಕ ನ್ಯಾಯ ಸ್ಥಾನಗಳನ್ನು ಆಶ್ಚರ್ಯಗೊಳಿಸಬಲ್ಲವು.

## ೧೪. ಆದಿವಾಸಿಗಳ ಉದ್ಧಾರ

ಆದಿವಾಸಿಗಳು ಕಾಡು ಜನರು ; ನಿಜ. ಅವರು ಎಷ್ಟು ಕಾಲದಿಂದ ಕಾಡಿನಲ್ಲಿಯೇ ಇದ್ದಾರೆ ಎಂಬುದಕ್ಕೆ ನಮಗೆ ಆಧಾರ ದೊರೆತಿಲ್ಲ. ಬಹುಕಾಲ ನಮ್ಮ ಚರಿತ್ರಕಾರರು ಇವರನ್ನು ಉಪೇಕ್ಷಿಸಿಯೇ ಇದ್ದರು. ಇವರು ಇಂತಹವರು? ಇವರ ಜೀವನ ಹೇಗಿದೆ? ಇವರ ಕುಲ ಇಂತಹುದು? ಎಂಬ ವಿಷಯವನ್ನು ನಮಗೆ ಹೇಳಿಕೊಟ್ಟವರು ಪಾಶ್ಚಾತ್ಯ ನರವಿಜ್ಞಾನಿಗಳು. ಅಂತಹ ಕೆಲವರು

# ಕನ್ನಡ ನಾಡಿನ ಧಾರ್ಮಿಕ ಚಲನವಲನಗಳು

ಲೇಖಕರು :
ಆಸ್ಥಾನವಿದ್ವಾನ್, ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳು, ಬೆಂಗಳೂರು.

## ೧. ದೊಡ್ಡ ಹಬ್ಬ

ಭಾರತಖಂಡವು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿಕೊಂಡಮೇಲೆ ಎಲ್ಲೆಲ್ಲಿಯೂ ನವಚೈತನ್ಯವುಂಟಾಗಿದೆ. ಭಾರತೀಯ ಧರ್ಮ, ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಜನರಲ್ಲಿ ಅಭಿಮಾನ ಹೆಚ್ಚುತ್ತಿದೆ. ದೇಶದ ಸಾಹಿತ್ಯ, ಸಂಸ್ಕೃತಿ ಮತ್ತು ಲಲಿತಕಲೆಗಳ ಬಗ್ಗೆ ಜನರು ಮಿಗಿಲಾದ ಅಭಿಮಾನವನ್ನು ವಹಿಸಿದ್ದಾರೆ. ಕೇಂದ್ರ ಮತ್ತು ಪ್ರಾಂತ ಸರ್ಕಾರದವರು ಈ ಬಗ್ಗೆ ಉದಾರವಾಗಿ ಜನತೆಗೆ ಬೆಂಬಲವನ್ನು ಕೊಡುತ್ತಿದ್ದಾರೆ. ಹೀಗೆ ನವಚೈತನ್ಯವುಂಟಾದ ಜನರು ತಮ್ಮ ದೇಶದ ಇತಿಹಾಸದ ಬಗ್ಗೆ, ಧರ್ಮ-ಸಾಹಿತ್ಯಗಳ ಬಗ್ಗೆ, ಅಭಿಮಾನ ವನ್ನು ವಹಿಸುವುದು ಕ್ರಮಪ್ರಾಪ್ತವಾಗಿಯೇ ಇದೆ. ಈ ಬಗೆಯ ಹೊಸ ಚೈತನ್ಯವು ಭಾರತಾಂತರ್ಗತ ಕರ್ಣಾಟಕ ರಾಜ್ಯಕ್ಕೂ ಅನ್ವಯಿಸುವುದು ಸಹಜವಾಗಿದೆ.

ಕರ್ಣಾಟಕ ದೇಶವು "ಮೈಸೂರು" ಎಂಬ ಹೆಸರಿನಿಂದ ತಾ|| ೧ನೇ ನವಂಬರ್ ೧೯೫೬ರ ಶುಭದಿನ ಪ್ರಾರಂಭವಾಗಿದೆ. ಹರಿದು ಹಂಚಿ ಹೋಗಿದ್ದ ಕನ್ನಡನಾಡು ಒಂದೇ ಪ್ರಭುತ್ವದಲ್ಲಿ ಒಟ್ಟುಗೂಡುವ ಈ ದಿನವನ್ನು ಎರಡು ಕೋಟಿ ಕನ್ನಡ ಜನರು ಒಂದು ದೊಡ್ಡ ಹಬ್ಬದ ದಿನವಾಗಿ ಭಾವಿಸುತ್ತಾರೆ. ಇಂತಹ ಪರ್ವದಿನಗಳಲ್ಲಿ ಜನ ತಮ್ಮ ಗತವೈಭವವನ್ನರಿತುಕೊಂಡು, ತಮ್ಮ ಭವಿಷ್ಯವನ್ನು ಕುರಿತು ಚಿಂತಿಸುವುದು ಅಗತ್ಯವಾದುದು. ಅಂತಹ ಜನತೆಯ ಆಲೋಚನೆಗೆ ಕಿಂಚಿತ್ ವಿಷಯಗಳನ್ನು ಒದಗಿಸುವುದೇ ಈ ಲೇಖನದ ಉದ್ದೇಶ ವಾಗಿದೆ.

"ಕರ್ಣಾಟಕ" ಎಂಬ ಶಬ್ದವು, "ಕರಿಯ ನಾಡು" "ಕರು ನಾಡು" ಎಂಬ ಶಬ್ದಗಳಿಂದ ನಿಷ್ಪನ್ನವಾಗಿ "ಕರ್ಣಾಟ" ಎಂದಾಯಿತೆಂದೂ, ಅದು ಸಂಸ್ಕೃತಮಯವೆನಿಸಿದಾಗ "ಕರ್ಣಾಟಕ" ಎಂದಾಯಿತೆಂದೂ ವಿದ್ವಾಂಸರು ಹೇಳಿದ್ದಾರೆ. "ಕರ್ಣಯೋ: ಅಟತಿ ಇತಿ ಕರ್ಣಾಟಃ"—ಎಲ್ಲರ ಕಿವಿಗಳಲ್ಲಿಯೂ ಸುಳಿದಾಡತಕ್ಕುದು-ಅಂದರೆ ಕೀರ್ತಿಶಾಲಿಯಾದ ದೇಶವು ಎಂದು ಸಂಸ್ಕೃತ ಕವಿ ಯಾದ ವೆಂಕಟಾಧ್ವರಿಯು ಹೇಳಿದ್ದಾನೆ. ಒಂದು ಅರ್ಥದಲ್ಲಿ ಈ ನಾಡು ಫಲವತ್ತಾದ ಕರಿಯ ನೆಲದಿಂದ ಕೂಡಿದುದೆಂದೂ, ಇನ್ನೊಂದರ್ಥದಲ್ಲಿ "ಕರು ನಾಡು" ಅಂದರೆ ಪೂರ್ವ-ಪಶ್ಚಿಮ ಘಟ್ಟಗಳ ಮಧ್ಯೆ ಇರುವ ಎತ್ತರವಾದ ಭೂಮಿ ಯಿಂದ ಕೂಡಿದುದೆಂದೂ, ಮತ್ತೊಂದರ್ಥದಲ್ಲಿ ಕೀರ್ತಿಶಾಲಿಗಳಾದ ಜನರಿಂದ

ಕೂಡಿದ ದೇಶವೆಂದೂ ಹೆಸರಾಗಿದೆ. "ಕಮ್ಮಿತು ನಾಡು, ಕನ್ನಾಡು, ಕನ್ನಡು, ಕನ್ನಡ ನಾಡು"—ಅಂದರೆ, 'ಸುವಾಸನೆಯ ಗಾಳಿಯಿಂದ ಕೂಡಿದ ನಾಡು' ಎಂದು ಮತ್ತೊಬ್ಬ ವಿದ್ವಾಂಸರು ಹೇಳಿದ್ದಾರೆ. ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಕರ್ಣಾಟಕ ದೇಶವು ಫಲವತ್ತಾದ, ಎತ್ತರವಾದ, ಸುವಾಸನಾಯುಕ್ತವಾದ ಮತ್ತು ಕೀರ್ತಿಶಾಲಿಯಾದ ದೇಶವೆನ್ನಿಸಿಕೊಂಡಿದೆ.

## ೨. ಧರ್ಮಪ್ರಚಾರ

ಕನ್ನಡನಾಡಿನ ಚರಿತ್ರೆಯು ರಾಮಾಯಣ-ಮಹಾಭಾರತಗಳ ಕಾಲದಲ್ಲಿ ಮಸುಕುಮಸುಕಾಗಿಯೂ ಅಶೋಕನ ಕಾಲದಿಂದೀಚೆಗೆ ಸುಸ್ಪಷ್ಟವಾಗಿಯೂ ಗೋಚರವಾಗಿದೆ. ದೇವಾನಾಂ ಪ್ರಿಯನಾದ ರಾಜರ್ಷಿ ಅಶೋಕನು ಬೌದ್ಧಮತ ಪ್ರಚಾರಾರ್ಥವಾಗಿ ಹಾಕಿಸಿದ ಶಿಲಾಶಾಸನಗಳು (ಕ್ರಿ. ಪೂ. ೨೭೭-೨೮೨) ಚಿತ್ರದುರ್ಗ ಜಿಲ್ಲಾ ಸಿದ್ದಾಪುರದಲ್ಲಿಯೂ, ರಾಯಚೂರು ಜಿಲ್ಲಾ ಕೊಪ್ಪಳ ಮತ್ತು ಮಸ್ಕಿಗಳಲ್ಲಿಯೂ ದೊರೆತಿವೆ. ಇದರಿಂದ ಕ್ರಿ. ಪೂ. ೩ನೆಯ ಶತಮಾನದಷ್ಟು ಹಿಂದೆಯೇ ಕರ್ಣಾಟಕದ ಉತ್ತರಭಾಗದಲ್ಲಿ ಬೌದ್ಧಧರ್ಮದ ಪ್ರಚಾರ ಅಶೋಕನ ಕಾಲದಲ್ಲಿಯೇ ಪ್ರಾರಂಭವಾಗಿತ್ತೆಂದು ನಾವು ತರ್ಕಿಸಬಹುದು. ಅಶೋಕನು ಬನವಾಸಿ ಮತ್ತು ಮಹಿಷಮಂಡಲಗಳಿಗೆ ಬೌದ್ಧಧರ್ಮ ಪ್ರಚಾರಕರನ್ನು ಕಳುಹಿಸಿದನೆಂದು ಇತಿಹಾಸದಿಂದ ತಿಳಿದುಬಂದಿದೆ.

ಬೌದ್ಧಧರ್ಮಕ್ಕಿಂತ ಜೈನಧರ್ಮವು ಕರ್ಣಾಟಕದಲ್ಲಿ ಮೊಟ್ಟಮೊದಲು ಪ್ರಚಾರದಲ್ಲಿತ್ತೆಂದು ಚರಿತ್ರೆಯಿಂದ ತಿಳಿದುಬಂದಿದೆ. ಕ್ರಿ. ಪೂ. ೨೩೧ರಲ್ಲಿ ಮಗಧ ರಾಜ್ಯದ ಚಕ್ರವರ್ತಿಯಾಗಿದ್ದ ಚಂದ್ರಗುಪ್ತನು ತನ್ನ ಜೀವಿತದ ಕಡೆಗಾಲದಲ್ಲಿ (ಕ್ರಿ. ಪೂ. ೨೯೭) ಜೈನಮತವನ್ನು ಅವಲಂಬಿಸಿ, ತನ್ನ ಗುರುವಾದ ಭದ್ರಬಾಹುವಿನೊಡನೆ 'ಜೈನಕಾಶಿ' ಎಂದು ಪ್ರಸಿದ್ಧವಾಗಿರುವ ಹಾಸನ ಜಿಲ್ಲೆಯ ಶ್ರವಣಬೆಳಗೊಳಕ್ಕೆ ಬಂದನೆಂದು ಜೈನ ಧರ್ಮ ಗ್ರಂಥಗಳಲ್ಲಿ ಹೇಳಿದೆ. ಈ ಮೇಲೆ ಕಂಡ ನಿದರ್ಶನಗಳಿಂದ ಕ್ರಿ. ಪೂ. ೩ನೆಯ ಶತಕದಷ್ಟು ಹಿಂದೆಯೇ ಕರ್ಣಾಟಕದಲ್ಲಿ ಜೈನ-ಬೌದ್ಧ ಧರ್ಮಗಳು ಜನರ ಬಳಕೆಯಲ್ಲಿದ್ದುವೆಂದು ಹೇಳಲಾಗಿದೆ. ಇತ್ತೀಚಿನ ಸಂಶೋಧನೆಗಳಿಂದ ಬೌದ್ಧ ಧರ್ಮವು ೧೩ನೆಯ ಶತಮಾನದವರೆಗೆ ಕರ್ಣಾಟಕದಲ್ಲಿದ್ದಿತೆಂದು ತಿಳಿದುಬಂದಿದೆ. (ಶರಣ ಸಾಹಿತ್ಯ ಬೌದ್ಧ ಸಂಚಿಕೆ ನೋಡಿರಿ. ೧೯೫೭).

ಕರ್ಣಾಟಕ ದೇಶದಲ್ಲಿ ಈಗ ಹಿಂದು, ಕ್ರೈಸ್ತ ಮತ್ತು ಮಹಮದೀಯ ಧರ್ಮಗಳು ಅಸ್ತಿತ್ವದಲ್ಲಿವೆ. ಹಿಂದೂಧರ್ಮದ ಒಂದು ಶಾಖೆಯಂತಿರುವ ಜೈನಮತವು ಕರ್ಣಾಟಕದಲ್ಲಿ ಇಂದಿಗೂ ಅಸ್ತಿತ್ವದಲ್ಲಿದೆ. ಬೌದ್ಧ ಮತವು ಯಾವ ಕಾರಣದಿಂದಲೋ ಕರ್ಣಾಟಕದಲ್ಲಿ ಮಾಯವಾಗಿದೆ. ಸನಾತನ ಧರ್ಮದ ಒಂದು ಅಂಗವೆನಿಸಿದ ವೀರಶೈವ ಧರ್ಮವು ಕರ್ಣಾಟಕದಲ್ಲಿ ಬಹಳವಾಗಿ ಹಬ್ಬಿದೆ. ಶ್ರೀ ಶಂಕರಾಚಾರ್ಯರ ಅದ್ವೈತಮತವೂ, ಶ್ರೀ ಮಧ್ವಾಚಾರ್ಯರ ದ್ವೈತ ಮತವೂ, ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಮತವೂ ಕರ್ಣಾಟಕದಲ್ಲಿ ಬಹಳ ಜನಾದರಣೆ

ಯನ್ನು ಪಡೆದಿವೆ. ೧೧ಮತ್ತು ೧೨ನೆಯ ಶತಮಾನದಲ್ಲಿ ಈ ದೇಶದಲ್ಲಿ ತಲೆಯೆತ್ತಿದ್ದ ಕಾಳಾಮುಖ ಮತ್ತು ಲಕುಲೀಶ ಮತಗಳು ಈಗ ಕಂಡುಬರುತ್ತಿಲ್ಲ. ಕ್ರಮೇಣ ಈ ಮತಗಳು ಬಸವೇಶ್ವರನ ಕಾಲದಿಂದೀಚೆಗೆ ವೀರಶೈವ ಮತದಲ್ಲಿ ಐಕ್ಯವಾದಂತೆ ಕಂಡುಬರುತ್ತದೆ.

ಕನ್ನಡನಾಡು ಮೊದಲಿನಿಂದಲೂ ಧರ್ಮ ಸಹಿಷ್ಣುತೆಯ ಬೀಡು. ಉದಾರ ಹಾಗೂ ಉದಾತ್ತ ಗುಣಗಳು ಕನ್ನಡಿಗರ ಹುಟ್ಟುಗುಣಗಳು. ಅತಿಥಿ ಪ್ರೇಮವು ಈ ಜನರಿಗೆ ಅನ್ವಯಾನುಕ್ರಮವಾಗಿ ಬಂದ ಗುಣ. ಕನ್ನಡಿಗರ ಈ ಸೌಜನ್ಯ ವನ್ನು ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿಯೂ, ಮಹಾಭಾರತದ ವಿರಾಟ ಪರ್ವದಲ್ಲಿಯೂ ನಾವು ಕಾಣಬಹುದು. ಶ್ರೀರಾಮಚಂದ್ರನು ಕರ್ಣಾಟಕಕ್ಕೆ ಬಂದಿದ್ದಾಗ ಬಳ್ಳಾರಿ ಜಿಲ್ಲೆಯ ಪಂಪಾಕ್ಷೇತ್ರವು ಅಸ್ತಿತ್ವದಲ್ಲಿತ್ತು. ಇದರಂತೆಯೇ ಗೋಕರ್ಣ ಮತ್ತು ಮಹಾಕೂಟ ಕ್ಷೇತ್ರಗಳು ಕರ್ಣಾಟಕದ ಪ್ರಾಚೀನ ಸ್ಥಳಗಳು. ಈ ಪ್ರಾಚೀನ ಕ್ಷೇತ್ರಗಳ ಪ್ರಭಾವವನ್ನು ನೋಡಿದರೆ ರಾಮಾಯಣ ಕಾಲದಲ್ಲಿಯೇ ಕರ್ಣಾಟಕದಲ್ಲಿ ಶೈವಧರ್ಮ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದು. ಬಿಜಾಪುರ ಜಿಲ್ಲೆಯ ಮಹಾಕೂಟ ಕ್ಷೇತ್ರದಲ್ಲಿ ಅಗಸ್ತ್ಯನು ಕೆಲವುಕಾಲ ತಪಸ್ಸುಮಾಡಿದ ನಿದರ್ಶನಗಳಿವೆ. ಬಳ್ಳಾರಿ ಜಿಲ್ಲಾ ಸೊಂಡೂರಿನಲ್ಲಿ ಶೈವಧರ್ಮದಲ್ಲಿ ಪ್ರಮುಖ ವ್ಯಕ್ತಿಯೆನಿಸಿದ ಶ್ರೀ ಷಣ್ಮುಖಸ್ವಾಮಿಯ ದೇವಾಲಯವಿದೆ. ಷಣ್ಮುಖನ ಗುಡಿ ಗಳು ತಮಿಳುನಾಡು ಕೇರಳಗಳಲ್ಲಿ ಬಹಳ; ಕರ್ಣಾಟಕದಲ್ಲಿ ವೀರಭದ್ರ ಹಾಗೂ ಮಾರುತಿ ಬಹಳ. ಆದರೆ, ಸೊಂಡೂರಿನಲ್ಲಿ ಕಾರ್ತಿಕೇಯನ ಗುಡಿ ಇರುವುದು ಗಮನಾರ್ಹ.

ಚಾಲುಕ್ಯರ ರಾಜಧಾನಿಯಾದ ಬಾದಾಮಿಯಲ್ಲಿ ಬನಶಂಕರಿ, ರಟ್ಟರ ರಾಜಧಾನಿಯಾದ ಸವದತ್ತಿಯಲ್ಲಿ ಯಲ್ಲಮ್ಮ, ರಾಯರ ರಾಜಧಾನಿಯಾದ ವಿಜಯ ನಗರದಲ್ಲಿ ಭುವನೇಶ್ವರಿ, ಒಡೆಯರ ರಾಜಧಾನಿಯಾದ ಮೈಸೂರಿನಲ್ಲಿ ಚಾಮುಂಡಿ, ಮಲೆನಾಡಿನ ಒಡೆಯರಾದ ಕೆಳದಿಯರಸರ ರಾಜ್ಯದಲ್ಲಿ ಇಷ್ಟದೇವತೆ ಮೂಕಾಂಬಿಕಾ, ಶೃಂಗೇರಿಯಲ್ಲಿ ಶ್ರೀ ಶಾರದಾದೇವಿ-ಇತ್ಯಾದಿ ಶಕ್ತಿದೇವತೆಗಳು ಪ್ರಖ್ಯಾತವಾಗಿರುವುದನ್ನು ನೋಡಿದರೆ ಕರ್ಣಾಟಕದಲ್ಲಿ ಒಂದು ಕಾಲದಲ್ಲಿ ಶಾಕ್ತೇಯ ಮತ ಕೂಡ ಪ್ರಚಾರದಲ್ಲಿ ಇತ್ತೆಂದು ನಾವು ಭಾವಿಸ ಬಹುದು.

ಕರ್ಣಾಟಕದ ಚರಿತ್ರೆಯಲ್ಲಿ ಪ್ರಖ್ಯಾತವಾದ ನಾಲ್ಕು ದರ್ಶನಗಳು ಪ್ರಚಾರ ದಲ್ಲಿರುವುದು ಅತ್ಯಂತ ಮಹತ್ವದ ವಿಷಯ. ಶ್ರೀ ಶಂಕರಾಚಾರ್ಯರು ಕೇರಳ ದೇಶದ ಕಾಲಟಿಯಲ್ಲಿ ಜನಿಸಿದರು (ಕ್ರಿ. ಶ. ೭೮೮). ಅವರ ಮುಖ್ಯವಾದ ಧರ್ಮಪೀಠ ವಿರುವುದು ಕರ್ಣಾಟಕದ ಶೃಂಗೇರಿಯಲ್ಲಿ. ಶ್ರೀ ರಾಮಾನುಜಾಚಾರ್ಯರು ಜನ್ಮಿಸಿದುದು ತಮಿಳು ನಾಡಿನಲ್ಲಿ (ಕಿ. ಶ. ೧೧೦೦). ಅವರ ತಪೋಭೂಮಿ ಯಿರುವುದು ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ. ಶ್ರೀ ಮಧ್ವಾಚಾರ್ಯರು ಜನಿಸಿದುದು ಮಂಗಳೂರು ಜಿಲ್ಲಾ ಉಡುಪಿಯಲ್ಲಿ (೧೩ನೆ ಶತಮಾನ). ಅವರ ಮುಖ್ಯ ಪೀಠವಿರುವುದು ಉಡುಪಿಯಲ್ಲಿ. ವೀರಶೈವ ಧರ್ಮದ ಮುಖ್ಯ ಆಚಾರ್ಯ

ರಾದ ಶ್ರೀ ರೇವಣಸಿದ್ದರು, ಬಸವೇಶ್ವರರು ಜನ್ಮಿಸಿದುದು ಕರ್ಣಾಟಕದಲ್ಲಿಯೇ. ಅವರ ಮುಖ್ಯ ಪೀಠಗಳಿರುವುದು ಕಲ್ಯಾಣ ಮತ್ತು ರಂಭಾಪುರಿಗಳಲ್ಲಿ. ಸನಾತನ ಧರ್ಮದ ಶಾಖೋಪಶಾಖೆಗಳಂತಿರುವ ಈ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ದರ್ಶನಗಳು ಕರ್ಣಾಟಕ ದೇಶದಲ್ಲಿ ಪರಸ್ಪರ ಸಹೋದರರಂತೆ ಬಳೆದು ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಕ್ರಿ. ಶ. ೧೨ನೆ ಶತಮಾನದಲ್ಲಿ ಬಿದರ ಜಿಲ್ಲಾ ಕಲ್ಯಾಣದಲ್ಲಿ ಬಿಜ್ಜಳ ರಾಜನು ಆಳುತ್ತಿದ್ದ ಕಾಲದಲ್ಲಿ ಕಲ್ಯಾಣವು ಶಿವಶರಣರ ಕೇಂದ್ರ ಸ್ಥಳವೆನಿಸಿತ್ತು. ಅಲ್ಲಿ ಶ್ರೀ ಬಸವೇಶ್ವರ, ಶ್ರೀ ಪ್ರಭುದೇವರು, ಚೆನ್ನಬಸವೇಶ್ವರ, ಅಕ್ಕಮಹಾದೇವಿ, ಸಿದ್ಧರಾಮೇಶ್ವರ ಮೊದಲಾದ ವಿಭೂತಿಗಳು "ಅನುಭವ ಮಂಟಪ" ಎಂಬ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿ ಅನುಭಾವ ಸಿದ್ಧಾಂತವನ್ನು ಕನ್ನಡ ಭಾಷೆ ಯಲ್ಲಿ ಬೋಧಿಸಿದರು. ಅಂತಹ ಸಾಹಿತ್ಯ ಭಾರತದ ಮತ್ತಾವ ಭಾಷೆಗಳಲ್ಲಿಯೂ ಇಲ್ಲವೆಂದು ಕೆಲವು ಪಂಡಿತರು ಹೇಳಿದ್ದಾರೆ.

ಅವರುಪದೇಶ ಸಾರವೆಂದರೆ: "ದೇವನೊಬ್ಬ ನಾಮ ಹಲವು; ಇಬ್ಬರು ಮೂವರು ದೇವರಿಲ್ಲ; ಜಗತ್ತು ಸತ್ಯ; ಇದು ಶಿವನ ಲೀಲಾ ವಿಲಾಸ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು; ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ; ತಾತ್ವಿಕ ದೃಷ್ಟಿಯಿಂದ ಸ್ತ್ರೀ-ಪುರುಷರು ಸಮಾನರು; ಚತುರ್ವರ್ಣಗಳ ಭೇದ ಸರಿಯಲ್ಲ; ಜೀವನಿಗೆ ಗುಣವೇ ಪ್ರಧಾನ; ಅಸ್ಪೃಶ್ಯತೆಯೆಂಬುದು ಸಮಾಜ ದಲ್ಲಿರಬಾರದು; ಕಾಯಕವೇ ಕೈಲಾಸ; ದಯೆಯೇ ಧರ್ಮದ ಮೂಲ; ಸತ್ಯವ ನುಡಿವುದೇ ದೇವ ಲೋಕ; ಮಿಥ್ಯೆಯ ನುಡಿವುದೇ ಮರ್ತ್ಯ ಲೋಕ" ಇತ್ಯಾದಿ. ಶಿವಶರಣರ ಈ ಧರ್ಮವು ಸನಾತನ ಧರ್ಮದ ತಿರುಳೆಂಬಂತೆ ಕಂಡು ಏಕೇಶ್ವರ ವಾದ, ಸಮತಾಭಾವ, ಅಹಿಂಸಾ ತತ್ವ, ಸ್ತ್ರೀ ಪುರುಷ ಸಮಾನತೆ, ಜಾತಿ ಭೇದ ನಿರಾಕರಣೆ—ಇವುಗಳನ್ನೆಲ್ಲ ಒಟ್ಟಿಗೆ ಬೋಧಿಸಿದುದು, ಆ ಬೋಧೆ ದೇಶ ಭಾಷೆಯಲ್ಲಿ ಕನ್ನಡದಲ್ಲಿ ನಡೆದುದು, ಈ ನಾಡಿನ ಬಹು ಜನರನ್ನು ಆಕರ್ಷಿಸಿತೆಂದು ಹೇಳ ಬಹುದು. ಅನಂತರ ಕರ್ಣಾಟಕದಲ್ಲಿ ಕ್ರಿ.ಶ. ೧೬ನೆಯ ಶತಕದಲ್ಲಿ ಶ್ರೀ ಕೃಷ್ಣ ದೇವರಾಯನ ಕಾಲದಲ್ಲಿ ನಡೆದ **ದಾಸಕೂಟದವರ** ಧಾರ್ಮಿಕ ಚಳುವಳಿಯು ಬಹಳ ಮುಖ್ಯವಾದುದೆಂದು ಹೇಳಬಹುದು. ಈ ದಾಸಕೂಟದ ಅಧ್ವರ್ಯರಲ್ಲಿ ವ್ಯಾಸರಾಯರು, ವಾದಿರಾಜರು, ಪುರಂಧ್ದರದಾಸರು, ಕನಕದಾಸರು, ಜಗನ್ನಾಥ ದಾಸರು ಬಹಳ ಮುಖ್ಯರು. ಈ ದಾಸಕೂಟದ ಉಪದೇಶದಲ್ಲಿ ಜನರು ಭಕ್ತಿ-ಜ್ಞಾನ-ವೈರಾಗ್ಯ ಸಂಪನ್ನರಾಗಿ, ನೀತಿವಂತರಾಗಿ ನಡೆದು, ಮೋಕ್ಷವನ್ನು ಪಡೆದು ಕೊಳ್ಳಬೇಕೆಂಬ ಬೋಧೆ ಮುಖ್ಯವಾದುದು. "ಹೊಲೆಯ ಹೊರಗಿಹನೆ ಊರೊಳಗಿಲ್ಲವೆ? ಎಲ್ಲಾ ರೂಪವು ತಾನಂತೆ, ಎಲ್ಲೆಲ್ಲಿಯು ತುಂಬಿಹನಂತೆ; ನೀದೇಹದೊಳಗೊ ನಿನ್ನೊಳು ದೇಹವೋ; ಬಿನ್ನಹಕೆ ಬಾಯಿಲ್ಲವಯ್ಯಾ; ಮನೆ ಮನೆಯು ಹರಿಯ ಆಲಯವಾಗಬೇಕು."—ಇತ್ಯಾದಿಗಳು ಮುಖ್ಯ ವೆನ್ನಬಹುದು. .

# ೩. ಸಂಸ್ಕೃತಿಗಳ ಸಂಗಮ

ಕರ್ಣಾಟಕವು ಆರ್ಯ-ದ್ರಾವಿಡ ಸಂಸ್ಕೃತಿಗಳ ಸಂಗಮ ಸ್ಥಳವೆಂದು ಇತಿಹಾಸ ಕಾರರು ಹೇಳಿದ್ದಾರೆ. ರಾಮಾಯಣದಲ್ಲಿ ಆರ್ಯಕ್ಷತ್ರಿಯನಾದ ಶ್ರೀರಾಮಚಂದ್ರ ನಿಗೂ, ದ್ರಾವಿಡ ರಾಜನಾದ ಸುಗ್ರೀವನಿಗೂ ಆದ ಸ್ನೇಹವು ಕರ್ಣಾಟಕದ ಪಂಪಾ ಕ್ಷೇತ್ರದಲ್ಲಿ ನಡೆದುದೆಂಬುದು ಸ್ಪಷ್ಟವಾಗಿದೆ. ಅವತಾರ ಪುರುಷನಾದ ಶ್ರೀರಾಮ ಚಂದ್ರನಿಗೆ ಬಂದಿರುವಷ್ಟೇ ಕೀರ್ತಿ-ಗೌರವಗಳು ಹಂಪೆಯ ಮೂಲನಿವಾಸಿ ದ್ರಾವಿಡ ಕುಲದ ಹನುಮಂತನಿಗೂ ಸಂದಿವೆ. ಶ್ರೀರಾಮ ಭಕ್ತನಾದ ಸುಗ್ರೀವನ ದೇವಾಲಯಗಳು ಈ ದೇಶದಲ್ಲುಂಟು. ಇದು ಗಮನಾರ್ಹವೆನಿಸಿದೆ. ಈ ವಿಚಾರಗಳು ಆರ್ಯದ್ರಾವಿಡ ಧರ್ಮಗಳ ಸಮನ್ವಯ ಕರ್ಣಾಟಕದಲ್ಲಿ ಮೊಟ್ಟ ಮೊದ ಲಾಯಿತೆಂಬುದಕ್ಕೆ ನಿದರ್ಶನ. ಇಂದಿಗೂ ಕನ್ನಡ ಜನರಲ್ಲಿ ಆರ್ಯದ್ರಾವಿಡ ಸಂಸ್ಕೃತಿಗಳ ಮುಖ್ಯ ಲಕ್ಷಣಗಳು ಇರುವುದನ್ನು ನಾವು ಕಾಣಬಹುದು. ವಿವಾಹ, ನಾಮಕರಣಾದಿ ಕರ್ಮಗಳು ವಿಧ್ಯುಕ್ತವಾಗಿ ನಡೆಯುವುದು ಆರ್ಯ ಸಂಸ್ಕೃತಿಯ ಪ್ರತೀಕ. ಕನ್ನಡನಾಡಿನ ಹಲವೆಡೆಗಳಲ್ಲಿ ರೂಢಿಯಲ್ಲಿರುವ ನಾಗರು ಪೂಜೆ, ಭೂತಗಳ ಆರಾಧನೆ, ಗ್ರಾಮ ದೇವತಾ ಪೂಜೆ, ಇವೆಲ್ಲವೂ ದ್ರಾವಿಡ ಸಂಸ್ಕೃತಿಯ ಕುರುಹುಗಳು. ಕನ್ನಡ ಭಾಷೆಯಲ್ಲಿ ಆರ್ಯ ಮತ್ತು ದ್ರಾವಿಡ ಶಬ್ದಗಳೆರಡೂ ಸಮಸಮವಾಗಿ ಸೇರಿರುವುದು ಗಮನಾರ್ಹವಾದ ಸಂಗತಿಯಾಗಿದೆ. ತಮಿಳಿನಲ್ಲಿ ವಿರಳವಾಗಿಯೂ, ಕೇರಳ ಮತ್ತು ಆಂಧ್ರ ಭಾಷೆಗಳಲ್ಲಿ ಬಹಳವಾಗಿಯೂ ಸೇರಿವೆ.

ಕನ್ನಡರಾಜರು ಇಲ್ಲಿನ ಧಾರ್ಮಿಕ ಚಲನವಲನಗಳಿಗೆ ಬಹುಮಟ್ಟಿಗೆ ಕಾರಣಕರ್ತರಾಗಿದ್ದಾರೆ. ಸುಮಾರು ೨ ಸಾವಿರ ವರ್ಷಗಳ ಕರ್ಣಾಟಕದ ಚರಿತ್ರೆಯನ್ನು ಪರಿಶೀಲಿಸಿದರೆ, ಈ ನಾಡಿನ ರಾಜರು ಧರ್ಮ ನಿರತರಾಗಿಯೂ, ದೈವಭಕ್ತರಾಗಿಯೂ, ಪರಧರ್ಮ ಸಹಿಷ್ಣುಗಳಾಗಿಯೂ, ಇದ್ದುದರ ನಿದರ್ಶನ ಬಹಳವಾಗಿ ಸಿಕ್ಕುತ್ತದೆ. ಕನ್ನಡ ರಾಜರಾದ ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ಯಾದವ, ವಿಜಯನಗರ ಮೊದಲಾದ ಸಾರ್ವ ಭೌಮರ ಚರಿತ್ರೆಯಲ್ಲಿಯೂ, ಮೈಸೂರು ಒಡೆಯರು, ಕೆಳದಿಯ ನಾಯ ಕರು, ಸ್ವಾದಿಯ ಅರಸರು ಮೊದಲಾದವರ ಚರಿತ್ರೆಗಳಲ್ಲಿಯೂ ಈ ನಮ್ಮ ಮಾತಿಗೆ ಬಹಳವಾಗಿ ನಿದರ್ಶನಗಳಿವೆ. ಬನವಾಸಿಯ ಕದಂಬರು ವೈದಿಕ ಧರ್ಮದವರು. ಆ ವಂಶದ ಮೃಗೇಶನು ಜೈನ ಧರ್ಮಕ್ಕೆ ಸಹಾಯ ಮಾಡಿರು ವುದು ಶಾಸನಗಳಲ್ಲಿ ಉಕ್ತವಾಗಿದೆ. ರಾಷ್ಟ್ರಕೂಟದ ವಂಶದ ಒಂದನೆಯ ಅಮೋಘವರ್ಷನು ಜೈನ ಧರ್ಮದ ಅನುಯಾಯಿ. ಆದರೆ ಈತನು ಶ್ರೀ ಲಕ್ಷ್ಮೀದೇವಿಯ ಭಕ್ತನು. ಸವದತ್ತಿಯ ರಟ್ಟರು ಪರಧರ್ಮ ಸಹಿಷ್ಣುತೆಗೆ ಆದರ್ಶಪ್ರಾಯರು. ಚಾಲುಕ್ಯ ಚಕ್ರವರ್ತಿಯಾದ ೨ನೆಯ ಜಯಸಿಂಹನ ಸೋದರಿ ಅಕ್ಕಾದೇವಿ ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳಿಗೆ ಆಶ್ರಯವಿತ್ತಿದ್ದಾಳೆ. ವೈಷ್ಣವ ಭಕ್ತರಾದ ಹೊಯ್ಸಳರು ಕಟ್ಟಿದ ಬೇಲೂರು

ದೇವಾಲಯದಲ್ಲಿ ಎಲ್ಲ ಹೆಸರುಗಳೂ ಒಬ್ಬ ಭಗವಂತನ ಪರ್ಯಾಯನಾಮಗಳು ಎಂಬರ್ಥವುಳ್ಳ—

"ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ |
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ||
ಅರ್ಹಂಶ್ಚೇತಿಹ ಜೈನಶಾಸನ ಮತಿಃ ಕರ್ಮೇತಿ ಮೀಮಾಂಸಕಾಃ |
ಸೋಽಯಂ ವೋ ವಿದಧಾತು ವಾಂಛಿತ ಫಲಂ ಶ್ರೀಕೇಶವಸ್ಸರ್ವದಾ||"

ಎಂಬ ಪದ್ಯವಿದೆ.

ನಿಷ್ಠಾವಂತ ಜೈನನಾದ ಹೊಯ್ಸಳ ಗೋಯಿಶೆಟ್ಟಿ ಎಂಬಾತನು ಕ್ರಿ. ಶ. ೧೧೮೦ರಲ್ಲಿ ಶಿವಧರ್ಮದ ಪ್ರವಚನವನ್ನು ಕೇಳಿ ಮಂಡಲಿಯ ಸಿದ್ಧೇಶ್ವರನ ಪೂಜೆ ಗೋಸುಗ ಭೂಮಿಯನ್ನು ದಾನಮಾಡಿದನೆಂದೂ, ನಾಗರಖಂಡದ ಐದು ಅಗ್ರಹಾರದ ಬ್ರಾಹ್ಮಣರೂ, ಅಧಿಕಾರಿಗಳೂ, ಮಹಾಜನರೂ, ಒಕ್ಕಲಿಗರೂ, ನಾಗರಿಕರ ಪ್ರತಿನಿಧಿಗಳೂ, ಎಲ್ಲರೂ ಕೂಡಿ ಬದನಿಕೆಯ ಶಾಂತಿನಾಥ ದೇವರ ಪೂಜೆಗಾಗಿ ದತ್ತಿಯನ್ನು ಬಿಟ್ಟರು ಎಂದೂ ಶಾಸನಾಧಾರವಿದೆ. ಕ್ರಿ.ಶ. ೧೩೬೮ರಲ್ಲಿ ವಿಜಯನಗರದ ಚಕ್ರವರ್ತಿಯಾಗಿದ್ದ ಬುಕ್ಕರಾಯನು ವೈಷ್ಣವರಿಗೂ ಜೈನರಿಗೂ ಮನಸ್ತಾಪವಾದಾಗ ಉಭಯರಿಗೂ ಧರ್ಮರಹಸ್ಯವನ್ನರುಹಿ ಪರಸ್ಪರ ಸಹಕಾರದಿಂದ ಇರಬೇಕೆಂದು ಬೋಧಿಸಿದನು. ಕ್ರಿ.ಶ. ೧೪೩೮ರಲ್ಲಿ ಹುಟ್ಟಿದ ಹಳೇಬೀಡಿನ ಒಂದು ಶಾಸನದಲ್ಲಿ ಜೈನರಿಗೂ ವೀರಶೈವರಿಗೂ ಧಾರ್ಮಿಕ ಒಪ್ಪಂದ ವಾದ ನಿದರ್ಶನವಿದೆ. ವಿಜಯನಗರದ ರಾಯರು ಹಂಪೆಯಲ್ಲಿ ಮುಸಲ್ಮಾನರಿ ಗಾಗಿ ಮಸೀದಿಯನ್ನು ಕಟ್ಟಿಸಿಕೊಟ್ಟಿದ್ದಾರೆ. ೧೩೪೭ರಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದ ಹಸನ್ ಜಾಫರ್‌ಖಾನನು ತನಗೆ ಉಪಕಾರಮಾಡಿದ ಓರ್ವ ಬ್ರಾಹ್ಮಣನ ಹೆಸರನ್ನು "ಹಸನ್ ಗಂಗು" ಎಂದಿಟ್ಟುಕೊಂಡುದು ಚರಿತ್ರೆಯಲ್ಲಿ ಪ್ರಖ್ಯಾತವಾಗಿದೆ. ಕರ್ಣಾಟಕದ ಹೊಯ್ಸಳ, ವಿಜಯನಗರ, ಮೈಸೂರು ರಾಜ್ಯಗಳ ಸ್ಥಾಪಕರು ಧರ್ಮದ ಗುರುಗಳೆನಿಸಿದ್ದಾರೆ. ಉತ್ತರ ಕರ್ಣಾಟಕದ ಶಿರಹಟ್ಟಿ ಮಠದಲ್ಲಿ ಮತ್ತು ಸಾವಳಿಗೆಯ ಶಿವಲಿಂಗೇಶ್ವರ ಮಠದಲ್ಲಿ ಹಿಂದೂ ಮುಸಲ್ಮಾನರು ಒಟ್ಟುಗೂಡಿ ಸಮಾರಂಭ ನಡೆಸುವುದನ್ನು ಈಗಲೂ ನಾವು ನೋಡಬಹುದು. ಚಂದ್ರದ್ರೋಣ ಪರ್ವತದಲ್ಲಿರುವ (ಬಾಬಾಬುಡನ್‌ಗಿರಿ) ದತ್ತಾತ್ರೇಯನ ಗವಿಗೆ ಈಗಲೂ ಹಿಂದುಗಳೂ, ಮುಸ ಲ್ಮಾನರೂ ಧರ್ಮಶ್ರದ್ಧೆಯಿಂದ ಹೋಗಿ ಬರುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಧರ್ಮಸ್ಥಳದಲ್ಲಿ ದೇವರು ಶಿವಲಿಂಗ; ಅರ್ಚಕರು ವೈಷ್ಣವ ಬ್ರಾಹ್ಮಣರು; ಕ್ಷೇತ್ರದ ಯಜಮಾನರು ಜೈನ ಹೆಗ್ಗಡೆಯವರು ಎಂಬುದನ್ನು ನಾವೀಗಲೂ ಕಾಣಬಹುದು.

ಕೆಳದಿಯ ವೀರಶೈವರಾಜರು ಶೃಂಗೇರಿ ಮಠಕ್ಕೆ ಬೇಕಾದಷ್ಟು ಉಂಬಳಿ ಗಳನ್ನು ಕೊಟ್ಟರು. ಮೈಸೂರಿನ ಯದುವಂಶದ ಒಡೆಯರು ಜೈನ-ಶೈವ-ವೈಷ್ಣವ ಎಲ್ಲ ಧರ್ಮಗಳಿಗೂ ಉದಾರಾಶ್ರಯವಿತ್ತರೆಂಬುದನ್ನು ಚರಿತ್ರೆಯಿಂದ ನಾವು ಅರಿಯಬಹುದು.

ಕನ್ನಡಿಗರ ಈ ಧರ್ಮಸಮನ್ವಯ ಭಾವವನ್ನು ಕರ್ನಾಟಕದ ಸಾಹಿತ್ಯದಲ್ಲಿ ಕೂಡ ನಾವು ನೋಡಬಹುದು. ಶಿವಶರಣರಲ್ಲಿ ಅಗ್ರಗಣ್ಯರಾದ ಶ್ರೀ ಬಸವೇಶ್ವರರು (೧೧೬೫) "ದೇವನೊಬ್ಬ ನಾಮ ಹಲವು" ಎಂದು ಹೇಳಿದ್ದಾರೆ. ವೀರಶೈವ ಕವಿಯೆನಿಸಿದ ಸೋಮರಾಜನು (೧೨೨೨) ತನ್ನ ಉದ್ಭಟ ಕಾವ್ಯದಲ್ಲಿ,

ವೃತ್ತ|| "ಶಿವನೆಂದುತ್ತಮ ಶೈವರಂಬುರುಹ ನೇತ್ರಂಗೆತ್ತುತಾಂ ವೈಷ್ಣವರ್
ಹವಿರನ್ನ ಪ್ರಿಯನೆಂದು ಭೂಮಿದಿವಿಜರ್ ಜೈನರ್ ಜಿನಂಗೆತ್ತುತ ||
ಮ್ಮವನೆಂದರ್ಚಿಸಲೊಲ್ದು ಸರ್ವಮುಖದಿಂ ಪೂಜೆಗೊಂಡಾವಗಂ|
ಸುವಿಲಾಸಂಬಡೆದೊಪ್ಪುವಲ್ಲಮನೆ ಬೆರ್ಚಿರ್ಕೆನ್ನ ಚಿತ್ತಾಬ್ಜದೊಳ್ || (ಅ ೧. ಪ. ೧೦.)

ಎಂದು ಹೇಳಿ ಎಲ್ಲ ಧರ್ಮಕ್ಕೂ ಧ್ಯೇಯಮೂರ್ತಿಯಾದ ಭಗವಂತನು ಒಬ್ಬನೇ, ಎಂದು ಹೇಳಿದ್ದಾನೆ. ಕರ್ನಾಟಕದ ರಾಷ್ಟ್ರಕವಿಯಾದ ಸರ್ವಜ್ಞ ಮೂರ್ತಿಯು,

"ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞಕರ್ತ ನೀ ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ ||

ಎಂದು ಏಕೇಶ್ವರ ವಾದವನ್ನು ಸಮರ್ಥಿಸಿದ್ದಾನೆ. ಹಾಡುಗಬ್ಬ ಕರ್ತೃಗಳಾದ ಶ್ರೀ ಮುಪ್ಪಿನ ಷಡಕ್ಷರ ಸ್ವಾಮಿಗಳು, ಅವರ ವಚನಗಳಲ್ಲಿ--

"ಅವರವರ ದರುಶನಕೆ ಅವರವರ ವೇಷದಲಿ ಅವರವರಿಗೆಲ್ಲ ಗುರು ನೀನೊಬ್ಬನೆ |
ಅವರವರ ಭಾವಕ್ಕೆ ಅವರವರ ಪೂಜೆಗಂ ಅವರವರಿಗೆಲ್ಲ ಶಿವ ನೀನೊಬ್ಬನೆ |
ಹೋರಾಟವಿಕ್ಕಿಸಲು ಬೇರಾದೆಯಲ್ಲದೆ ಬೇರುಂಟೆ ಜಗದೊಳಗೆ ಎಲೆ ದೇವನೆ" ||

ಎಂದು ಹೇಳಿ ಏಕೇಶ್ವರವಾದವನ್ನು ಸಮರ್ಥಿಸಿದ್ದಾರೆ. ದಾಸವರ್ಯರಾದ ಶ್ರೀಪುರಂದರದಾಸರು,

"ಸ್ನಾನಮಾಡಿರೊ ಜ್ಞಾನ ತೀರ್ಥದಲಿ |
ನಾನು ತಾನೆಂಬ ಅಹಂಕಾರವನು ಬಿಟ್ಟು |
ವೇದ ಶಾಸ್ತ್ರವನೋದುವುದೊಂದು ಸ್ನಾನ |
ಭೇದಾಭೇದವ ತಿಳಿವುದೊಂದು ಸ್ನಾನ |
ಸಾಧು ಸಜ್ಜನರ ಸಂಗತಿ ಒಂದು ಸ್ನಾನ |
ಪುರಂದರ ವಿಠಲನ ಸ್ನಾನವೆ ಗಂಗಾಸ್ನಾನ" |

ಎಂಬ ವಚನಗಳಿಂದ ಸನಾತನ ಧರ್ಮ ರಹಸ್ಯವನ್ನು ಹೇಳಿದ್ದಾರೆ.

ಜೈನಕವಿ ಶ್ರೇಷ್ಠನಾದ ರತ್ನಾಕರ ವರ್ಣಿಯು ತನ್ನ ರತ್ನಾಕರಾಧೀಶ್ವರ ಶತಕದಲ್ಲಿ—

ವೃತ್ತ|| ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿವಲೋಕಾರಾಧ್ಯ ಸರ್ವಜ್ಞ ಶಂ |
ಭು ಜಗನ್ನಾಥ ಜಗತ್ಪಿತಾಮಹ ಹರ ಶ್ರೀಕಾಂತವಾಣೀಶ ವಿ |
ಷ್ಣು ಜಿತಾನಂಗ ಜಿನೇಶ ಪಶ್ಚಿಮ ಸಮುದ್ರಾಧೀಶ್ವರಾ ಬೇಗದಿಂ |
ನಿಜವಂ ತೋರು ದಯಾಳುವೇ ತಳುವಿದೆಂ ರತ್ನಾಕರಾಧೀಶ್ವರಾ ||

ಎಂದು ಹೇಳಿ ತನ್ನ ಏಕೇಶ್ವರ ವಾದವನ್ನು ಸ್ಪಷ್ಟಗೊಳಿಸಿದ್ದಾನೆ.

ಇದನ್ನೆಲ್ಲ ನೋಡಿದರೆ "ಏಕಂಸತ್ ವಿಪ್ರಾ ಬಹುದಾವದಂತಿ" ಎಂಬ ವೇದವಾಕ್ಯವನ್ನೂ, "ಏಕೋದೇವಃ ಕೇಶವೋವಾ ಶಿವೋವಾ" ಎಂಬ ಶಾಸ್ತ್ರ ವಾಕ್ಯವನ್ನೂ, ಸನಾತನ ಧರ್ಮ ತತ್ವಗಳನ್ನೂ, ನಮ್ಮವರು ಅನುಷ್ಠಾನದಲ್ಲಿ ಉಳ್ಳವರಾಗಿದ್ದರೆಂಬುದನ್ನು ನಾವು ಸುಲಭವಾಗಿ ಅರಿಯಬಹುದಾಗಿದೆ.

ಕರ್ನಾಟಕದ ಕ್ಷೇತ್ರಗಳ ಅವಲೋಕನದಿಂದಲೂ ಈ ಧರ್ಮ ಸಮನ್ವಯ ನಮ್ಮಲ್ಲಿ ಉಂಟೆಂಬುದನ್ನು ನಾವು ಅರಿಯಬಹುದು. ತುಂಗಭದ್ರಾ ತೀರದ ಹರಿಹರ ಕ್ಷೇತ್ರವೇ ಇದಕ್ಕೆ ನಿದರ್ಶನ. ಇಂತಹ ಶಿವ-ವಿಷ್ಣು ಸಮನ್ವಯ ಕ್ಷೇತ್ರವು ಭಾರತದಲ್ಲಿಯೇ ಇಲ್ಲವೆನ್ನಬಹುದು. ಹಂಪೆಯ ವಿರೂಪಾಕ್ಷಮಂದಿರ ದಲ್ಲಿ ಮಾಧವನ ವಿಗ್ರಹವಿದೆ. ಗೋಕರ್ಣಕ್ಷೇತ್ರದಲ್ಲಿ ವೆಂಕಟರಮಣಸ್ವಾಮಿಯ ದೇವಾಲಯ ಪ್ರಸಿದ್ಧವಾಗಿದೆ. ನಂಜನಗೂಡಿನಲ್ಲಿ ಶ್ರೀನಂಜುಂಡೇಶ್ವರನ ಪಕ್ಕ ದಲ್ಲಿಯೇ ಶ್ರೀ ನಾರಾಯಣಸ್ವಾಮಿ ಮಂಡಿಸಿದ್ದಾನೆ. ಮಧುಗಿರಿ, ಚಿಂತಾಮಣಿ ಮೊದಲಾದೆಡೆಗಳಲ್ಲಿ ಶಿವ-ವಿಷ್ಣು ದೇವಾಲಯಗಳು ಅಕ್ಕಪಕ್ಕದಲ್ಲಿ ದಿವ್ಯಭವ್ಯವಾಗಿ ನಿರ್ಮಿತವಾಗಿವೆ. ಪಂಡರಾಪುರದಲ್ಲಿ ಶ್ರೀ ಪಾಂಡುರಂಗ ದೇವಾಲಯದ ಪಕ್ಕದಲ್ಲಿ ಶಿವಲಿಂಗವಿದೆ. ಚಾಲುಕ್ಯರ ರಾಜಧಾನಿಯಾದ ಐಹೊಳೆಯಲ್ಲಿ, ವಿಜಯನಗರ ರಾಜಧಾನಿಯಲ್ಲಿ, ಶಿವ, ವಿಷ್ಣು, ಗಣಪ, ವೀರಭದ್ರ, ನರಸಿಂಹ, ವೃಷಭ, ಮಾರುತಿ ಮೊದಲಾದ ಗುಡಿಗಳು ಅಕ್ಕಪಕ್ಕದಲ್ಲಿರುವುದನ್ನು ನಾವು ನೋಡಬಹುದು. ಇದನ್ನೆಲ್ಲ ವಿಮರ್ಶಿಸುವಾಗ ಕರ್ನಾಟಕದ ಜನಜೀವನದಲ್ಲಿ ಹಿಂದಿನ ಕಾಲ ದಿಂದಲೂ ಬಳೆದು ಬಂದ "ದೇವರು ಒಬ್ಬ, ಧರ್ಮವೊಂದು" ಎಂಬ ಭಾವನೆಯನ್ನು ನಾವು ಚೆನ್ನಾಗಿ ಕಾಣಬಹುದು.

## ೪. ಧರ್ಮಪ್ರಚಾರ

ಕರ್ನಾಟಕದಲ್ಲಿ ಮೊಟ್ಟಮೊದಲು ವೈದಿಕಧರ್ಮ ಬೇರು ಬಿಟ್ಟಿತ್ತೆಂದೂ, ಅನಂತರ ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳು ಇಲ್ಲಿ ಬಳಕೆಗೆ ಬಂದುವೆಂದೂ, ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಭಾಗವತ ಧರ್ಮಕ್ಕೂ, ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮಕ್ಕೂ ಹೆಚ್ಚಿನ ಪ್ರೋತ್ಸಾಹ ಲಭಿಸಿತೆಂದೂ, ಕ್ರಿ.ಶ. ೧೪ನೆ ಶತಕದಿಂದ ಮಹಮದೀಯರ ಇಸ್ಲಾಂ ಧರ್ಮವೂ, ಪೋರ್ಚುಗೀಸರು, ಇಂಗ್ಲೀಷರ ಕಾಲದಿಂದ ಕ್ರೈಸ್ತಧರ್ಮವೂ ಈ ದೇಶದಲ್ಲಿ ಬಳಕೆಗೆ ಬಂದು ವೆಂದೂ ನಾವು ಸ್ಥೂಲವಾಗಿ ಹೇಳಬಹುದು.



ಹಂಪೆಯ ವಿಜಯವಿಠ್ಠಲ ದೇವಾಲಯದ ಬಳಿ ಅಖಂಡ ಶಿಲಾರಥ



ಹಂಪೆಯ ಕಮಲಮಂದಿರ



ಶೃಂಗೇರಿಯ ಬಳಿ ತುಂಗಾನದಿಯ ಒಂದು ದೃಶ್ಯ



ಹಳೇಬೀಡು ದೇವಾಲಯದ ಶಿಲ್ಪ ಚಾತುರ್ಯ

ಪೂಜ್ಯಪಾದ, ಕವಿಪರಮೇಷ್ಠಿ, ವರ್ಧಮಾನದೇವ, ಚಾವುಂಡರಾಯ, ಆದಿಪಂಪ, ಅಭಿನವಪಂಪ, ನೇಮಿಚಂದ್ರ, ಜನ್ನ, ಪೊನ್ನ, ರನ್ನ ಮೊದಲಾದ ಮಹಾಕವಿಗಳು ಜೈನಧರ್ಮವನ್ನು ಕುರಿತು ಕನ್ನಡದಲ್ಲಿಯೂ, ಸಂಸ್ಕೃತದಲ್ಲಿಯೂ ಉದ್ದಾಮ ಗ್ರಂಥಗಳನ್ನು ಬರೆದಿದ್ದಾರೆ. ನೀಲಕಂಠ ಶಿವಾಚಾರ್ಯ, ನಂದಿಕೇಶ್ವರ, ಶಿವಯೋಗಿ ಶಿವಾಚಾರ್ಯ, ಆಚಾರ್ಯ ನೀಲಕಂಠ, ನಂಜಣಾಚಾರ್ಯ, ಸಿದ್ಧವೀರಣಾ ಚಾರ್ಯ, ಬಸವೇಶ್ವರ, ಪ್ರಭುದೇವರು, ಚೆನ್ನಬಸವೇಶ್ವರ, ಸಿದ್ಧರಾಮೇಶ್ವರ ಮೊದಲಾದವರು ಕನ್ನಡ-ಸಂಸ್ಕೃತಗಳಲ್ಲಿ ವೀರಶೈವ ಧರ್ಮವನ್ನು ಕುರಿತು ಉಜ್ವಲವಾದ ಗ್ರಂಥಗಳನ್ನು ಬರೆದಿದ್ದಾರೆ. ಶ್ರೀ ನಿಜಗುಣ ಶಿವಯೋಗಿ, ಸರ್ವಜ್ಞಮೂರ್ತಿ, ಸಪ್ತಕಾವ್ಯದ ಗುರುಬಸವ, ಮೊದಲಾದವರು ವೇದಾಂತ ಗ್ರಂಥಗಳನ್ನು ಬರೆದು ಕನ್ನಡಿಗರಲ್ಲಿ ಧಾರ್ಮಿಕ ಜೀವನವನ್ನು ದೃಢಗೊಳಿ ಸಿದ್ದಾರೆ.

ವಿಜಯನಗರ ಸಾಮ್ರಾಜ್ಯದಲ್ಲಿ ಪ್ರಖ್ಯಾತರಾದ ಶ್ರೀ ಸಾಯಣಾಚಾರ್ಯರು ವೇದಗಳಿಗೆ ಭಾಷ್ಯಗಳನ್ನು ಬರೆದು, ಶ್ರೀ ಮಾಧವಾಚಾರ್ಯರು ಸರ್ವದರ್ಶನ ಸಂಗ್ರಹ ಮೊದಲಾದ ಗ್ರಂಥಗಳನ್ನು ಬರೆದು ಸನಾತನ ಧರ್ಮ ಧ್ವಜವನ್ನು ಎತ್ತಿ ಹಿಡಿದಿದ್ದಾರೆ. ವ್ಯಾಸರಾಜರು, ವಾದಿರಾಜರು ಮೊದಲಾದವರು ದ್ವೈತಸಿದ್ಧಾಂತ ಬೋಧಕಗಳಾದ ಗ್ರಂಥಗಳನ್ನು ಬರೆದು ವೈಷ್ಣವ ಧರ್ಮದ ಹೆಚ್ಚಳಿಕೆಯನ್ನು ಸಾರಿ ಹೇಳಿದ್ದಾರೆ. ಕನ್ನಡದಲ್ಲಿ ಬೌದ್ಧ ಗ್ರಂಥಗಳು ಇರಬೇಕೆಂದು ತೋರಿ ಬಂದರೂ ದುರದೃಷ್ಟದಿಂದ ಅವು ಬೆಳಕಿಗೆ ಬಂದಿಲ್ಲ. ಮಹಮದೀಯನಾದ ಷರೀಫ್ ಸಾಹೇಬನು ವೇದಾಂತ ತತ್ವಗಳ ಪದ್ಯಗಳನ್ನು ಕನ್ನಡದಲ್ಲಿ ಬರೆದು ಹಿಂದೂ ಮುಸ್ಲಿಂ ಐಕಮತ್ಯಕ್ಕೆ ಬೆಂಬಲವಿತ್ತು 'ಕರ್ಣಾಟಕದ ಕಬೀರ್' ಎನಿಸಿ ಕೊಂಡಿದ್ದಾನೆ. ನವಾಬ್ ಹೈದರಾಲಿಖಾನನು ಮಾದೇಶ್ವರ ದೇವಾಲಯಕ್ಕೆ ಭೂಮಿಕಾಣಿಗಳನ್ನು ಕೊಟ್ಟು ಪ್ರೋತ್ಸಾಹಿಸಿದ ತಾಮ್ರಶಾಸನ ಪ್ರಸಿದ್ಧವಾಗಿದೆ. ಅವನ ಮಗ ಟೀಪುವು ಶೃಂಗೇರಿ ಪೀಠಕ್ಕೆ ಭಕ್ತಿಯಿಂದ ನಡೆದುಕೊಂಡ ನಿದರ್ಶನ ಗಳಿವೆ. ಕನ್ನಡನಾಡಿಗೆ ಕ್ರೈಸ್ತಧರ್ಮ ಪ್ರಚಾರಕ್ಕಾಗಿ ಬಂದ ಡಾ|| ಕಿಟ್ಟೆಲ್, ಡಾ|| ರೈಸ್, ರೆ|| ಥಾಮ್ಸನ್, ಡಾ|| ಫ್ಲೀಟ್ ಕನ್ನಡ ಸಾಹಿತ್ಯ ಗ್ರಂಥಗಳನ್ನು ಪ್ರಕಟಿಸಿ ಕರ್ಣಾಟಕದ ಚರಿತ್ರೆ ಬರೆದು ತಮ್ಮ ಉದಾರ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ.

ಹೀಗೆ ಸುಮಾರು ಎರಡು ಸಾವಿರ ವರ್ಷಗಳಿಂದ ಕನ್ನಡನಾಡಿನ ಚರಿತ್ರೆ ಯನ್ನು ಪರೀಕ್ಷಿಸಿದಲ್ಲಿ ಈ ದೇಶದ ಧಾರ್ಮಿಕ ಚಲನವಲನಗಳ ಗತಿಯು ಕೇವಲ ಬಂಧುಪ್ರೇಮ ಮತ್ತು ಸಮನ್ವಯ ಮಾರ್ಗಗಳಲ್ಲಿ ನಡೆದಿದೆಯೆಂದು ನಾವು ಸುಲಭವಾಗಿ ಅರಿಯಬಹುದು. ಜಾತ್ಯತೀತವೆನಿಸಿದ ಭಾರತದ ರಾಜ್ಯಾಂಗ ಘಟನೆಯನ್ನು ಮನ್ನಿಸಿರುವ ನಾವು ಕರ್ಣಾಟಕದ ಈ ಉಜ್ವಲ ಉದಾರ ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವುದೂ, ಸುಂದರವಾದ ಕರ್ಣಾಟಕ ರಾಜ್ಯವನ್ನು ಕಾಣುವುದೂ ಅಗತ್ಯವಲ್ಲವೆ ?

## ೫. ಕನಸು ನೆನಸು

ದೇವರ ಕೃಪೆಯಿಂದ ಎರಡು ಕೋಟಿ ಕನ್ನಡ ಜನರ ಬಹುದಿನದ ಕನಸಾದ ಕರ್ಣಾಟಕರಾಜ್ಯ ಇಂದು ನೆನಸಾಗಿದೆ. ಕನ್ನಡಿಗರ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ, ಔದ್ಯೋಗಿಕ ವಿಚಾರಗಳು ಇನ್ನು ಪ್ರಗತಿಯನ್ನು ಹೊಂದುತ್ತವೆ. ಇಂತಹ ಕಾಲದಲ್ಲಿ ಕನ್ನಡ ಜನರು ಇದುವರೆಗು ಪರಂಪರೆಯಿಂದ ನಡೆದುಬಂದ ತಮ್ಮ ಉಜ್ವಲ ಧರ್ಮ ತತ್ವಗಳನ್ನು ವಿಕಾಸಗೊಳಿಸಿಕೊಳ್ಳುವುದು ಅಗತ್ಯ. ಸೊಲ್ಲಾಪುರದ ಸಿದ್ಧರಾಮೇಶ್ವರ, ಕಲ್ಬುರ್ಗಿಯ ಶರಣ ಬಸವೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ, ಬೆಟ್ಟದ ರೇವಣಸಿದ್ದೇಶ್ವರ, ಮಲೆಯ ಮಾದೇಶ್ವರ, ಮಂತ್ರಾಲಯದ ರಾಘವೇಂದ್ರಸ್ವಾಮಿಗಳು, ಶ್ರವಣಬೆಳಗೊಳದ ಗೋಮಟೇಶ್ವರ ಧರ್ಮಸ್ಥಳದ ಮಂಜುನಾಥೇಶ್ವರ, ಬಾದಾಮಿಯ ಬನಶಂಕರಿ, ತಿರುಪತಿಯ ವೆಂಕಟ ರಮಣ, ಪಂಡರಾಪುರದ ಪಾಂಡುರಂಗ, ಉಡುಪಿಯ ಶ್ರೀ ಕೃಷ್ಣ ಮೊದಲಾದ ಕ್ಷೇತ್ರಗಳಲ್ಲಿ ಕನ್ನಡ ಜನರು ಇಂದಿಗೂ ಅದ್ವೈತ ಭಾವದಿಂದ ಹೋಗಿಬರು ವುದುಂಟು. ಗಣಪತಿ ಪೂಜೆ, ದೇವರ ಭಜನೆ, ಜಾತ್ರೆಗಳ ಸಮಾರಂಭಗಳಲ್ಲಿ ಕನ್ನಡ ಜನರು ಒಂದೇ ಮನೆಯವರಂತೆ ಗುಂಪುಕೂಡಿ ಆಚರಿಸುವುದುಂಟು. ಇದರ ಕಾರಣ ದೇವರು ಒಬ್ಬ, ಧರ್ಮ ಒಂದು, ನಾವೆಲ್ಲರೂ ಒಂದೇ ಸಂಸ್ಕೃತಿ ಯವರು ಎಂಬ ಪವಿತ್ರಭಾವನೆ.

ಜಾತ್ರೆಗೆ ಹೋದ ಜನರೆಲ್ಲರೂ ಜಾತಿಭೇದವಿಲ್ಲದೆ ತೇರಿನ ಹಗ್ಗಕ್ಕೆ ಕೈಕೊಟ್ಟು ಎಳೆಯುತ್ತಾರೆ. ಸಂಗೀತ ಕಛೇರಿಗೆ ಹೋದಜನ ವಿವಿಧ ವಾದ್ಯಗಳ ಸ್ವರದಲ್ಲಿ ಒಂದೇ ನಾದಬ್ರಹ್ಮನ ಔಪಾಸನೆಮಾಡುತ್ತಾರೆ. ಕಾಶಿಗೆ ಹೋದ ಜನ ಎಲ್ಲ ತೀರ್ಥಗಳನ್ನೂ ಗಂಗೆಯಲ್ಲಿ ಕಾಣುತ್ತಾರೆ. ಇದೆಲ್ಲಕ್ಕೂ ಮುಖ್ಯವಾದ ಕಾರಣ ನಮ್ಮ ಜನರ ಅದ್ವೈತಭಾವ; ವಿಶ್ವಪ್ರೇಮ, ಉದಾತ್ತವರ್ತನೆ.

ಕನ್ನಡ ಜನರಲ್ಲಿ ಜೈನರ ಅಹಿಂಸೆ, ಬೌದ್ಧರ ಸಮತೆ, ಶೈವರ ಜ್ಞಾನ, ವೈಷ್ಣವರ ಭಕ್ತಿ, ಕ್ರೈಸ್ತರ ಅನುಕಂಪ, ಮುಸ್ಲಿಮರ ಬಂಧುಪ್ರೇಮ, ಇವನ್ನೆಲ್ಲ ನಾವಿಂದು ನೋಡಬಹುದಾಗಿದೆ. ಇದರ ಕಾರಣ ಸುಮಾರು ೨೦೦೦ ವರ್ಷ ಗಳಿಂದ ನಮ್ಮ ಜನರಲ್ಲಿ ನಡೆದುಬಂದಿರುವ ಏಕಸೂತ್ರಮಯವಾದ ಧಾರ್ಮಿಕ ಚಟುವಟಿಕೆಗಳು ಅಳವಟ್ಟಿರುವುದೇ ಆಗಿದೆ.

---

# ಕನ್ನಡ ಜನಪದದ ರಾಜಕೀಯ ಹೃದಯ

ಲೇಖಕರು :

ಶ್ರೀಮಾನ್ ತಿರುಮಲ ತಾತಾಚಾರ್ಯ ಶರ್ಮ ಅವರು, ಬೆಂಗಳೂರು

## ೧. ಜನಜೀವನ ಪ್ರವಾಹ

ವಿಶಾಲ ದೃಷ್ಟಿಯಿಂದ, ರಾಷ್ಟ್ರ ದೃಷ್ಟಿಯಿಂದ, ತಾತ್ತ್ವಿಕವಾಗಿ ವಿಚಾರ ಮಾಡಿ ನೋಡುವುದಾದರೆ ಕರ್ಣಾಟಕ, ಆಂಧ್ರ, ವಂಗ, ಕೇರಳ, ಚೋಳ ಇತ್ಯಾದಿ ರಾಜ್ಯ ಅಥವ ದೇಶಗಳೊಂದೊಂದಕ್ಕೂ ಒಂದು ರಾಜಕೀಯ ಇತಿಹಾಸವಿದೆಯೆಂದು ಹೇಳಲಾಗದು. ಎಲ್ಲ ದೇಶಗಳಂತೆಯೇ ಕರ್ಣಾಟಕ ಜನಪದವೂ ಸಹ ಭರತ ವರ್ಷ, ಭರತ ಖಂಡದಿಂದ ಪ್ರತ್ಯೇಕವಾದುದಲ್ಲ. ಕರ್ಣಾಟಕವು ಭರತ ಖಂಡದ ಒಂದು ಭಾಗ, ಒಂದು ಅಂಗ. ಆದಕಾರಣ ಭಾರತದ ಆತ್ಮವೇ ಕರ್ಣಾಟಕದ ಆತ್ಮ. ಭಾರತದ ಧರ್ಮವೇ ಕರ್ಣಾಟಕದ ಧರ್ಮ ; ಭಾರತದ ಸಂಸ್ಕೃತಿಯೇ ಕರ್ಣಾಟಕದ ಸಂಸ್ಕೃತಿ ; ಭಾರತದ ರಾಜಕಾರಣವೇ ಕರ್ಣಾಟಕದ ರಾಜಕಾರಣ. ವ್ಯಕ್ತಿ, ಗೃಹ, ಕುಲ, ಗ್ರಾಮ, ಜನಪದ, ರಾಷ್ಟ್ರ ಯಾವದೇ ಸ್ಥಿತಿಯಲ್ಲಿ, ಗತಿಯಲ್ಲಿ, ಗುರಿಯಲ್ಲಿ ಪರೀಕ್ಷಿಸಿ ನೋಡಿದರೂ 'ಅಂಗ ವಂಗ ಕಳಿಂಗ ಕಾಶ್ಮೀರ ಕಾಂಭೋಜಾ'ದಿ ಛಪ್ಪನ್ನಾರು ಪುರಾಣ ಪ್ರಸಿದ್ಧ ದೇಶಗಳೆಂಬ ಭೇದವೇ ಇಲ್ಲ. ಎಲ್ಲ ಒಂದೇ ಖಂಡ! ಭರತ ಖಂಡ! ಜೀವ, ಆತ್ಮ, ಪರಮಾತ್ಮ, ಧರ್ಮಕರ್ಮ, ಪಾಪಪುಣ್ಯ, ಸ್ವರ್ಗನರಕ, ಮೋಕ್ಷಪುನರ್ಜನ್ಮ ಇವೆಲ್ಲ ಕಲ್ಪನೆಗಳೂ, ನಂಬಿಕೆಗಳೂ, ಭಾರತೀಯರೆಲ್ಲರಿಗೂ ಸಮಾನ. ಎಲ್ಲ ಭಾರತೀಯರ 'ಸಂಕಲ್ಪ'ವೂ ಒಂದೇ.

ಮಾನವ ಕುಲದ ಜೀವನೇತಿಹಾಸವನ್ನೇ ರಾಜಕೀಯ ಇತಿಹಾಸವೆಂದು ಒಂದು ರೀತಿಯಿಂದ ಭಾವಿಸಿ ಹೇಳಬಹುದು. ಮಾನವರ ಕುಲ ಅನುಸರಿಸಿದ ವೃತ್ತಿ ; ನಡೆಸಿದ ಜೀವನ ; ಆ ಜೀವನದಲ್ಲಿ ವ್ಯಕ್ತಿಗೂ, ಗೃಹಕ್ಕೂ, ಸಮಾಜಕ್ಕೂ ಗ್ರಾಮಕ್ಕೂ ಪರಸ್ಪರ ಬಾಂಧವ್ಯ ಹೇಗೆ ಹುಟ್ಟಿ, ಬೆಳೆಯಿತು ; —ಇವೆಲ್ಲ ಈ ಇತಿಹಾಸಕ್ಕೆ ಸಂಬಂಧಪಟ್ಟಿವೆ. ಗ್ರಾಮ ಗ್ರಾಮಗಳಿಗಿದ್ದ ಬಾಂಧವ್ಯ ವಿಚಾರವಿದೆ ; ಗ್ರಾಮಗಳಿಗೂ ರಾಜ್ಯಕ್ಕೂ ಇದ್ದ ವಿಚಾರವಿದೆ ; ವೈರಾಜ್ಯ, ದ್ವೈರಾಜ್ಯ, ಸ್ವರಾಜ್ಯ, ಭೌಜ್ಯ, ರಾಷ್ಟ್ರಿಕ, ಅರಾಜಕ, ಉಗ್ರ ಮೊದಲಾದ ರಾಜ್ಯಾಂಗ ವ್ಯವಸ್ಥೆಗಳ ವಿಚಾರಗಳಿವೆ.

[1] "ಐತರೇಯ ಬ್ರಾಹ್ಮಣ, ಪಾಣಿನ್ಯಾಚಾರ್ಯರ ಅಷ್ಟಾಧ್ಯಾಯ, ಬೌದ್ಧ ಗ್ರಂಥಗಳು, ಕೌಟಲೀಯ ಅರ್ಥಶಾಸ್ತ್ರ, ಸಿಕಂದರನನ್ನು ಹಿಂಬಾಲಿಸಿದ್ದ ಯವನರ

---

[1] 'ಭಾರತೀಯ ಗಣರಾಜ್ಯಗಳು'. ಬೆಂಗಳೂರು ದೇಶೀಯ ವಿದ್ಯಾಶಾಲಾ ಪತ್ರಿಕೆ. ಜನವರಿ, ೧೯೩೬. ಪು. ೧೮೪ ೧೯೩.

ಗ್ರಂಥಗಳು—ಈ ಗ್ರಂಥ ರಾಶಿಯಲ್ಲಿ ಅಲ್ಲಲ್ಲಿ ದೊರಕುವ ಪ್ರಜಾತಂತ್ರದ ಕುರುಹು ವೃತ್ತಾಂತಗಳನ್ನು ಪುರಾತತ್ವದ ಕುರುಹುಗಳು ಪುಷ್ಟೀಕರಿಸುತ್ತವೆಯಾದ್ದರಿಂದ ಸುಮಾರು ಕ್ರಿಸ್ತಪೂರ್ವ ಸಾವಿರ ವರ್ಷಗಳು, ಕ್ರಿಸ್ತನ ತರುವಾಯ ಆರುನೂರು ವರ್ಷಗಳು ಭಾರತದಲ್ಲಿ ಇಂತಹ (ಜನಾಧಿಪತ್ಯ) ರಾಷ್ಟ್ರಗಳು ಯಥೇಚ್ಛವಾಗಿದ್ದ ವೆಂದು ಹೇಳಬಹುದು. ಅಂತಹ ರಾಷ್ಟ್ರಗಳಿಗೆ ಗಣರಾಜ್ಯಗಳೆಂದೂ, ಅಂತಹ ರಾಷ್ಟ್ರಗಳಲ್ಲಿ ನೆಲೆಸಿದ್ದ ಜನಸಮುದಾಯಕ್ಕೆ ಸಂಘವೆಂದೂ ಹೆಸರು. ಸಾವಿರ ದಾರನೂರು ವರ್ಷಗಳ ಕಾಲ ಭಾರತದಲ್ಲಿ ಬೆಳಗಿದ ಗಣರಾಜ್ಯಗಳ ಸಂಪೂರ್ಣ ವಿವರವು ಈಗ ದೊರೆತಿಲ್ಲ. ಇರುವ ಅಲ್ಪ ಆಧಾರದಿಂದ ಎಂಭತ್ತೊಂದು ಗಣರಾಜ್ಯಗಳ ಹೆಸರುಗಳು ದೊರೆತಿವೆ. ಆ ವ್ಯವಸ್ಥೆಗಳಲ್ಲಿ ಎಲ್ಲವೂ ಒಂದೇ ಬಗೆಯಾಗಿರಲಿಲ್ಲ; ವಿವಿಧವಾಗಿದ್ದವು; ಮತ್ತು ಅಂತಹ ವ್ಯವಸ್ಥೆಯನ್ನು ಪಡೆದು ಬಾಳಿದ ರಾಷ್ಟ್ರಗಳಲ್ಲಿ ಕೆಲವು ತಮ್ಮ ಸಾಧನೆಯ ಗೌರವದಿಂದ ಪ್ರಸಿದ್ಧವಾಗಿರು ವುವು.''

ಸಭೆ, ಸಮಿತಿ, ಪಂಚಾಯಿತಿ, ಬಾರಾಬಲೂತಿ, ಗ್ರಾಮಕೂಟ, ಪೌರವ್ಯವಸ್ಥೆ, ನಗರ ಮರ್ಯಾದೆ, ಸಮಸ್ತ ಹಲರು ಇವೇ ಮೊದಲಾದ ಸಂಸ್ಥೆಗಳು ಚರಿತ್ರೆಯ ತುಂಬ ಇವೆ. ಇವುಗಳನ್ನೆಲ್ಲ ಶಾಸ್ತ್ರೀಯವಾಗಿ ವಿಂಗಡಿಸಿ, ಕ್ರಮವಾಗಿ ಜೋಡಿಸಿ, ಅಧ್ಯಯನ ಮಾಡಿದಾಗ ಮಾನವರ ಸ್ವಭಾವ, ಮನೋಧರ್ಮ, ಆಶೆ, ಪ್ರತ್ಯಾಶೆ ಗಳು, ಆದರ್ಶ, ಇವೆಲ್ಲ ಗೊತ್ತಾಗುತ್ತವೆ. ಇವುಗಳನ್ನೆಲ್ಲ ಚೆನ್ನಾಗಿ ತಿಳಿದು ಕೊಂಡು, ಅವುಗಳಿಗೆಲ್ಲ ಆಧಾರವೆನಿಸಿದ ಮೂಲತತ್ವಗಳನ್ನು ಗುರುತಿಸಬೇಕು. ಜನಪದವೊಂದರ ಇತಿಹಾಸದಲ್ಲಿ ಎಷ್ಟೋ ಘಟನೆಗಳ ವಿವರಗಳಿರುತ್ತವೆ. ನಾನಾ ಸಮಸ್ಯೆಗಳು ಉದ್ಭವಿಸಿರುತ್ತವೆ. ಪರಿಹಾರೋಪಾಯಗಳೂ ತೋರಿ ಬಂದಿರುತ್ತವೆ. ಜನಜೀವನ ಪ್ರವಾಹ ಒಮ್ಮೆ ನೇರವಾಗಿ, ಒಮ್ಮೆ ವಕ್ರವಾಗಿ ಹರಿದಿರುತ್ತದೆ. ಜನಪದಕ್ಕೊಮ್ಮೆ ಸೋಲಾಗಿರುತ್ತದೆ; ಒಮ್ಮೆ ಜಯವಾಗಿರು ತ್ತದೆ. ಜನಪದವು ಪರಿಣಾಮ ಕಲ್ಯಾಣ ಮಾರ್ಗವೊಮ್ಮೆ ಹಿಡಿದಿರುತ್ತದೆ. ಇನ್ನೊಮ್ಮೆ ಪರಿಣಾಮ ಕಂಟಕ ಮಾರ್ಗವನ್ನು ಹಿಡಿದುಹೋಗಿರುತ್ತದೆ. ಪರ ಹಿತಾರ್ಥಾಗಮವೇ ಜೀವಸ್ವರವಾಗಿ ಒಮ್ಮೆ ಕೇಳಿಬಂದರೆ, ಇನ್ನೊಮ್ಮೆ ಸಂಗ್ರಾಮ ಭೇರೀರವ ಕಿವಿದೆರೆಗಳನ್ನು ಕೊರೆಯುತ್ತದೆ. ವ್ಯಕ್ತಿ ಜೀವನ, ಸಮಷ್ಟಿ ಜೀವನ, ಜನಪದ ಜೀವನ—ಇವುಗಳ ಸುಖ-ದುಃಖ, ಶಾಂತಿ-ಅಶಾಂತಿ, ಸ್ವಾತಂತ್ರ್ಯ-ಪಾರತಂತ್ರ್ಯ, ಇಷ್ಟಾರ್ಥ-ಪರಮಾರ್ಥ ಇವೆಲ್ಲವುಗಳಿಗೆ ಸಂಬಂಧಪಟ್ಟಂತೆ ಕಂಡು ಬರುವ ಅನುಭವಗಳನ್ನು, ತತ್ವಗಳನ್ನು, ನಿಸರ್ಗ ನಿಯಮಗಳನ್ನು ಕ್ರೋಢೀಕರಿಸಿ, ಯಾವುದು ಅಂಗೀಕಾರ ಯೋಗ್ಯ, ಯಾವುದು ಅಂಗೀಕಾರ ಯೋಗ್ಯವಲ್ಲ; ಯಾವುದು ಧರ್ಮ, ಯಾವುದು ಧರ್ಮವಲ್ಲ; ಯಾವುದು ನೀತಿ, ಯಾವುದು ನೀತಿಯಲ್ಲ; ಯಾವುದು ನ್ಯಾಯ, ಯಾವುದು ನ್ಯಾಯವಲ್ಲ; ಇವುಗಳ ನಿರ್ಣಯ ಮಾಡುವುದು ರಾಜ್ಯಶಾಸ್ತ್ರದ ಉದ್ದೇಶ್ಯ; ರಾಜನೀತಿ ಕೋವಿದರ ಪರಮಾರ್ಥ. ಜನಪದವೊಂದರ ದೀರ್ಘಕಾಲದ ರಾಜಕೀಯ ಜೀವನದ ಅನುಭವಗಳೇ ಇತಿಹಾಸಕ್ಕೆ, ರಾಜ್ಯಶಾಸ್ತ್ರಕ್ಕೆ ಆಧಾರ. ಈ ಬಗೆಯ ಅನುಭವಗಳಲ್ಲಿ ಕರ್ಣಾಟಕಕ್ಕೆ

ಶ್ರವಣಬೆಳುಗೊಳದ ಪವಿತ್ರ ಕ್ಷೇತ್ರದ ಕಡೆ ನೋಡಿ. ಶ್ರುತಕೇವಲಿ, ಯತೀಂದ್ರ ಭದ್ರಬಾಹು! ಮೌರ್ಯ ಸಂರಾಟ್, ಮುನೀಂದ್ರ ಚಂದ್ರಗುಪ್ತ! ಎಂತಹ ಗುರುಶಿಷ್ಯರಿಂದ ದಿವ್ಯಕ್ಷೇತ್ರವೆನಿಸಿತೀ ಶ್ರವಣಬೆಳುಗೊಳ! ಅವರ ತ್ಯಾಗ, ಅವರ ತಪಸ್ಸು ನಿತ್ಯಾನುಗ್ರಹವಾಗಿ ಕರ್ಣಾಟಕವನ್ನೇಕೆ, ಇಡೀ ಭಾರತವನ್ನೇ ಕಾಪಾಡುತ್ತಿದೆ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" ಎಂದು ರಾಜರ್ಷಿ, ಚಿರಂಜೀವಿ—ಚಂದ್ರಗುಪ್ತ ಸಾರುತ್ತಿದ್ದಾನೆ!

> "ಕ್ರಮದಿಂ ಮೆಯ್ಯೊಳಂದಿರ್ದಾಚರಿಸ ಕ್ರಮದೆ ಮಾತಂ ಬಿಟ್ಟು ತನ್ನಿಟ್ಟ ಚ
> ಕ್ರಮದಿಂ ಸಿಂಪ್ರಭವಾಗೆ ಸಿಗ್ಗನೊಳಕೊಂಡಾತ್ಮಾಗ್ರಜಂಗೊಳ್ವುಗೆ
> ಯ್ದು ಮಹೀರಾಜ್ಯಮನಿತ್ತು ಪೋಗಿ ತಪದಿಂ ಕರ್ಮಾರಿವಿಧ್ವಂಸಿಯಾ
> ಪ ಮಹಾತ್ಮಂ ಪುರುಷೂನು ಬಾಹುಬಲಿವೋಲ್ ಮತ್ತಾರೊ ಮಾನೋನ್ನತರ್"

—ಎಂದು ಬೊಪ್ಪಣಕವಿ ಸ್ತೋತ್ರಮಾಡಿದ ಗೋಮಟೇಶ್ವರನು ಹಿಮಾಲಯ ನಾಮಕ 'ನಗಾಧಿರಾಜ'ನನ್ನು ನೋಡುತ್ತ "ಶ್ರೀರೂಪಲೀಲಾಧನವಿಭವ ಮಹಾರಾಶಿಗಳ್ ನಿಲ್ಲವಾರ್ಗಂ" ಎಂದು ಬೋಧಿಸುತ್ತಿದ್ದಾನೆ! ನಿತ್ಯಾನಂದ ಧಾರಾವರ್ಷವನ್ನು ಸುರಿಸುತ್ತಿದ್ದಾನೆ!

ಶಾತವಾಹನರ ಕಾಲದ ಶಾಸನಗಳು ಕೆಲವಲ್ಲಿ 'ಮಹಾವಲ್ಲಭಂ ರಜ್ಜುಕಂ', 'ಮಹಾರಥಿ ಕಲಲಾಯಸ', 'ರಾಞೋ ಮುದಾನಂದಸ', ಎಂಬುದಾಗಿ ಕಂಡು ಬರುತ್ತದೆ. 'ರಜ್ಜುಕ', 'ಮಹಾರಥಿ', 'ರಾಞೋ' ಈ ಮಾತುಗಳು ವಿಶೇಷಣಗಳು; ಅವು ಮಹಾವಲ್ಲಭ, ಕಲಲಾಯ, ಮುದಾನಂದರ ಅಧಿಕಾರ, ಸ್ಥಾನ ಮಾನಗಳನ್ನು ಸೂಚಿಸುತ್ತವೆಯೆಂದು ಮಾತ್ರ ಹೇಳಬಹುದು.

ಕರ್ಣಾಟಕದ ಇತಿಹಾಸವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದಾಗ ಒಂದಂಶವು ಸ್ಪಷ್ಟವಾಗಿ ಮನಸ್ಸಿಗೆ ಗೋಚರವಾಗುತ್ತದೆ. ಕದಂಬರು, ರಾಷ್ಟ್ರಕೂಟರು, ಚಾಳುಕ್ಯರು, ಗಂಗರು, ಹೊಯ್ಸಳರು ಇವರೆಲ್ಲ ಗೋದಾವರಿಯಿಂದ ಉತ್ತರಕ್ಕಿರುವ ಪ್ರದೇಶಗಳ ರಾಜಮಹಾರಾಜರೊಂದಿಗೂ, ಕಾವೇರಿಯಿಂದ ದಕ್ಷಿಣಕ್ಕಿರುವ ಪ್ರದೇಶಗಳ ಪಲ್ಲವ, ಚೋಳ, ಪಾಂಡ್ಯ, ಚೇರ ರಾಜಮಹಾರಾಜರೊಂದಿಗೂ ಹೋರಾಡಬೇಕಾಗಿತ್ತು. ಉತ್ತರ ಭಾರತದ ಮೇಲೆ ತಮ್ಮ ಪ್ರಭಾವ ತೋರಿಸಬೇಕೆಂಬ ಆಶೆ ಕರ್ಣಾಟಕದ ರಾಜಮನೆತನಗಳವರಿಗಿಲ್ಲವಾದರೂ 'ದಕ್ಷಿಣಾಪಥೇಶ್ವರ'ರಾಗಬೇಕೆಂಬ ಆಶೆಯು ಅವರಿಗೆ ಪ್ರಬಲವಾಗಿತ್ತೆಂಬುದರಲ್ಲಿ ಸಂಶಯವೇನಿಲ್ಲ. ಈ ಆಶೆಯನ್ನು ನೆರವೇರಿಸಿಕೊಳ್ಳುವುದರಲ್ಲಿ ತಕ್ಕಮಟ್ಟಿಗೆ ಅವರು ಕೃತಾರ್ಥರೂ ಆದರೆಂಬುದನ್ನು ದಕ್ಷಿಣ ಭಾರತದ ಇತಿಹಾಸವು ಸಾರುತ್ತಿದೆ. ವಿಜಯನಗರ ಸಾಮ್ರಾಜ್ಯ ಇದಕ್ಕೆ ಸಾಕ್ಷಿಯಾಗಿದೆ. ದಕ್ಷಿಣ ಭಾರತದಲ್ಲಿ ಮೊಟ್ಟಮೊದಲು ಮುಸಲ್ಮಾನರನ್ನೆದುರಿಸಿದ ಹೊಯ್ಸಳ ಸಾಮ್ರಾಜ್ಯ ಇದಕ್ಕೆ ಸಾಕ್ಷಿಯಾಗಿದೆ. ದಕ್ಷಿಣ ಭಾರತದ ರಾಜ್ಯ ಸಾಮ್ರಾಜ್ಯಗಳ ಅವತಾರ, ಪತನ; ರಾಜಮನೆತನಗಳ ಉದ್ಧಾರ, ಪತನ, ಪುನರುಜ್ಜೀವನ; ಇವೆಲ್ಲ ಸ್ವಲ್ಪ ಹೆಚ್ಚುಕಡಿಮೆ ಕರ್ಣಾಟಕದ ರಣಕ್ಷೇತ್ರಗಳಲ್ಲೇ ನಿರ್ಣಯವಾಗಿವೆ. ರಾಜಕೀಯ ವಿಪ್ಲವಗಳಿಗೇನೂ ಕೊರತೆ ಇಲ್ಲ. ಆದರೆ ಈ ವಿಪ್ಲವಗಳಿಂದ ಜನಜೀವನ ರಚನೆಗೆ ಹೆಚ್ಚಾಗಿ ತೊಂದರೆಯುಂಟಾಗ

ಲಿಲ್ಲವೆಂದು ಹೇಳಬಹುದು. ಜನಜೀವನ ಛಿದ್ರತೆಗಾಗಲಿ, ಜನರ ಜ್ಞಾನ ಸಾಧನೋದ್ಯಮಕ್ಕಾಗಲಿ, ರಸಯೋಗಾಭ್ಯಾಸಕ್ಕಾಗಲಿ, ರಕ್ತಲಿಪ್ತ ರಾಜಕಾರಣವು ಅಡ್ಡಿಯನ್ನುಂಟುಮಾಡಲಿಲ್ಲ. ಕ್ರಿಸ್ತಶಕದಾರಂಭ ದಿನಗಳಿಂದ ಮೊದಲುಮಾಡಿ ಕೃಷ್ಣದೇವರಾಯನ ಕಾಲದವರೆಗಿನ ದಕ್ಷಿಣ ಭಾರತದ ಸಾಂಸ್ಕೃತಿಕ ಇತಿಹಾಸವು, ಪ್ರೌಢ ಜೀವನದ ಇತಿಹಾಸವು, ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದು; ಅಭಿಮಾನಾಸ್ಪದವಾದದ್ದು; ಸ್ಫೂರ್ತಿದಾಯಕವಾದದ್ದು. ಧರ್ಮವೆ, ದರ್ಶನವೆ, ವಾಸ್ತುಶಿಲ್ಪವೆ, ನಾಟ್ಯ ಗಾಯನ ವಾದನವೆ, ಸಾಹಿತ್ಯವೆ, ನಾಟಕವೆ, ಶಾಸ್ತ್ರವೆ— ಯಾವದೇ ಕ್ಷೇತ್ರ ಪ್ರವೇಶಮಾಡಿ ನೋಡಿದಾಗ ಎಂತಹ ಮೇಧಾಶಕ್ತಿ, ಏನು ಪ್ರತಿಭೆ, ಎಂತಹ ಪೂರ್ಣ ಜೀವನ, ಅನ್ನಿಸುತ್ತದೆ. ದಕ್ಷಿಣ ಭಾರತದ ಸಾವಿರಾರು ಶಿಲಾ ಶಾಸನಗಳು ಈ ಮಹಾಜೀವನದ ದರ್ಪಣಗಳಂತಿವೆ! ಕಣ್ಣುಗಳನ್ನು ಬಿಟ್ಟು ಆ ದರ್ಪಣಗಳನ್ನು ನೋಡಿದಾಗ ಶ್ರೀಯನ್ನೂ ಅಮೃತತ್ವವನ್ನೂ ಸೇವಿಸಿದ ನಮ್ಮ ಹಿರಿಯರ, ಧೀರರ ಪರಿಚಯವಾಗುತ್ತದೆ.

## ೩. ಮನು ಮಾಂಧಾತೃಸಮರು

ಕ್ರಿಸ್ತಶಕ ಎರಡನೆಯ ಶತಮಾನದ ವೇಳೆಗೆ ಕದಂಬರು ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಕರಾವಳಿ ಕ್ಷೇತ್ರವನ್ನೂ, ಕುಂತಳವನ್ನೂ ಅವರು ಆಳಿದರು. ಕದಂಬ ಕುಲದ ಕಥೆಯು ದಿವ್ಯವಾಗಿದೆ. ಪಶ್ಚಿಮಘಟ್ಟ- ಸಹ್ಯಾದ್ರಿಗೂ, ಪಶ್ಚಿಮ ಸಮುದ್ರಕ್ಕೂ ಮಧ್ಯೆ ಇರುವ ಭೂಭಾಗಕ್ಕೆ ಪರಶುರಾಮ ಕ್ಷೇತ್ರವೆಂದು ಹೆಸರು. ಕೊಂಕಣವೆಂದು ಪರಶುರಾಮನ ತಾಯಿಯ ಹೆಸರಿ ನಿಂದಲೂ ಇದನ್ನು ಕರೆಯುವುದುಂಟು. ಹೈಗ, ತುಳುವಕ್ಷೇತ್ರಗಳೆಂದೂ ರೂಢಿಯ ಹೆಸರು. ಈ ಕ್ಷೇತ್ರ ರೂಪುಗೊಂಡಾಗ, ಜನವಸತಿಯಾದಾಗ ಜನರಿಗೆ 'ನಮಗೊಬ್ಬ ರಾಜಬೇಕು' ಅನ್ನಿಸಿತು. ಹಾಗೆ ಅವರಿಗೆ ಅನ್ನಿಸಿದ ಕೂಡಲೆ ಒಬ್ಬನನ್ನು ತಮ್ಮ ರಾಜನನ್ನಾಗಿ ಆರಿಸಿಕೊಂಡರು. ಆರಿಸಿದ ಬಗೆ ಹೀಗೆ: ಪಟ್ಟದ ಆನೆಯ ಸೊಂಡಲಿಗೆ ಹೂವಿನ ಹಾರವೊಂದನ್ನು ಕೊಟ್ಟರು. ಆನೆಯು ಅಲ್ಲಿ, ಇಲ್ಲಿ ಓಡಾಡಿ, ಕಡೆಗೆ ಸಣ್ಣ ವಯಸ್ಸಿನ ತರುಣನೊಬ್ಬನ ಬಳಿ ಸಾರಿ, ಹಾರವನ್ನು ಅವನ ಕೊರಳಿಗೆ ಹಾಕಿತು. ಆ ತರುಣನ ತಂದೆ ತಾಯಿಗಳು ಯಾರೋ ಗೊತ್ತಿಲ್ಲ. ಜನರೆಲ್ಲ ಅವನನ್ನು ದಿವ್ಯ ಪುರುಷನನ್ನಾಗಿ ಭಾವಿಸಿದರು; ತಮ್ಮ ರಾಜನನ್ನಾಗಿ ಅಂಗೀಕರಿಸಿದರು. ಈ ರಾಜವಂಶೀಯರೇ 'ಸ್ವಾಮಿ ಮಹಾಸೇನಪಾದಾನುಧ್ಯಾತರು', 'ಬನವಾಸಿ ಪುರವರೇಶ್ವರ'ರು.

'ಕುವಳಾಲ ಪುರವರೇಶ್ವರ'ರೂ, 'ನಂದಿಗಿರಿನಾಥ'ರೂ ಆದ ಗಂಗವಾಡಿ ೯೬,೦೦೦ದ ಗಂಗರಸರ ಆಳ್ವಿಕೆಯಾರಂಭದ ಕಥೆ ಇದು. ದಡಿಗ, ಮಾಧವ ಎಂಬಿಬ್ಬರು ಸೋದರರು, ತಂಗಿ ಆಲಬ್ಬೆ ಮತ್ತು ೪೦ ಮಂದಿ ಬ್ರಾಹ್ಮಣ ಪರಿವಾರ ದೊಂದಿಗೆ ಉತ್ತರ ದೇಶದಿಂದ ದಕ್ಷಿಣ ದೇಶಕ್ಕೆ ಬಂದರು. ಪೆರೂರಿನಲ್ಲಿ ಬಂದಿಳಿ ದರು. ಕಾಣೂರ್ಗಣದ ಜೈನ ಆಚಾರ್ಯ ಸಿಂಹನಂದಿಯ ದರ್ಶನ ಮಾಡಿದರು. ಆಚಾರ್ಯರ ಅನುಗ್ರಹದಿಂದ ಪದ್ಮಾವತೀ ದೇವಿಯು ಮಾಧವನಿಗೊಂದು ಕತ್ತಿಯನ್ನು

ಕೊಟ್ಟಳು. ತಕ್ಷಣ ಮಾಧವನು ಆ ಕತ್ತಿಯನ್ನು ಹಿಡಿದು ಬೀಸಿ, ಒಂದೇ ಏಟಿಗೆ ಶಿಲಾ ಸ್ತಂಭವೊಂದನ್ನು ಎರಡು ತುಂಡುಮಾಡಿ ಹಾಕಿದನು. ಪದ್ಮಾವತೀದೇವಿಯ ಕೃಪೆಯಿಂದ ರಾಜ್ಯಲಾಭವಾಯಿತು. ಆಚಾರ್ಯ ಸಿಂಹನಂದಿಯು ಕರ್ಣಿಕಾರ ಪುಷ್ಪ ದಿಂದ ಕಿರೀಟಮಾಡಿ, ಮಾಧವನಿಗೆ ಮಕುಟಬಂಧೋತ್ಸವ ಮಾಡಿದ. ಆ ಸಮಯದಲ್ಲಿ ಆಚಾರ್ಯ ಸಿಂಹನಂದಿಯು ಮಾಧವನಿಗೆ—

> "ನೀನು ಕೊಟ್ಟಮಾತಿಗೆ ತಪ್ಪಿದರೆ; ಜಿನಶಾಸನದಿಂದ ಜಾರಿದರೆ; ಪರಸತಿಯರನ್ನ ಪಹರಿಸಿದರೆ; ಮದ್ಯಮಾಂಸ ಮತ್ಸ್ಯ ಭಕ್ಷಣ ಮಾಡಿದರೆ; ನೀಚರ ಸಹವಾಸ ಮಾಡಿದರೆ; ದೀನದಳಿತರಿಗೆ ದಾನ ಧರ್ಮ ಮಾಡದೆ ಹೋದರೆ; ರಣಭೂಮಿಯಿಂದ ಹಿಮ್ಮೆಟ್ಟಿದರೆ; ನಿನ್ನ ವಂಶ ನಾಶವಾಗುತ್ತದೆ"

—ಎಂಬುದಾಗಿ ಎಚ್ಚರಿಕೆಯ ಸಂದೇಶವನ್ನಿತ್ತ! ಈ ಮಾಧವನನ್ನು ಅವನ ಪ್ರಜೆಗಳು 'ಧರ್ಮ ಮಹಾಧಿರಾಜ,' 'ಧರ್ಮಮಹಾರಾಜಾಧಿರಾಜ'ನೆಂದು ಕರೆದರು. ಈ ವಂಶದ ಮೊದಲನೆಯ ಶಿವಮಾರ 'ಶಿಷ್ಟಜನಪ್ರಿಯ'ನೆನಿಸಿದ. ಇಮ್ಮಡಿ ಮಾಧವ ಮಹಾಕವಿ, ಶಾಸ್ತ್ರವಿಶಾರದ ದತ್ತಕಸೂತ್ರಗಳನ್ನು ಬರೆದಿದ್ದಾನೆ. ನೀತಿ ಶಾಸ್ತ್ರ ಕುರಿತು ಗ್ರಂಥವೊಂದನ್ನು ಬರೆದಿದ್ದಾನೆ. ಅವಿನೀತನನ್ನು ಅವನ ಕಾಲದ 'ಯುಧಿಷ್ಠಿರ'ನೆಂದು ಕರೆದರು. ದುರ್ವಿನೀತನು 'ಪ್ರಭುಮಂತ್ರೋತ್ಸಾಹ' ಮೂರು ಶಕ್ತಿಗಳಿಂದ ಕೂಡಿದ್ದವ. ಭಾರವಿಯ 'ಕಿರಾತಾರ್ಜುನೀಯ'ದ ಹದಿ ನೈದನೆಯ ಸರ್ಗಕ್ಕೆ ಟೀಕೆ ಬರೆದ ಮೇಧಾವಿ! 'ಶಬ್ದಾವತಾರ' ಕರ್ತನೂ ಹೌದು. ಪೈಶಾಚಿ ಭಾಷೆಯ 'ವಡ್ಡಕತೆ'ಯನ್ನು 'ಬೃಹತ್ಕಥಾ' ಎಂಬ ಹೆಸರಿಟ್ಟು ಸಂಸ್ಕೃತ ದಲ್ಲಿ ಬರೆದ. ಉತ್ತನೂರು ತಾಮ್ರ ಶಾಸನದಲ್ಲಿ ಇವನನ್ನು 'ವೈವಸ್ವತಮನು' ವೆಂದು ಕರೆಯಲಾಗಿದೆ. ಶ್ರೀ ವಿಕ್ರಮನಿಗೆ ರಾಜನೀತಿ ಅಥವಾ ನೀತಿಶಾಸ್ತ್ರ ದಲ್ಲಿ ಸರ್ವತೋಮುಖವಾದ ಪಾಂಡಿತ್ಯ ಇದ್ದಹಾಗೆ ತಿಳಿದುಬರುತ್ತದೆ. ಶಿವ ಮಾರನ ಸಂಬಂಧವಾಗಿ ಆಲೂರು ತಾಮ್ರ ಶಾಸನದಿಂದ ಅಮೂಲ್ಯ ಅಂಶಗಳು ತಿಳಿದುಬಂದಿವೆ. ತ್ರಿಭಾಷಾಕವಿ ಈತ. 'ಸೇತು ಬಂಧ' ಕಾವ್ಯವನ್ನು ರಚಿಸಿ ದ್ದಾನೆ. ತಾರ್ಕಿಕ, ದಾರ್ಶನಿಕ, ನಾಟಕ ಕರ್ತೃ, ಶಾಸ್ತ್ರವಿಶಾರದ. ಸ್ವಲಾಭ, ಸ್ವಸುಖ ಗಣಿಸದೆ ಪರಹಿತಸಾಧನೆಗಾಗಿಯೇ ಹೆಣಗಾಡಿದ.

ಮೊದಲನೆಯ ಮಾರಸಿಂಹ, ವಿಶಾಲಕೀರ್ತಿ, ಲೋಕಪ್ರಿಯ. ರಾಜಮಲ್ಲ ನಾದರೋ, ಸತ್ಯವಾಕ್ಯ, ನೀತಿಶಾಸ್ತ್ರಕೋವಿದ. ಇಮ್ಮಡಿ ರಾಜಮಲ್ಲನನ್ನು ಮಾಂಧಾತೃಸಮನೆಂದು ವರ್ಣಿಸಿದ್ದಾರೆ. ಇವನ ಮಗ ಬೂತುಗೇಂದ್ರ ಶಾಸ್ತ್ರ ವಿದ; ಗಜಶಾಸ್ತ್ರ ಪ್ರವೀಣ. ಜ್ಞಾನದಲ್ಲಿ ಬ್ರಹ್ಮನೆಂದು ಹೆಸರು ಪಡೆದ. ಶ್ರದ್ಧಾಳು ಜಿನಧರ್ಮಿಯಾದರೇನು? ಆಲೂರು ತ್ರಿಪುರಹರ ಶಿವನಿಗಾಗಿ ಕಾಲಾಮುಖಪಂಥದ ನೇತ್ರ ಶಿವಾಚಾರ್ಯನಿಗೆ ಗ್ರಾಮದಾನ ಮಾಡುತ್ತಾನೆ. ಶಿವಾಲಯವನ್ನು ಜೀರ್ಣೋ ದ್ಧಾರ ಮಾಡುತ್ತಾನೆ. ಉದಾರಚಾರಿತ್ರವು ಕನ್ನಡನಾಡಿನ ಅರಸರ ಪ್ರಧಾನ ಗುಣ. 'ಗುಣದುತ್ತರಂಗ'ನೆಂದಿವನನ್ನು ಅಂದಿನವರು ಕೊಂಡಾಡುವುದರಲ್ಲಾ ಶ್ಚರ್ಯವೇನಿದೆ?

ಇವನ ಮಗನೇ ಇಮ್ಮಡಿ ನೀತಿಮಾರ್ಗ. ರಾಜನೀತಿ ಕುಶಲ. ರಾಷ್ಟ್ರಕೂಟರ ಸ್ನೇಹಬಾಂಧವ್ಯ ಗಳಿಸಿದ. ಸಂಗ್ರಾಮನೀತಿ ಇವನಿಗೆ ಪ್ರಿಯವಲ್ಲ; ಶಾಂತಿಪ್ರಿಯ. ತಾನು ಕೊಂಗಲನಾಡನ್ನಾಳಿದರೆ, ತನ್ನರಸಿಯನ್ನು ಕುರಗಲ್ ನಾಡಿಗರಸಿಯನ್ನಾಗಿ ಮಾಡಿದ. ಸತಿಪತಿಗಳಿಬ್ಬರೂ ರಾಜ್ಯಭಾರ ಮಾಡಿದರು. ನರಸಿಂಹದೇವ 'ಬೀರವೆಡಂಗ'. ಭರತಶಾಸ್ತ್ರ, ಇತಿಹಾಸ, ಪುರಾಣಾದಿಗಳಲ್ಲಿ ಪಾರಂಗತ. ಮುಮ್ಮಡಿ ಮಾರಸಿಂಹ ಮಹಾ ಮೇಧಾವಿ; ಮಹಾವೀರ; ಯುಧಿಷ್ಠಿರಸಮನೆಂಬುದವನ ಕೀರ್ತಿ. ಚಾಣಕ್ಯಾದಿ ಅನೇಕ ನೀತಿ ಶಾಸ್ತ್ರಜ್ಞರ ಮಾರ್ಗ ಹಿಡಿದು, ವರ್ಣಾಶ್ರಮ ಧರ್ಮ ಕಾಪಾಡಿದ. 'ಗಂಗ ಚೂಡಾಮಣಿ' ಯೆನಿಸಿ, 'ಪರಮಾರ್ಥಂ ಮೆಚ್ಚಿ', ಕಡೆಗೆ ಅಜಿತಸೇನಾಚಾರ್ಯರ ಸನ್ನಿಧಿಯಲ್ಲಿ ಮೂರು ದಿನಗಳ ವ್ರತ ಹಿಡಿದು, ಸತ್ತು, ಸ್ವರ್ಗಿಯಾದ.

## ೪. ಸತ್ಯಾಶ್ರಯ ಕುಲತಿಲಕರು

ಬಾದಾಮಿ ಚಾಳುಕ್ಯರೆಲ್ಲ 'ಸತ್ಯಾಶ್ರಯ ಕುಲ ತಿಲಕರು'. ರಣರಾಗರು, ರಣಪರಾಕ್ರಮಿಗಳು, ರಣವಿಕ್ರಮರು, ರಣವಿಕ್ರಾಂತರು! ಪರ್ಶಿಯದ ಸಮ್ರಾಟ್ ಇಮ್ಮಡಿ ಖುಸ್ರುವಿನ ರಾಯಭಾರಕ್ಕೆ ಸ್ವಾಗತವಿತ್ತು, ಕರ್ಣಾಟಕದ ರಾಯಭಾರವನ್ನು ಪರ್ಶಿಯಾ ದೇಶಕ್ಕೆ ಕಳುಹಿಸಿದ ಕೀರ್ತಿ ಇಮ್ಮಡಿ ಪುಲಿಕೇಶಿಯದು. ಅಜಂತದ ಗುಹಾಂತರ್ದೇವಾಲಯ ಭಿತ್ತಿಯಲ್ಲೀ ರಾಯಭಾರದ ಚಿತ್ರವನ್ನಿಂದಿಗೂ ನೋಡಬಹುದು. ಕನ್ಯಾಕುಬ್ಜದೊಡೆಯ ಹರ್ಷವರ್ಧನ ಅಥವಾ ಶೀಲಾದಿತ್ಯನನ್ನು ಸೋಲಿಸಿ 'ಪರಮೇಶ್ವರ'ನೆಂಬ ಬಿರುದನ್ನು ಪಡೆದ ಕೀರ್ತಿ ಇಮ್ಮಡಿ ಪುಲಕೇಶಿಯದು. ಉತ್ತರ ಭಾರತದ ಸಮ್ರಾಟನನ್ನು ಸೋಲಿಸುವ ಪರಾಕ್ರಮಧನನೆನಿಸಿದ 'ಕರ್ಣಾಟ ಚಕ್ರೇಶ್ವರ'. 'ಚಿತ್ರಕಾಂತ' ವೆಂಬ ರಾಜಾಶ್ವವನ್ನೇರಿ, ಪಾಂಡ್ಯ, ಚೋಳ, ಕೇರಳ, ಕಳಭ್ರರನ್ನೋಡಿಸಿದ ಕೀರ್ತಿ, ಕಾಂಚಿಯನ್ನಾಕ್ರಮಿಸಿ, ಪಲ್ಲವ ರಾಜನನ್ನು ಪಾದಾಕ್ರಾಂತನನ್ನಾಗಿ ಮಾಡಿದ ಕೀರ್ತಿ, ಮೊದಲನೆಯ ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. ಕವೇರ, ಪಾರಸೀಕ, ಸಿಂಹಳ ಪ್ರಭುಗಳಿಂದ ಕಪ್ಪಕಾಣಿಕೆಗಳನ್ನು ಪಡೆದವ ವಿನಯಾದಿತ್ಯ. ಅರಬ ಧಾಳಿಗಳನ್ನೆದುರಿಸಿದ ಮಹಾವೀರನೀತನೆ! ಗುಪ್ತರಾಜರಿಂದ ಗಂಗಾ ಯಮುನಾ ಧ್ವಜವನ್ನು ತೆಗೆದುಕೊಂಡವ ವಿಜಯಾದಿತ್ಯ. ದಕ್ಷಿಣ ಸಮುದ್ರ ತೀರದಲ್ಲಿ ವಿಜಯಸ್ತಂಭ ಹಾಕಿದವ ಇಮ್ಮಡಿ ವಿಕ್ರಮಾದಿತ್ಯ.

ತಲಕಾಡಿನ ಗಂಗರು, ಬಾದಾಮಿಯ ಚಾಳುಕ್ಯರಿಗೆ ಸಮಾನರು ಮಾನ್ಯ ಖೇಟದ ರಾಷ್ಟ್ರಕೂಟರು, ಖಡ್ಗಾವಲೋಕ, ವೈರಮೇಘ, ಅಕಾಲವರ್ಷ, ಅಮೋಘವರ್ಷ, ನಿತ್ಯವರ್ಷ, ಧಾರಾವರ್ಷ, ಸುವರ್ಣವರ್ಷ—ಇತ್ಯಾದಿ ಬಿರುದು ಗಳೂ, ಹೆಸರುಗಳೂ ಅರ್ಥಗರ್ಭಿತಗಳಾಗಿವೆ. ಇವರೆಲ್ಲ 'ಪೃಥ್ವೀವಲ್ಲಭ'ರು. ಎಲ್ಲೋರದ ಕೈಲಾಸನಾಥ ದೇವಾಲಯವನ್ನು ಬೆಟ್ಟವನ್ನೇ ಕೊರೆಯಿಸಿ, ಕಣ್ಡರಿಸಿ ದವ ಮೊದಲನೆಯ ಕೃಷ್ಣ! ದಕ್ಷಿಣಾಪಥೇಶ್ವರನಾಗಲು ತನಗೆ ಅನುಗ್ರಹ ಮಾಡಿದ ಇಷ್ಟದೇವತೆಗಾಗಿ, ಭಕ್ತಿ ಕೃತಜ್ಞತಾಸೂಚಕವಾಗಿ ಈ ಜಗದಾಶ್ಚರ್ಯ ಕಲಾಕೃತಿ

ಯನ್ನು ನಿರ್ಮಿಸಿದ. ಹ್ಯಾವೆಲನೆಂಬ ಆಂಗ್ಲ ವಾಸ್ತುಶಿಲ್ಪ ವಿಮರ್ಶಕನು ಇದನ್ನು ಬಾಯಿತುಂಬ ಹೊಗಳಿದ್ದಾನೆ.

ದಕ್ಷಿಣ ಭಾರತದ ದೇವಾಲಯಗಳಿಗೆಲ್ಲ ಕೈಲಾಸ ದೇವಾಲಯ ಮಾದರಿಯಾಯಿತು. ಕಾಂಚೀಪುರದ ವೈಕುಂಠನಾಥ, ವಿಜಯನಗರದ ವಿಠಲನಾಥ ಮೊದಲಾದ ದೇವಾಲಯಗಳೆಲ್ಲ 'ಕೈಲಾಸ'ದ ರೂಪರಚನೆಗಳನ್ನು ಅನುಸರಿಸಿವೆ.

ಧೋರ ಅಥವಾ ಧ್ರುವ ಪಲ್ಲವರನ್ನು ಹದ್ದಿನಲ್ಲಿರಿಸಿದ. ಘೂರ್ಜರಾಧಿಪ ವತ್ಸರಾಜನನ್ನು ಮಾರವಾಡಕ್ಕೋಡಿಸಿದ. 'ಕಲಿವಲ್ಲಭ'ನೆನಿಸಿ ಕೃತಯುಗದ ಕೀರ್ತಿ ವೈಭವವನ್ನು ಸ್ಥಾಪಿಸಿದ. ಶೈಗೊಟ್ಟ ಶಿವಮಾರ (ಗಂಗ)ನನ್ನು ಬಂಧಿಸಿದ 'ನಿರುಪಮ' ಇವನೇ. ಮುಮ್ಮಡಿ ಗೋವಿಂದ ಉತ್ತರದ ವಿಂಧ್ಯ, ಮಾಳವದಿಂದ ದಕ್ಷಿಣದ ಕಂಚಿಯವರೆಗೆ, ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವರೆಗೆ ತನ್ನ ಪರಾಕ್ರಮ ಪ್ರಭಾವ ತೋರಿಸಿದ. ಅರವತ್ತೆರಡು ವರ್ಷಕಾಲ ರಾಜ್ಯಭಾರ ಮಾಡಿ ಶಾಶ್ವತ ಕೀರ್ತಿ ಗಳಿಸಿದ 'ಕವಿರಾಜ ಮಾರ್ಗ' ಕರ್ತೃ, ಅತಿಶಯಧವಳ, ಅಮೋಘವರ್ಷ, ನೃಪತುಂಗನ ವಿಚಾರವಾಗಿ ಹೆಚ್ಚಾಗಿ ಹೇಳಬೇಕಾಗಿಲ್ಲ. ನೆರೆ ಹೊರೆ ರಾಜರೊಂದಿಗೆ ಸ್ನೇಹ, ಬಾಂಧವ್ಯ ಬೆಳೆಸುವುದೇ ಅವನ ರಾಜನೀತಿ. ಅವನ ಕಾಲದ ಕನ್ನಡ ನಾಡು, ಕನ್ನಡ ಜನ, ಕನ್ನಡ ಜೀವನ ಕುರಿತು ಅನೇಕ ಅಂಶಗಳು ತಿಳಿದು ಬಂದಿವೆ. ಕನ್ನಡನಾಡು 'ಕಾವೇರಿಯಿಂದ ಗೋದಾವರಿವರಂ' ಇತ್ತು. ಕಿಸುವೊಳಲು, ಕೊಪಣ ನಗರ, ಪುರಿಗೆರೆ, ಒಕ್ಕುಂದ ಈ ನಾಡೆ 'ಕನ್ನಡದ ತಿರುಳ್'. ನೃಪತುಂಗನ ಕೀರ್ತಿ ಭಾರತದ ಸೀಮಾರೇಖೆಗಳನ್ನು ದಾಟಿತ್ತು. ವರ್ತಕ [6]ಸುಲೇಮಾನನು ಇವನನ್ನು ಜಗತ್ತಿನ ನಾಲ್ಕು ಮಹಾಚಕ್ರವರ್ತಿಗಳಲ್ಲಿ ಒಬ್ಬನನ್ನಾಗಿ ಭಾವಿಸಿದ್ದಾನೆ. ಬಾಗದಾದಿನ ಖಲಿಫಾ, ಚೀಣಾ ಚಕ್ರವರ್ತಿ, ಕಾನ್‌ಸ್ಟಾಂಟಿನೋಪಲಿನ ಸಾರ್ವಭೌಮ, ಇವರೇ ಉಳಿದ ಮೂವರು.

ಇಮ್ಮಡಿ ಕೃಷ್ಣನ ಕಾಲದ [7]ಶಾಸನವೊಂದು ನಾಳ್ಗಾವುಂಡ ಸತ್ತರಸ ನಾಗಾರ್ಜುನ ಬಿದ್ದನೆಂದೂ, ಅವನ ಅನಂತರ ರಾಜನು ಸತಿ ಜಾಕಿಯಬ್ಬೆಗೆ ಪ್ರಭುತ್ವಾಧಿಕಾರ ಕೊಟ್ಟನೆಂದೂ ಹೇಳುತ್ತದೆ. ಮುಮ್ಮಡಿ ಇಂದ್ರನು ಕನೂಜಿನ ಮಹಿಪಾಲನನ್ನು ಗೆದ್ದು, ಕನೂಜನ್ನಾಕ್ರಮಿಸಿದನೆಂಬುದೇನೋ ನಿಜ. ಆದರೆ ಇವನ ಸಾಮ್ರಾಜ್ಯವಿಸ್ತಾರ ನೀತಿಯೇ ರಾಷ್ಟ್ರಕೂಟ ಸಾಮ್ರಾಜ್ಯಪತನ ಕಾರಣವಾಯಿತೆಂದು ವಿಧಿಯಿಲ್ಲದೆ ಹೇಳಬೇಕಾಗುತ್ತದೆ. ಇವನ ದಂಡನಾಯಕರಲ್ಲೊಬ್ಬ ಶ್ರೀವಿಜಯ 'ಅನುಪಮ ಕವಿ' ಯೆನಿಸಿ ಬಾಳಿದ. ಕ್ಷಾತ್ರವೃತ್ತಿಯೂ ಕವಿಹೃದಯವೂ ಪರಸ್ಪರ ವಿರುದ್ಧ ಪ್ರಕೃತಿಗಳಲ್ಲವೆಂಬುದನ್ನು [8]ದಾನವುಲಪಾಡು ಶಿಲಾಶಾಸನವು ಎತ್ತಿ ತೋರಿಸುತ್ತದೆ.

---

[6] Mys. Gaz. Vol. II P. II. P. 745.

[7] Shikarpur 219, Ep. can Vol. VII.

[8] Madras Epigraphical Report, 1906; No. 333—1905.

'ಕಂಚೆಯಂ ತಂಜೆಯಂ' ಕೊಂಡು (ಕಾಂಚೀಪುರ, ತಂಜಾವೂರು), ರಾಜಾಧಿತ್ಯ ಚೋಳನನ್ನು ಕೊಂದು, 'ದಕ್ಷಿಣಾಪಥೇಶ್ವರ' ನೆನಿಸಿದ ಮುಮ್ಮಡಿ ಕೃಷ್ಣನನ್ನು ಮರೆಯುವ ಹಾಗೆಯೇ ಇಲ್ಲ. ಮಧ್ಯಭಾರತದಲ್ಲೂ ತನ್ನ ಧ್ವಜ ಹಾರಿಸಿದನೆಂಬುದು ಕಟ್ಟು ಕಥೆಯಲ್ಲ. ಮೈಹರ್ ಸಂಸ್ಥಾನದ ಜುರಾ ಎಂಬಲ್ಲಿ ದೊರೆತ ಇವನ [9] ಪ್ರಶಸ್ತಿ ಶಾಸನವೊಂದಿದೆ; ಕನ್ನಡದಲ್ಲಿದೆ. 'ಓರಾಸನ ಜಾಣ' ನಿವ. 'ಪರಾಂಗನಾಪುತ್ರಕ' ನೆಂಬ ಬಿರುದು ಇವನಿಗೆ ಮಹಾಪ್ರಿಯವಾಗಿದ್ದ ಹಾಗೆ ಕಂಡುಬರುತ್ತದೆ. ಇದರಿಂದಲೇ ಅವನ ಶೀಲಶೃಂಗದ ಔನ್ನತ್ಯ ಸೂಚಿತ ವಾಗುತ್ತದೆ. ಕೃಷ್ಣನು ಚೋಳರನ್ನು ಪ್ರತಿಭಟಿಸಿ, ಅವರ ಮೇಲೆ ದಂಡಯಾತ್ರೆ ಹೊರಟಾಗ, ತಕ್ಕೋಲದಲ್ಲಿ ರಾಜಾಧಿತ್ಯನನ್ನು ಕೊಂದು ಜಯಗಳಿಸಿದಾಗ, ಕೇರಳಾ ಧಿಪನೊಬ್ಬ ಅವನಿಗೆ ವಿಶೇಷ ಸಹಾಯ ಮಾಡಿದನೆಂದು ತಿಳಿದುಬಂದಿದೆ. [10] ಈ ಕೇರಳ ರಾಜಪುತ್ರನು ಚಿಕ್ಕಂದಿನಿಂದಲೇ ಬಹಳ ಮೇಧಾವಿ; ವೇದಶಾಸ್ತ್ರ ಕೋವಿದ. ಚೋಳರಾಜ್ಯಕ್ಕೆ ಹೋಗಿ, ರಾಜಾದಿತ್ಯನ ಆಶ್ರಯವನ್ನು ಪಡೆದ. ರಾಜನ ಆತ್ಮೀಯ ರಲ್ಲಿ ಆತ್ಮೀಯನಾದ; ಸಾಮಂತನೂ ಆಗಿದ್ದಿರಬೇಕು. ಸದಾ ರಾಜನ 'ಪಾದಾ ನ್ನವರ್ತಿ' ಯಾಗಿದ್ದರೂ ರಾಜನೊಂದಿಗೆ ಸಂಗ್ರಾಮ ರಂಗಕ್ಕೆ ಹೋಗಲಿಲ್ಲ. ತಕ್ಕೋಲದ ರಣಭೂಮಿಯಲ್ಲಿ ತನ್ನ ಆನೆಯ ಅಂಬಾರಿಯಲ್ಲೇ ಗಂಗಬೂತುಗನಿಂದ ರಾಜಾಧಿತ್ಯನು ಹತನಾದಾಗ ತನ್ನೊಡೆಯನ ಬಳಿ ಕೇರಳ ರಾಜಪುತ್ರನಿರಲಿಲ್ಲ. ತನ್ನೊಡೆಯನು ಹತನಾದ ಮೇಲೆ ಅವನಿಗೆ "ಅಯ್ಯೋ! ನಾನು ವರ್ಣ, ಕುಲ, ತಂದೆ, ತಾಯಿಗಳು ತೋರಿಸಿದ ಸಹಜ ಮಾರ್ಗದಲ್ಲಿ ಹೋಗಲಿಲ್ಲವಲ್ಲ. ನನ್ನ ಒಡೆಯ ನಡೆದ ದಾರಿಯಲ್ಲಿ ನಾನು ನಡೆಯಲಿಲ್ಲವಲ್ಲ'' ಎಂಬ ವಿಷಾದವುಂಟಾಯಿತು, ಪಶ್ಚಾತ್ತಾಪವಾಯಿತು. ತಾನು ಮಾಡಿದ್ದು ಮಹಾಪಾಪವೆಂದು ಅವನ ಮನ ಸ್ಸಿಗೆ ಖಚಿತವಾಯಿತು. ಅದು ಅವನೆದೆಯನ್ನು ಕೊರೆದಿರಬೇಕು. ಸ್ವಾಮಿ ದ್ರೋಹಕ್ಕೆ ಬೇರೆ ಮಾರ್ಗ ಕಾಣದೆ ಎಲ್ಲವನ್ನೂ ತ್ಯಜಿಸಿ, ನಿರಂಜನ ಗುರುವಿನಿಂದ ಉಪದೇಶ ಪಡೆದು ಸನ್ಯಾಸಿಯಾದ! ಚತುರಾನನ ಪಂಡಿತನೆನಿಸಿದ! ತಂತ್ರ ಚಾಣಕ್ಯನೆನಿಸಿದ್ದ ಮುಮ್ಮಡಿ ಕೃಷ್ಣನು ರಾಜಾದಿತ್ಯನ ಆಸ್ಥಾನದ ಕೇರಳೀಯನನ್ನು ತನ್ನ ವಶಮಾಡಿಕೊಂಡಿದ್ದನೆಂದು ಅನುಮಾನ ಮಾಡಲಾಗಿದೆ. ಗೂಢಚಾರಿಯಲ್ಲ ವಾದರೂ ಶತ್ರುರಾಜನ ಮಿತ್ರನಾಗಿ ವರ್ತಿಸಿರಬೇಕು. ಈ ದುರಂತ ಪ್ರಕರಣವು ಮುಮ್ಮಡಿ ಕೃಷ್ಣನ ರಾಜನೀತಿಯ ಮೇಲೆ ವಿಶೇಷ ಬೆಳಕನ್ನು ಚೆಲ್ಲುತ್ತದೆ.

## ೫. ಉದಾರ ಚಾರಿತ್ರ

ಕಲ್ಯಾಣಿಯ ಚಾಳುಕ್ಯರಾದರೂ ಪಾರಂಪರ್ಯವಾಗಿ ಬಂದ ಸತ್ವಕ್ಷಾತ್ರಗಳೆರ ಡನ್ನೂ ಬೆರೆಸಿ, ಉದಾರ ರಾಜನೀತಿ ನೈಪುಣ್ಯತೆ ತೋರಿಸಿ, ಎರಡು ಮೂರು ಶತ ಮಾನಗಳ ಕಾಲ ರಾಜ್ಯವಾಳಿದರು. ಅವರ ಹೆಸರು ನಾಡಿಗೇ ಪರ್ಯಾಯ ಪದವಾ

[9] Jura Prasasti of Krishna III. Mythi. S.J. Vol. P.

[10] M.E.R. 1913—Nos. 181, 177 and 179. Mys. Gaz. Vol. II. P. II. P. 755.

ಯಿತು. ಆಹವಮಲ್ಲ, ತ್ರಿಭುವನಮಲ್ಲ, ಜಗದೇಕಮಲ್ಲ, ತ್ರೈಲೋಕ್ಯಮಲ್ಲ, ಭುವನೈಕಮಲ್ಲ, ಸಾರ್ಥಕವಾದ ಬಿರುದುಗಳು. ಇಮ್ಮಡಿ ತೈಲಪ, 'ರಟ್ಟಘರಟ್ಟ', 'ಚೋಳಕುಲ ಬಡಬಾನಲ' ರಾಜ್ಯಸ್ಥಾಪಕ. ಇವನೇ ಧಾರಾನಗರದ ಪರಮಾರ ಮುಂಜರಾಜನನ್ನು ಸೋಲಿಸಿ, ಬಂಧಿಸಿ, ಕೊಂದವನು. ಕವಿರತ್ನ 'ಗದಾಯುದ್ಧ' ರನ್ನನ ರಾಜಪೋಷಕನೂ ಇವನೇ.

ಮೊದಲನೆಯ ಸೋಮೇಶ್ವರ ಮಹಾ ಪರಾಕ್ರಮಿ. ಮಹಾಮಂಡಲೇಶ್ವರ ಸಿಂಗಣ್ಣ ದೇವರಸ 'ದಕ್ಷಿಣ ಕವಾಟ' ವೆನಿಸಿದ ಕೊಲ್ಲಿಪಾಕಿಯ ರಕ್ಷಕನಾದ. ಚಾಮುಂಡರಾಯರಸ ಬಳ್ಳಿಗಾಂವೆಯ ಗಂಡಭೇರುಂಡ ಸ್ತಂಭ ನಿಲ್ಲಿಸಿದ. ವಿಜಯಾದಿತ್ಯ, ಲಕ್ಷ್ಮಣ, ರೂಪಭಟ್ಟ ಮೊದಲಾದ ವೀರರೂ, ಮೇಧಾವಿಗಳೂ ಸಾಮ್ರಾಜ್ಯ ಸ್ತಂಭಗಳೆನಿಸಿದರು. ಈ ಕಾಲದಲ್ಲೇ ಕೇಶವ, ಶಿವ, ಅರ್ಹ, ಬುದ್ಧ ದೇವಾಲಯಗಳು ಏಕಕ್ಷೇತ್ರದಲ್ಲಿ ಸ್ಥಾಪಿತವಾದವು. ಈ ಮಾತಿನ ಸತ್ಯವನ್ನರಿಯ ಬೇಕಾದರೆ ಷಿಕಾರಿಪುರದ ತಾಲ್ಲೂಕಿನ ಕನ್ನಡ ಶಾಸನಗಳನ್ನೋದಬೇಕು. ಬಳ್ಳಿ ಗಾಂವೆಯು ಪಂಚಮಠಸ್ಥಾನ. ಆ ಊರಲ್ಲಿ ಏಳು ಘಟಿಕಾ ಸ್ಥಾನಗಳಿದ್ದುವು. 'ಜಯಂತಿ ಬುದ್ಧವಿಹಾರ' ವೊಂದರ ಸ್ಥಾಪನೆಯಾಯಿತಲ್ಲಿ. 'ತಾರಾ ಭಗವತೀ' ದೇವಿಗೊಂದು ಮಂದಿರ ನಿರ್ಮಾಣವಾಯಿತು. ಮೊದಲನೆಯ ಸೋಮೇಶ್ವರನ ಮೂವರು ರಾಣಿಯರಲ್ಲಿ ಒಬ್ಬಳು ಪಲ್ಲವ ರಾಜಪುತ್ರಿ; ಇನ್ನೊಬ್ಬಳು ಗಂಗರಾಜ ಪುತ್ರಿ; ಮತ್ತೊಬ್ಬಳು ಹೊಯ್ಸಳ ದೇವಿ. ನೆರೆಹೊರೆ ರಾಜವಂಶೀಯರೊಂದಿಗೆ ವಿವಾಹ ಬಾಂಧವ್ಯಗಳನ್ನು ಬೆಳೆಸಿಕೊಂಡು, ಸ್ನೇಹಪರನಾಗಿ, ಶಾಂತಿನೀತಿ ಪರಿಪಾಲಕನಾಗಿ ಬಾಳಿದ ಸೋಮೇಶ್ವರ.

ಇವನ ಮಗ ಇಮ್ಮಡಿ ಸೋಮೇಶ್ವರ ಸಾಮ್ರಾಜ್ಯವನ್ನು ಮೂರು ಪ್ರಾಂತ್ಯ ಗಳನ್ನಾಗಿ ಮಾಡಿ, ತನ್ನಂತರಂಗಕ್ಕೂ, ನಂಬಿಕೆಗೂ ಪಾತ್ರರೆನಿಸಿದ ಮಂಡಲೇಶ್ವರರ ಆಡಳಿತಕ್ಕೆ ಬಿಟ್ಟ. ಈ 'ವಿಕೇಂದ್ರೀಕರಣ' ರಹಸ್ಯವನ್ನಿವನಾಗಲೇ ಅರಿತಿದ್ದನೆಂದು ಕಾಣುತ್ತದೆ. ಇದರಿಂದ ಉಗ್ರನೀತಿಯ ಚೋಳರ ಉಪಟಳ ಕಡಿಮೆಯಾಯಿತು. ಇವನ ಅನಂತರ ಬಿಲ್ಹಣ ಕವಿಯಿಂದ ಪ್ರಖ್ಯಾತನಾದ ವಿಕ್ರಮಾದಿತ್ಯ. ಇವನು ಸೋಮೇಶ್ವರನ ತಮ್ಮ. 'ಚಾಳುಕ್ಯ ವಿಕ್ರಮವರ್ಷ' ಸ್ಥಾಪಕನಿವನೆ. 'ಶಕವರ್ಷ' ವನ್ನೊರಸಿ ಹಾಕಿದನಂತೆ! ೫೧ ವರ್ಷಗಳ ಕಾಲ ರಾಜ್ಯಭಾರ ಮಾಡಿದ. ಸಾಮ್ರಾಜ್ಯದ ನಾನಾ ಕಡೆಗಳಲ್ಲಿ ರಾಜಧಾನಿಗಳನ್ನೂ, ರಾಜಬಿಡಾರಗಳನ್ನೂ ಕಟ್ಟಿಸಿ, ಒಂದೊಂದು ಕಡೆಯಲ್ಲೂ ಕೊಂಚಕಾಲ ವಾಸಮಾಡುತ್ತ, ಆಯಾ ಪ್ರದೇಶಗಳ ಆಡಳಿತವು ವಿಚಕ್ಷಣೆಯಿಂದ ನಡೆಯುವಂತೆ ನೋಡಿಕೊಳ್ಳುತ್ತಿದ್ದ. ಅವನ ದಂಡ ನಾಯಕರೂ, ಮಹಾಪ್ರಧಾನರೂ, ಸಾಮಂತರೂ, ಸ್ವಾಮಿಭಕ್ತಿಯಿಂದ ವರ್ತಿಸಿ ಕೀರ್ತಿಯನ್ನಾರ್ಜಿಸಿದರು. ಸಂಗ್ರಾಮವಾಗಲಿ, ಶಾಂತಿಯಾಗಲಿ, ವಿಕ್ರಮಾರ್ಕನ ರಾಜನೀತಿಯು ಉದಾರವಾಗಿತ್ತೆಂದೂ, ಎಲ್ಲರನ್ನೂ ಆಕರ್ಷಣ ಮಾಡತಕ್ಕದ್ದಾಗಿ ತ್ತೆಂದೂ ಹೇಳಬೇಕಾಗುತ್ತದೆ.

ತಮ್ಮ ಜಯಸಿಂಹನಿಂದ ಇವನು ಕೊಂಚಕಾಲ ಕಷ್ಟಪಡಬೇಕಾಗಿತ್ತು ನಿಜ. ಆದರೆ ಬೇಗ ಪರಿಸ್ಥಿತಿಯನ್ನು ಹದಕ್ಕೆ ತರಬಲ್ಲ ರಾಜನೀತಿಜ್ಞನಾದ ಕಾರಣ ಸೋದರ

ದುಃಖದ ಪಾರ್ಶ್ವವೇಧೆಯಿಂದ ಸುಲಭವಾಗಿ ಪಾರಾದ. ಹಂತ ಹಂತಗಳ ಅಧಿಕಾರದ ಸ್ಥಾನಗಳನ್ನು ಏರ್ಪಡಿಸಿ, ನಿಮ್ನ ಸ್ಥಾನದವರನ್ನು ಉನ್ನತಾಧಿಕಾರ ಸ್ಥಾನಗಳಿಗೇರಿಸುವ ಆಡಳಿತ ವ್ಯವಸ್ಥಾಕುಶಲಿಯೆನಿಸಿ, ಎಲ್ಲ ಹಂತದ ಸಾಮಂತಾಧಿಕಾರಿಗಳ ಸ್ವಾಮಿಭಕ್ತಿಯನ್ನೂ ಗಳಿಸಿದ. ತಪ್ಪುದಾರಿ ಹಿಡಿದ ಪ್ರಧಾನರನ್ನೇ ಆಗಲಿ, ದಂಡನಾಯಕರನ್ನೇ ಆಗಲಿ ನಿರ್ದಾಕ್ಷಿಣ್ಯವಾಗಿ ದಂಡಿಸಿ, 'ದುಷ್ಟಶಿಕ್ಷಣ ಶಿಷ್ಟ ಸಂರಕ್ಷಣ' ದಕ್ಷನೆನಿಸಿದ. ಗೋದಾವರಿಯಿಂದ ಕಾವೇರಿಯವರೆಗಿನ ಕನ್ನಡ ರಾಜ್ಯವನ್ನಿವನಾಳಿದನೆಂಬುದನ್ನು ಕಂಡಾಗ ನೃಪತುಂಗ ಹೇಳಿದ್ದು 'ಕವಿಯ ಕನಸಿನ ಮಾತು' ಅನ್ನುವ ಹಾಗಿಲ್ಲ. ಅಷ್ಟಮಹಿಷಿಯರಲ್ಲವಾದರೂ ವಿಕ್ರಮಾದಿತ್ಯನಿಗಾರು ಮಂದಿ ದೇವಿಯರಿದ್ದರು. ಅವರಲ್ಲಿ ಹಲವರು ನಾಡುಗಳನ್ನಾಳುವ ಪ್ರಭು ಪದವಿಯಲ್ಲಿದ್ದರು. ಸಾವಲದೇವಿ ದರಿಕಾಡು ನಾಡಪ್ರಭು. ಪಿರಿಯರಿಸಿ ಲಕ್ಷ್ಮಾದೇವಿ ರಾಜಧಾನಿ ಕಲ್ಯಾಣದಲ್ಲಾಳುತ್ತಿದ್ದಳು. ಇಂಗಳಿಗೆಯಲ್ಲಿ 'ತ್ರಿಭೋಗಾಭ್ಯಂತರ ಸಿದ್ಧಿ' ಯಾಗಿ ಆಳುತ್ತಿದ್ದವಳು ಕದಂಬವಂಶದ ಜಕ್ಕಲದೇವಿ. ಕಿರಿಯ ಕೆರೆಯೂರಿನರಸಿ ಮಲಯ ಮಲೆದೇವಿ. ಅಗ್ರಮಹಾಮಹಿಷಿ ಚಂದ್ರಲೇಖಾದೇವಿ. ಮಲ್ಲಿಕಾದೇವಿ, ಪದ್ಮಲದೇವಿ, ಹೀಗೆ ನಾನಾ ದೇವಿಯರು ಸಾಮ್ರಾಜ್ಯದ ನಾನಾ ಭಾಗಗಳಲ್ಲಿದ್ದು, ಆಡಳಿತದಲ್ಲಿ ಭಾಗಿಗಳಾಗಿದ್ದರು. 'ಅಭಿನವ ಸರಸ್ವತಿ' ಪಿರಿಯ ಕೇತಲ ದೇವಿಯು ಬಲ್ಲಕುಂದೆ ಮೂನೂರು, ತಕ್ಕಕಲ್ಲು ಹನ್ನೆರಡನ್ನಾಳಿ ಸಾಮ್ರಾಜ್ಯ ಧುರಂಧರೆಯೆನಿಸಿದಳು. ರಾಣಿ ಮಹಾರಾಣಿಯರು ದೇಶದ ಆಡಳಿತ ಕಾರ್ಯಗಳೊಂದಿಗೆ ಇಷ್ಟು ನಿಕಟವಾದ ಬಾಂಧವ್ಯವನ್ನಿಟ್ಟುಕೊಂಡಿದ್ದನ್ನು ನೋಡಿದಾಗ 'ಪ್ರಜೆ-ಪ್ರಭು'ಗಳ ಬಾಂಧವ್ಯವು 'ಮಹಾಮಧುರ' ವಾಗಿದ್ದಿರಬೇಕೆಂದು ಅನ್ನಿಸುತ್ತದೆ. ಈ ನಾಡಿನ ರಾಜಕಾರಣದ ವೈಶಿಷ್ಟ್ಯವೊಂದನ್ನೀ ಪ್ರಸಂಗದಲ್ಲಿ ಕಾಣಬಹುದು. ವಿಕ್ರಮಾದಿತ್ಯನ ಕಾಲದಲ್ಲಿ ಕರ್ಣಾಟಕವು ರಾಮರಾಜ್ಯದ ಸುಖ ಶಾಂತಿಗಳನ್ನು ಅನುಭವಿಸಿತೆಂದು ಹೇಳುವುದರಲ್ಲಿ ತಪ್ಪಿಲ್ಲ. ಕನ್ನಡ ನಾಡಿನ ಯಾವೊಂದು ಹಳ್ಳಿಯಲ್ಲೇ ನೋಡಲಿ, ವಿಕ್ರಮಾದಿತ್ಯನ ಶಾಸನವೊಂದಾದರೂ ಇಲ್ಲದೆ ಇಲ್ಲ. ಸಾಮಂತ ಹೊಯ್ಸಳ ವಿಷ್ಣುವರ್ಧನನ ಸ್ವಾತಂತ್ರ್ಯಕ್ಕೆ ಒಪ್ಪಿಗೆಕೊಟ್ಟ ಉದಾರ ರಾಜನೀತಿಜ್ಞ ಆರನೆಯ ವಿಕ್ರಮಾದಿತ್ಯ.

ಮುಮ್ಮಡಿ ಸೋಮೇಶ್ವರ 'ಸರ್ವಜ್ಞ ಚಕ್ರೇಶ್ವರ'! 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿ'ಯನ್ನು (ಸಂಸ್ಕೃತ) ರಚಿಸಿದವನಿವನೆ. ಇದೊಂದು ವಿಶ್ವಕೋಶ! ಜಗದೇಕಮಲ್ಲನು ಚೋಳರನ್ನು, ಘೂರ್ಜರರನ್ನು ಎದುರಿಸಬೇಕಾಯಿತು. ಬಲಯುತರಾಗುತ್ತಿದ್ದ ಹೊಯ್ಸಳರೊಂದಿಗೂ ಹೋರಾಡಬೇಕಾಗಿ ಬಂತು. ಆದರೂ ಕುಂತಲದೇಶವು ಸುಖಸಂಪದ ಮತ್ತು ಶಾಂತಿಗಳಿಂದ ಕೂಡಿತ್ತೆಂಬುದನ್ನು [11] ಸೊರಬದ ತಾಲ್ಲೂಕಿನ ಶಾಸನವೊಂದು ಸಾರುತ್ತಿದೆ.

ಮುಮ್ಮಡಿ ಸೋಮೇಶ್ವರನ ಅನಂತರ ಚಾಳುಕ್ಯ ಸಾಮ್ರಾಜ್ಯ ಸಡಲುತ್ತ ಬಂತು. ಹೊಯ್ಸಳರೊಂದು ಕಡೆ ಮಲೆತರು. ಕಳಚೂರ್ಯರಿನ್ನೊಂದುಕಡೆ ಸಾಮ್ರಾಜ್ಯ

---

11 E.P. Carn. Vol VIII, Sorab 138.

ನಿರ್ಮೂಲಕರೆನಿಸಿ ವರ್ತಿಸಿದರು. ಮುಮ್ಮಡಿ ತೈಲನ ಕಾಲದಲ್ಲೇ ಬಿಜ್ಜಳನ ಕೀರ್ತಿ ಪ್ರತಾಪ ಹೆಚ್ಚಿದ್ದು. 'ರಾಜ್ಯಾಪಹಾರ' ಕಾರ್ಯಕ್ಕಸ್ತಿಭಾರ ಬಿದ್ದದ್ದು. ಸಾಮಂತರನೇಕರು ಪ್ರತಿಭಟಿಸಿದ್ದೂ ಈ ಕಾಲದಲ್ಲಿ. ಬಿಜ್ಜಳ 'ಮಹಾ ಮಂಡಲೇಶ್ವರ'ನಾದ ಮೈಲಾರಯ್ಯ, ಮಹಾದೇವರಸರು ಬಿಜ್ಜಳನ 'ಮಹಾ ಪ್ರಚಂಡ ದಂಡನಾಯಕ'ರಾದರು! ಮಹಾದೇವರಸನು ರಾಜಕೀಯ ವಿಪ್ಲವ ಪ್ರಯತ್ನದಲ್ಲಿ ಬಿಜ್ಜಳನಿಗೆ ಮಹೋಪಕಾರಮಾಡಿರಬೇಕು. [12] ಪ್ರೋತರಸ, ಚಟ್ಟಿಮರಸ, ಪದ್ಮರಸ, ಸವರಸರು—ಅಧಿಕಾರಿಗಳು ಬಿಜ್ಜಳನ ಮನೋನುಕೂಲ ರಾಗಿದ್ದರಂತೆ! ಬಿಜ್ಜಳನು 'ಕಳಚುರ್ಯಭುಜಬಲ ಚಕ್ರವರ್ತಿ' ಯೆನಿಸಿದುದರಲ್ಲಿ ಆಶ್ಚರ್ಯವೇನಿದೆ! ಈ 'ವಿಪ್ಲವ'ಕ್ಕೆ ಬಿಜ್ಜಳನ ಪರಾಕ್ರಮವೊಂದೇ ಕಾರಣವಲ್ಲ. ಚಾಲುಕ್ಯರ ಕಾಲದ 'ವೀರಗಣ'ದ 'ಸ್ವಾಮಿ ಭಕ್ತಿ ಗುಣಪತನ'ವೂ ಒಂದು ಮುಖ್ಯಕಾರಣವೆಂದು ಹೇಳಬೇಕು. ಅಲ್ಲದೆ ವಿಕ್ರಮಾದಿತ್ಯನ ಅನಂತರ ಸಿಂಹಾ ಸನವನ್ನೇರಿದವರ ಕ್ರಮ ಪ್ರವರ್ಧಿತ [13]ದೌರ್ಬಲ್ಯವೂ ಒಂದು ಕಾರಣ ವಾಗಿರಬೇಕು.

"His (Bijjala) was a semi-political, semi-military revolution effected partly by the strength of his arms and partly by the aid of his friends" [14]

ತನ್ನ ಬಾಹುಬಲದಿಂದ ಮಾತ್ರವಲ್ಲದೆ ಮಿತ್ರ ಸಹಾಯದಿಂದಲೂ ವಿಪ್ಲವ ಪ್ರಯತ್ನದಲ್ಲಿ ಬಿಜ್ಜಳನು ಜಯಗಳಿಸಿದನೆಂದು ಹೇಳುವ ಮಾತು ಅರ್ಥಗರ್ಭಿತ ವಾಗಿದೆ. ಬಹಳ ಬೇಗ ಇದೇ ಬಿಜ್ಜಳನು ಮತ್ತೊಂದು 'ವಿಪ್ಲವ'ಕ್ಕೆ ಆಹುತಿ ಯಾದನೆಂಬುದು ಲೋಕಕ್ಕೇ ವಿದಿತವಾಗಿದೆ. ಆಗಲೇ ನಾಲ್ಕನೆಯ ಸೋಮೇಶ್ವ ರನು ಪ್ರಯತ್ನಮಾಡಿ 'ಚಾಳುಕ್ಯರಾಜ್ಯ ಪ್ರತಿಷ್ಠಾಪಕ' ನೆನಿಸಿದ್ದು. ಈ ಕಾರ್ಯ ದಲ್ಲಿ 'ಕಾಲಚುರ್ಯ ಕುಲಕಾಲಾಂತಕ' ನೆನಿಸಿದ ದಂಡನಾಯಕ ಬ್ರಹ್ಮನ ಸಾಹಸ ಅತ್ಯದ್ಭುತ. ಇಂತಹ ಬ್ರಹ್ಮನನ್ನು ಮೂಲೆಗೆ ಕೂಡಿಸಿದ ಕೀರ್ತಿ ಇಮ್ಮಡಿ ಹೊಯ್ಸಳ ವೀರಬಲ್ಲಾಳನದು. ಪುನರುಜ್ಜೀವಿತವಾದ ಚಾಳುಕ್ಯ ಸಾಮ್ರಾಜ್ಯವು ಎರಡು ಎರಡೂವರೆ ಶತಮಾನಗಳ ಕಾಲ ಬಾಳಿ, ರಾಜ್ಯಾಡಳಿತ, ಸಾಹಿತ್ಯ, ಕಲೆ ಎಲ್ಲವುಗಳ ಮೇಲೂ ತನ್ನದೇ ಆದ ಮಹಾ ಮುದ್ರೆಯನ್ನೊತ್ತಿ ಅಸ್ತಂಗತ ವಾಯಿತು.

## ೬. ಸಾಮರ ಜನ ಸ್ಥಾನಬಲ

ಕಾಲು ಶತಮಾನ ಕಾಲ ಬಾಳಿದ ಕಾಲಚುರ್ಯರ ಆಳ್ವಿಕೆ ಕುರಿತು ಮುಖ್ಯ ವಾದ ಅಂಶವೊಂದನ್ನು ಮರೆಯಲಾಗದು. ಅದು ವೀರಶೈವಮತದ ಹುಟ್ಟು, ವಿದ್ಯುದ್ವೇಗ, ಅದರ ಬೆಳವಣಿಗೆ. ಶೈವಕ್ಕೊಂದು ಬಗೆಯ 'ಕ್ಷಾತ್ರ'ವನ್ನು

---

12 EP. Carm. Vol. VIII, Shikarpur 104.
13 EP. Carm. Vol. VIII, Shikarpur 92.
14 MYS. Gaz. Vol. II P. II P. 851.

ಅದು ಕೊಟ್ಟಿತು.[15] ಪಾಮರಗಣದಲ್ಲಿ ಬೇರೂರಿದ್ದ ಬೌದ್ಧ, ಜೈನ ಧರ್ಮಗಳ ಪ್ರಭಾವವನ್ನು ಕ್ಷೀಣಗೊಳಿಸಿತು. ಕನ್ನಡಭಾಷಾ ಸಾಹಿತ್ಯದಿಂದ ಪಾಮರಜನ ಸಮುದಾಯಕ್ಕೆ ತಿಳಿವಳಿಕೆಯನ್ನೂ, ಶಕ್ತಿಯನ್ನೂ ಕೊಟ್ಟಿತು. ಸಮಾಜದಲ್ಲಿ, ರಾಷ್ಟ್ರದಲ್ಲಿ ಪಾಮರಕೋಟಿಗೊಂದು ಸ್ಥಾನವಿದೆಯೆಂಬುದು ಸ್ಥಿರಪಟ್ಟಿದ್ದು, ಆ ಸ್ಥಾನಬಲ ಕ್ರಮವಾಗಿ ಬೆಳೆಯುತ್ತ ಬಂದದ್ದು, ಈ ಕಾಲದಿಂದಲೇ ಎಂಬುದನ್ನು ಗಮನಿಸಬೇಕು. ಇನ್ನೊಂದು ಘಟ್ಟದಲ್ಲಿ, ವೈಷ್ಣವ ಧರ್ಮೋಜ್ಜೀವನಕಾಲದಲ್ಲಿ, ಪಾಮರಜನ ಸ್ಥಾನಬಲವಧಿಕವಾಯಿತೆಂಬುದನ್ನೂ ಈ ಸಂದರ್ಭದಲ್ಲೇ ಹೇಳಬೇಕು. ರಾಜಕೀಯ, ಸಾಮಾಜಿಕ, ಆರ್ಥಿಕ ಸಮಸ್ಯೆಗಳ ಪರಿಹಾರೋಪಾಯ ಕಾರ್ಯದಲ್ಲಿ ಸಾಮಾನ್ಯಜನರೂ ಭಾಗವಹಿಸಲಾರಂಭವಾಯಿತು. ಈ ಕಾಲದ ನೂರಾರು ಶಾಸನಗಳಿಂದ ಈ ಮಾತು ಸ್ಥಿರಪಡುತ್ತದೆ.

ಹತ್ತು ಹನ್ನೊಂದನೆಯ ಶತಮಾನದಿಂದ ಕನ್ನಡನಾಡಿನ ಹಲವು ಭಾಗಗಳಲ್ಲಾದರೂ ಚೋಳರ ಪ್ರಾಬಲ್ಯವಿತ್ತೆಂಬುದು ಸ್ಪಷ್ಟ. ಗಂಗವಾಡಿ, ನೊಳಂಬವಾಡಿಗಳವರ ವಶವಾದುವು. ಪಶ್ಚಿಮ ಚಾಳುಕ್ಯರಮೇಲೂ ಅವರ ದಂಡಯಾತ್ರೆಗಳು ನಡೆಯುತ್ತಲಿದ್ದುವು. ಚೋಳರ ಕಾಲದ ದೇವಾಲಯ ವ್ಯವಸ್ಥೆಗಳನ್ನೂ, ಗ್ರಾಮ ವ್ಯವಸ್ಥೆಗಳನ್ನೂ ಕುರಿತ ವಿವರಗಳು ವಿಶೇಷವಾಗಿವೆ. ಅವುಗಳ ಅಧ್ಯಯನದಿಂದ ಪ್ರಜೆಗಳಿಗೂ ಪ್ರಭುತ್ವಕ್ಕೂ ಎಷ್ಟು ನಿಕಟವಾದ ಬಾಂಧವ್ಯವಿತ್ತೆಂಬುದು ಗೊತ್ತಾಗುತ್ತದೆ. ಕುಲೋತ್ತುಂಗ ಚೋಳನ ಕಾಲದಲ್ಲಿ, ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜ ಚೋಳರನ್ನೋಡಿಸಿದ. ಗಂಗರಾಜ ತಲಕಾಡನ್ನು ಮುತ್ತಿ, 'ಕೋಟೆಯನ್ನು ಒಪ್ಪಿಸು' ಎಂದಾಗ ಚೋಳಮಂಡಲಾಧಿಪತಿ ಅಡಿಯಮ 'ಯುದ್ಧಮಾಡಿ ತೆಗೆದುಕೋ' ಎಂದುತ್ತರ ಕೊಟ್ಟನಂತೆ. ಹೊಯ್ಸಳ ವೀರನರಸಿಂಹ (ಇಮ್ಮಡಿ) ಚೋಳರಾಜ್ಯ ಪ್ರವೇಶಮಾಡಿ ಮಾರವರ್ಮ ಸುಂದರಪಾಂಡ್ಯನಿಂದ ರಾಜ ರಾಜ ಚೋಳನನ್ನು ಕಾಪಾಡಬೇಕಾಗಿ ಬಂತೆಂಬುದನ್ನು ಗಮನಿಸಿದಾಗ ಕರ್ಣಾಟಕದ ರಾಜಕೀಯ ಪದ ಎಂತಹುದೆಂಬುದರ ಅರಿವಾಗುತ್ತದೆ. ವೀರಸೋಮೇಶ್ವರನು ಚೋಳರಾಜ್ಯವನ್ನಾಕ್ರಮಿಸಿದನೆಂಬುದು ಚೆನ್ನಾಗಿ ಗೊತ್ತಿದೆ. ಹೊಯ್ಸಳ ಸಾಮ್ರಾಜ್ಯವಿಸ್ತಾರದ ಕಥೆಯು ಚರಿತ್ರಾರ್ಹವಾಗಿದೆ.

## ೭. ಹೊಯ್ಸಳರು ಮತ್ತು ಮುಸಲ್ಮಾನರು

ಹೊಯ್ಸಳರಾಳ್ವಿಕೆಯ ಕಾಲ ಕರ್ಣಾಟಕದಲ್ಲೇಕೆ, ದಕ್ಷಿಣ ಭಾರತದಲ್ಲೇ, ಗಣನಾರ್ಹವಾದ ಕಾಲ. ಸಾಮಂತರಾಗಿದ್ದ ಹೊಯ್ಸಳರು ಸ್ವತಂತ್ರರಾದರು. ಕಲ್ಯಾಣಿ ಚಾಳುಕ್ಯರ ಅನಂತರ ಕರ್ಣಾಟಕದಲ್ಲಿ ಇವರು ಮಹತ್ವಸ್ಥಾನ ಪಡೆದರು. ಚೋಳರನ್ನು ಕನ್ನಡನಾಡಿನಿಂದ ಓಡಿಸಿದ್ದು ಮಾತ್ರವಲ್ಲ, ಅವರನ್ನು ಪಾಂಡ್ಯರಿಂದ ರಕ್ಷಿಸುವ ಯೋಗವೂ ಹೊಯ್ಸಳರಿಗೆ ಲಭ್ಯವಾಯಿತು. ಚೋಳಮಂಡಲದಲ್ಲೂ ತಮ್ಮ ಸಾಮ್ರಾಜ್ಯಧ್ವಜ ಹಾರಿಸುವ ಅವಕಾಶವುಂಟಾಯಿತು. ವಿಶಿಷ್ಟಾದ್ವೈತ

15 MYS. Gaz. Vol. II P. II P. 898.

ಮತಾಚಾರ್ಯ ರಾಮಾನುಜರು ಚೋಳಮಂಡಲದಿಂದ ಓಡಿಸಲ್ಪಟ್ಟಾಗ ಅವರು ಹೊಯ್ಸಳರಾಜ್ಯ ಪ್ರವೇಶಮಾಡಿ, ಕನ್ನಡನಾಡನ್ನು ತಮ್ಮ ಧರ್ಮಕ್ಷೇತ್ರವನ್ನಾಗಿ ಮಾಡಿಕೊಳ್ಳಬೇಕಾಗಿ ಬಂತು. ವಾಸ್ತುಶಿಲ್ಪ ಕಲೆಯ ಮಹೋನ್ನತ ದೆಶೆಯ ಕಾಲವಿದು. ಅಷ್ಟೇ ಅಲ್ಲ; ವ್ಯಾಪಾರ, ವ್ಯವಸಾಯ, ಮೊದಲಾದುವು ವೃದ್ಧಿಹೊಂದಿ ದೇಶವು ಸಂಪತ್ತಿನಿಂದ ತೂಗಿ, ತೊನೆಯುತ್ತಿತ್ತು. ಜನರು 'ನೆಮ್ಮದಿಯ ಜೀವನ' ವನ್ನು ನಡೆಸುತ್ತಿದ್ದರು.

ಈ ಕಾಲದಲ್ಲೇ ಮುಸಲ್ಮಾನರು ಮೊಟ್ಟಮೊದಲು ದಕ್ಷಿಣದೇಶ ಪ್ರವೇಶ ಮಾಡಿ, ಹೊಯ್ಸಳ ರಾಜ್ಯ ಹೊಕ್ಕದ್ದು. ಮಲ್ಲಿಕಾಫರನೇ ದ್ವಾರಸಮುದ್ರವನ್ನು ಮುತ್ತಿ, ಮುಮ್ಮಡಿ ವೀರಬಲ್ಲಾಳನನ್ನು ಸೋಲಿಸಿ, ಬಂಧಿಸಿದ್ದು (೧೩೧೦). ೧೩೨೭ರಲ್ಲಿ ಮತ್ತೆ ಮಹಮುದ್ ತೊಗಲಖನು ಹೊಯ್ಸಳ ರಾಜ್ಯದ ಮೇಲೆ ದಂಡೆತ್ತಿಬಂದು, ದ್ವಾರಸಮುದ್ರವನ್ನು ಧ್ವಂಸಮಾಡಿದ್ದು. ೧೩೪೨ರಲ್ಲಿ ಮೂರ ನೆಯ ಸಾರಿ ಮುಸಲ್ಮಾನರ ಧಾಳಿ ಬಂತು. ಮುಮ್ಮಡಿ ಬಲ್ಲಾಳನು ಮುಸಲ್ಮಾನರನ್ನೆದುರಿಸಿ, ಬೆರಿಲಿ ರಣಭೂಮಿಯಲ್ಲಿ ಸತ್ತು ಸ್ವರ್ಗಾಲಯ ಕ್ಕೇರಿದ.

ದಕ್ಷಿಣ ಭಾರತದಲ್ಲಿ ಮುಸಲ್ಮಾನರು ಕಾಲಿಡದಂತೆ ಮಾಡಲು ಮಹಾ ಪರಾಕ್ರಮ ತೋರಿಸಿ, ಮೊದಲು ಪ್ರಾಣತೆತ್ತವರು ಹೊಯ್ಸಳರು. ಅವರು ಬಲಿ ದಾನದಿಂದಾರಂಭಿಸಿದ ಈ ಮಹತ್ಕಾರ್ಯವನ್ನು ಸಾಧಿಸಿದ ಯಶಸ್ಸು ಮತ್ತೆ ಮತ್ತೊಂದು ಕರ್ಣಾಟಕ ರಾಜವಂಶಕ್ಕೇ ಬಂತು. ವಿಜಯನಗರ, ವಿದ್ಯಾರಣ್ಯ, ಹರಿಹರ, ಈ ಹೆಸರುಗಳು ಭಾರತದ ಇತಿಹಾಸದಲ್ಲೇ ಅಮರವೆನಿಸಿವೆ. ಅಂತರ ರಾಷ್ಟ್ರೀಯ ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿವೆ. ದಕ್ಷಿಣ ಭಾರತವನ್ನೂ ಸನಾತನ ಧರ್ಮವನ್ನೂ ಮುಸಲ್ಮಾನರಿಂದ ಕಾಪಾಡಿದ ವಿಜಯನಗರ ಸಾಮ್ರಾಜ್ಯದ ಇತಿ ಹಾಸವೆಷ್ಟು ವಿಸ್ತಾರವೋ ಅಷ್ಟು ವೈಭವಯುತವಾದುದು; ವಿಶಾಲ ಭಾರತಕ್ಕೇ ಲಾಂಛನಾಸ್ಪದವಾದದ್ದು. ಮುಮ್ಮಡಿ ವೀರಬಲ್ಲಾಳನು ಮುಸಲ್ಮಾನರ ಬಾಯಿಗೆ ತುತ್ತಾಗಿ ಬೆರಿಲಿ ರಣಭೂಮಿಯಲ್ಲಿ ಬಿದ್ದ. ರಾಮರಾಯನೂ ಅವರ ಬಾಯಿಗೆ ತುತ್ತಾಗಿ ರಾಕ್ಷಸತಂಗಡಿ ರಣಭೂಮಿಯಲ್ಲಿ ಬಿದ್ದ. ಇಬ್ಬರು ವೀರರ ಮಧ್ಯಕಾಲದ ಚರಿತ್ರೆಯೊಂದು 'ಮಹಾವೀರ ಚರಿತ್ರೆ! ಕರ್ಣಾಟಕದ ಸತ್ವಕ್ಷಾತ್ರಗಳ ಪವಿತ್ರ ಚರಿತ್ರೆ.'

## ೮. ಉಭಯ ಸಮಯ

ನಾವೀಗಲೀಗ (Welfare State) 'ವೆಲ್‌ಫೇರ್ ಸ್ಟೇಟ್' ಎಂಬ ಮಾತನ್ನೂ, ಆ ಮಾತು ಸೂಚಿಸುವ ರಾಜನೀತಿಯನ್ನೂ ಕೇಳುತ್ತಿದ್ದೇವೆ. 'ಶ್ರೀ ರಾಜ್ಯ,' 'ಸಕಲಜನ ಕಲ್ಯಾಣ' ಎಂಬ ಮಾತುಗಳು ಬರೀ ಮಾತುಗಳಲ್ಲ; ಅವೂ ಸಹ ಸಾವಿರಾರು ವರ್ಷಗಳ ಹಿಂದೆ ಕನ್ನಡ ನಾಡಿನ ಜನರು ಆದರ್ಶವಾಗಿಟ್ಟು ಕೊಂಡು, ಆಚರಣೆಗೆ ತಂದುಕೊಂಡು, ಅನುಭವ ಗಳಿಸಿದ ರಾಜನೀತಿಯನ್ನು, ಸಮಾಜನೀತಿಯನ್ನು ಬೋಧಿಸುವ ಅರ್ಥಗರ್ಭಿತವಾದ ಮಾತುಗಳು.

ಕನ್ನಡ ನಾಡಿನ ಜೀವನ ಕಥೆಯನ್ನೊಂದುರೀತಿಯಾಗಿ ಕೇಳಿದ್ದಾಯಿತು. ಇನ್ನೊಂದು ರೀತಿಯಾಗಿ ಈ 'ಜೀವನಭಾಗ್ಯ'ವನ್ನು ಕೊಂಚ ನೋಡೋಣ. ಗಂಗವಾಡಿಯಲ್ಲಿ ಗಂಗರಸರು ಸ್ಥಾಪಿಸಿದ್ದು 'ಶ್ರೀ ರಾಜ್ಯ'ವನ್ನು. ಇಮ್ಮಡಿ ವೀರ ಬಲ್ಲಾಳನ ಕಾಲದ [16] ವೀರಗಲ್ಲೊಂದರಲ್ಲಿ,

"ಬಲ್ಲಾಳ ದೇವರಸರು ಕಲ್ಯಾಣ ಪರ್ಯಂತವಾಗಿ ಸಕಲಜನ
ಕಲ್ಯಾಣ ಮಹೋತ್ಸವದಿ ನೇಕಚ್ಛತ್ರಚ್ಛಾಯೆಯಿಂ ಸುಖಸಂಕಥಾ
ವಿನೋದದಿಂ ರಾಜ್ಯಗೆಯುತ್ತ"

ಲಿದ್ದರೆಂದು ಹೇಳಲಾಗಿದೆ.

ಇಮ್ಮಡಿ ಬಲ್ಲಾಳನ ಕಾಲದ [17]ಶಾಸನವೊಂದು ಹಳೇಬೀಡಿನ ದೇವಸ್ಥಾನದ ಗಣೇಶನ ವಿಗ್ರಹದ ಬಳಿ ಇದೆ. ಅದರಲ್ಲಿರುವ

"ಬಲ್ಲಾಳನ ರಾಜ್ಯಂ ರಾಮರಾಜ್ಯಂ
ಸಕಳ ಜನಮನಃ ಪ್ರಾಜ್ಯವತ್ಯನ್ತ ಪೂಜ್ಯಂ"

—ಎಂಬ ಭಾಗವನ್ನು ಪ್ರತಿಯೊಬ್ಬರೂ ಓದಿ, ಆ ಕಾಲದವರ ಮನೋಧರ್ಮವನ್ನೂ, ಜೀವನಧರ್ಮವನ್ನೂ ಅರಿತುಕೊಳ್ಳುವ ಔದಾರ್ಯ ತೋರಿಸಬೇಕು.

ಹತ್ತನೆಯ ಶತಮಾನದ [18]ಶಾಸನವೊಂದರಲ್ಲಿರುವ ಈ ಸಾಲುಗಳನ್ನು ಕುರಿತು ವಿಚಾರ ಮಾಡಬೇಕು.

"ನೊಟಂಬಾದಿ ರಾಜರ್ ದುಷ್ಟನಿಗ್ರಹ ವಿಶಿಷ್ಟ ಪರಿಪಾಲನದಿಂ
ಸುಖಾನುರಾಗದೊಳಿರೆ",

ಅಂದಿನ ರಾಜ, ರಾಜ್ಯಾಂಗ ವ್ಯವಸ್ಥೆಯ ಮೇಲೊಂದು ಕಿರಣ ಬಿದ್ದು ನಮ್ಮನ್ನು ಕಣ್ತೆರೆಯುವಂತೆ ಮಾಡುತ್ತದಲ್ಲವೆ ಈ ವಾಕ್ಯ?

"ಸುಖಸಂಕಥಾ ವಿನೋದದಿಂ ರಾಜ್ಯಂಗೈಯುತ್ತಿರೆ" ಎಂಬುದು ಶಾಸನಗಳಲ್ಲಿ ಕಂಡುಬರುವ ಸಾಮಾನ್ಯವಾದ ವಾಕ್ಯ.

"ಶ್ರೀಮರ್ ಮಹಾಪ್ರಧಾನ ಮನೆವೆರ್ಗಡೆ ಕುಂದಮಾ
ರಾಯರ್ ಮೈಸೆನಾಡಾ ತಾವರೆಯ ಕೆಱೆಯನುಭಯ ಸಮಯ
ದಿಂದಾಳುತ್ತಮಿರಲು"

—ಎಂದು ಹೇಳುತ್ತದೆ ಒಂದು [19]ಶಿಲಾಶಾಸನ. 'ಉಭಯ ಸಮಯ'ವೆಂಬುದು ರಾಜ್ಯಶಾಸ್ತ್ರದ ಪರಿಭಾಷೆ. ನಾಲ್ಕನೆಯ ಚಾಳುಕ್ಯ ಸೋಮೇಶ್ವರನ ಸಾಮಂತ[20] ಕಾಮ ದೇವರಸ ಬನವಾಸಿ ೧೨,೦೦೦ ಹಾನುಂಗಲ್ ೫೦೦ನ್ನಾಳುತ್ತಿದ್ದ. ಅವನೂ ಸಹ 'ಉಭಯ ಸಮಯ'ದಿಂದ ಆಳುತ್ತಿದ್ದನಂತೆ. ರಾಜಚರಿತಾ ವಿಶಾರದ ಕೀರ್ತಿಶೇಷ ಹಯವದನರಾಯರು 'ಉಭಯ ಸಮಯ'ವನ್ನು "with equal

---

16 Mysore Archæological Report, 1926. No. 40.
17 Mysore Archæological Repert, 1934. No. 5.
18 Mysore Archæological Report, 1924. No. 48.
19 Ep. Carn. Vol. VIII Sorab 179.
Mys. Gaz. Vol. II P. II P. 860.

justice to both" ಎಂಬುದಾಗಿ ಭಾಷಾಂತರ ಮಾಡಿದ್ದಾರೆ. 'ಇಬ್ಬರಿಗೂ ನ್ಯಾಯವಾಗಿರುವಂತೆ' ಎಂದವರು ಹೇಳುವಾಗ 'ಪ್ರಭು-ಪ್ರಜೆ' ಹೀಗೆ ಇಬ್ಬರೆಂದು ತಾನೆ ಅರ್ಥಮಾಡಬೇಕು? ನ್ಯಾಯದ ಕಣ್ಣಿನಲ್ಲಿ ಪ್ರಭು-ಪ್ರಜೆ ಇಬ್ಬರೂ ಸಮಾನರೆಂಬ ಕಲ್ಪನೆಯೆ 'All are equal in the eyes of law'— 'ಶಾಸನದ ಕಣ್ಣಲ್ಲಿ ಎಲ್ಲರೂ ಒಂದೇ' ಎಂಬ ಇಂದಿನ ಕಲ್ಪನೆ.

> "ಪುತ್ರಾ ಇವ ಪಿತುರ್ಗೇಹೇ
> ವಿಷಯೇ ಯಸ್ಯ ಮಾನವಾಃ
> ನಿರ್ಭಯಾ ವಿಚರಿಷ್ಯಂತಿ
> ಸರಾಜಾ ರಾಜಸತ್ತಮಃ"

ಯಾವ ರಾಜ್ಯದಲ್ಲಿ ತಂದೆಯ ಮನೆಯಲ್ಲಿ ಮಕ್ಕಳಿರುವಂತೆ ರಾಜ್ಯದಲ್ಲಿ ಪ್ರಜೆಗಳು ಓಡಾಡುವರೋ ಅಲ್ಲಿನ ರಾಜನೇ ಶ್ರೇಷ್ಠ. ಇದು ಆ ಕಾಲದ ನಂಬಿಕೆ.

## ೯. ಪ್ರಜೆಗಳ ಪರಮಾಧಿಕಾರ

ಭೂಮಿ ಯಾರದು—ರಾಜರದೆ, ಜನದ್ದೆ? ಈ ಪ್ರಶ್ನೆಗೆ ಉತ್ತರವನ್ನು ಸೂಚಿಸುವ [20]ಶಾಸನವೊಂದಿದೆ. ಹೊಯ್ಸಳ ವೀರನರಸಿಂಹನ (೧೨೮೦) ಕಾಲದ್ದಿದು. ಮಹಾಪ್ರಧಾನ ಪೆರುಮಾಳ ದಂಡನಾಯಕನು ಸಂಪಾದಿ ಮಂಚ ಣೋಪಾಧ್ಯಾಯರಿಗೆ 'ಹತ್ತು ಸಲಗೆಯುಂ ಹದಿನಾಱು ಕೊಳಗ'ದ ಭೂಮಿಯನ್ನು ದಾನ ಮಾಡುತ್ತಾನೆ. ಈ ಭೂಮಿಯನ್ನು

> "ತತುಕಾಲೋಚಿತ ಕ್ರಯ ದ್ರವ್ಯವನು ಸಾಕಲ್ಯವಾಗಿ ಆ ಪೆರುಮಾಳೆದೇವ ದಣ್ಣಾಯಕರು ಆ (ಹಾನುಂಗಲ್ಲು) ಮಹಾಜನಂ ಗಳಿಗೆ ಕೊಟ್ಟು, ಆ ಮಹಾ ಜನಂಗಳ ಕಯ್ಯಲು ಸಾಕ್ಷಿಯ....ವಾದಿ ಕ್ರಯ ಲಕ್ಷಣ ಲಕ್ಷಿತವಾಗಿ"

ಕೊಂಡು, ಅನಂತರ 'ಧಾರಾಪೂರ್ವಕವಾಗಿ' ದಾನಮಾಡಿದ. ಇಂತಹ ಶಾಸನ ಗಳಿನ್ನೂ ಅನೇಕ ಇವೆ. ಭೂಮಿಯೆಲ್ಲ ಗ್ರಾಮಸ್ಥರ ಒಡವೆ. ರಾಜರಾಗಲಿ, ಪ್ರಧಾನರಾಗಲಿ, ದಂಡನಾಯಕರಾಗಲಿ, ರಾಜವರ್ಗದವರಾಗಲಿ, ಭೂಮಿಯನ್ನು ಬಯಸಿದರೆ, ಮಹಾಜನಗಳನ್ನೊಪ್ಪಿಸಿ, ಅವರಿಗೆ ಕಾಲೋಚಿತವಾದ ಬೆಲೆ ಕೊಟ್ಟು, ಕ್ರಮವಾಗಿ ಕ್ರಯಪತ್ರ ಮಾಡಿಸಿಕೊಳ್ಳಬೇಕಾಗಿತ್ತು. 'ಭೂಮಿ ಪ್ರಜೆಗಳದು, ರಾಜನದಲ್ಲ' ತತ್ವದ ಅಂಗೀಕಾರ; ತದನುಸಾರವಾದ ಆಚರಣೆ; ಈ ವ್ಯವಹಾರ ವನ್ನಿಲ್ಲಿ ನೋಡುತ್ತೇವೆ.

ಅರ್ಥ ಅಥವಾ ಋಣ ವ್ಯವಹಾರ ಜೀವನದ ಸ್ವರೂಪವನ್ನು ಮತ್ತಿಗಟ್ಟದ ಹಾಳು ಶಿವಾಲಯದ [21]ಶಾಸನವೊಂದು ಪರಿಚಯ ಮಾಡಿಕೊಡುತ್ತದೆ. ಮತ್ತಿ ಗಟ್ಟದ ಸೋಮಗೌಡ ದೀಕ್ಷಿತರ ನಾಗಣ್ಣನ ಬಳಿ ಕೊಂಚ ಹಣ ಸಾಲವಾಗಿ ಪಡೆದ. ತನ್ನ ಭೂಮಿಯನ್ನು ಆಧಾರವಾಗಿಟ್ಟ. ಕಾಲಾವಧಿಯ ನಂತರ ಸೋಮಗೌಡ

20 Mysore Archæological Report, 1924. No. 10.
21 Mysore Archæological Report, 1924. No. 29.

ನಾಗಣ್ಣನಿಗೆ ಅಸಲನ್ನೂ, ಬಡ್ಡಿಯನ್ನೂ ಕೊಟ್ಟ. ಪತ್ರವನ್ನು ಹಿಂದಕ್ಕೆ ಕೊಡೆಂದು ಕೇಳಿದ. ದೀಕ್ಷಿತ ನಾಗಣ್ಣ ಕೊಡಲಿಲ್ಲ. ಆಗ ಸೋಮುಗೌಡ ಊರ ಮಹಾ ಜನರನ್ನೆಲ್ಲ ಸಭೆ ಸೇರಿಸಿದ. ಅವರ ಸಮುಖದಲ್ಲಿ ವ್ಯವಹಾರ ವಿಮರ್ಶೆಯಾಯಿತು. ಸಾಲ ಸಂದಾಯವಾಯಿತೆಂದು ಮಹಾಜನರು ತೀರ್ಮಾನ ಮಾಡಿದರು. ನಿರ್ಣಯವನ್ನು ಬರೆಸಿ ಶಾಸನಗಲ್ಲನ್ನು ಹಾಕಿಸಿದರು! ಅಂದಿನ ಜನಪದ ವ್ಯವಸ್ಥೆಯಲ್ಲಿ ಜನರೇ ನ್ಯಾಯಾಧೀಶರು. ಸಮಸ್ತ ಮಹಾಜನರದೇ ನ್ಯಾಯ ಸ್ಥಾನ! ಹಂತ ಹಂತದ ಕೋರ್ಟುಕಚೇರಿಗಳಿಲ್ಲ; ವಕೀಲರ ವಾದ ವಿವಾದಗಳಿಲ್ಲ; ಕಾಲಯಾಪನೆ ಇಲ್ಲ. ಎಲ್ಲ ಸುಲಭ, ಎಲ್ಲ ಸರಳ.

ಪ್ರಜೆಗಳ ಪರಮಾಧಿಕಾರವನ್ನು ಸೂಚಿಸುವ ಹೊಯ್ಸಳ ನಾರಸಿಂಹನ ಕಾಲದ (೧೧೭೦) [22]ಶಾಸನವೊಂದನ್ನು ನೋಡಿ:

> "ಶ್ರೀಮದನಾದಿಯಗ್ರಹಾರಂ ಧರ್ಮ ಸೂಱೆಕಾರಪುರ ನಾನೂರ್ವ್ವರುಮಪ್ಪ ಸಮಸ್ತ ಮಹಾಜನಂಗಳು ಕಾರುಣ್ಯದಿಂದ ಪ್ರಭುತ್ವಮಂ ಕುಡೆ ವಿನಯ ಶಿಖಾಮಣಿಯು, ಸೋಮೇಶ್ವರ ಸಮಯ ಪಾದಾರಾಧಕರು ಮೆನಿಸಿದ ಸಿಂಗಿಸೆಟ್ಟಿಯ ಪುತ್ರರಪ್ಪ ಜಕ್ಕೆ ಗಾವುಂಡಸಕ್ಕೆ ಗಾವುಂಡನು ಉರುವ ಪಟ್ಟಣಗೆಱೆಯಲ್ಲಿ"

ಆಡಳಿತ ನಡೆಸುತ್ತಿದ್ದರು. ಪ್ರಭುತ್ವವನ್ನು 'ಕರುಣಿಸುವ' ಪರಮಾಧಿಕಾರ ಸಮಸ್ತ ಮಹಾಜನಗಳಿಗುಂಟೆಂಬ ಮೂಲತತ್ವವೊಂದಿಲ್ಲಿ ಸ್ಪಷ್ಟವಾಗುತ್ತದೆ.

ಸೋಮನಾಥಪುರದ ಮಹಾಜನಗಳಿಗೆ ನಾರಸಿಂಹದೇವರು 'ಕಾರುಣ್ಯಂ ಮಾಡಿ' [23]'ಅಭಯ ಪತ್ರ'ವನ್ನು ಕೊಟ್ಟರು. ಹೊಯ್ಸಳ ಸೋಮದೇವರಸನು ಹಲವು ಗ್ರಾಮಗಳಿಗೆ 'ಹೊಗೆದೆಱೆ, ಆಡುದೆಱೆ, ಕೂಳು, ಖಾಣ, ಕಳುಕು, ಬೆದ್ದ ಮುಖ್ಯವಾದ ಎಲ್ಲಾ ಕಿಱುಕುಳಂಗಳು ಎಂದೆಂದಿಗೂ ಹಾಕಲಾಗ' ದು. ಇದೇ ಅಭಯ. ಅಲ್ಲದೆ 'ಚಿಕ್ಕಗಂಗವಾಡಿನಾಡ ಅಧಿಕಾರಿಗಳು ಆ ಹಳಿಗಳಲಿ ಎಂದೆಂದಿಗೆವೂ ಹೋಗದಂತಾಗಿ' ಕಟ್ಟಾಜ್ಞೆ ಮಾಡಿದರು. ಜನರ ಸುಖ, ಶಾಂತಿ, ಸ್ವಾತಂತ್ರ್ಯಗಳನ್ನು ಕಾಪಾಡುವುದರಲ್ಲಿ ಪ್ರಭುಗಳೆಷ್ಟು ಆಸಕ್ತಿ ವಹಿಸಿದ್ದರೆಂಬುದೂ, ಎಷ್ಟು ಪರಿಣಾಮಕಾರಕವಾದ ಕ್ರಮಗಳನ್ನು ಕೈಕೊಳ್ಳುತ್ತಿದ್ದರೆಂಬುದೂ ಇದರಿಂದ ವಿದಿತವಾಗುವುದಲ್ಲವೆ?

ನಂಬುಗೆಯ ಶಾಸನವೊಂದನ್ನು ನೋಡಿ. ಕೃಷ್ಣದೇವರಾಯನ ಕಾರ್ಯಕರ್ತ ಚಿನ್ನಪನಾಯಕ; ಅವನ ಕಾರ್ಯಕರ್ತ ರಾಮನಾಯಕ; ಇವನು ದುಂಮಿ ಗ್ರಾಮದ 'ಅಷ್ಟಾದಶಗವುಡು ಪ್ರಜೆಗಳಿಗೆ ಕೊಟ್ಟ [24]ನಂಬುಗೆಯ ಶಾಸನವಿದು.

> "ಪ್ರತಾಪ ಕೃಷ್ಣರಾಯ ಮಹಾರಾಯರ ಕಾರ್ಯಕ್ಕೆ ಕರ್ತರಾದ ಚಿಣ್ಣಪ್ಪನಾಯಕರ ಕಾರ್ಯಕ್ಕೆ ಕರ್ತರಾದ ರಾಮುಂಣ ನಾಯಕರು ದುಂಮಿಯ ಅಷ್ಟಾದಶ ಗಉಡುಪ್ರಜೆಗಳಿಗೆ ಕೊಟ್ಟ

---

22 Mysore Archæological Report, 1925. No. 49.
23 ,, ,, ,, 1941. No. 26.
24 ,, ,, ,, 1940. No. 16.

ನಂಬುಗೆಯ ವಿವರ. ಪ್ರಕುದುಂಮಿಯ ಕೆರೆಯ ನಷ್ಟ ಅಡವ್ಯಯು ಗಳನೂ ಯಿದ್ದ ವೊಕ್ಕಲಮೇಲೆ ಬಡಿಯಲಾಗಿ ಗ್ರಮುಮೆಲವೂ ಹಾಳಾಗಿ ಖಿಲವಾಗಿ ಹೋಗಿ ಯಿರಲಾಗಿ ಹಿಂದಣ ಪಾಋುಪತ್ಯಗಾರರ ಮರಿಯಾದೆಯಲ್ಲಿ ನಂನ್ನನೂ ನಂಬದೆ ಯಿರಲಾಗಿ ಆ ವೊಕ್ಕಲಿಗೆ ಕೊಟ್ಟ ನಂಬುಗೆಯ ಶಾಸನದ ವಿವರ. ವೊಕ್ಕಲಿಗೆ ಒಡಂಬಡಿಸಿ ಕರೆತಂದ ಮೇಲೆ ಪ್ರಮಾಣಕ್ಕೆ ತಪ್ಪಲಿಲ್ಲ. ಕೆಱೆಯ ನಷ್ಟವನೂ ಗ್ರಾಮದ ಮೇಲೆ ಕೊಳಲಿಲ್ಲ. ಚಿಂನ್ನವರದರ ಗುತ್ತಿಗೆ ಇಲ್ಲ. ಆ ಗ್ರಾಮದ ವೊಕ್ಕಲಿಗೆ ಬಿಟ್ಟ ಕಾಣಿಕೆ. "

ಗ್ರಾಮಾಧಿಕಾರಿಗಳು ಗ್ರಾಮ ಮರ್ಯಾದೆಯನ್ನು ಪಾಲಿಸಲಿಲ್ಲ. ಕೆರೆಯ ನಷ್ಟದ ಭಾರವನ್ನೆಲ್ಲ ವೊಕ್ಕಲಮೇಲೆ ಹಾಕಿದರು. ಗ್ರಾಮಸ್ಥರು ಪ್ರತಿಭಟಿಸಿ ಹಳ್ಳಿಯನ್ನು ಬಿಟ್ಟುಹೋದರು. ಹಳ್ಳಿ ಹಾಳಾಯಿತು. ಆಗ ರಾಮನಾಯಕನು ಬಂದು, ಹಳ್ಳಿಯ ಜನರಿಗೆ ಸಮಾಧಾನ ಹೇಳಿ, ಪರಿಹಾರ ಪೂರ್ಣವಾಗಿ ಕೊಟ್ಟು, ಮರ್ಯಾದೆಯನ್ನು ಪಾಲಿಸುವುದಾಗಿ ಹೇಳಿ, ಅವರನ್ನೊಡಂಬಡಿಸಿ, ಮತ್ತೆ ಅವರೆಲ್ಲ ಹಿಂತಿರುಗುವಂತೆ ಮಾಡಿ, 'ಚಿನ್ನಪ್ಪನಾಯಿಕರ ಪಾದದಾಣೆ' ನಿಮಗೆ ಯಾವ ತರದ ಹಿಂಸೆಯನ್ನೂ ಕೊಡುವುದಿಲ್ಲವೆಂದು ನಂಬುಗೆಯ ಪತ್ರವನ್ನು ಕೊಟ್ಟ!

## ೧೦. ಸ್ಥಳೀಯ ಸರಕಾರ

ಇದಿಷ್ಟು ಹಳ್ಳಿಗಳ ಮಾತಾಯಿತು. ಪುರಗಳನ್ನೂ, ಪೌರವ್ಯವಸ್ಥೆಗಳನ್ನೂ ಕುರಿತೊಂದು ಮಾತು. ಸ್ಥಳೀಯ ಸರಕಾರ 'ಮುನಿಸಿಪಾಲಿಟಿ' ಎಂದು ನಾವು ಕರೆಯುವೆವಷ್ಟೆ. ಹಿಂದಿನವರು 'ಪೌರ', 'ಪೌರವ್ಯವಸ್ಥೆ', 'ನಗರಮರ್ಯಾದೆ' ಎಂಬುದಾಗಿ ಕರೆಯುತ್ತಿದ್ದರು. ಅಧ್ಯಕ್ಷನನ್ನು 'ಪೌರವೃದ್ಧ', 'ಪೌರಮುಖ್ಯ', 'ಪುರಪ್ರಧಾನ' ಮುಂತಾಗಿ ಹೆಸರಿಟ್ಟು ಸಂಬೋಧಿಸುತ್ತಿದ್ದರು. 'ಶ್ರೇಷ್ಠಿ' ಎಂಬ ಹೆಸರೂ ಕಂಡುಬರುತ್ತದೆ.

ಪ್ರಾಚೀನ ಅರ್ಥಶಾಸ್ತ್ರಕಾರರ ಮತದಂತೆ ಪೌರ ಅಥವ ನಗರಸಭೆಗೆ [25] ಈ ಕರ್ತವ್ಯಗಳನ್ನು ವಹಿಸಲಾಗಿತ್ತು.

(೧) ಪೌಷ್ಟಿಕ—ಪುರಜನರ ಐಹಿಕ ಸುಖಸಂಪದಭಿವೃದ್ಧಿಗೆ ಪೋಷಕವಾಗುವ ಕೆಲಸಗಳು.

(೨) ಶಾಂತಿಕ—ನಗರಸಂರಕ್ಷಣೆ, ಕಂದಾಚಾರ (ಪೋಲೀಸ್ ವ್ಯವಸ್ಥೆ).

(೩) ಸೌಲಭ್ಯ—ಸಭಾ, ಪ್ರಪಾ, ತಟಾಕ, ಆರಾಮ, ದೇವಾಲಯ, ಉದ್ಯಾನವನ ಮೊದಲಾದವುಗಳನ್ನು ನಿರ್ಮಿಸಿ, ರಕ್ಷಿಸಿ, ಜೀರ್ಣೋದ್ಧಾರಮಾಡುವುದು.

(೪) ಲೌಕಿಕ—ಪುರಕ್ಕೆ ಮಾತ್ರ ಸಂಬಂಧಪಟ್ಟಂತೆ ಲೌಕಿಕ (Civil) ಮತ್ತು ಕಂಟಕ (Criminal) ವ್ಯವಹಾರ ವಿಮರ್ಶೆ.

---

25 K P. Jayaswal's 'Hindu Polity', Part II. PP. 72.



ಪುಷ್ಕರಿಣಿ, ಶ್ರೀಕೃಷ್ಣ ದೇವಾಲಯ, ಉಡುಪಿ



ಕನಕನ ಕಂಡಿ, ಶ್ರೀಕೃಷ್ಣ ದೇವಾಲಯ, ಉಡುಪಿ



ಶರಣ ಬಸವೇಶ್ವರ ದೇವಸ್ಥಾನ, ಗುಲ್ಬರ್ಗ



ಖಿಲ್ಲಾ ಮಸೀದಿ, ಗುಲ್ಬರ್ಗ

ನಗರದ ಆಡಳಿತವು ಮೂವತ್ತು ಮಂದಿ ಸಭಿಕರ ಕೈಯ್ಯಲ್ಲಿತ್ತು. ಈ ಸಭೆಯನ್ನು ಆರು ಸಮಿತಿ ಅಥವಾ ಸಂಘಗಳನ್ನಾಗಿ ವಿಂಗಡಿಸಿ, ಒಂದೊಂದಕ್ಕೂ ಕೆಲವು ಜವಾಬ್ದಾರಿಗಳನ್ನು ಕೊಡುತ್ತಿದ್ದರು. ವ್ಯಾಪಾರ, ಕೈಗಾರಿಕೆ, ಅರದೇಸಿ, ಪರದೇಸಿ, ನಾನಾ ದೇಸಿಗಳ ಮೇಲ್ವಿಚಾರಣೆ, ಜನನಮರಣ, ಅಳತೆ, ತೂಕ, ರಹದಾರಿ, ಜಿನಸಿನ ಮರಾಟ, ಬೆರಕೆವಸ್ತು ಮಾರಾಟ ನಿರೋಧ, ಸುಂಕಸಾರಿಗೆ —ಇವೇ ಮೊದಲಾದ ಕೆಲಸಗಳನ್ನು ನಾನಾ ಸಮಿತಿಗಳವರು ನೋಡಿಕೊಳ್ಳುತ್ತಿದ್ದರು. ಅನೇಕ ಶಾಸನಗಳಿಂದ ಈ ವ್ಯವಸ್ಥೆಯ ವಿವರಗಳು ತಿಳಿದುಬರುತ್ತವೆ.

[26] ನಿಜಗುಣ ಶಿವಯೋಗಿಯು 'ಅಷ್ಟಾದಶ ಮಹಾಸಂಘ' ಗಳನ್ನು ಹೀಗೆ ಪಟ್ಟಿಮಾಡಿದ್ದಾನೆ:

| | | |
|---|---|---|
| ಮಂತ್ರಕ ಸಂಘ | ಆರ್ಜಕ ಸಂಘ | ವಣಿಕ್ ಸಂಘ |
| ಪಾಲಕ ಸಂಘ | ವಿನಿಯೋಕ್ತೃ ಸಂಘ | ಪೋಷಕ ಸಂಘ |
| ವಿಚಾರಕ ಸಂಘ | ಸಾಕ್ಷಿ ಸಂಘ | ವಿನಿಮಯಕರ್ತೃ ಸಂಘ |
| ಆಪ್ತಸಂಘ | ವೃತ್ತಸೂಚಕ ಸಂಘ | ಶಾಸಕ ಸಂಘ |
| ಶಿಲ್ಪಿಸಂಘ | ಪರೀಕ್ಷಕ ಸಂಘ | (ಇನ್ನೆರಡು ಸಂಘಗಳು |
| ವಿದ್ವತ್ಸಂಘ | ನ್ಯಾಯ ಸಂಘ | ಬಿಟ್ಟುಹೋಗಿವೆ) |

"ಎಂಬ ಅಷ್ಟಾದಶ ಮಹಾ ಸಂಘ ಪ್ರಸಿದ್ಧ ಜ್ಞಾನವೃದ್ಧ ಶತ್ರೈಕಮತ್ಯ ಸಂಪಾದಿತ ಯೋಗಕ್ಷೇಮಾತಿಶಯಂಗಳಿಂದನುಪಮ ಹಿತಾಭಿವೃದ್ಧಿಯಂ ಪಡೆದು ಸ್ವಸ್ವ ನಗರಾದಿಗಳಂ ಜೀರ್ಣೋದ್ಧಾರಂಗೆಯ್ಯುತ್ತಿರಲು" ಎಂದು ಬರೆಯುತ್ತಾನೆ. ಪೌರ ವ್ಯವಸ್ಥೆಯಲ್ಲಡಗಿರುವ ಆಡಳಿತವ್ಯಾಪ್ತಿ, ಅಧಿಕಾರ ಪರಿಮಾಣ ಮಹತ್ವ, ಪಾರುಪತ್ಯ ವಿಭಜನಾ ಕೌಶಲ ಮೊದಲಾದುವು ತಕ್ಕಮಟ್ಟಿಗೆ ಮನಸ್ಸಿಗೆ ಬರುತ್ತದೆ. ಈ ಅಧಿಕಾರಗಳೆಲ್ಲ ಒಂದೇ ಸಲ ನಗರ ನಿವಾಸಿಗಳಿಗೆ ಬರುತ್ತಿರಲಿಲ್ಲ. ನಾಡಿನರಸನು ಈ ಹಕ್ಕುಗಳನ್ನು ಪ್ರಜೆಗಳಿಗೆ ಸರಿಯಾದ ಕಾಲ ನೋಡಿ, ನಗರದ ಅರ್ಹತೆ ಕಂಡು, 'ಅನುಗ್ರಹ' ಮಾಡುತ್ತಿದ್ದ. ಅನೇಕ ವೇಳೆ ಜನರೇ 'ಅನುಗ್ರಹಿಸಬೇಕು' ಎಂದು ಅರಸನನ್ನು ಕೇಳುತ್ತಿದ್ದರು. ಕ್ಷಾಮಡಾಮರಗಳು, ಅಗ್ನಿಭಯ, ಶತ್ರುಭಯ ಮೊದಲಾದ ಸಂದರ್ಭಗಳಲ್ಲಿ ಪುರಪ್ರಮುಖರು ಅರಸನ ಬಳಿಗೆ ಹೋಗಿ [27] 'ಪರಿಹಾರ' ವನ್ನು ಪ್ರಾರ್ಥಿಸಿ ಪಡೆಯುತ್ತಿದ್ದರು.

ಬಾದಾಮಿ ಚಾಳುಕ್ಯ ಸಮ್ರಾಟ್ ವಿಜಯಾದಿತ್ಯ (೬೯೬-೭೩೪)ನ ಮಗ ಯುವರಾಜ ವಿಕ್ರಮಾದಿತ್ಯನು (ಇಮ್ಮಡಿ ವಿಕ್ರಮಾದಿತ್ಯ ೭೩೪-೭೪೮) ಪುರಿಗೆರೆಗೆ ಬಂದು ಆ ನಗರಕ್ಕೆ ಸ್ಥಳೀಯಾಧಿಪತ್ಯವನ್ನು 'ಅನುಗ್ರಹಿ' ಸಿದ.

(೧) ಓಂ ಸ್ವಸ್ತಿ ಶ್ರೀ ವಿಕ್ರಮಾ
(೨) ದಿತ್ಯ ಯುವರಾಜರ್ ಪೊರಿ
(೩) ಗೆರೆಯಾ ಮಹಾಜನಕ್ಕುಂ ನ
(೪) ಗರಕ್ಕುಂ ಪದಿನೆಣ್ಬುಂ ಪ್ರಕೃತಿಗಳ್ಗುಂ
(೫) ಕೊಟ್ಟ ಆಚಾರ ವ್ಯವಸ್ಥೆ

---

26 'ವಿವೇಕಚಿಂತಾಮಣಿ', ಪ್ರಕರಣ ನಾಲ್ಕು.

27 'K. V. S. Iyer's Historical Sketches of Ancient Dekhan PP. 327.

[28] ಶಾಸನದ ಮೊದಲನೆ ಐದು ಸಾಲುಗಳಿವು. ಮುಂದೆ ಅಧಿಕಾರಿಗಳು, ಅವರ ಕರ್ತವ್ಯ, ಮಹಾಜನರ ಕರ್ತವ್ಯ, ಕೇಂದ್ರ ಸರಕಾರಕ್ಕೂ ನಗರವ್ಯವಸ್ಥೆಗೂ ಇರುವ ಬಾಂಧವ್ಯ ಇವೇ ಮೊದಲಾದ ವಿವರಗಳಿವೆ.

## ೧೧. ನಗರ, ನಿವಾಸಿಗಳು

ಗ್ರಾಮದಿಂದ ನಗರ, ನಗರದಿಂದ ನಾಡು, ನಾಡಿನಿಂದ ವಿಷಯ, ವಿಷಯದಿಂದ ರಾಷ್ಟ್ರ—ಇದು ಮೂಡಲು ದೇಶಗಳ ವಿಕಾಸ ಮಾರ್ಗ. ಪಡುವಲು ದೇಶಗಳಲ್ಲಾದರೋ ಸಾಮ್ರಾಜ್ಯ ಮೊದಲು; ಹಳ್ಳಿ ಕಡೆ. ಅಂದರೆ ಗ್ರಾಮ, ನಗರ ಇವುಗಳೇ ಮೊದಲು; ಇವುಗಳ ರಚನೆ, ರಕ್ಷಣೆಗಳೇ ಮೊದಲು; ರಾಷ್ಟ್ರಕ್ಕೆ ಮೂಲಾಧಾರಗಳು ಹಳ್ಳಿಗಳು, ನಗರಗಳು, ಕನ್ನಡನಾಡಿನ ಇತಿಹಾಸದಲ್ಲಿ ಈ ಸಹಜ ವಿಕಾಸ ಜೀವನಭಾಗ್ಯವನ್ನು ನೋಡುತ್ತೇವೆ. 'ಸುಖವ್ಯಾಪ್ತಿ ಶಾಂತಿವ್ಯಾಪ್ತಿ' ಇದೇ ಹಳ್ಳಿಗಾಡಿನವರ, ನಗರನಿವಾಸಿಗಳ ಮೂಲಮಂತ್ರವಾಗಿತ್ತೆಂದು ಸ್ಪಷ್ಟವಾಗುತ್ತದೆ.

ಅರಸೀಕೆರೆಯನ್ನು ಈಗ ಅನೇಕರು ನೋಡಿರಬಹುದು. (ಕಳ್ಳರಸೀಕೆರೆಯೆಂಬುದರ ಕೀರ್ತಿ!) ಆದರೆ [29] ಹಿಂದಿನ ಕಾಲದ ಚಿತ್ರವಿದು:—

> "ಸಾರಂ ನೊಳ್ಪರ್ಗೆ ಪೆಂಪುಳ್ಳರಸಿಯ ಕೆರೆಯೊಳ್ವಿಶ್ವ ವೇದಾಂತ ವಿಪ್ರ
> ವ್ರಿರ್ರಕ್ಕಾರಯ್ವಾಳ್ಗಿ ಳಾಢ್ಯರ್ಪರೆದರ ಚಲವಾಕ್ಯತ್ತುರೀಯರ್ವಿನೂತಾ
> ಕಾರಂ ಕಾನ್ತಾಜನಂ ಕಾರುಗಳ ಮದರಿಳಾಮಂಡನಂ ದೇಗುಳಂ ಗಂ
> ಭೀರೋದಾರಂ ತಟಾಕಂ ಫಳಭರಿತ ವನಂ ಪೂತ ಪೂದೋಟವೆಂದುಂ"

> "ನತ ಭೃಂಗಾಂ ಭೋಜ ಷಂಡಂ ಶುಕಪಿಕ ವಿವಿಧೋದ್ಯಾನ ಸಂಕೀರ್ಣವಾಪೂ
> ರ್ಣ್ಣತಟಾಕಂ ಗಂಧಶಾಳೀ ಪರಿಮಳ ಕಳಿತಂ ಪುಷ್ಪ ಪುಂಡ್ರೇಕ್ಷು ವಾಪೀ
> ವೃತ್ತೋತ್ತುಂಗ ಪ್ರಭಾಭಾಸುರ ಸುರಗೃಹ ಸಂಪನ್ನ ವುದ್ಯತ್ಪ್ರಜಾ ಪೂ
> ರಿತ ವುರ್ವೀಮಂಡನಂ ಸನ್ನರಸಿಯ ಕೆರೆಯಂ ಬಣ್ಣಿಸಲ್ಬಲ್ಲನಾವಂ"

ದಕ್ಷಿಣ ಕನ್ನಡ ಜಿಲ್ಲೆಯ ಮೂಡುಬಿದರೆಯ [30] ಶಾಸನವೊಂದರಲ್ಲಿ ಮಂಗಳೂರನ್ನು ಹೀಗೆ ಚಿತ್ರಿಸಲಾಗಿದೆ:—

> "ಚಲದೂರ್ಮಿವ್ರಾತಜಾತ ಪ್ರಹರಣ ರಣಕೃದ್ವಾರ್ಧಿಯಿಂ ಮುಂದೆ ಸಾಲಂ
> ಬಳಸಲ್ನಾನಾಮಣಿ ಪ್ರಸ್ಫುರಿತ ಪರಿವೃಢಾಗಾರದಿಂ ವಾರನಾರೀ
> ಕುಲದಿಂ ಸ್ವರ್ಣಾದಿ ಪೂರ್ಣಾ ಪಣ ಗಣದಿನಣಂ ಶೋಭಿಕುಂ ಮಂಗಲೂರಾ
> ಸ್ಥಲದೊಳ್ ವ್ರೀಹ್ಯಾದಿ ಸಸ್ಯೋತ್ಕರ್ಷ ಹರುಷಿತಾತ್ಮೀಯ ಪೌರಪ್ರತಾನಂ"

ಬಳ್ಳಾರಿ ಜಿಲ್ಲೆಯ [31] ಕುರುವತ್ತಿಯ ಜನರನ್ನು ಕುರಿತ ಪದ್ಯವಿದು:—

> "ಶರಣಾಯಾತ ಜನಕ್ಕೆ ವಜ್ರಕವಚಮ್ಮಾರಾನ್ತ ವೀರಂಗೆ ಕೇ
> ಸರಿ ಬಾಯ್ವಿಟ್ಟಿರದಂಗೆ ಕಲ್ಪಮಹಿಜಂ ಶಾಸ್ತ್ರಕ್ಕೆ ತಾನಾಸ್ಪದಂ
> ಪುರುಷಾರ್ಥಕ್ಕೆ ತವರ್ ಶೃತಿಸ್ಮೃತಿಗೆ ತಾಂ ಲೀಲಾಗೃಹಂ ಧರ್ಮದಾ
> ಕರ ಮಿಸ್ತೀ ಕುರುವತ್ತಿವತ್ತಿ ಮಹಿದೇವಾನೀಕವಿನ್ನೂರ್ವರು"

---

28 Ep. Ind. Vol. XIV PP. 88.
29 Ep. Cam. Hassan District No. 77 Arasikere.
30 Madras Epigraphical Report, 1901, No. 27.
31 ,, ,, ,, 1918, No. 213.

[32] ಕರಣಗ್ರಾಮವೆಂಬುದೊಂದು ಈ ರೀತಿಯಾಗಿ ವರ್ಣಿತವಾಗಿದೆ:—

> " ಬಹುವೇದಧ್ವನಿಯಿಂ ಸಮುದ್ರಮುಲಿಯುಂ ಕೀಳ್ಮಾಡುಗುಂ ಯಜ್ಞಭಾ
> ಗಹವಿರ್ಭಾಗಮನೀವ ವಿಪ್ರಜನದಿಂ ಬೇವರ್ಕರ್ಗಂ ಕಳ್ವ ಭೂ
> ರುಹಮುಂ ಮುಂನಿಸಲೀವುದಲ್ತಗರು ಧೂಮಾಚಾರದಿಂ ತಾಂಡವ
> ಕ್ರಿಯೆಯುಂ ಪುಟ್ಟಿಸುಗುಂ ಸಿಖಂಡಿಗೆನೆ ಲಕ್ಷ್ಮೀನೂಪುರಂ ತತ್ಪುರಂ "

## ೧೨. ಸುಖೀರಾಜ್ಯದ ಒಂದು ಚಿತ್ರ

ಹದಿನೈದನೆಯ ಶತಮಾನ; ವಿಜಯನಗರದ ಸಮ್ರಾಟ್ ಇಮ್ಮಡಿ ದೇವರಾಯನ ಪ್ರಭುತ್ವ ಕಾಲ. ಆ ಕಾಲದ ಶಾಸನವೊಂದು ಹಂಪೆಯ ಬಳಿ ಇದೆ. ಶಾಸನವೇ ಒಂದು ಕಾವ್ಯದಂತಿದೆ. ಕವಿ ಮಧುರನ ಕೃತಿ ಇದು. ದೇವರಾಯನು ಪ್ರಭುತ್ವವನ್ನು ಹೇಗೆ ಮಾಡಿದನೆಂದು ಹೇಳುತ್ತಾನೆ ಕವಿ:—

> " ಸಲೆ ನಾನಾ ಸಸ್ಯ ಸಂಪತ್ತಿಯನೊದವಿಸಿ ತಾಂ ದಾನ ಧಾರಾ
> ಜಲದಿಂ ಸಂತಾಪಮಂ ತಣ್ಣಿಸಿ, ವಿತತಸಿತಚ್ಛತ್ರ ನುಚ್ಛಾಯೆಗೊಯ್ದು,
> ಜ್ವಲಿಪಾಜ್ಞಾ ದಾಮದೊಳ್ ನಿಯಮಿಸಿ, ದೋಸ್ತಂಭದೊಳ್ಕಟ್ಟಿ ಗೋಮಂ
> ಡಲಮಂ, ಸತ್ಕೀರ್ತಿದುಗ್ಧಂ ಕರೆದ ನರಕೆಯಿಂ ದೇವರಾಜಾವನೀಂದ್ರಂ "

ಭೂಮಿಯು ನಮ್ಮ ಪಾಲಿಗೆ ಕೇವಲ ಕಲ್ಲುಮಣ್ಣಲ್ಲ; ಭೂದೇವಿ, ಗೋಮಾತೆ. ದೇವರಾಯ ಈ ಭೂಮಾತೆ—ಗೋಮಾತೆಯನ್ನು ಹೇಗೆ ಪಾಲಿಸಿದ, ಸೇವಿಸಿದನೆಂಬುದು ಮೇಲಿನ ಪದ್ಯದ ಭಾವ, ಅರ್ಥ. ಗೋಮಂಡಲಕ್ಕೆ 'ನಾನಾ ಸಸ್ಯ ಸಂಪತ್ತ'ನ್ನು ಒದಗಿಸಿದ. ಗೋವಿಗೆ ಬೇಕಾದುದೇನು ಹುಲ್ಲು, ಆಹಾರ. ಪ್ರಾಣಿವರ್ಗಕ್ಕೆಲ್ಲ ಬೇಕಾದುದು ಆಹಾರ. ತನ್ನ ರಾಜ್ಯದಲ್ಲಿ ಎಲ್ಲ ಪ್ರಾಣಿಗಳಿಗೂ ಆಹಾರವನ್ನೊದಗಿಸಬೇಕೆಂಬ ಕರ್ತವ್ಯವನ್ನರಿತು, ವರ್ತಿಸಿದ. ಆಹಾರವಾದ ಮೇಲೆ ನೀರು ಬೇಕು. ಹಸವಿನೊಂದಿಗೆ ದಾಹವಿದೆ. ದಾಹಶಾಂತಿಗಾಗಿ ಅರಸ 'ದಾನಧಾರಾಜಲ'ದಿಂದ ಸಂತಾಪವನ್ನು ಪರಿಹರಿಸಿದ. ಜನದ ಸಂತಾಪವಾಗಲಿ, ದನದ ಸಂತಾಪವಾಗಲಿ ಒಂದೇ ಎಂದು ಭಾವಿಸಿ, ದಾನಧಾರಾಜಲದಿಂದ ಅದನ್ನು ಪರಿಹರಿಸಿದ. ಪವಿತ್ರ ಕಲ್ಪನೆ! ವಾತ್ಸಲ್ಯಧಾರಾಜಲವನ್ನಲ್ಲವೆ ತಾಯಿ ಕೂಸಿಗೆರೆಯುವುದು! ಅನ್ನವಾಯಿತು, ನೀರಾಯಿತು. ವಿಶ್ರಾಂತಿಗೊಂದಿಷ್ಟು ನೆರಳುಬೇಕು; ವಸತಿ ಬೇಕು. ಗೋವು ಎಲ್ಲಿ ನಿಲ್ಲಬೇಕು, ಎಲ್ಲಿ ಮಲಗಬೇಕು? ಅದಕ್ಕೆ ತನ್ನ ಬಿಳಿಯ ಛತ್ರಿಯನ್ನು ಹಿಡಿದ! ಪ್ರಜಾರಂಜಕನಾದ ಅರಸ ಶ್ವೇತಛತ್ರ ಹಿಡಿಯಬೇಕಾದದ್ದು ತನ್ನ ವೈಭವಕ್ಕಾಗಿ ಅಲ್ಲ; ಗೋಮಂಡಲಕ್ಕೆ, ಭೂಮಂಡಲಕ್ಕೆ ನೆರಳನ್ನು ನೀಡಲಿಕ್ಕೆ. ಪ್ರಾಣಿಸಂಕುಲಕ್ಕೆ ವಸತಿ ಕಲ್ಪಿಸುವುದವನ ಧರ್ಮವಾಯಿತು. ಗೋವನ್ನು ತನ್ನ ಭುಜಸ್ತಂಭಕ್ಕೆ ಬಿಗಿದ; ಬಿಗಿಯಲು ತನ್ನ 'ಆಜ್ಞೆ'ಯೆಂಬ ಹಗ್ಗವನ್ನುಪಯೋಗಿಸಿದ. ಗೋವನ್ನು ನಿರ್ಬಂಧಿಸುವುದವನ ಇಚ್ಛೆಯಲ್ಲ; ಆದರೆ ಹಿತಸಾಧನೆಗಾಗಿ. ರಾಜನು ಆಜ್ಞೆ ಮಾಡುವುದು ಪ್ರಜೆಗಳ ಹಿತಸಾಧನೆಗಾಗಿ; ಇದು ಶಿಸ್ತಿನ ಸಂಕೇತ. ಹಸುವನ್ನಿಷ್ಟು ಅಕ್ಕರೆಯಿಂದ ಕಾಪಾಡಿದ್ದು 'ಸತ್ಕೀರ್ತಿದುಗ್ಧ'ವನ್ನು ಕರೆಯಲಿಕ್ಕೆ!

32 ಬಿಜಾಪುರದ ವಸ್ತುಪ್ರದರ್ಶನ ಶಾಲೆಯಲ್ಲಿರುವ ಶಾಸನದಿಂದ.

ಮಧುರನು ಕವಿವಾಣಿಯಲ್ಲಿ, ಅಲಂಕಾರಿಕವಾಗಿ ಹೇಳಿರುವುದರ ಅರ್ಥವಿದು. ಅರಸನು—

(೧) ಪ್ರಜೆಗಳಿಗೆ (ಸಕಲ ಪ್ರಾಣಿಗಳಿಗೆ) ಪುಷ್ಟಿಕರವಾದ ಆಹಾರ ವನ್ನೊದಗಿಸಬೇಕು. ಬಟ್ಟೆ ಬರೆಯನ್ನೊದಗಿಸಬೇಕು.

(೨) ಪ್ರಜೆಗಳ ದಾಹ, ಸಂತಾಪ, ನಾನಾ ಸಂಕಟಗಳನ್ನು ಪರಿಹಾರ ಮಾಡಬೇಕು. ಉದಾರ ಹೃದಯ, ದಾನಹಸ್ತ-ಇವುಗಳಿಂದ ಈ ಕಾರ್ಯನಿರ್ವಾಹ ಮಾಡಬೇಕು.

(೩) ಪ್ರಜೆಗಳಿಗೆ (ಸಕಲ ಪ್ರಾಣಿಗಳಿಗೆ) ವಸತಿ ಸೌಕರ್ಯ ಕಲ್ಪಿಸಬೇಕು. ಪ್ರಜೆಗೊಂದು ಗುಡಿಸಲಾಗಲಿ, ದನಕ್ಕೊಂದು ಕೊಟ್ಟಿಗೆಯಾಗಲಿ ಸಿಗುವಂತಾಗಬೇಕು.

(೪) ಜನರು ಹದ್ದು ಮೀರಿ ಹೋಗದಂತೆ, ಕಂಟಕರಾಗದಂತೆ, ಸಮಾಜ ಭಯಂಕರರಾಗದಂತೆ, ತಕ್ಕ ಶಾಸನಗಳನ್ನು ಮಾಡಿ ದುಷ್ಟಶಿಕ್ಷಣ-ಶಿಷ್ಟಸಂರಕ್ಷಣಾಕಾರ್ಯ ಮಾಡಬೇಕು.

(೫) ಜನಪದ ಜೀವನವನ್ನು ನಿರಾಪದವನ್ನಾಗಿಮಾಡಿ, ಭದ್ರಮಾಡಿ, ಭಗವಂತನ ಇಚ್ಛೆಯನ್ನು ಪೂರೈಸಬೇಕು.

ಮಧುರನ ಚಿತ್ರವು 'ಸುಖೀರಾಜ್ಯ'ದ ಚಿತ್ರ! 'ಶ್ರೀರಾಜ್ಯ'ದ ಚಿತ್ರ! 'ರಾಮರಾಜ್ಯ'ದ ಚಿತ್ರ! ಇದನ್ನೇ ಅಲ್ಲವೆ ಸ್ವತಂತ್ರ ಭಾರತದ ಗಣರಾಷ್ಟ್ರ ಅಪೇಕ್ಷಿಸುತ್ತಿರುವುದು! ಪಂಚವಾರ್ಷಿಕ ಯೋಜನೆಗಳ ಉದ್ದಿಶ್ಯವಾದರೂ ಇದೇ ಅಲ್ಲವೆ!

---

# ಕನ್ನಡ ನಾಡಿನ ಸಂಪ್ರದಾಯಗಳು

ಲೇಖಕರು :
ರಾಜಸೇವಾಸಕ್ತ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು, ಬೆಂಗಳೂರು.

## ೧. ಶುಭ ದಿನ

ಹರಿದು ಹಂಚಿಹೋಗಿದ್ದ ಕನ್ನಡ ನಾಡು ಹಿಂದಿನಂತೆ ಮತ್ತೆ ಒಂದೇ ಪ್ರಾಂತವಾಗಿ ಏರ್ಪಟ್ಟಿರುವ ಈ ದಿನವು ಶುಭ ದಿನ ; ಕನ್ನಡಿಗರೆಲ್ಲರೂ ಇಂದು ತಮ್ಮ ತಾಯಿದೇವಿಯ ವರ್ಧಂತ್ಯುತ್ಸವವೋ—ಎಂದು ತೋರುವಂತೆ ಉತ್ಸಾಹ ಸಂಭ್ರಮಗಳಿಂದ ಹಿಗ್ಗುತ್ತಿದ್ದಾರೆಂದರೆ ಅದೆಂದಿಗೂ ಅತಿಶಯೋಕ್ತಿಯಲ್ಲ. ಇದು ಭಾರತಕ್ಕೆ ಸ್ವಾತಂತ್ರ್ಯ ಬಂದುದರ ಪರಿಣಾಮ ಫಲ. ಭಾರತವು ಈಗಿನಂತೆ ಹಿಂದೆ ಒಂದೇ ಆಡಳಿತಕ್ಕೆ ಎಂದೂ ಬಂದಿರಲಿಲ್ಲ. ಭಾರತವು ಒಂದೇ ಆಡಳಿತಕ್ಕೆ ಬಂದಿರುವುದು ನಮ್ಮ ಪುಣ್ಯ. ಚಂದ್ರಗುಪ್ತ, ಅಶೋಕ, ಹರ್ಷವರ್ಧನ, "ಪರಮೇಶ್ವರ" ನೆಂದು ಖ್ಯಾತನಾಗಿದ್ದ ಚಾಲುಕ್ಯ ಮನೆತನದ ಇಮ್ಮಡಿ ಪುಲಕೇಶಿ, ಮುಂತಾದವರು ಕಂಡ ಹೊಂಗನಸು ಅವರ ಕಾಲದಲ್ಲಿ ನನಸಾಗದೆ, ಈಗ್ಗೆ ಒಂಬತ್ತು ವರ್ಷಗಳ ಹಿಂದೆ ನನಸಾಯಿತು. ಸ್ವಾತಂತ್ರ್ಯ ಕಹಳೆಯು ಮೊಳಗಿತು. ದಾಸ್ಯಕ್ಕೊಳಗಾದ ದೇಶದ ನಿರಾಶಾವಾದ ಸಂದೇಶವನ್ನಿತ್ತವರೆಂದು ವಿಶ್ವಕವಿ ರವೀಂದ್ರರನ್ನು ಹಳಿದ ಜನಾಂಗಗಳವರು ವಿಸ್ಮಯದಿಂದ ಬೆರಗಾದರು. ಅರೆಬೆತ್ತಲ ಫಕೀರನೆಂಬ ಅನ್ಯಾಯದ ಟೀಕೆಗೆ ಗುರಿಯಾಗಿದ್ದ ಮಹಾತ್ಮಾಗಾಂಧಿಯವರು ರಾಷ್ಟ್ರಪಿತಾಮಹರೆನಿಸಿ ನವಯುಗ ಪ್ರವರ್ತನಾಚಾರ್ಯರಾದರು. ಭಾರತಕ್ಕೆ ಸ್ವಾತಂತ್ರ್ಯ ಲಾಭವಾಗದೆ ಹೋಗಿದ್ದರೆ ಕರ್ಣಾಟಕದ ಏಕೀಕರಣವೆಂದಿಗೂ ನಡೆಯುತ್ತಿರಲಿಲ್ಲ.

## ೨. ಕನ್ನಡ ನಾಡಿನ ಖ್ಯಾತಿ

ಕನ್ನಡ ನಾಡು ಪ್ರಾಚೀನ ಕಾಲದಿಂದಲೂ ಪ್ರಖ್ಯಾತವಾದ ನಾಡು. ಕನ್ನಡ ನಾಡಿನ ಚರಿತ್ರೆಯೆಂದರೆ—ಹಿಂದಿನ ಒಂದು ಅವಧಿಯಲ್ಲಿ—ಭಾರತದ ಬಹುಭಾಗದ ಚರಿತ್ರೆಯೆಂದೇ ಹೇಳಬೇಕು. ಏಕೆಂದರೆ, ಭಾರತದ ಬಹುಭಾಗದಲ್ಲಿ ಆಗ್ಗೆ ಅನೇಕ ಪ್ರಾಂತಗಳು ಕನ್ನಡಿಗರ ಆಡಳಿತಕ್ಕೇ ಒಳಪಟ್ಟಿದ್ದುವು; ಉಳಿದ ಪ್ರಾಂತಗಳು ಕನ್ನಡಿಗರ ಅಮೋಘವಾದ ಕಾರ್ಯಸಿದ್ಧಿಗಳ ಪ್ರಭಾವಕ್ಕೊಳಗಾಗಿ ಅವುಗಳಿಂದ ಸ್ಫೂರ್ತಿಹೊಂದಿ ಲಾಭಪಡೆದಿದ್ದುವು. ಕನ್ನಡನಾಡು—"ಕವಿರಾಜಮಾರ್ಗ" ವೆಂಬ ಲಕ್ಷಣ ಗ್ರಂಥದಲ್ಲಿ ವರ್ಣಿತವಾಗಿರುವಂತೆ—"ಕಾವೇರಿಯಿಂದ ಮಾಗೋದಾವರಿ ವರಮಿರ್ದ್ದ" ನಾಡು. ಕಾಶ್ಮೀರದಿಂದ ರಾಮೇಶ್ವರದ ವರೆಗೂ ಕನ್ನಡ ನಾಡಿನ ಖ್ಯಾತಿಯು ಹಬ್ಬಿದ್ದ ಕಾಲವೂ ಉಂಟು. ನೇಪಾಳ,

ಗುಜರಾತು, ರೀವಾ, ಬಂಗಾಳ ಮುಂತಾದ ಪ್ರಾಂತಗಳಲ್ಲಿ ಕೂಡ ಕನ್ನಡ ಮನೆತನಗಳ ಚಕ್ರವರ್ತಿಗಳೂ ರಾಜರೂ ಪ್ರಭುತ್ವ ಮಾಡಿದರು. ಕ್ರಿಸ್ತಶಕ ಎರಡನೆಯ ಶತಮಾನದಲ್ಲಿ ಗ್ರೀಸ್ ದೇಶದಲ್ಲಿ ರಚಿತವಾದ ಒಂದು ಪ್ರಹಸನದಲ್ಲಿ ಕನ್ನಡನಾಡಿನ ಊರುಗಳ ಹೆಸರುಗಳೂ, ತೊವ್ವೆ ಮುಂತಾದ ಕನ್ನಡ ಪದಗಳೂ, ಕೆಲವು ಕನ್ನಡ ವಾಕ್ಯಗಳೂ ಇರುವುದಾಗಿ ಪ್ರತೀತಿಯಿದೆ. ಅದು ನಿಸ್ಸಂದೇಹವಾಗಿ ಇನ್ನೂ ನಿರ್ಧರವಾಗಿಲ್ಲವಾದರೂ ಗಮನಾರ್ಹವಾಗಿದೆ ಮತ್ತು ಸಂಶೋಧನಯೋಗ್ಯವಾಗಿದೆ. ಭಾರತಕ್ಕೆ ಬಂದಿದ್ದ ಗ್ರೀಕರೊಡನೆ ಹೋದ ಕನ್ನಡಿತಿಯ ಪಾತ್ರವು ಕನ್ನಡ ಭಾಷೆಯ ವಾಕ್ಯಗಳನ್ನಾಡುವಂತೆ ಆ ಪ್ರಹಸನದಲ್ಲಿ ಚಿತ್ರಿತವಾಗಿದೆಯಂತೆ. ಗ್ರೀಸ್, ಚೀಣ, ಪಾರ್ಸಿಸ್ತಾನ, ಮಲಯ, ಪೋರ್ಚುಗಲ್ ಮುಂತಾದವುಗಳೊಡನೆ ಕನ್ನಡಿಗರು ವ್ಯಾಪಾರ ನಡೆಯಿಸಿ ಪ್ರಸಿದ್ಧರಾದರು. ಮೇಧಾಶಕ್ತಿ, ಚತುರತೆ, ಕಾವ್ಯ ವಿಮರ್ಶಾಸಾಮರ್ಥ್ಯ ಮುಂತಾದವು ಕನ್ನಡಿಗರಲ್ಲಿ ಪ್ರಕೃತಿ ಸಹಜವಾಗಿ ನೆಲಸಿದ್ದಂತೆ ಕವಿರಾಜ ಮಾರ್ಗದಲ್ಲಿ ಸೂಚಿತವಾಗಿದೆ; "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಎಂದು ಆ ಗ್ರಂಥದಲ್ಲಿ ಸೂಚಿತವಾಗಿರುವುದನ್ನು ನೆನೆದವರ ಹೃದಯವು ಹೆಮ್ಮೆಯಿಂದ ಉಬ್ಬುತ್ತದೆ.

## ೩. ಕೆಲವು ಉತ್ತಮ ಸಂಪ್ರದಾಯಗಳು

ಕನ್ನಡಿಗರು ಉದಾತ್ತಧ್ಯೇಯಗಳನ್ನಿಟ್ಟುಕೊಂಡು ಉತ್ತಮ ಸಂಪ್ರದಾಯಗಳನ್ನು ರೂಪಿಸಿದುದೇ ಇದಿಷ್ಟೂ ಸಾಧ್ಯವಾದುದಕ್ಕೆ ಮುಖ್ಯ ಕಾರಣ. ಕಾಲಕ್ರಮದಲ್ಲಿ ಹಲವಾರು ಹೊಸ ಪದ್ಧತಿಗಳು ಹುಟ್ಟಿ ಆಚರಣೆಗೆ ಬರುತ್ತಿರುತ್ತವೆ; ಹಲವಾರು ಹಳೆಯ ಪದ್ಧತಿಗಳು—ಅವುಗಳಲ್ಲಿ ಹುರುಳಿಲ್ಲದ ಕಾರಣಕ್ಕಾಗಿ ಅಥವಾ ಅವುಗಳಿಂದ ಸಮಾಜಕ್ಕೆ ಹಾನಿಯೆಂಬ ಕಾರಣಕ್ಕಾಗಿ—ಅಳಿದು ಹೋಗುತ್ತಿರುತ್ತವೆ. ಯಾವ ಪದ್ಧತಿಗಳು ಚಿರಕಾಲ ಆಚರಣೆಯಲ್ಲಿದ್ದು ಸಮಾಜಕ್ಕೆ ಅಥವಾ ವ್ಯಕ್ತಿಗಳಿಗೆ ಪ್ರಯೋಜನಕರವೆಂದು ಖಚಿತವಾಗಿ ಕಂಡು ಬರುತ್ತವೋ ಅವುಗಳು ಮಾತ್ರವೇ ಬಹುಕಾಲ ಉಳಿದು ಉತ್ತಮ ಸಂಪ್ರದಾಯಗಳೆಂಬ ಹೆಸರನ್ನು ಪಡೆಯುತ್ತವೆ. ಉತ್ತಮ ಸಂಪ್ರದಾಯಗಳ ಅವಲಂಬನವಿಲ್ಲದೆ ಜನಜೀವನದಲ್ಲ ಅನೇಕ ಕಾರ್ಯಕಲಾಪಗಳು ಸಮರ್ಪಕವಾಗಿ ನಡೆಯಲಾರವು. ದೇಶ, ಕಾಲ ಮತ್ತು ವಿದ್ಯಮಾನಗಳಿಗನುಸಾರವಾಗಿ ಸಂಪ್ರದಾಯಗಳು (traditions) ಏರ್ಪಟ್ಟು ಪಾಕವಿಳಿಯುತ್ತವೆ. ಪ್ರಗತಿ ಸಾಧನೆ ಮಾಡಿರುವ ಯಾವ ದೇಶವನ್ನೇ ನಾವು ಪರಿಗಣಿಸಿದರೂ, ಅದರ ಶ್ರೇಷ್ಠ ಸಂಪ್ರದಾಯಗಳೇ ಅದರ ಉನ್ನತಿಗೆ ಮೂಲಾಧಾರವೆಂದು ವ್ಯಕ್ತವಾಗುತ್ತದೆ. ಒಂದು ದೇಶದ ಸಂಪ್ರದಾಯಗಳೆಲ್ಲ ಮತ್ತೊಂದು ದೇಶದ ಉನ್ನತಿ ಸಾಧನೆಗೆ ಸಹಾಯಕವಾಗಿರಬೇಕಾದುದೂ ಇಲ್ಲ. ಕನ್ನಡ ನಾಡಿನ ಸಂಪ್ರದಾಯಗಳೂ, ಪದ್ಧತಿಗಳೂ ಅಸಂಖ್ಯಾತವಾಗಿವೆ; ನಾನಾ ಕೋಮುಗಳವರ ಮತ್ತು ನಾನಾ ಮತಗಳವರ ಸಂಪ್ರದಾಯಗಳೂ ಭಿನ್ನ ಭಿನ್ನವಾಗಿವೆ. ಜಾತಕರ್ಮ, ವಿವಾಹ, ಅಂತ್ಯಕ್ರಿಯೆಗಳು ಮುಂತಾದವುಗಳ ಸಂಬಂಧವಾಗಿ

ಏರ್ಪಟ್ಟಿರುವ ಸಂಪ್ರದಾಯಗಳ ಮತ್ತು ಪದ್ಧತಿಗಳ ವಿಚಾರದಲ್ಲಿ ನಾನಾ ಕೋಮು ಗಳಿಗೂ ಇರುವ ಸಾಮ್ಯ ವೈಷಮ್ಯಗಳನ್ನೂ, ಜನ ಜೀವನದ ನಾನಾ ಕ್ಷೇತ್ರಗಳಲ್ಲಿ ಏರ್ಪಟ್ಟಿರುವ ಇತರ ಸಂಪ್ರದಾಯಗಳನ್ನೂ ಪದ್ಧತಿಗಳನ್ನೂ ಸಂಕ್ಷೇಪವಾಗಿ ಸೂಚಿಸಿದರೂ ಒಂದು ದೊಡ್ಡ ಗ್ರಂಥವೇ ಆಗುತ್ತದೆ. ಹಬ್ಬಗಳು, ವಿನೋದಗಳು, ಉಡಿಗೆ ತೊಡಿಗೆಗಳು ಮುಂತಾದವುಗಳಿಗೆ ಸಂಬಂಧಪಟ್ಟ ಪದ್ಧತಿಗಳನ್ನು ಒಂದು ಲೇಖನದಲ್ಲಿ ವಿವರಿಸುವುದು ಸಾಧ್ಯವೇ ಇಲ್ಲ. ಚಿರಕಾಲ ನಡೆದು ಬಂದ ಪದ್ಧತಿ ಗಳಲ್ಲಿ ಒಳ್ಳೆಯವೂ ಉಂಟು ; ಕೆಟ್ಟವೂ ಉಂಟು. ಬಾಲ್ಯವಿವಾಹ, ಅಸ್ಪೃಶ್ಯತೆ, ಸಹಗಮನ, ಮದ್ಯಪಾನ, ಮುಂತಾದವು ಕೆಟ್ಟ ಪದ್ಧತಿಗಳಿಗೆ ಕೆಲವು ನಿದರ್ಶನ ಗಳು. ಅವುಗಳಲ್ಲಿ ಕೆಲವು ಆಚರಣೆಯಲ್ಲಿಲ್ಲದೆ ತಪ್ಪಿಹೋಗಿರುವುದೂ, ಮತ್ತೆ ಕೆಲವು ಆಚರಣೆಯಲ್ಲಿಲ್ಲದೆ ತಪ್ಪಿಹೋಗುತ್ತಿರುವುದೂ ಶುಭ ಸೂಚನೆಗಳು.

ಕರ್ಣಾಟಕದ ಅಸಂಖ್ಯಾತ ಸಂಪ್ರದಾಯಗಳಲ್ಲಿ ಪ್ರಾಚೀನ ಕಾಲದಿಂದಲೂ ದೇಶೋನ್ನತಿ ಸಾಧನೆಗೆ ಕಾರಣವಾದ ಕೆಲವು ಉದಾತ್ತ ಸಂಪ್ರದಾಯಗಳೂ ಸೇರಿವೆ. ನಮ್ಮ ಪೂರ್ವಜರು ಅವುಗಳನ್ನು ಏರ್ಪಡಿಸಿಕೊಂಡು ಬಹುಕಾಲ ಅನುಸರಿಸಿದ ಫಲವಾಗಿ ಕನ್ನಡಿಗರ ಹಿರಿಮೆಯು ಹೆಚ್ಚಲು ಕಾರಣವಾಯಿತು ; ಸ್ವದೇಶ ವಿದೇಶಗಳಲ್ಲಿ ಕನ್ನಡಿಗರ ಕೀರ್ತಿಯು ಹಬ್ಬಿತು. ಅಂಥ ಉದಾತ್ತ ಸಂಪ್ರದಾಯಗಳಲ್ಲಿ ಕೆಲವು ನಡೆದುಬರುತ್ತಿದ್ದುದೇ ಇಂದು ತಪ್ಪಿಹೋಗಿದೆ. ಅದರಿಂದ ರಾಷ್ಟ್ರಶೀಲಕ್ಕೇ ಇಂದು ಧಕ್ಕೆಯುಂಟಾಗಿದೆ. ಇದಕ್ಕೆ ಎರಡು ನಿದರ್ಶನಗಳನ್ನು ಇಲ್ಲಿ ಸೂಚಿಸಿದರೆ ಅಪ್ರಕೃತವಾಗಲಾರದು. ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ಅನರ್ಘ್ಯವಾದ ಆಭರಣಗಳಿಂದ ಅಲಂಕೃತಳಾದ ಮತ್ತು ಸುಂದರಿಯಾದ ಯುವತಿಯು ಎಲ್ಲಿಂದ ಎಲ್ಲಿಗೆ ಬೇಕಾದರೂ ಯಾವ ವಿಪತ್ತಿಗೂ ಗುರಿಯಾಗದೆ ಒಬ್ಬಳೇ ಪ್ರಯಾಣ ಮಾಡಬಹುದಾಗಿದ್ದಿತೆಂದೂ, ಅದು ಭಾರತದಲ್ಲಿ ಮಾತ್ರವೇ ಕಂಡುಬರುತ್ತಿದ್ದ ವೈಶಿಷ್ಟ್ಯವೆಂದೂ ವಿದೇಶೀಯ ಪ್ರವಾಸಿಗಳು ಹೇಳಿದ್ದಾರೆ. ವಿಜಯನಗರದಲ್ಲಿ ನವರತ್ನಗಳನ್ನು ಬಂಗಾರದ ತಟ್ಟೆಗಳಲ್ಲಿಟ್ಟು ರತ್ನಪಡಿ ಅಂಗಡಿಗಳಲ್ಲಿ ಮಾರುತ್ತಿದ್ದರೆಂದೂ, ಹಾಗೆ ತೆರೆದು ಇಟ್ಟಿದ್ದರೂ ಅಲ್ಲಿಗೆ ವ್ಯಾಪಾರಕ್ಕಾಗಿ ಬಂದವರಾಗಲಿ ಇತರರಾಗಲಿ ಅವುಗಳನ್ನು ಅಪಹರಿಸುತ್ತಿರಲಿಲ್ಲ ವೆಂದೂ ಪ್ರವಾಸಿಗಳು ಹೇಳಿದ್ದಾರೆ. ಕನ್ನಡಿಗರು ಧರ್ಮದಿಂದಲೂ ಪ್ರಾಮಾಣಿ ಕತೆಯಿಂದಲೂ ವರ್ತಿಸುವ ಉದಾತ್ತ ಸಂಪ್ರದಾಯವನ್ನು ಅನುಸರಿಸುತ್ತಿದ್ದುದೇ ಅದಕ್ಕೆ ಕಾರಣ. ಇಂದು ಆ ರೀತಿ ನಡೆಯುವುದು ಸಾಧ್ಯವಾದೀತೆ? ಆ ಉದಾತ್ತ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿ ಅನುಸರಿಸಿದರೆ, ಹಿಂದಿನವರು ನಡೆಯುತ್ತಿದ್ದಂತೆಯೇ ಇಂದಿನವರೂ ನಡೆದು, ಅವರಂತೆಯೇ ಇಡೀ ಪ್ರಪಂಚವನ್ನು ಈಗಲೂ ಬೆರಗುಗೊಳಿಸಬಹುದು. ಆಹಾರ ಸೌಕರ್ಯದಿಂದ ಹಿಡಿದು ಗಹನವಾದ ದಾರ್ಶನಿಕ ತತ್ತ್ವಗಳ ನಿರೂಪಣೆಯವರೆಗೆ ಜನಜೀವನಕ್ಕೆ ಸಂಬಂಧಪಟ್ಟ ಸಮಸ್ತ ಕಾರ್ಯಕಲಾಪಗಳಲ್ಲೂ ಕನ್ನಡಿಗರು ತಮ್ಮದೇ ಆದ ಒಂದು ವೈಶಿಷ್ಟ್ಯವನ್ನೂ, ಸೊಗಸನ್ನೂ, ಅಚ್ಚುಕಟ್ಟನ್ನೂ ಸಾಧಿಸಿದ್ದರು. ಯಾವ ಕೆಲಸವನ್ನೇ ಮಾಡಿದರೂ ಅತ್ಯುತ್ತಮ ರೀತಿಯಲ್ಲಿ ಮಾಡಿ – ಇಂದಿಗೂ

ಪ್ರಪಂಚವನ್ನು ಮುಗ್ಧಗೊಳಿಸುವ ಕಲಾಕೃತಿಗಳನ್ನು ಸಿದ್ಧಗೊಳಿಸಿ — ಮೇಲ್ಮೆಯನ್ನು ಪಡೆದರು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಕನ್ನಡಿಗರು ತಮ್ಮ "ಕನ್ನಡತನ"ವನ್ನು ಅಚ್ಚಳಿಯದಂತೆ ಕಾಪಾಡಿಕೊಂಡಿದ್ದರು. ಇದರಿಂದ ಕನ್ನಡಿಗರ ಕಾರ್ಯಸಿದ್ಧಿಯ ರೀತಿಯು ಇತರರಿಗೂ ಅಚ್ಚುಮೆಚ್ಚಾಯಿತು.

ಕರ್ಣಾಟಕದ ಸಂಪ್ರದಾಯಗಳನ್ನೆಲ್ಲ ಸಮಗ್ರವಾಗಿ ಒಂದು ಲೇಖನದಲ್ಲಿ ವಿಚಾರಮಾಡುವುದು ತೀರ ಅಸಾಧ್ಯವೇ ಸರಿ. ಆದಕಾರಣ, ಕೇವಲ ಪ್ರಾಚೀನ ಕಾಲದಿಂದಲೂ ನಡೆದುಬಂದ ಕರ್ಣಾಟಕದ ಉದಾತ್ತ ಸಂಪ್ರದಾಯಗಳಲ್ಲಿ ಈಗಲೂ ನಾವು ಆಸ್ಥೆಯಿಂದ ಅನುಸರಿಸಿ ಅಮಿತವಾಗಿ ಪ್ರಯೋಜನ ಹೊಂದಬಹುದಾದ ಮತ್ತು ದೇಶೋನ್ನತಿ ಸಾಧನೆ ಮಾಡಬಹುದಾದ ಕೆಲವನ್ನು ಮಾತ್ರವೇ ಇಲ್ಲಿ ಸಂಕ್ಷೇಪವಾಗಿ ಸೂಚಿಸಲಾಗುವುದು.

## (ಅ) ಆಹಾರ ಸೌಕರ್ಯ

ಮೊಟ್ಟ ಮೊದಲನೆಯದಾಗಿ, ಆಹಾರ ಸೌಕರ್ಯ ಸಂಬಂಧವಾದ ಕರ್ಣಾಟಕ ಸಂಪ್ರದಾಯದ ವಿಚಾರ. ಪ್ರಾಣಿಮಾತ್ರಕ್ಕೇ ಅತ್ಯವಶ್ಯವಾಗಿ ಆಹಾರ ಸೌಕರ್ಯವು ಬೇಕು. ಮನುಷ್ಯರ ವಿಚಾರವೂ ಅಷ್ಟೆ. ಮೊದಲು ಆಹಾರ ಸೌಕರ್ಯ, ಆ ಬಳಿಕ ಉಳಿದ ವಿಷಯಗಳು. ಕಾವ್ಯಗಳಲ್ಲಿರುವ ಭಕ್ಷ್ಯಭೋಜ್ಯಗಳ ವರ್ಣನೆಗಳನ್ನೋದಿದರೆ, ಕನ್ನಡ ನಾಡಿನಲ್ಲಿ ಹಿಂದೆ ಎಷ್ಟು ಬಗೆಗಳ ಉಣಿಸುಗಳಿದ್ದು ಹಿಂದಿನವರು ಎಷ್ಟುಮಟ್ಟಿಗೆ ಊಟದ ಸೌಖ್ಯವನ್ನನುಭವಿಸುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ವರ್ಣನೆಗಳಲ್ಲಿ ಕೂಡ ಎಷ್ಟು ಉತ್ಸಾಹದಿಂದ ಎಂಥ ಉಪಮಾನಗಳು ! ಕಡುಬುಗಳು "ಅಮೃತರಸವಳವಟ್ಟು | ವೃತ್ತದ ಪಿಂಡವಾದುದೊ ಚಂದ್ರಿಕೆಯೆ ಬಂದು | ಘಟ್ಟಿಗೊಂಡಿತೊ . . . ." ಎನ್ನುವಂತಿದ್ದುವಂತೆ ! ನಮ್ಮ ಪೂರ್ವಿಕರಾದ ಕನ್ನಡಿಗರು ಆಹಾರ ಸಮೃದ್ಧಿಯಿರುವಂತೆ ಮಾಡುವ ವಿಚಾರಕ್ಕೆ ಗಮನಕೊಟ್ಟು ದೊಡ್ಡ ಸಂಪ್ರದಾಯವನ್ನೇರ್ಪಡಿಸಿದ್ದರು. ಆಹಾರ ವಸ್ತುಗಳನ್ನು ಭಾರಿ ಪ್ರಮಾಣಗಳಲ್ಲಿ ಬೆಳೆಯುತ್ತಿದ್ದುದು ಮಾತ್ರವೇ ಅಲ್ಲದೆ, ಅವುಗಳನ್ನು ಅತ್ಯಂತ ಉತ್ಕೃಷ್ಟವಾಗಿಯೂ ಕನ್ನಡಿಗರು ಬೆಳೆಯುತ್ತಿದ್ದರು. ಯುದ್ಧಕಾಲದಲ್ಲಿ ಕೂಡ, ವ್ಯವಸಾಯಗಾರರು ವ್ಯವಸಾಯ ಕಾರ್ಯಗಳನ್ನು ನೆರವೇರಿಸಲು ಯಾವ ಅಡ್ಡಿ ಆತಂಕಗಳೂ ಇರಲಿಲ್ಲ. ಪಂಪ ಮಹಾಕವಿಯು ಬನವಾಸಿ ಪ್ರಾಂತದ ಬೆಳೆಯ ಸಿರಿಯನ್ನು ವರ್ಣಿಸುವಲ್ಲಿ, "ಮಿಡಿದೊಡೆ ತನಿಗರ್ಬು ರಸಂ | ಬಿಡುವುವು . . ." ಎಂದು ಬರೆದಿದ್ದಾನೆ. ಒಂದು ವೇಳೆ ಇದು ಅತಿಶಯೋಕ್ತಿಯೆಂದು ತೋರಬಹುದಾದರೂ, ಮಿಡಿದರೆ ರಸವು ಬರುವ ಹಾಗೆ ತೋರುವಷ್ಟು ಸೊಂಪಾಗಿ ಬೆಳೆದಿದ್ದ ಕಬ್ಬಿನ ಜಲ್ಲೆಗಳನ್ನಾದರೂ ನೋಡಿ ಆತನು ಹಾಗೆ ವರ್ಣಿಸಿರಬೇಕೆಂದು ಧಾರಾಳವಾಗಿ ಹೇಳಬಹುದು. ಅರಳಿದ ಒಂದು ಹೂವಿನ ವಾಸನೆಯಿಂದಲೇ ದುಂಬಿಗಳು "ಮುಖಂಗೆಡು"ತ್ತಿದ್ದುವೆಂದೂ, ಒಂದು ಹಣ್ಣಿನ ರಸವನ್ನು ಕುಡಿಯಲಾರದೆ ತೃಪ್ತಿಹೊಂದಿ



ಟೀಪುವಿನ ದರಿಯಾ ದೌಲತ್ ಅರಮನೆಯ ಒಳಭಾಗ, ಶ್ರೀರಂಗಪಟ್ಟಣ

ಗಿಳಿಗಳು ಪಾಡುಪಡುತ್ತಿದ್ದುವೆಂದೂ ಕವಿಯು ವರ್ಣಿಸಿದ್ದಾನೆ. ಇದು ಪಂಪನ ಕಲ್ಪನೆಯಲ್ಲ. ಕನ್ನಡನಾಡಿನಲ್ಲಿ ಫಲಪುಷ್ಪಗಳೂ, ನಾನಾ ಆಹಾರಧಾನ್ಯಗಳೂ, ಸಮೃದ್ಧವಾಗಿಯೂ, ಉತ್ಕೃಷ್ಟವಾಗಿಯೂ ಇದ್ದುವು. ವಿಜಯನಗರದ ಚಕ್ರವರ್ತಿಗಳ ಕಾಲದಲ್ಲಂತೂ ಅದೇ ಒಂದು ವೈಶಿಷ್ಟ್ಯ. ವಿದೇಶಗಳಿಂದ ಬಂದು ವಿಸ್ಮಿತರಾದ ಪ್ರವಾಸಿಗಳು ತಾವು ಕಂಡುದನ್ನು ಬರೆದಿಟ್ಟಿದ್ದಾರೆ. ವಿಜಯ ನಗರದಲ್ಲಿ ಮಾರುತ್ತಿದ್ದ ನಿಂಬೆಯ ಹಣ್ಣುಗಳು ತಮ್ಮ ದೇಶದ ಕಿತ್ತಲೆಯ ಹಣ್ಣು ಗಳಷ್ಟು ಗಾತ್ರವಾಗಿದ್ದುವೆಂದೂ, ಚಪ್ಪರ ದ್ರಾಕ್ಷಿಯ ಹಣ್ಣುಗಳ ಗೊಂಚಲುಗಳು ಒಂದು ಮೊಳ ಉದ್ದವಾಗಿದ್ದುವೆಂದೂ, ಬಗೆ ಬಗೆಯ ಗುಲಾಬಿ ಹೂಗಳು ಬೊಗಸೆ ಗಿಂತ ಅಗಲವಾಗಿ ವರ್ಣಿಸಲಳವಲ್ಲದಷ್ಟು ಸುವಾಸನೆಯಿಂದ ಕೂಡಿದ್ದುವೆಂದೂ, ಅಂಗಡಿಗಳಲ್ಲಿ ಅವುಗಳು ರಾಶಿ ಬಿದ್ದಿದ್ದುವೆಂದೂ, ಅದನ್ನು ನೋಡಿದರೆ ಯಾವುದೋ ಪಿಶಾಚಿಯು ವಿಜಯನಗರಕ್ಕೆ ಅವುಗಳನ್ನೊದಗಿಸುತ್ತಿದ್ದಂತೆ ತೋರುತ್ತಿದ್ದಿತೇ ಹೊರತು ಮನುಷ್ಯರು ಅವುಗಳನ್ನು ಬೆಳೆದು ಒದಗಿಸುತ್ತಿದ್ದುದನ್ನು ನಂಬುವುದೇ ಕಷ್ಟವಾಗಿದ್ದಿತೆಂದೂ, ವಿದೇಶಿಯ ಪ್ರವಾಸಿಗಳು ಬರೆದಿಟ್ಟಿದ್ದಾರೆ. ಹಿಂದೆ ಕನ್ನಡಿಗರು ಎಷ್ಟು ಶ್ರದ್ಧೆಯಿಂದ ವ್ಯವಸಾಯ ಮಾಡುತ್ತಿದ್ದರೆಂಬುದೂ, ಎಷ್ಟು ಉತ್ಕೃಷ್ಟವಾದ ರೀತಿಯಲ್ಲಿ ಎಷ್ಟು ಭಾರಿ ಪ್ರಮಾಣದಲ್ಲಿ ಬೆಳೆಗಳನ್ನು ತೆಗೆಯು ತ್ತಿದ್ದರೆಂಬುದೂ, ಅದಕ್ಕಾಗಿ ಎಷ್ಟು ಉತ್ತಮವಾದ ಸಂಪ್ರದಾಯವನ್ನೇರ್ಪಡಿಸಿ ಕೊಂಡು ಅನುಸರಿಸುತ್ತಿದ್ದರೆಂಬುದೂ, ಇದರಿಂದ ವ್ಯಕ್ತವಾಗುತ್ತವೆ. ಇದೇ ಸಂಪ್ರದಾಯವನ್ನು ಈಗಲೂ ಅನುಸರಿಸಿ ಉತ್ಕೃಷ್ಟವಾದ ಬೆಳೆಗಳನ್ನು ತೆಗೆಯ ಬಹುದಾಗಿದೆ.

ತಮ್ಮ ಮನೆಯ ಮುಂದೆ ಮತ್ತು ಹಿತ್ತಿಲಿನಲ್ಲಿ ವ್ಯವಸಾಯ ಮಾಡಲು ಯೋಗ್ಯವಾದ ಅಂಗೈಯಗಲ ಭೂಮಿಯನ್ನು ಕೂಡ ಪಾಳು ಬಿಡದೆ ಫಲಪುಷ್ಪ ಗಳನ್ನೂ ಕಾಯಿ ಪಲ್ಯಗಳನ್ನೂ ಬೆಳೆಯಬೇಕೆಂದು ನಿಯಮಗಳು ಏರ್ಪಟ್ಟಿದ್ದುವು. ಈಗ ಭಾರತ ಸರ್ಕಾರದವರೂ, ಪ್ರಾಂತ ಸರ್ಕಾರಗಳವರೂ ವ್ಯವಸಾಯದ ಅಭಿವೃದ್ಧಿಗಾಗಿ ಯಥೇಷ್ಟವಾಗಿ ಸೌಕರ್ಯಗಳನ್ನೇನೊ ಒದಗಿಸಿದ್ದಾರೆ. ಆದರೆ, ಜನಗಳು ಮಾತ್ರ ಅವುಗಳಿಂದ ಎಷ್ಟು ಪ್ರಯೋಜನ ಪಡೆದು ಎಷ್ಟು ಪುಷ್ಕಳವಾಗಿ ಬೆಳೆಗಳನ್ನು ತೆಗೆಯಬಹುದೋ ಅಷ್ಟುಮಟ್ಟಿಗೆ ಪ್ರಯೋಜನ ಪಡೆದು ಅಷ್ಟು ಪುಷ್ಕಳವಾಗಿ ಬೆಳೆಗಳನ್ನು ತೆಗೆಯುತ್ತಿಲ್ಲ. ವ್ಯವಸಾಯದ ವಿಷಯದಲ್ಲಿ ಹಿಂದಿನ ಉತ್ತಮ ಸಂಪ್ರದಾಯವನ್ನು ನಮ್ಮ ಪೂರ್ವಿಕರಷ್ಟು ಮಟ್ಟಿಗೆ ಇಂದಿನವರು ಶ್ರದ್ಧೆಯಿಂದ ಅನುಸರಿಸುತ್ತಿಲ್ಲ. ಕನ್ನಡಿಗರು ಈ ಕೊರತೆಯನ್ನು ಹೋಗಲಾಡಿಸಿ ಆ ಸಂಪ್ರದಾಯವನ್ನು ತಮ್ಮ ಪೂರ್ವಿಕರಂತೆ ಶ್ರದ್ಧೆಯಿಂದ ಅನುಸರಿಸಿದರೆ, ಕನ್ನಡ ನಾಡಿನ ಬಳಕೆಗೆ ಆವಶ್ಯವಾದಷ್ಟಕ್ಕಿಂತಲೂ ಹೆಚ್ಚಾಗಿ ನಾನಾ ವ್ಯವಸಾಯದ ಉತ್ಪನ್ನಗಳನ್ನು ಬೆಳೆದು ಹೊರ ಪ್ರಾಂತಗಳಿಗೂ ಅವುಗಳನ್ನು ಒದಗಿಸ ಬಹುದು ; ಬಡವರಿಗೆ ಅನುಕೂಲವಾಗುವಂತೆ ಅವುಗಳನ್ನು ಅಗ್ಗದ ಬೆಲೆಗೆ ಮಾರಬಹುದು.

## (ಆ) ದೇಶಭಕ್ತಿ ಮತ್ತು ಅಂತರರಾಷ್ಟ್ರೀಯ ಬಾಂಧವ್ಯ

ಭಾರತದ ಸ್ವಾತಂತ್ರ್ಯಸಾಧನೆಯ ಹೋರಾಟ ನಡೆದಾಗ್ಗೆ ಕನ್ನಡಿಗರು ತನು ಮನಧನಗಳನ್ನರ್ಪಿಸಿ ಮಹಾತ್ಮಾ ಗಾಂಧಿಯವರ ಅಧಿನಾಯಕತ್ವದಲ್ಲಿ ತೋರಿಸಿದ ದೇಶಭಕ್ತಿಯು ಭಾರತದ ಮತ್ತಾವ ಪ್ರಾಂತದವರು ತೋರಿಸಿದ ದೇಶಭಕ್ತಿಗೂ ಕಡಮೆಯಾಗಿರಲಿಲ್ಲ. ಇದು ಪ್ರಾಚೀನ ಕಾಲದಿಂದಲೂ ಕನ್ನಡಿಗರು ದೇಶಾಭಿಮಾನವನ್ನು ವೃದ್ಧಿಪಡಿಸಿಕೊಂಡು ಬಂದ ದೊಡ್ಡ ಸಂಪ್ರದಾಯದ ಫಲವೆಂದು ಹೇಳಿದರೆ ತಪ್ಪಾಗಲಾರದು. ಕನ್ನಡಿಗರ ದೇಶಭಕ್ತಿಯನ್ನು ಕುರಿತು ಬನವಾಸಿ, ಬಾದಾಮಿ, ತಲಕಾಡು, ಶ್ರವಣಬೆಳಗೊಳ, ಬೇಲೂರು, ಹಂಪೆ ಮುಂತಾದ ಸ್ಥಳಗಳಲ್ಲಿ ಪ್ರತಿಯೊಂದು ಕಲ್ಲುಕೂಡ ಸಾಕ್ಷ್ಯಹೇಳುವಂತೆ ತೋರುತ್ತಿರುವಲ್ಲಿ ಅದನ್ನು ವರ್ಣಿಸಬೇಕಾದ ಅಗತ್ಯವೇ ಇಲ್ಲ. ಲೇಖಕರು, ಕಲೆಗಾರರು, ಕವಿಗಳು, ವೀರರು, ರಾಜವಂಶೀಯರು, ಕುಶಲವೃತ್ತಿಗಳವರು, ಕಸಬು ಕೈವಾಡಗಳವರು, ಆಡಳಿತಗಾರರು, ವೈದ್ಯರೇ ಮುಂತಾದ ವೃತ್ತಿಗಳವರು ಮುಂತಾದವರಲ್ಲಿ ಅನೇಕರು ದೇಶಾಭಿಮಾನದಿಂದ ಶ್ರಮಿಸಿಯೂ ಶ್ರಮಿಸುತ್ತಲೂ ಇದ್ದಾರೆ. ಪಂಪ ಮಹಾಕವಿಗೆ ಬನವಾಸಿಯಲ್ಲೆಷ್ಟು ಭಕ್ತಿ! ಬನವಾಸಿಯಲ್ಲಿ ಹುಟ್ಟುವುದಾದರೆ, ಮನುಷ್ಯ ಜನ್ಮವೂ ಬೇಕಿಲ್ಲ; ಮರಿದುಂಬಿಯಾಗಿ ಅಥವಾ ಕೋಗಿಲೆಯಾಗಿ ಹುಟ್ಟಿದರೂ ಸಾಕು; ಅದೇ ದೊಡ್ಡ ಪುಣ್ಯ—ಎಂದಿದ್ದಾನೆ ಆತ. ಅರ್ಜುನನು ಬನವಾಸಿಗೆ ಬಂದು ಅಲ್ಲಿಯ ಸೊಬಗನ್ನೂ ಸುಖಸಂತೋಷಗಳನ್ನೂ ನೋಡಿಕೊಂಡು ಹೋಗಿದ್ದಂತೆಯೂ, ಅವನು ಬನವಾಸಿ ದೇಶವನ್ನು ತನ್ನ ಮನಸ್ಸು ನೆನೆಯುವಂತೆ ಹೇಳಿಕೊಂಡಂತೆಯೂ ಬರೆದು ಆತ ತನ್ನ ದೇಶಭಕ್ತಿಯನ್ನು ರಮಣೀಯವಾಗಿ ವ್ಯಕ್ತಗೊಳಿಸಿದ್ದಾನೆ.* ಹರೀಶ್ವರ ಕವಿಯು ಶಿವನ ತಪಸ್ಸು ಹಿಮಾಚಲದಲ್ಲಿ ನಡೆಯಿತೆಂದು ಹೇಳದೆ ಹಂಪೆಯ ಬಳಿಯ ಹೇಮಕೂಟದಲ್ಲಿ ನಡೆಯಿತೆಂದು ವರ್ಣಿಸಿ ತನ್ನ ದೇಶಾಭಿಮಾನವನ್ನು ತೋರಿಸಿಕೊಂಡಿದ್ದಾನೆ. ರತ್ನಾಕರವರ್ಣಿ ಮುಂತಾದ ಕವಿಗಳು ಕನ್ನಡನಾಡಿನಲ್ಲಿ, ಕನ್ನಡ ನುಡಿಯಲ್ಲಿ ಮತ್ತು ಕನ್ನಡ ಜನರಲ್ಲಿ ತಮಗಿದ್ದ ಅಭಿಮಾನವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ.

ದೇಶಭಕ್ತಿಯೊಂದೇ ಇದ್ದು, ಅಂತರರಾಷ್ಟ್ರೀಯ ಬಾಂಧವ್ಯದ ಕಡೆಗೇ ಮನಸ್ಸುಕೊಡದಿದ್ದರೆ ಪ್ರಪಂಚದ ಶಾಂತಿ ಸ್ಥಾಪನೆಗೆ ಅನುಕೂಲವಾಗಲಾರದು. ಕನ್ನಡಿಗರು ಮೊದಲಿನಿಂದಲೂ ಅಂತರರಾಷ್ಟ್ರೀಯ ಬಾಂಧವ್ಯ ಸಂಪ್ರದಾಯವನ್ನು ನಡೆಯಿಸಿಕೊಂಡು ಬಂದುದು ನಿಜವಾಗಿಯೂ ಶ್ಲಾಘ್ಯವಾಗಿದೆ. ಚಾಲುಕ್ಯರ ಕಾಲದಲ್ಲಿ ಇತರ ದೇಶಗಳೊಡನೆ ಮಧುರ ಬಾಂಧವ್ಯವನ್ನು ಬೆಳೆಯಿಸುವುದರಲ್ಲಿ

*ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿ ಗೇಳ್ದೊಡಮಿಂಪ ನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆ ಗಂಡೊಡಮಾದ ಕೆಂದಲಂ |
ಪಂ ಕೆಳೆಗೊಂಡೊಡಂ ಮದುಮಹೋತ್ಸವ ಮಾದೊಡಮೇನನೆಂಬೆ ನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ ||

ಪ್ರಭುಗಳೂ ಪ್ರಜೆಗಳೂ ತೀವ್ರಾಸಕ್ತಿಯನ್ನು ತೋರಿಸಿದರು. ಚಾಲುಕ್ಯರ ಇಮ್ಮಡಿ ಪುಲಕೇಶಿಯು ರಾಜ್ಯವನ್ನಾಳುತ್ತಿದ್ದಾಗ ಅವನ ರಾಜಧಾನಿಗೆ ಬಂದ ಯುವಾ಼ ಚ್ವಾಂಗ್ ಎಂಬ ಚೀಣಾರಾಯಭಾರಿಯನ್ನು ಕನ್ನಡಿಗರು ಸ್ವಾಗತಿಸಿ ಅವನಲ್ಲಿ ಆದರ ವನ್ನು ತೋರಿಸಿದರು. ಪುಲಕೇಶಿಯು ಪಾರ್ಸಿಸ್ತಾನದ (Persia) ಇಮ್ಮಡಿ ಖುಸ್ರು ಚಕ್ರವರ್ತಿಯ ಬಳಿಗೆ ತನ್ನ ರಾಯಭಾರಿಯನ್ನು ಕಳುಹಿಸಿ ಆತನೊಡನೆ ಸ್ನೇಹವನ್ನು ಬೆಳೆಯಿಸಿದನು. ಇಮ್ಮಡಿ ಪುಲಿಕೇಶಿಯು ಪಾರ್ಸಿಸ್ತಾನದ ಚಕ್ರವರ್ತಿಯೊಡನೆ ಮಾತ್ರವೇ ಅಲ್ಲದೆ ಇತರ ವಿದೇಶೀಯ ಪ್ರಭುಗಳೊಡನೆ ಕೂಡ ಮಧುರ ಬಾಂಧವ್ಯ ವನ್ನು ಕುದುರಿಸಿದನು. ಆಗ್ಗೆ ವಿದೇಶೀಯರಿಗೆ ಕನ್ನಡಿಗರಲ್ಲಿ ವಿಶೇಷವಾಗಿ ಆದರ ಗೌರವಗಳಿದ್ದವು. ಪುಲಿಕೇಶಿಯನ್ನು ಪಾರ್ಸಿಸ್ತಾನದ ರಾಯಭಾರಿಯು ಸಂದರ್ಶಿಸಿ ದಾಗಿನ ಸನ್ನಿವೇಶವು ಅಜಂತದಲ್ಲಿ ಚಿತ್ರಿತವಾಗಿದೆ. ಪುಲಿಕೇಶಿಯ ಕಾಲದಲ್ಲೂ, ಅನಂತರವೂ ಕನ್ನಡಿಗರು ವಿದೇಶಗಳೊಡನೆ ಸಂಬಂಧವನ್ನು ಕಲ್ಪಿಸಿಕೊಂಡು ಹೇರಳವಾಗಿ ವ್ಯಾಪಾರಮಾಡುತ್ತಿದ್ದರು. ವಿಜಯನಗರ ಕಾಲದಲ್ಲಂತೂ, ಅಂತರ ರಾಷ್ಟ್ರೀಯ ಬಾಂಧವ್ಯ ಸಂಪ್ರದಾಯಕ್ಕೆ ಮತ್ತಷ್ಟು ಕಳೆಯೇರಿತು. ಪೆಗು, ಚೀನಾ, ಪೋರ್ಚುಗಲ್, ತೆನಾಸಿರಿಂ, ಮಲಯ, ಸುಮಾತ್ರ – ಮುಂತಾದವು ಗಳೊಡನೆ ಕನ್ನಡಿಗರು ವ್ಯಾಪಾರಮಾಡುತ್ತಿದ್ದರು. ಮಲಯದಲ್ಲಿ ಇಂದಿಗೂ ಕೃಷ್ಣದೇವರಾಯನ ವಿಚಾರವಾದ ಐತಿಹ್ಯಗಳಿವೆಯಂತೆ. ವಿದೇಶಿಯ ರಾಯಭಾರಿ ಗಳಲ್ಲಿ ಬಹಳ ವಿನಯದಿಂದ ವರ್ತಿಸಿ, ಅವರನ್ನು ಕನ್ನಡಿಗರು ವಿಶೇಷ ಆದರದಿಂದ ಸತ್ಕರಿಸುತ್ತಿದ್ದರು. ಪ್ರಭುಗಳಂತೂ ಅವರಿಗೆ ಕಿಂಕಾಪಿನ ಖಿಲ್ಲತ್ತುಗಳನ್ನೂ ಉಂಗುರಗಳೇ ಮುಂತಾದ ಆಭರಣಗಳನ್ನೂ ಕೊಡುತ್ತಿದ್ದರು. ಕೃಷ್ಣದೇವ ರಾಯನು ವಿದೇಶೀಯ ರಾಯಭಾರಿಗಳನ್ನು ಆದರದಿಂದ ಬರಮಾಡಿಕೊಂಡು ಅವರು ತನ್ನ ನಾಡಿನವರೇ ಆಗಿದ್ದಂತೆ ಆದರ ತೋರಿ ಪ್ರೀತಿಯಿಂದ ಸತ್ಕರಿಸಿ, ಉಡುಗೊರೆಗಳನ್ನು ಕೊಟ್ಟು ಸನ್ಮಾನಿಸಿದನೆಂದು ವಿದೇಶೀಯರೇ ಬರೆದಿಟ್ಟಿದ್ದಾರೆ. ಕನ್ನಡನಾಡಿನ ಇತರ ಅನೇಕ ರಾಜರುಗಳೂ ಯೂರೋಪು ಖಂಡದ ನಾನಾ ದೇಶಗಳ ರಾಯಭಾರಿಗಳೊಡನೆ ಅದೇ ರೀತಿಯಲ್ಲಿ ವರ್ತಿಸಿದುದಕ್ಕೂ ವಿದೇಶೀಯರ ಲೇಖನಗಳ ಆಧಾರವೇ ಇದೆ. ಹೀಗೆ ಅಂತರ ರಾಷ್ಟ್ರೀಯ ಬಾಂಧವ್ಯವನ್ನು ಕುದುರಿಸುವ ಸಂಪ್ರದಾಯವನ್ನೇರ್ಪಡಿಸಿ ಅನುಸರಿಸಿದುದೂ, ಕನ್ನಡಿಗರ ದೂರ ದೃಷ್ಟಿಗೂ ಹೃದಯ ವೈಶಾಲ್ಯಕ್ಕೂ ನಿದರ್ಶನವಾಗಿದೆ. ವಿಮಾನ ಸಂಚಾರ ಮುಂತಾದ ಸೌಕರ್ಯಗಳಿಂದ ಈಗ ದೂರ ದೇಶವೆಂಬ ಭಾವನೆಯೇ ಮಾಯವಾಗುತ್ತಿರುವುದರಿಂದಲೂ, ಅಂತರ ರಾಷ್ಟ್ರೀಯ ಮಧುರ ಬಾಂಧವ್ಯ ವನ್ನು ಹೆಚ್ಚಿಸಿ ಪ್ರಪಂಚದಲ್ಲಿ ಸ್ಥಿರವಾಗಿ ಶಾಂತಿಯು ನೆಲಸಿ ಲೋಕ ಕಲ್ಯಾಣ ವಾಗುವಂತೆ ಮಾಡಬೇಕೆಂಬ ಮನೋಧರ್ಮವು ವೃದ್ಧಿಯಾಗುತ್ತಿರುವುದ ರಿಂದಲೂ, ನಮ್ಮ ಪೂರ್ವಿಕರು ಪ್ರಾರಂಭಿಸಿದ ಸಂಪ್ರದಾಯವನ್ನು ಮತ್ತಷ್ಟು ಆಸ್ಥೆಯಿಂದ ಅನುಸರಿಸುವುದು ಈಗಿನ ಪರಿಸ್ಥಿತಿಯ ದೆಸೆಯಿಂದ ಅತ್ಯಗತ್ಯ ವಾಗಿದೆ.

## (ಇ) ಶೌರ್ಯ ಸಾಹಸ ಪ್ರದರ್ಶನ

ಕನ್ನಡಿಗರು ವೃದ್ಧಿಪಡಿಸಿಕೊಂಡ ಶೌರ್ಯ ಸಾಹಸ ಪ್ರದರ್ಶನ ಸಂಪ್ರದಾಯವು ಅದ್ಭುತವಾದುದೆಂದು ಹೇಳಬಹುದು. ಭಾರತವು ವೀರರ ನಾಡು; ಕನ್ನಡ ನಾಡು ಅದರ ಒಂದು ಭಾಗ. ಕನ್ನಡಿಗರು ತಮ್ಮ ಶೌರ್ಯ ಸಾಹಸಗಳಿಂದ ರಾಜ್ಯಗಳನ್ನೂ ಸಾಮ್ರಾಜ್ಯಗಳನ್ನೂ ಕಟ್ಟಿ ಸಾವಿರದ ಐನೂರು ವರ್ಷಗಳಷ್ಟು ದೀರ್ಘಕಾಲ ಪ್ರಪಂಚವೇ ಮೆಚ್ಚುವಂತೆ ಆಡಳಿತ ನಡೆಯಿಸಿದರು. ಪಂಪ ಮಹಾಕವಿಯೂ, ಹದಿನಾಲ್ಕನೆಯ ಶತಮಾನದಲ್ಲಿ ವಿದ್ಯಾರಣ್ಯರ ಸೋದರರಾದ ಭೋಗನಾಥರೂ, ಸಾಯಣಾಚಾರ್ಯರೂ ಯುದ್ಧಮಾಡುತ್ತಿದ್ದರು. ಶೌರ್ಯ ಸಾಹಸ ಪ್ರದರ್ಶನ ಸಂಪ್ರದಾಯದ ಸ್ವರೂಪವೆಂಥದೆಂಬುದನ್ನು ಇದರಿಂದಲೇ ಗ್ರಹಿಸಬಹುದು. ರಾಜ ಮಹಾರಾಜರುಗಳ ಕಾಲವೇ ಮುಗಿದು ಹೋಯಿತು; ಯುದ್ಧವೇನೂ ಒದಗಲಾರದು; ಒಂದುವೇಳೆ ಒದಗಿದರೂ ಸೈನಿಕರ ದೇಹಬಲದಿಂದ ಈಗಿನ ಕಾಲದಲ್ಲಿ ಪ್ರಯೋಜನವಾಗುವಂತಿಲ್ಲ; ಆದಕಾರಣ, ಈ ಸಂಪ್ರದ್ರಾಯದಿಂದ ಈಗಿನ ಕಾಲಕ್ಕೇನೂ ಪ್ರಯೋಜನವಿಲ್ಲ—ಎಂದು ಮುಂತಾಗಿ ತೋರಬಹುದು. ಶೌರ್ಯ ಸಾಹಸ ಪ್ರದರ್ಶನವು ಉತ್ಸಾಹ ಶಕ್ತಿಯ ಒಂದು ರೂಪ. ಶಾಂತಿ ಕಾಲದ ಕಾರ್ಯಕಲಾಪಗಳಿಗೂ ಉತ್ಸಾಹಶಕ್ತಿಯು ಅತ್ಯಗತ್ಯವಾಗಿ ಬೇಕೇ ಬೇಕು. ಶೌರ್ಯ ಸಾಹಸಗಳನ್ನು ತೋರಿಸುವುದಕ್ಕಾಗಿ ಹಿಂದಿನವರು ದೇಹಪಟುತ್ವವನ್ನು ಹೆಚ್ಚಿಸಿಕೊಂಡಿದ್ದರೆ, ಇಂದಿನವರು ವ್ಯವಸಾಯ ಮುಂತಾದ ವೃತ್ತಿಗಳನ್ನು ನಡೆಯಿಸುವುದಕ್ಕಾಗಿ ಮತ್ತು ಆರೋಗದೃಢಕಾಯರಾಗಿರುವುದಕ್ಕಾಗಿ ದೇಹಪಟುತ್ವವನ್ನು ಹೆಚ್ಚಿಸಿಕೊಳ್ಳಬೇಕು. ರಾಜರ ಕಾಲವು ಮುಗಿದು ಹೋಯಿತಾದರೂ ರಾಜಧರ್ಮದ ಕಾಲವು ಮುಗಿದು ಹೋಗಿಲ್ಲ. ಪ್ರಜೆಗಳೇ ಇಂದಿನ ರಾಜರೆಂಬುದನ್ನು ಒತ್ತಿ ಹೇಳುವವರೆಲ್ಲರೂ, ರಾಜರ ಸ್ಥಾನಕ್ಕೆ ಬಂದಿರುವ ಪ್ರಜೆಗಳಲ್ಲಿ ರಾಜರಲ್ಲಿದ್ದ ಸದ್ಗುಣಗಳು ವೃದ್ಧಿಯಾಗಿ ಅವರು ರಾಜಧರ್ಮವನ್ನು ಪಾಲಿಸದೆ ಹೊದರೆ ಪ್ರಜಾ ಸರ್ಕಾರವೆಂದಿಗೂ ಯಶಸ್ವಿಯಾಗಲಾರದೆಂಬುದನ್ನು ಒಪ್ಪಲೇಬೇಕು. ರಾಜರುಗಳಲ್ಲಿ ಅಪಖ್ಯಾತಿಗೆ ಗುರಿಯಾದವರೂ ಉಂಟು. ಅವರು ರಾಜಧರ್ಮಕ್ಕೆ— ವಿಶೇಷವಾಗಿ ಸತ್ಯ, ಶೌರ್ಯ, ದಾನ ಮತ್ತು ಕ್ಷಮೆಗಳೆಂಬ ರಾಜಧರ್ಮದ ಮುಖ್ಯ ಧ್ಯೇಯಗಳಿಗೆ—ತಪ್ಪಿ ನಡೆದುದರಿಂದಲೇ ಅಪಖ್ಯಾತಿಗೆ ಗುರಿಯಾದುದು. ಎಲ್ಲಕ್ಕೂ ಮಿಗಿಲಾಗಿ, ಶೌರ್ಯ ಸಾಹಸಗಳನ್ನು ಹಿಂದೆ ರಾಜರುಗಳೂ ಪ್ರದರ್ಶಿಸಿ ಇಡೀ ಸಮಾಜದ ಹಿತವನ್ನು ಸಾಧಿಸಿದ ಕಾರಣ, ಅವರ ಉಪಕಾರವನ್ನು ಸ್ಮರಿಸುವುದು ನಮ್ಮ ಆದ್ಯಕರ್ತವ್ಯ. ಭಾರತದ ಸ್ವಾತಂತ್ರ್ಯ ಸಮರವನ್ನು ಮೊಟ್ಟಮೊದಲು ಹೂಡಿ ಪ್ರಾಣವನ್ನೊಪ್ಪಿಸಿದ ಹುತಾತ್ಮರ ಗುಂಪಿನಲ್ಲಿ ಝಾನ್ಸಿರಾಣಿ ಲಕ್ಷ್ಮೀಬಾಯಿಯೂ ಸೇರಿಲ್ಲವೆ? ಆಕೆಗಿಂತ ಹಿಂದೆ ಕಿತ್ತೂರಿನ ರಾಣಿ ಚನ್ನಮ್ಮ ತನ್ನ ಪ್ರಜೆಗಳ ಸ್ವಾತಂತ್ರ್ಯಕ್ಕಾಗಿ ಮತ್ತು ತನ್ನ ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷ್ ಅಧಿಕಾರಿಗಳೊಡನೆ ಹೋರಾಡಲಿಲ್ಲವೆ? ಗ್ರಾಮಗಳನ್ನು ಮುತ್ತಿದ ಸಮಾಜ ಕಂಟಕರೊಡನೆ ಕಾಳಗವಾಡಿ ಊರನ್ನುಳಿಸುವ ಪ್ರಯತ್ನದಲ್ಲಿ

ಮಡಿದ ವೀರರ ಸ್ಮಾರಕವಾಗಿರುವ ವೀರಗಲ್ಲುಗಳನ್ನು ನೋಡಿದಾಗ ಆ ವೀರರ ಅಭಿಮಾನಕ್ಕೂ ತ್ಯಾಗ ಬಲಿದಾನಗಳಿಗೂ ಮಣಿದು ಕೃತಜ್ಞತೆಯ ಕಾಣಿಕೆ ಯನ್ನೊಪ್ಪಿಸದಿರುವುದು ಸಾಧ್ಯವೆ?

ಕೇವಲ ಮೂಢ ನಂಬಿಕೆಯಿಂದ ನಡೆದ ಕೃತ್ಯಗಳ ಹಿಂದೆ ಕೂಡ ನಮ್ಮನ್ನು ರೋಮಾಂಚಿತರನ್ನಾಗಿ ಮಾಡುವ ಉದಾತ್ತಭಾವವಿರುವ ಸನ್ನಿವೇಶಗಳನ್ನು ನಮ್ಮ ನನ್ನಿಯ ಕನ್ನಡನಾಡಿನ ಇತಿಹಾಸದಲ್ಲಿ ಕಾಣಬಹುದು. ಇದಕ್ಕೆ ಒಂದೇ ಒಂದು ನಿದರ್ಶನವನ್ನು ಮಾತ್ರ ತಿಳಿಸಿ ಮುಂದೆ ಹೋಗುತ್ತೇನೆ. ಕನ್ನಡಿಗನಾದ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನು ಪ್ರಜೆಗಳಿಗೆ ಒದಗುವಂತಿದ್ದ ಉಪದ್ರವ ಶಾಂತಿಗಾಗಿ ತನ್ನ ಎಡಗೈ ಬೆರಳನ್ನು ಕತ್ತರಿಸಿ ಮಹಾಲಕ್ಷ್ಮಿಗೆ ಸಮರ್ಪಿಸಿದನಂತೆ. ವಿಚಾರಪರರು ಯಾರೂ ಅದನ್ನು ಒಪ್ಪುವುದು ಸಾಧ್ಯವಿಲ್ಲ. ಮಹಾಲಕ್ಷ್ಮಿಗೆ ಅವನ ಬೆರಳೂ ಬೇಕಾಗಿರಲಿಲ್ಲ. ಆದರೂ, ಆತನ ಮನಸ್ಸಿನ ದಾರ್ಢ್ಯವೆಷ್ಟು, ಆತನ ಭಕ್ತಿಯೆಷ್ಟು ಮತ್ತು ಆತನ ಪ್ರಜಾವಾತ್ಸಲ್ಯವೆಷ್ಟು! ಕವಿರಾಜ ಮಾರ್ಗವೆಂಬ ಗ್ರಂಥದಲ್ಲಿ, ಕನ್ನಡಿಗರು "ಒಳ್ಳೆಯ ಭಟರು (ಶೂರ ಸೈನಿಕರು), ಕವಿಗಳು, ಒಳ್ಳೆಯ ಪ್ರಭುಗಳು, ಸುಂದರರು, ಸುಸಂಸ್ಕೃತರು, ಗುಣವಂತರು, ಅಭಿಮಾನಿಗಳು, (ಮುನಿದರೆ) ಅತ್ಯುಗ್ರರು, ಗಭೀರ ಚಿತ್ತರು, ವಿವೇಕಿಗಳು" ಎಂಬ* ಶ್ಲಾಘನೆ ಯಿದೆ. ಕನ್ನಡಿಗರಲ್ಲಿ ಆ ಗುಣಗಳಿದ್ದುದರಿಂದಲೇ ಅವರು ರಾಜ್ಯಗಳನ್ನು ಕಟ್ಟಿ ಶೌರ್ಯ ಸಾಹಸ ಪ್ರದರ್ಶನಮಾಡಲು ಸಾಧ್ಯವಾದುದು!

ಕನ್ನಡ ನಾಡಿನಲ್ಲಿ ಪ್ರಭುತ್ವಮಾಡಿದ ನಾನಾ ರಾಜಮನೆತನಗಳವರ ಶೌರ್ಯಸಾಹಸಗಳು ಇತಿಹಾಸದಲ್ಲಿ ಬೆಳಗುತ್ತಿವೆ; ಅದೇ ರೀತಿಯಲ್ಲಿ ಪ್ರಜೆಗಳು ಪ್ರದರ್ಶಿಸಿದ ಶೌರ್ಯ ಸಾಹಸಗಳೂ ಸುಪ್ರಸಿದ್ಧವಾಗಿವೆ. ಅವಕ್ಕೆ ಕೆಲವು ನಿದರ್ಶನಗಳನ್ನು ಸೂಚಿಸುವುದು ಮಾತ್ರವೇ ಇಲ್ಲಿ ಸಾಧ್ಯ. ಕದಂಬರ ಮೂಲ ಪುರುಷನಾದ ಮಯೂರ ಶರ್ಮನು ಪಲ್ಲವರ ರಾಜಧಾನಿಯಾದ ಕಾಂಚೀನಗರಕ್ಕೆ ಹೋಗಿ ವ್ಯಾಸಂಗಮಾಡುತ್ತಿದ್ದಾಗ ಪಲ್ಲವರಿಂದ ತನಗಾದ ಅಪಮಾನದ ಸೇಡನ್ನು ತೀರಿಸುವುದಕ್ಕಾಗಿ ಒಂದು ರಾಜ್ಯವನ್ನೇ ಸ್ಥಾಪಿಸಿ ಅವರನ್ನು ಸೋಲಿಸಿದನು. ಚಾಲುಕ್ಯರ ಪುಲಿಕೇಶಿಯ ಶೌರ್ಯ ಸಾಹಸಗಳಿಗೆ ಇತಿಮಿತಿಯೇ ಇರಲಿಲ್ಲ. ತಲಕಾಡಿನ ಗಂಗರ ಮನೆತನಕ್ಕೆ ಸೇರಿದ ಶೈಲೇಂದ್ರನೆಂಬ ಕನ್ನಡಿಗನು (ಕ್ರಿಸ್ತಶಕ ೮ನೆಯ ಶತಮಾನದ ಮಧ್ಯದಲ್ಲಿ, ಎಂದರೆ ಕ್ರಿ.ಶ. ೭೫೦ನೆಯ ಇಸವಿಯ ಸುಮಾರಿನಲ್ಲಿ) ಭಾರತದಿಂದ ಬಹುದೂರದಲ್ಲಿರುವ ಮಲಯದ್ವೀಪಗಳಿಗೆ ಹೋಗಿ ತನ್ನ

---

* ಆ ಪದ್ಯವು ಹೀಗಿದೆ:

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ।
ಅಭಿಮಾನಿಗಳತ್ಯುಗ್ರರ್
ಗಭೀರ ಚಿತ್ತರ್ ವಿವೇಕಿಗಳ್ ನಾಡಿನವರ್ ॥

ಕವಿರಾಜಮಾರ್ಗವು ನೃಪತುಂಗನಿಂದ ರಚಿತವಾಯಿತೆ ಅಥವಾ ಅವನ ಆಶ್ರಿತನಾಗಿದ್ದ ಶ್ರೀ ವಿಜಯನಿಂದ ರಚಿತವಾಯಿತೆ—ಎಂಬುದು ಇನ್ನೂ ನಿರ್ಧರವಾಗಿಲ್ಲ.

ಭುಜಬಲದಿಂದಲೂ, ಅಸೀಮ ಧೈರ್ಯದಿಂದಲೂ ಅಲ್ಲಿ ರಾಜ್ಯಸ್ಥಾಪನೆಮಾಡಿ ಪ್ರಭುತ್ವಮಾಡಿದನೆಂಬುದು ಕನ್ನಡಿಗರ ಹೆಮ್ಮೆ. ಹೊಯ್ಸಳರ ಮೂಲ ಪುರುಷ ನಾದ ಸಳನು ಹುಲಿಯೊಡನೆ ಕಾದಿ ತನ್ನ ಬಾಕುವಿನಿಂದ ಅದನ್ನು ತಿವಿದು ಕೊಂದ ಕೆಚ್ಚೆದೆಯ ಕಟ್ಟಾಳು. ಹೊಯ್ಸಳರಲ್ಲಿ ಎರಡನೆಯ ಬಲ್ಲಾಳನ ರಾಣಿಯರು ಯುದ್ಧಗಳಲ್ಲಿ ಭಾಗವಹಿಸಿ ಕಾದುತ್ತಿದ್ದರು. ಹೊಯ್ಸಳರೇ ಮುಂತಾದವರ ಕಾಲದಲ್ಲಿ ಹದಿಮೂರು ಹದಿನಾಲ್ಕು ವರ್ಷ ವಯಸ್ಸಿನ ರಾಜಕುಮಾರರು ಪರಾ ಕ್ರಮದಿಂದ ಯುದ್ಧಮಾಡುತ್ತಿದ್ದರೆಂದು ಕೇಳಿದರೆ ಮೈ ಜುಮ್ಮೆನ್ನುತ್ತದೆ; ದೇಶೋನ್ನತಿ ಸಾಧನೆಗಾಗಿ ಕರ್ತವ್ಯವನ್ನು ನೆರವೇರಿಸದವರ ಜನ್ಮವೇ ವ್ಯರ್ಥ ವೆಂದು ತೋರುತ್ತದೆ. ರಾಷ್ಟ್ರಕೂಟರ ಶೌರ್ಯ ಸಾಹಸಗಳ ವಾರ್ತೆಯು ಅರಬ್ಬಿ ದೇಶದವರೆಗೂ ವ್ಯಾಪಿಸಿ ಅಲ್ಲಿನವರನ್ನು ಬೆರಗುಮಾಡಿದ್ದಿತು. ವಿಜಯನಗರ ಚಕ್ರೇಶ್ವರರ ಶೌರ್ಯ ಪರಾಕ್ರಮಗಳು ಯೂರೋಪು ಖಂಡದ ಹಲವು ದೇಶಗಳ ವರನ್ನು ಬೆರಗುಮಾಡಿದ್ದುವು.

ರಾಜಮನೆತನದವರಂತೆಯೇ ಇತರರೂ ಅದ್ಭುತ ರೀತಿಯಲ್ಲಿ ಶೌರ್ಯ ಪರಾಕ್ರಮಗಳನ್ನು ತೋರಿಸುತ್ತಿದ್ದರು. ಬ್ರಾಹ್ಮಣರೂ ಮತ್ತು ಅಬಲೆಯರೆಂದು ಅನ್ಯಾಯವಾಗಿ ಕರೆದಿರುವ ಸ್ತ್ರೀಯರೂ ಕೂಡ ಯುದ್ಧದಲ್ಲಿ ಸಾಹಸವನ್ನು ತೋರಿಸುತ್ತಿದ್ದರು. ಕನ್ನಡಿಗನು ಯುದ್ಧತಂತ್ರದಲ್ಲಿ ಚತುರತರಮತಿಯೆಂದೂ*, ಕನ್ನಡಿಗರ ಪೌರುಷವನ್ನು ತಡೆಗಟ್ಟಲು ಸಾಧ್ಯವಿಲ್ಲವೆಂದೂ†, ಕನ್ನಡಿಗರು ಯುದ್ಧ ರಂಗದಲ್ಲಿ ಅಪ್ರತಿಹತರಾದ ನಿಸರ್ಗವೀರರೆಂದೂ‡, ಕ್ರಿಸ್ತಶಕ ಸುಮಾರು ೯೦೦ನೆಯ ಇಸವಿಯಲ್ಲಿದ್ದ ರಾಜಶೇಖರ ಕವಿಯು ತನ್ನ ಸಂಸ್ಕೃತ ಕೃತಿಗಳಲ್ಲಿ ವರ್ಣಿಸಿದ್ದಾನೆ. ಪಳಗುವುದಕ್ಕೆ ಮುಂಚಿತವಾಗಿ ಬಂಧನದಿಂದ ತಪ್ಪಿಸಿಕೊಂಡು ಅರಣ್ಯಕ್ಕೆ ಓಡಿ ಹೋದ ಕಾಡಾನೆಯೊಂದನ್ನು ಮತ್ತೆ ವಶಪಡಿಸಿಕೊಂಡ ಕನ್ನಡ ವೀರನ ಸಾಹಸ ಕಾರ್ಯವನ್ನು ವಿದೇಶೀಯ ಚರಿತ್ರಕಾರರು ವರ್ಣಿಸಿದ್ದಾರೆ. ಆ ವೀರನು ಕಾಡಿಗೆ ಹೋಗಿ ಮರದ ಮೇಲೆ ಕುಳಿತಿದ್ದನಂತೆ. ಆನೆಯು ಕಾಣದಂತೆ ಯಾವಾಗಲೋ ಕಾಡಿಗೆ ಹೋಗಿ ಅವನು ಆ ರೀತಿ ಮಾಡಿದ್ದನೆಂಬುದನ್ನು ಹೇಳಬೇಕಾದ ಅಗತ್ಯವಿಲ್ಲ. ಬಂಧನದಿಂದ ತಪ್ಪಿಸಿಕೊಂಡು ಹೋಗಿದ್ದ ಆನೆಯು ಸಂಚರಿಸುತ್ತಿದ್ದ ಕಾಡಿಗೆ ಹೋಗುವುದಕ್ಕೆ ಎಷ್ಟು ಧೈರ್ಯವಿರಬೇಕೆಂಬುದನ್ನು ವರ್ಣಿಸಲಳವಲ್ಲ. ಆತನ ಸಾಹಸವು ಜೀವದ ಮೇಲಿನ ಆಶೆಯನ್ನೇ ತೊರೆದು ತೋರಿದ ಸಾಹಸ. ಆನೆಯು ಆ ಮರದ ಕೆಳಕ್ಕೆ ಬಂದಾಗ ಮರದ ಕೊಂಬೆಯಿಂದ ಧುಮ್ಮಿಕ್ಕಿ ಆನೆಯ ಬೆನ್ನಿನ ಮೇಲೆ ಕುಳಿತುಕೊಂಡು, ಅದರ ಕತ್ತಿನ ಸುತ್ತ ಬಿಗಿದ ಹಗ್ಗವನ್ನು ಒಂದು ಕೈಯಲ್ಲಿ ಹಿಡಿದು, ಆನೆಯನ್ನು ಅಂಕುಶದಿಂದ ತಿವಿದು, ಅದು ತನ್ನನ್ನು ಧ್ವಂಸಮಾಡಲು ಎಷ್ಟೆಷ್ಟು ಪ್ರಯತ್ನಿಸಿದರೂ ಅದಕ್ಕೆ ಅವಕಾಶವಿಲ್ಲದಂತೆ ಮಾಡಿ,

---

* ಕರ್ಣಾಟೋ ಯುದ್ಧತನ್ತ್ರೇ ಚತುರತರ ಮತಿಃ

† ಅಖಣ್ಡಿತ ಪ್ರಸಾರಾಹಿ ಪುರುಷಕಾರಾಃ ಕರ್ಣಾಟಾನಾಮ್.

‡ ಸಮರ ಕರ್ಮಣಿ ನಿಸರ್ಗೋದ್ಭಟಾ ಏವ ಕರ್ಣಾಟಾಃ.

ಕಿತಿಮಿತಿಯಿಲ್ಲದಷ್ಟು ದೂರ ಸುತ್ತಿಸಿ ಅದರ ರೋಷವೆಲ್ಲ ತೀರಿ ದಣಿವಾಗಿ ಅದು ಬಸವಳಿಯುವಂತಾದ ಮೇಲೆ ಅದನ್ನು ಅಂಕುಶದಿಂದ ತಿವಿದು ತಿವಿದು ಅದು ಮುಂದೆ ಸಾಗುವಂತೆ ಚೋದನಗೊಳಿಸಿ ಅದು ಮತ್ತೆ ಬಂಧನಕ್ಕೊಳಗಾಗುವಂತೆ ಮಾಡಿದನಂತೆ, ಆ ಸಾಹಸಿ! ಅದನ್ನು ಕಂಡು ಸುಪ್ರೀತನಾದ ವಿಜಯನಗರದ ಚಕ್ರೇಶ್ವರನು ಆ ಅದ್ಭುತ ಸಾಹಸಕ್ಕೆ ತಕ್ಕ ಬಹುಮಾನವನ್ನು ಕರುಣಿಸಿದನಂತೆ.

ಕನ್ನಡಿಗರು ಸೈನ್ಯದಲ್ಲಿ ಸೇರಿಯೂ ಶೌರ್ಯ ಸಾಹಸ ಪ್ರದರ್ಶನ ಮಾಡುತ್ತಿದ್ದರು. ಶತ್ರುಗಳ ಪಡೆಗಳು ಅಥವಾ ಕಳ್ಳರ ಗುಂಪುಗಳು ಗ್ರಾಮಗಳನ್ನು ಮುತ್ತಿದಾಗ ಗ್ರಾಮರಕ್ಷಣೆಗಾಗಿ ಕಾಳಗಮಾಡಿಯೂ ಶೌರ್ಯ ಸಾಹಸ ಪ್ರದರ್ಶನ ಮಾಡುತ್ತಿದ್ದರು. ಊರಿನ ರಕ್ಷಣೆಗಾಗಿ ಕಾಳಗವಾಡಿ ಮಡಿದ ವೀರರಿಗೆ ವೀರಗಲ್ಲುಗಳೆಂಬ ಸ್ಮಾರಕ ಶಿಲೆಗಳನ್ನು ನಡೆಸುತ್ತಿದ್ದುದು ವಾಡಿಕೆ. ವೀರಗಲ್ಲುಗಳ ಮೇಲೆ ಅವರು ಹೋರಾಡಿ ಮಡಿದ ವಿವರಗಳನ್ನು ಕೆತ್ತಿಸಿ ಆ ಆ ಊರಿನವರು ನೆಡಿಸುತ್ತಿದ್ದರು. ವೀರಗಲ್ಲುಗಳ ಮೇಲೆ ಸಾಮಾನ್ಯವಾಗಿ "ಗೆದ್ದರೆ ಸಂಪತ್ತು; ಸತ್ತರೆ ಸ್ವರ್ಗಸೌಖ್ಯ. ದೇಹವು ಯಾವಕ್ಷಣದಲ್ಲಿ ನಾಶವಾಗುವುದೆಂಬುದೇ ಗೊತ್ತಿಲ್ಲದಿರುವಲ್ಲಿ ರಣರಂಗದಲ್ಲಿ ಮರಣ ಹೊಂದಲು ಚಿಂತೆಯಾದರೂ ಏತಕ್ಕೆ." ಎಂಬ ಅರ್ಥದ ಶ್ಲೋಕವನ್ನು* ಕೆತ್ತಿರುವುದು ವಾಡಿಕೆ. ವೀರಗಲ್ಲುಗಳೂ, ಸಹಗಮನ ಮಾಡಿದ ಮಹಾಸತಿಯರ ಸ್ಮಾರಕವಾದ ಮಾಸ್ತಿಕಲ್ಲುಗಳೂ ಕನ್ನಡನಾಡಿನಲ್ಲಿ ತುಂಬಿವೆ. ಬೇಲೂರು ತಾಲ್ಲೂಕಿನ ಒಂದು ವೀರಗಲ್ಲಿನ ಮೇಲೆ ಹಾನುಗಲ್ಲಿನ ಕೋಟೆ ಮುತ್ತಿಗೆಯಲ್ಲಿ ಲೆಂಕರಾಯನು ಕಾದಿ ಮಡಿದ ವಿವರವನ್ನು ಕೆತ್ತಿಸಿದ್ದಾರೆ. ಆ ವೀರನು ಮಡಿದ ಬಗೆಯು "......ಉಗ್ರಾರೀಭ ಕಣ್ಠೀರವಂ ಸುರಿವ ಸರಲ್ಗೆ ಪಾಯ್ವ ಚತುರಂಗದಳಕ್ಕಣೆದಾರ್ದು ನೂಂಕು ವಾಸುರತರಮಪ್ಪ ಸಿಂಧುರಘಟಾವಳಿಗಳ್ಕದೆ ಕಾದಿ" ವೀರಸ್ವರ್ಗವನ್ನೈದಿದನೆಂದು ವರ್ಣಿತವಾಗಿದೆ. ಬೇಲೂರು ತಾಲ್ಲೂಕಿನ ಮತ್ತೊಂದು ವೀರಗಲ್ಲಿನ ಮೇಲೆ "ಹೊಯ್ಸಳ ವೀರಬಲ್ಲಾಳ ........ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರಲು ಸಿಂಗನ ಧಾಳಿ ಬಂದಡೆ ........ ಮಲ್ಲಿಯ ನಾಯಕನ ಮಗ ಶ್ರೀ ಬಲ್ಲರದೇವ ........ ಮೆಚ್ಚಲು ಕಾದಿ ಸುರಲೋಕ ಪ್ರಾಪ್ತನಾದನು ........" ಎಂಬ ಶಿಲಾಕ್ಷರಗಳಿವೆ. ಹೊನ್ನಾಳಿ ತಾಲ್ಲೂಕಿನಲ್ಲಿ ಒಂದು ವೀರಗಲ್ಲಿನ ಮೇಲೆ "ಮಲ್ಲಿಯ ನಾಯಕ ಪ್ರಿಯಸುತಂ ಗಟ್ಟಿಯ್ಯನುಗ್ರಾಜಿಯೊಳ್ ತುರಗಂ ಮುತ್ತಿದೊಡಿಕ್ಕಿ ತತ್ತುರಗಮಂ ಬಲ್ಲಾಳ್ಗಳಂ ಖಡ್ಗದಿಂ ಕರುಳುಂ ಕಂಡಮುಮಂ ಸೂಸುವಿನೆಗಂ ಶ್ರೀರಂಗ ಗೋವಿಂದೆನುತ್ತುರುತೇಜಂ ಪಡೆದಪ್ಸರೋಗಣಯುತಂ ವೈಕುಂಠಮಂ ಪೊರ್ದಿದಂ" ಎಂದೂ, ಮತ್ತೊಂದು ವೀರಗಲ್ಲಿನ ಮೇಲೆ "ಮಲ್ಲನೃಪಾಳಕಂ ಬೆಸಸೆ ಪೆರ್ಗ್ಗಡೆ ಮಲ್ಲನ ಪುತ್ರನಾಜಿಯೊಳ್ ತಲ್ಲಣವಪ್ಪಿನಂ

* ಆ ಶ್ಲೋಕವು ಇದು :

ಜಿತೇನ ಲಭ್ಯತೇ ಲಕ್ಷ್ಮೀರ್ಮೃತೇನಾಪಿ ಸುರಾಙ್ಗನಾ |
ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿನ್ತಾ ಮರಣೇ ರಣೇ ||

ಪಗೆಗೆ ...... ಕಂಡದೊಳಿಂಡಿಯಾಡಿ ಬಿಸುನೆತ್ತರೊಳೋಕುಳಿಯಾಡಿ ಪೆಚ್ಚಿ ಮಾರ್ಕೊಂಡೊಡನೆಚ್ಚ ಪೂಣಿಗರ ಪಂಣ್ದಲೆಯಂ ಪೊಡೆಸೆಂಡನಾಡಿ" ದನೆಂದು ಮುಂತಾಗಿಯೂ ಒಕ್ಕಣೆಗಳಿವೆ. ಇಂಥ ವೀರಗಲ್ಲುಗಳು ಅಸಂಖ್ಯಾತವಾಗಿವೆ. ಗ್ರಾಮರಕ್ಷಣೆಗಾಗಿ ಹೀಗೆ ಹೋರಾಡಿ ಮಡಿದ ವೀರ ಕನ್ನಡಿಗರ ಕಥೆಗಳನ್ನು ಕೇಳಿದಾಗ ಉತ್ಸಾಹ ಸಂತೋಷಗಳಿಂದ ಮನಸ್ಸು ಹಿಗ್ಗುತ್ತದೆ; ದೇಶಬಾಂಧವರ ಹಿತಸಾಧನೆಗಾಗಿ ಆ ಅಸಂಖ್ಯಾತ ವೀರರು ಪ್ರಾಣವನ್ನೇ ನೀಗಿರುವಲ್ಲಿ, ನಮ್ಮಿಂದ ಸಾಧ್ಯಕಂಡಮಟ್ಟಿಗಾದರೂ ದೇಶಕ್ಕೆ ಅಲ್ಪಸ್ವಲ್ಪ ಸೇವೆಯನ್ನು ಸಲ್ಲಿಸಿ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂಬ ಸ್ಫೂರ್ತಿಯುಂಟಾಗುತ್ತದೆ.

## (ಈ) ಸ್ವಾಮಿನಿಷ್ಠೆ

ಕನ್ನಡಿಗರು ಸ್ವಾಮಿನಿಷ್ಠೆಯ ಶ್ರೇಷ್ಠ ಸಂಪ್ರದಾಯವನ್ನು ತೀವ್ರಾಸಕ್ತಿಯಿಂದ ರೂಪಿಸಿ ಅನುಸರಿಸಿದರು. ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಸೇವಾಕ್ಷೇತ್ರಗಳಲ್ಲಿ ಪ್ರತಿಯೊಂದರಲ್ಲೂ ಸ್ವಾಮಿನಿಷ್ಠೆಯಿಲ್ಲದೆ ಹೋದಲ್ಲಿ ಯಾವ ದೊಡ್ಡ ಕೆಲಸವೂ ನಡೆಯಲಾರದು. ಕನ್ನಡಿಗರಲ್ಲಿ ಇಂದಿಗೂ ಅನೇಕ ಸದ್ಗುಣಗಳಿರುವುದು ನಿಜವಾದರೂ, ಸ್ವಾಮಿನಿಷ್ಠೆಯ ಸದ್ಗುಣವು ಇಂದು ಕಡಿಮೆಯಾಗುತ್ತಿದೆ. ಆದರೆ, ಹಿಂದಿನವರ ಸ್ವಾಮಿನಿಷ್ಠೆಯ ಸ್ವರೂಪವನ್ನು ಗ್ರಹಿಸಿದರೆ ಈ ನ್ಯೂನತೆಯು ಪರಿಹಾರವಾಗುವುದಕ್ಕೆ ಸಾಧಕವಾಗುತ್ತದೆ. ಕನ್ನಡಿಗರು ಸ್ವಾಮಿ ಸೇವೆಗಾಗಿ ಎಂಥ ತ್ಯಾಗಕ್ಕೂ ಸಿದ್ಧವಾಗಿ ತ್ರಿಕರಣ ಶುದ್ಧವಾದ ರೀತಿಯಲ್ಲಿ ಶ್ರಮಿಸುತ್ತಿದ್ದರು. ಸ್ವಾಮಿಯ ಹಾನಿವೃದ್ಧಿಗಳೇ ತಮ್ಮ ಹಾನಿವೃದ್ಧಿಗಳೆಂದು ಭಾವಿಸಿ ಅವರು ಸೇವೆಯನ್ನು ಸಲ್ಲಿಸುತ್ತಿದ್ದರು. ತಮ್ಮ ಒಡೆಯನಾಗಲಿ, ತಮ್ಮ ಒಡತಿಯಾಗಲಿ ಮೃತಪಟ್ಟರೆ ತಾವೂ ಸಾಯುವುದಾಗಿ ಮೊದಲೇ ಪ್ರತಿಜ್ಞೆ ಮಾಡಿದ್ದು ಅದರಂತೆ ನಡೆದವರು ಅನೇಕರುಂಟು; ತಮ್ಮ ಒಡತಿಗೆ ಮಕ್ಕಳಾದರೆ ತಾವು ಪ್ರಾಣವನ್ನೊಪ್ಪಿಸುವುದಾಗಿ ಹರಕೆ ಹೊತ್ತು ಆ ರೀತಿ ಮಾಡಿದ ಮಾನಿನಿಯರುಂಟು. ಚಿತಾರೋಹಣ ಮಾಡುವುದು, ಎತ್ತರದಿಂದ ಬೀಳುವುದು, ಸಜೀವ ಸಮಾಧಿಯಾಗುವುದು*, ಕತ್ತಿಯಿಂದ ಇರಿಸಿಕೊಳ್ಳುವುದು, ಕಠಾರಿಯಿಂದ ತಮ್ಮ ದೇಹವನ್ನು ಇರಿದುಕೊಳ್ಳುವುದು, "ಸಿಡಿದಲೆ" ಕೊಡುವುದು—ಇವೇ ಮುಂತಾದವುಗಳು ಅವರು ಅನುಸರಿಸುತ್ತಿದ್ದ ಸಾವಿನ ವಿಧಾನಗಳು. ಹೀಗೆ ಆತ್ಮಹತ್ಯ ಮಾಡಿಕೊಂಡವರ ವರ್ತನೆಯು ಅಥವಾ ಸಹಗಮನ ಮಾಡಿದವರ ವರ್ತನೆಯು ತೆಗಳಿಕೆಗೆ ಯೋಗ್ಯವೇ ಹೊರತು ಹೊಗಳಿಕೆಗಲ್ಲವೆಂದು ತೋರುವುದು ಸಹಜವೇ ಸರಿ. ಆದರೆ, ಆ ರೀತಿ ಆತ್ಮಹತ್ಯ ಮಾಡಿಕೊಳ್ಳುವುದು ಸುಲಭವಲ್ಲವೆಂಬುದನ್ನೂ ಗಮನಕ್ಕೆ ತಂದುಕೊಳ್ಳಬೇಕು. ಜಪಾನರಲ್ಲಿ ಯಾವುದಾದರೂ ಅಕೃತ್ಯವನ್ನು ಮಾಡಿದಂತೆ ಭಾವಿಸಿದವರು ಹರಿತವಾದ ಚೂರಿಯಿಂದ ತಮ್ಮ

---

* ಅದಕ್ಕೆ "ಕೀಳ್ಗುಂಟೆ" ಎಂದು ಹೆಸರು. ಸ್ವಾಮಿನಿಷ್ಠೆಯಿಂದ ನೂರಾರು ಸಾವಿರಾರು ಮಂದಿಗಳು ಈ ರೀತಿ ಸಜೀವ ಸಮಾಧಿಯಾಗುತ್ತಿದ್ದರು.



ದುರ್ಗಾದೇವಾಲಯ, ಐಹೊಳೆ, ಬಿಜಾಪುರ ಜಿಲ್ಲೆ
(ಕದಂಬರ ವಾಸ್ತುಶಿಲ್ಪ)



ಚನ್ನಕೇಶವ ದೇವಾಲಯ, ಬೇಲೂರು, ಹಾಸನ ಜಿಲ್ಲೆ
(ಹೊಯ್ಸಳರ ವಾಸ್ತುಶಿಲ್ಪ)



ಭೋಗ ನಂದೀಶ್ವರ ದೇವಾಲಯ, ನಂದಿ, ಕೋಲಾರ ಜಿಲ್ಲೆ
(ಚೋಳರ ವಾಸ್ತುಶಿಲ್ಪ)

ಹೊಟ್ಟೆಯನ್ನು ಕೊಯ್ದುಕೊಂಡು ಮೃತಪಡುವ ಆತ್ಮಹತ್ಯೆಯನ್ನು ಶ್ಲಾಘಿಸುವವರ ಸಂಖ್ಯೆಗೆ ಇತಿಮಿತಿಯೇ ಇಲ್ಲ. ಈ ಬಗೆಯ ಆತ್ಮಹತ್ಯೆಗೆ "ಹರಾಕಿರಿ" ಎಂದು ಹೆಸರು. ಹೀಗಿರುವಲ್ಲಿ ಸ್ವಾಮಿನಿಷ್ಠೆಗಾಗಿ ಸಾವನ್ನು ಸ್ವಾಗತಿಸಿ ಆತ್ಮಹತ್ಯ ಮಾಡಿಕೊಂಡು ತಮ್ಮ ಜನ್ಮವು ಸಾರ್ಥಕವಾಯಿತೆಂದು ಭಾವಿಸುತ್ತಿದ್ದವರನ್ನು ಹಳಿಯುವುದಾದರೂ ಹೇಗೆ?

ಈ ರೀತಿ ಸ್ವಾಮಿನಿಷ್ಠೆಯಿಂದ ಪ್ರಾಣತ್ಯಾಗಮಾಡಿದ ಸನ್ನಿವೇಶಗಳು ಶಿಲಾಶಾಸನಗಳಲ್ಲಿ ವರ್ಣಿತವಾಗಿವೆ. ಅವುಗಳಲ್ಲಿ ಎರಡು ಶಿಲಾಶಾಸನಗಳ ವಿಚಾರವನ್ನು ಮಾತ್ರ ಇಲ್ಲಿ ಸೂಚಿಸಲಾಗುವುದು. ಮೊಳಕಾಲ್ಮುರು ತಾಲ್ಲೂಕಿನ ಸಿದ್ದಾಪುರ ಗ್ರಾಮದಲ್ಲಿರುವ ಶಿಲಾಶಾಸನದಲ್ಲಿ, ಕಿತ್ತಿ ಹೊನ್ನಿಯೆಂಬಾಕೆಯು ತನ್ನ ಒಡತಿಯಾದ ಹೊನ್ನವ್ವೆನಾಯಕಿತಿ ಮರಣ ಹೊಂದಿದಾಗ ಸಿಡಿತಲೆಕೊಟ್ಟು ಸುರಲೋಕಕ್ಕೆ ತೆರಳಿದಳೆಂಬ ವಿಚಾರವು ಸೂಚಿತವಾಗಿದೆ.* ಹೊಯ್ಸಳ ವಂಶದ ಪ್ರಭುಗಳಲ್ಲೊಬ್ಬನಾದ ಎರಡನೆಯ ಬಲ್ಲಾಳನು ಮೃತಪಟ್ಟಾಗ ಅವನ ಮಂತ್ರಿಯೂ ಸೇನಾಪತಿಯೂ ಆದ ಕುವರ ಲಕ್ಷ್ಮದಂಡಾಧೀಶನೂ, ಅವನ ಪತ್ನಿಯಾದ ಸುಗ್ಗಲದೇವಿಯೂ, ಅವನ ಸೇವಕರಾಗಿದ್ದ ಸಾವಿರ ಮಂದಿ ಯೋಧರೂ ಪ್ರಾಣಗಳನ್ನೊಪ್ಪಿಸಿದ ವಿಚಾರವು ಬೇಲೂರು ತಾಲ್ಲೂಕಿನ ಶಾಸನಗಳಲ್ಲೊಂದರಲ್ಲಿ ಸೂಚಿತವಾಗಿದೆ†.

---

* "...... . ಮಹಾಪಸಾಯ್ತಂ ಹುಲಿವಾನದ ಸಾಮನ್ತ ಸಿಮ್ಮೋದಯ ನಾಯಕನವ್ವೆ ಹೊಂನರ ನಾಯಕಿತಿ ಸ್ವರ್ಗಸ್ಥೆಯಾದಲ್ಲಿ... . ಕಿತ್ತಿಹೊಂನಿ ಸಿಡಿತಲೆಯಗೊಟ್ಟು ಸುರಲೋಕ ಪ್ರಾಪ್ತಿಯಾದಲ್ಲಿ ಚಂದ್ರಾರ್ಕರುಳ್ಳಂನ.. ...ಸ್ಥಿರ ಸ್ಥಾಯಿಯಾಗಿ ನಿಲಿಸಿದ ಕಲ್ಲು" (E.C. XI : Molakalmuru 12.)

† "..... . ಬಲ್ಲಾಳ ನೃಪಂ ಪೊರೆದ ಮಗಂ ಕುವರ ಲಕ್ಷ್ಮದಂಡಾಧೀಶಂ। ಗುರುವುಂ ದೈವಮುಮಾಳ್ದನೆ ಪರತ್ರೆಗಂ ತನಗಿರತ್ರೆಗಂ ಪೆಱನೋರ್ವ್ವಂ ತನಗಿಲ್ಲ ದೈವಮಿಲ್ಲೆನೆ ಧರೆಗೆಸೆದಂ ಕುವರಲಕ್ಷ್ಮದಂಡಾಧೀಶಂ. .. ಆಳರಸೆಂಬ ಭೇದಮಿನಿತಪ್ಪೊಡಮಿಲ್ಲಿವರಲ್ಲಿ ತೇಜಮುಂ ಲೀಲೆಯು ರಾಜ್ಯ ಚಿಹ್ನಮುಮಮವೀರ್ವ್ವರೊಳಂ ಸಮನೆಂದುಮೆಂಬಿನಂ ಪಾಳಿಸುವರ್ಧರಾವಳಯಮಂ ಪರಮೋತ್ಸವದಿಂದೆ ವೀರಬಲ್ಲಾಳ ನೃಪಾಳನುಂ ಕುವರ ಲಕ್ಷ್ಮಚಮೂಪನುಮೇಂ ಸಪುಣ್ಯರೋ॥ ಎಂಬ ನೆಗೞ್ತೆಗಂ ಪೊಗೞ್ತೆಗಮೊಬ್ಬುಳಿಯಾದೀರ್ವರಂ ಜಸಮುಮುರ್ವಿಯೊಳ್ ಪರ್ವಿಪ ಗಂಡುಗೊಂಡು ಪಸರಿಸೆ। ಧನಮುಂ ಪ್ರಾಣಮುಮೆಂಬಿವಂ ಕುವರ ಲಕ್ಷ್ಮಂ ವೀರಬಲ್ಲಾಳ ದೇವನ ದಾನೋನ್ನತಿಗಂ ಜಯೋನ್ನತಿಗಮಾಯಲ್ ಪೂಣ್ದು ಮುಂದಿಟ್ಟು ರಾಯನ ಬೀಡಿಂಗಣುಮಂ ಯಮಾತ್ಮಜನ ಬೀಡಿಂಗರ್ಜುನಂ ಚಂದ್ರಜೂಟನ ಬೀಡಿಂಗೆ ಕುಮಾರನಿರ್ಪ್ಪ ತೆಱದಿಂದಿರ್ಪ್ಪನೇಂ ಧೀರನೋ। ಸಾಧಿಸಿಕೊಟ್ಟನಾಳ್ದ ಯದುವಂಶನ ಮೇರುಗೆ ಕೂಡೆ ದಕ್ಷಿಣಾಂಬೋಧಿವರಂ ಧರಾವಳಯಮಂ ಬುಧಕೋಟಿಗೆ ಕೊಟ್ಟನರ್ಥಮಂ ಸಾಧನೆಮೋಯ್ತು ಸರ್ವನಿಧಿಯೆಂಬಿನೆಗಂ ದೊರೆಯಾರ್ಕ್ಕರ್ವಾರ ಲಕ್ಷ್ಮೀಧರ ದೇವನೊಳ್ ಪತಿಹಿತಕ್ರಮದೊಳ್ ಪಡೆದೀವ ದಾನದೊಳ್।...............ಅರುವತ್ತುನಾಲ್ಕು ಕಳೆಗಳೊಳರಿಯದ ಕಳೆಯಿಲ್ಲ............... ತೊಡರೆಡಗಾಲೊಳೊಪ್ಪುವುದು ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ ಸುತ್ತಿದ ಭಂಗಿಯಿಂದ ಮೆಸೆದಿರ್ಪುದು।...........ಬಲ್ಲಾಳ ಭೂಪೋತ್ತಮ ಪ್ರಿಯ ಪುತ್ರಂಗೆ ಕುಮಾರ ಲಕ್ಷ್ಮರಥಿನೀ ನಾಥಂಗೆ ಕೊಟ್ಟಳ್ ಮನಃಪ್ರಿಯೆಯಿ ಸುಗ್ಗಲದೇವಿ

ಬಲ್ಲಾಳ ನೃಪನಿಂದ ಮಗನಂತೆ ಪೋಷಿತನಾಗಿದ್ದ ಕುವರ ಲಕ್ಷ್ಮದಂಡಾಧೀಶನು ಆತನನ್ನು ಗುರುವೆಂದೂ ದೇವರೆಂದೂ ಭಾವಿಸಿ ಓಲೈಸುತ್ತಿದ್ದನು. ಇಹದಲ್ಲಾಗಲಿ, ಪರದಲ್ಲಾಗಲಿ ತನಗೆ ಆತನಿಗಿಂತ ಬೇರೆ ದೈವವಿಲ್ಲವೆಂದು ಕುವರ ದಂಡಾಧೀಶನು ಭಾವಿಸಿದ್ದನು. ಇದಕ್ಕಿಂತ ಹೆಚ್ಚಿನ ಸ್ವಾಮಿಭಕ್ತಿಯನ್ನು ಊಹಿಸುವುದಾದರೂ ಶಕ್ಯವೆ? ಅವನು ಬಲ್ಲಾಳ ನೃಪನ ಮಂತ್ರಿಯಾಗಿಯೂ ದಂಡಾಧೀಶನಾಗಿಯೂ ಇದ್ದನು. ಪ್ರಜೆಗಳು ಅವರಿಬ್ಬರ ವಿಚಾರವಾಗಿ "ಇವರಿಬ್ಬರಲ್ಲಿ ಆಳು ಅರಸು—ಎಂಬ ಭೇದವೆ ಸ್ವಲ್ಪವೂ ಇಲ್ಲ. ತೇಜಸ್ಸಿನಲ್ಲಿ ಮತ್ತು ರಾಜಚಿಹ್ನೆಗಳಲ್ಲಿ ಇಬ್ಬರೂ ಸಮಾನರಾಗಿ ಒಂದೇ ಸಮವಾಗಿದ್ದಾರೆ; ಪರಮೋತ್ಸವದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದಾರೆ. ಇವರಿಬ್ಬರೂ ಎಷ್ಟು ಪುಣ್ಯಶಾಲಿಗಳೋ!" ಎಂದು ಕೊಂಡಾಡುತ್ತಿದ್ದರು. ಕುವರ ಲಕ್ಷ್ಮದಂಡಾಧೀಶನು ತನ್ನ ಧನವನ್ನೂ ಪ್ರಾಣವನ್ನೂ ವೀರಬಲ್ಲಾಳನ ಸೇವೆಗೆ ಸಮರ್ಪಿಸಿ, ಪ್ರಭುವಿನ ದಾನೋನ್ನತಿಯನ್ನೂ ಜಯೋನ್ನತಿಯನ್ನೂ ಸಾಧಿಸಿ ತಮ್ಮಿಬ್ಬರ ಕೀರ್ತಿಯನ್ನೂ ರಾಜ್ಯದಲ್ಲಿ ಹಬ್ಬಿಸುವ ಪ್ರಯತ್ನವನ್ನು ಹೂಡಿದನು. ರಾಮನ ಬೀಡಿನಲ್ಲಿ ಹನುಮಂತನೂ, ಯುಧಿಷ್ಠಿರನ ಬೀಡಿನಲ್ಲಿ ಅರ್ಜುನನೂ, ಪರಮೇಶ್ವರನ ಬೀಡಿನಲ್ಲಿ ಕುಮಾರಸ್ವಾಮಿಯೂ ಇದ್ದಂತೆ ವೀರಬಲ್ಲಾಳನಲ್ಲಿ ಕುವರ ಲಕ್ಷ್ಮದಂಡಾಧೀಶನೂ ಇದ್ದನು; ಪ್ರಭುವಿಗೆ ದಕ್ಷಿಣ ಸಾಗರದವರೆಗಿನ ಪ್ರದೇಶವನ್ನು ಗೆದ್ದುಕೊಟ್ಟು, ಪಂಡಿತರಿಗೆ ಹಣವನ್ನೂ ಕೊಟ್ಟನು. ತನ್ನ ಧನವನ್ನೆಲ್ಲ ಈ ರೀತಿ ಪ್ರಭುಸೇವೆಗೆ ಸಮರ್ಪಿಸಿ, ದಾನಿಗಳಲ್ಲಿ ಸರಿದೊರೆಯಿಲ್ಲದವನೆಂಬ ಖ್ಯಾತಿಯನ್ನು ಗಳಿಸಿದನು. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಅವನಿಗೆ ಬಾರದ ವಿದ್ಯೆಯೇ ಇರಲಿಲ್ಲ. ತನ್ನ ಪ್ರಭುವು ಮೃತನಾದ ಕೂಡಲೆ ತಾನೂ ಮೃತನಾಗುವ ದೀಕ್ಷೆಯನ್ನು ತಳೆದು ಅವನು "ಗರುಡ"* ನಾದನು. ಅದರ ಸಂಕೇತವಾಗಿ ಎಡಗಾಲಿಗೆ ತೊಡರನ್ನು ಧರಿಸಿದನು. ಅದನ್ನು ಕಂಡು, ತನ್ನ ಪತಿಯು ಮೃತನಾದರೆ ಆ ಕೂಡಲೆ ತಾನೂ ಮೃತಪಡುವ ಪ್ರತಿಜ್ಞೆಮಾಡಿ ಅವನ ಹೆಂಡತಿ ಸುಗ್ಗಲದೇವಿಯು ಅದರ ಸಂಕೇತವಾಗಿ ತಾನೂ ಎಡದ ಕಾಲಿನಲ್ಲಿ ತೊಡರನ್ನು ಧರಿಸಿದಳು. ದಂಡಾಧಿಪತಿಯ ಕೈಕೆಳಗಿನ ಯೋಧರಲ್ಲಿ ಸಾವಿರ

---

ಭಾಷೆಯನಿಳಾಚಕ್ರಂ ಪೊಗಳ್ವಿನ್ನಗಂ। ಎಡಗಾಲೊಳ್ ತೊಡರಂ ತೊಂಡರ್ಚಿ ಪತಿಯಂ ಬೆಳ್ಮಾಡಿ ನಿನ್ನೊಂದು ಪಿಂಬಡಿನೊಳ್ ನಿಲ್ಪವಳಲ್ಲೆನೆಂದು ಸುಖದಿಂದುಂಡುಟ್ಟು ಕಾಲಂ ಕಳುತ್ತಡಸಲ್ ಪುಚ್ಚಳಿವನ್ನ ಕಾಮಿನಿಯರಂ ಜೋಡಾಡುವಂತ್ತಿಕ್ಕಿದಳ್ ತೊಡರಂ ಸುಗ್ಗಲದೇವಿ ತಂನೆಡದ ಪಾದಾಂಭೋಜದೊಳ್ ಲೀಲೆಯಿಂ। ............... ಇದು ಬಲ್ಲಾಳ ನೃಪಾಳಕಂಗೆ ಪಿರಿದುಂ ನಿತ್ಯತ್ವಮುಂ ಮಾಳ್ಪುದಭ್ಯುದಯಕ್ಕಾಗರವೆಂದು ಬಂಣಿಸೆ ಜಗಂ ಭಾಸ್ವತ್ ಶಿಳಾಸ್ತಂಭಮಂ ಸದಳಂಕಾರದ ವೀರಶಾಸನಮನೀ ದಂಡೇಶ ಲಕ್ಷ್ಮೀವರಂ ಸುದತೀ ಸಂಯುತಮೇಱಿದಂ ಪತಿಹಿತವ್ಯಾಪಾರಮಂ ತೋಱಿದಂ। ಕಂಬದ ಮೇಲೆ ಲಕ್ಷ್ಮವೆರಸಾ ಗರುಡಂ ಬೆರಸಾದ ಮುಟ್ಕಿಱಿನ್ದಂ ಬುಧ." (E. C. V. Belur 112).

* ಆ ದೀಕ್ಷೆಯನ್ನು ತಳೆದವನಿಗೆ "ಗರುಡ" ನೆಂದು ಹೆಸರು. ವಿಷ್ಣುವಿಗೆ ಗರುಡನು ಹೇಗೋ ಪ್ರಭುವಿಗೆ ಅವನೂ ಹಾಗೆ—ಎಂಬ ಸಂಕೇತದ ಮೇಲೆ.

ಮಂದಿಗಳೂ ಅದೇರೀತಿ ಪ್ರತಿಜ್ಞೆಮಾಡಿ ಎಡದ ಕಾಲುಗಳಲ್ಲಿ ತೊಡರುಗಳನ್ನು ಧರಿಸಿದರು. ಕ್ರಿಸ್ತಶಕ ೧೨೨೨ನೆಯ ಇಸವಿಯಲ್ಲಿ ಎರಡನೆಯ ಬಲ್ಲಾಳನು ಮೃತಪಟ್ಟಾಗ, ಆತನ ಪ್ರಜಾವಾತ್ಸಲ್ಯವನ್ನೂ, ಇತರ ಸದ್ಗುಣಗಳನ್ನೂ ನೆನೆದು ನೆನೆದು ಪ್ರಜೆಗಳು ಗೋಳಾಡಿದರು. ಕುಮಾರ ಲಕ್ಷ್ಮ ದಂಡಾಧೀಶನೂ, ಅವನ ಸಹಧರ್ಮಿಣಿ ಸುಗ್ಗಲದೇವಿಯೂ, ಅವನ ಅನುಚರರಾದ ಸಾವಿರ ಮಂದಿ ಯೋಧರೂ ತಮ್ಮ ತಮ್ಮ ಕತ್ತಿಗಳಿಂದ ತಮ್ಮ ತಮ್ಮ ತಲೆಗಳನ್ನು ತಾವೇ ಕತ್ತರಿಸಿಕೊಂಡು ಮೃತರಾದರು. ಈ ವರ್ತನೆಯ ಔಚಿತ್ಯದ ಪ್ರಶ್ನೆಯು ಹಾಗಿರಲಿ. ಅನನ್ಯಸುಲಭವಾದ ಈ ತ್ಯಾಗ ಬಲಿದಾನಗಳ ಹಿನ್ನೆಲೆಯಲ್ಲಿರುವ ಅಸೀಮ ಸ್ವಾಮಿನಿಷ್ಠೆಯ ಆದರ್ಶವನ್ನು ಗಮನದಲ್ಲಿಟ್ಟುಕೊಂಡು ತ್ರಿಕರಣಶುದ್ಧವಾದ ಸ್ವಾಮಿನಿಷ್ಠೆಯನ್ನು ಯಥಾಶಕ್ತಿಯಾಗಿ ಪ್ರತಿಯೊಬ್ಬರೂ ತೋರಿಸಿದರೆ ಕನ್ನಡನಾಡಿನ ಖ್ಯಾತಿಯು ಈಗಿರುವುದಕ್ಕಿಂತ ಅಧಿಕವಾಗುವುದರಲ್ಲಿ ಸಂದೇಹವೇ ಇಲ್ಲ.

## (ಉ) ದೈವಭಕ್ತಿ

ಕನ್ನಡಿಗರು ಅನುಸರಿಸಿದ ಮತ್ತೊಂದು ದೊಡ್ಡ ಸಂಪ್ರದಾಯವೆಂದರೆ, ದೈವಭಕ್ತಿಯನ್ನು ವೃದ್ಧಿಪಡಿಸಿಕೊಳ್ಳುವ ಸಂಪ್ರದಾಯ. ರೇಣುಕಾಚಾರ್ಯರು, ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಬಸವೇಶ್ವರರು, ಮಧ್ವಾಚಾರ್ಯರು, ಶಿವಶರಣರು, ಹರಿದಾಸರು ಮುಂತಾದವರೆಲ್ಲರೂ ಇದಕ್ಕೆ ಕೃಷಿ ಮಾಡಿದರು. ಜೈನರಿಂದ, ಮುಸಲ್ಮಾನರಿಂದ ಮತ್ತು ಕ್ರೈಸ್ತರಿಂದ ಕೂಡ, ದೈವಭಕ್ತಿಯು ವೃದ್ಧಿಯಾಗಲು ಸಹಾಯವಾಯಿತು. ಗುರುಮನೆಗಳ ಪ್ರಭಾವದಿಂದ ಅರಮನೆಗಳಲ್ಲೂ ದೈವಭಕ್ತಿಯು ಬೆಳಗಲು ಸಹಾಯವಾಯಿತು. ಹೊಯ್ಸಳರು, ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಚಕ್ರೇಶ್ವರರು, ಮೈಸೂರಿನ ಮಹಾರಾಜರುಗಳು—ಮುಂತಾದವರಿಂದ ಅನೇಕ ದೇವಾಲಯಗಳು ನಿರ್ಮಿತವಾದುವು. ದೈವಭಕ್ತಿಯ ಪರಿಣಾಮವಾಗಿ ಜನರಲ್ಲಿ ಪರೋಪಕಾರ ಬುದ್ಧಿಯು ವೃದ್ಧಿಯಾಗಲು ಅವಕಾಶವಾಯಿತು. ದರಿದ್ರರಿಗೆ ಸಹಾಯ ಮಾಡಿದಷ್ಟೂ, ಜೀವನ ಸೌಕರ್ಯಗಳನ್ನು ಹೆಚ್ಚಿಸಿದಷ್ಟೂ, ಸದ್ಗತಿಗೆ ಸಾಧಕವೆಂಬ ಅಚಲವಾದ ನಂಬಿಕೆಯು ಧನಿಕರಲ್ಲಿ ಮೂಡಿತು; ಪಾಪಕೃತ್ಯಗಳನ್ನು ಮಾಡಲು ಜನರು ಅಳುಕುವಂತಾಯಿತು. ಅಲ್ಲದೆ, ಅನ್ನಸತ್ರಗಳು, ಅರವಟ್ಟಿಗೆಗಳು, ಅಗ್ರಹಾರಗಳು, ದೇವಾಲಯಗಳು, ಕೆರೆಗಳು ಮುಂತಾದವುಗಳ ರೂಪದಲ್ಲಿ ಎಷ್ಟೆಷ್ಟು ಹೆಚ್ಚಾಗಿ ಸತ್ಕಾರ್ಯಗಳನ್ನು ಮಾಡಿದರೆ ಅಷ್ಟಷ್ಟೂ ಹೆಚ್ಚಾಗಿ ದೈವ ಕೃಪೆಗೆ ಪಾತ್ರರಾಗಬಹುದೆಂಬ ನಂಬಿಕೆಯು ದೃಢವಾಯಿತು. ಹೆಚ್ಚೇನನ್ನೂ ಮಾಡಲು ಶಕ್ತಿಯಿಲ್ಲದಿದ್ದವರು " ಹೊರೆಗಲ್ಲು " ಗಳನ್ನು ಏರ್ಪಡಿಸಿ ಸೋತ ದಾರಿಹೋಕರು ಇತರರ ಸಹಾಯವಿಲ್ಲದೆ ತಲೆಹೊರೆಯನ್ನು ಇಳಿಸಿ ಹೊರೆಗಲ್ಲಿನ ಮೇಲಿಟ್ಟು ವಿಶ್ರಮಿಸಿಕೊಳ್ಳಲು ಅನುಕೂಲಮಾಡಿಕೊಡುತ್ತಿದ್ದರು. ತಮ್ಮ ಮಕ್ಕಳು ದೊಡ್ಡವರಾದಮೇಲೆ ಸತ್ಕಾರ್ಯಗಳನ್ನಾಚರಿಸಬೇಕೆಂದು ತಾಯಿಯರು

ಬಯಸುವವರಾದರು. ಈ ಸಂಬಂಧದಲ್ಲಿ ಮನೋಹರವಾದ ಒಂದು ನಿದರ್ಶನ ವನ್ನು ಸೂಚಿಸಬಹುದಾಗಿದೆ: ವಿಜಯನಗರದ ಚಕ್ರೇಶ್ವರನಾಗಿದ್ದ ಮೊದಲನೆಯ ದೇವರಾಯನ ಮುಖ್ಯಮಂತ್ರಿ ಲಕ್ಷ್ಮೀಧರನು ಪ್ರಜಾಸೌಕರ್ಯಗಳನ್ನು ನಿರ್ಮಿ ಸುವುದಕ್ಕಾಗಿ ಸಂತತವಾಗಿ ಶ್ರಮಿಸಿದನು. ಅದು, ಆತನ ಬಾಲ್ಯದಲ್ಲಿ ಹಾಲನ್ನು ಕುಡಿಸಿದಾಗಲೆಲ್ಲ ಅವನ ತಾಯಿ ಅವನ ಕಿವಿಯಲ್ಲೆರೆದ ಅಮೃತವಾಣಿಗಳ ಪರಿಣಾಮವೆಂದು ವರ್ಣಿತವಾಗಿದೆ. ಆ ಅಮೃತವಾಣಿಗಳು ಇವು:

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ |
ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ |
ರ್ಗೆರೆವಟ್ಟಾಗಿರು ಶಿಷ್ಯರಂ ಪೊರೆ ಎನುತ್ತಿಂತೆಲ್ಲಮಂ ಪಿಂತೆ ತಾ |
ನೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ||

ಭಕ್ತಿಯಿಂದ ಏನು ತಾನೆ ನಡೆಯಲಾರದು—ಎಂದರು ಒಬ್ಬರು ಆಚಾರ್ಯ ಶ್ರೇಷ್ಠರು. ದೈವಭಕ್ತಿಯೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ. ರಾಷ್ಟ್ರ ಪಿತಾಮಹ ಮಹಾತ್ಮಾ ಗಾಂಧಿಯವರೇ ಭಕ್ತಿಯ ಅಮೃತಫಲ. ದೈವಭಕ್ತಿಯು ಕಡಮೆಯಾಗುತ್ತಿರುವ ಇಂದಿನ ಸಮಯದಲ್ಲಿ ಅದನ್ನು ವೃದ್ಧಿಗೊಳಿಸುವ ಪೂರ್ವ ಸಂಪ್ರದಾಯವನ್ನು ಆಸ್ಥೆಯಿಂದ ಪುನರುಜ್ಜೀವನಗೊಳಿಸಿ ಶ್ರದ್ಧೆಯಿಂದ ಅನುಸರಿ ಸುವುದೇ ಜೀವನದ ಸಮಸ್ತ ಕ್ಷೇತ್ರಗಳಲ್ಲೂ ಯಶಸ್ವಿಯಾಗಿ ಕೆಲಸ ನಡೆಯುವಂತೆ ಮಾಡುವ ರಾಜಮಾರ್ಗ.

## ೪. ಪರಿಸಮಾಪ್ತಿ

ಹೀಗೆ, ಕನ್ನಡಿಗರು ಅನೇಕ ಶ್ರೇಷ್ಠ ಸಂಪ್ರದಾಯಗಳನ್ನು ಏರ್ಪಡಿಸಿ ವೃದ್ಧಿಗೊಳಿಸಿದರು; ಅವುಗಳನ್ನು ಅನುಸರಿಸಿ ಧವಳ ಕೀರ್ತಿಯನ್ನು ಗಳಿಸಿದರು. ಅವುಗಳಲ್ಲಿ ಕೆಲವು ಇಂದಿಗೂ ಉಳಿದಿವೆ; ಕೆಲವು ಅಳಿದಿವೆ; ಮತ್ತೆ ಕೆಲವು ಮಸಕಾಗಿ ಕೊಂಚ ಕೊಂಚ ಕಂಡುಬರುತ್ತಿವೆ. ಕನ್ನಡನಾಡೆಲ್ಲ ಒಂದಾಗಿ, ಕನ್ನಡಿಗರೆಲ್ಲ ಒಟ್ಟುಗೂಡಿರುವ ಇಂದಿನ ಶುಭ ಸಮಯದಿಂದ ಕನ್ನಡನಾಡಿನ ಶ್ರೇಷ್ಠ ಸಂಪ್ರದಾಯಗಳನ್ನೆಲ್ಲ ಮತ್ತೆ ಉಜ್ಜೀವನ ಗೊಳಿಸಿ, ಎಲ್ಲಿಂದ ಬೆಳಕು ಬಂದರೂ ಸ್ವೀಕರಿಸಿ ದೇಶೋನ್ನತಿ ಸಾಧನೆಗೆ ಸಹಾಯಕವಾಗುವ ನೂತನ ಸಂಪ್ರದಾಯಗಳನ್ನೂ ರೂಪಿಸಿ, ಹಿಂದಿನಿಂದಲೂ ಕನ್ನಡಿಗರು ಗಳಿಸಿಕೊಂಡು ಬಂದಿದ್ದ ಖ್ಯಾತಿಯು ಮೊದಲಿಗಿಮ್ಮಡಿಯಾಗುವಂತೆ ಜನಜೀವನವನ್ನು ಸರ್ವತೋಮುಖವಾಗಿ ಉತ್ತಮಗೊಳಿಸಿ, ತನ್ಮೂಲಕ ಕನ್ನಡನಾಡಿಗೂ, ಭಾರತಕ್ಕೂ ತ್ರಿಕರಣಶುದ್ಧವಾದ ಸೇವೆಯನ್ನು ಸಲ್ಲಿಸುವುದು ಕನ್ನಡಿಗರೆಲ್ಲರ ಅವಶ್ಯ ಕರ್ತವ್ಯವೇ ಸರಿ. ಸರ್ವಶಕ್ತನೂ, ದಯಾಮಯನೂ ಆದ ಭಗವಂತನು ಆ ಕರ್ತವ್ಯಪಾಲನೆಗೆ ತಕ್ಕ ಶಕ್ತಿಸಾಮರ್ಥ್ಯಗಳನ್ನು ಅನುಗ್ರಹಿಸಿ ಕೃಪೆ ಮಾಡಲಿ!

---

# ಕನ್ನಡ ನಾಡಿನ ಲಲಿತಕಲೆಗಳು

## — ವಾಸ್ತುಶಿಲ್ಪ —

ಲೇಖಕರು :

ಡಾ|| ಎಂ. ಶೇಷಾದ್ರಿ ಅವರು, ಮೈಸೂರು.

### ೧. ನಾಡಿನ ಪ್ರಶಸ್ತಿ

ಕನ್ನಡನಾಡು ವಾಸ್ತುಶಿಲ್ಪಕ್ಕೆ ಅತಿ ಪ್ರಸಿದ್ಧವಾದುದು. ಇಲ್ಲಿ ಅನೇಕ ರಾಜ್ಯಗಳು ಹುಟ್ಟಿ, ಬೆಳೆದು, ಕಲೆ ಮತ್ತು ಸಾಹಿತ್ಯ ಮೊದಲಾದುವುಗಳಿಗೆ ಪ್ರೋತ್ಸಾಹ ನೀಡಿದುವು. ಕದಂಬರು, ಗಂಗರು, ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ರಾಜರು, ತಮ್ಮತಮ್ಮ ಆಳ್ವಿಕೆಯಲ್ಲಿ ಕರ್ನಾಟಕದಲ್ಲಿ ಸುಂದರವಾದ ಅನೇಕ ದೇವಾಲಯಗಳನ್ನು ಕಟ್ಟಿಸಿ, ಅವುಗಳಲ್ಲಿ ಪೂಜೆ ಮೊದಲಾದ ಕಾರ್ಯಗಳಿಗೆ ಅನುಕೂಲವಾಗುವಂತೆ ಅನೇಕ ದತ್ತಿಗಳನ್ನೂ ಕಲ್ಪಿಸಿದರು.

ಭಾರತೀಯ ವಾಸ್ತುಶಿಲ್ಪದ ವಿಚಾರದಲ್ಲಿ ಸಂಸ್ಕೃತ ಗ್ರಂಥಗಳು ಮೂರು ತರಹ ಕಟ್ಟಡಗಳ ನಿರ್ಮಾಣವನ್ನು ಹೇಳುತ್ತವೆ. ಮೊದಲನೆಯದು ನಾಗರ, ಎರಡನೆಯದು ದ್ರಾವಿಡ, ಮೂರನೆಯದು ವೇಸರ. ನಾಗರ ನಮೂನೆಯ ಕಟ್ಟಡಗಳು ಉತ್ತರ ಭಾರತದ ದೇವಾಲಯಗಳಿಗೆ ಸಂಬಂಧಪಟ್ಟುವೆಂದು ಹೇಳಬಹುದು. ಒರಿಸ್ಸಾ ಪ್ರಾಂತ್ಯದ ಭುವನೇಶ್ವರ, ಮಧ್ಯ ಇಂಡಿಯದ ಕಾಜುರಹೋ, ರಜಪುಟಾಣ ಮತ್ತು ಗುಜರಾತಿನ ದೇವಾಲಯಗಳು ನಾಗರ ನಮೂನೆಗೆ ಸೇರಿದುವು. ಈ ದೇವಾಲಯಗಳ ಶಿಖರವು ಒಳಬಾಗುಳ್ಳ (Curvilinear) ಆಕಾರವನ್ನು ಹೊಂದಿದೆ. ಇದಕ್ಕೆ ವಿರುದ್ಧವಾಗಿ ದ್ರಾವಿಡ ನಮೂನೆಯ ಶಿಖರವು ಪಿರಮಿಡ್ (Pyramidal) ಆಕಾರವನ್ನು ಹೊಂದಿರುತ್ತದೆ. ಪಲ್ಲವರ ಮತ್ತು ಚೋಳರ ದೇವಾಲಯಗಳ ಶಿಖರಗಳು ದ್ರಾವಿಡ ನಮೂನೆಯ ಮುಖ್ಯ ಉದಾಹರಣೆಗಳು. ವೇಸರ ಕಟ್ಟಡದ ವಿವರಣೆಯನ್ನು ಕೊಡುವುದು ಸುಲಭವಲ್ಲ. ನಾಗರ ಮತ್ತು ದ್ರಾವಿಡ ಇವೆರಡು ನಮೂನೆಗಳ ವೈಶಿಷ್ಟ್ಯವನ್ನು ವೇಸರದ ಕಟ್ಟಡದಲ್ಲಿ ಅಳವಡಿಸಲಾಗಿದೆ. ಚಾಲುಕ್ಯರ ವಾಸ್ತುಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡ ಸಂಪ್ರದಾಯಗಳೆರಡನ್ನೂ ಸೇರಿಸಿಕೊಂಡಿರುವುದರಿಂದ ಇದನ್ನೇ ವೇಸರವೆಂದು ಹೇಳಬಹುದು. ಚಾಲುಕ್ಯರ ವಾಸ್ತುಶಿಲ್ಪವು ಮೂರು ಅಂಶಗಳಿಂದ ಕೂಡಿದೆ. (೧) ಬೌದ್ಧರ ಚೈತ್ಯ—ಇದನ್ನು ನಾವು ಐಹೊಳೆಯ ದುರ್ಗಾ ದೇವಾಲಯದಲ್ಲಿ ನೋಡಬಹುದು. (೨) ಒಳಗಡೆ ಬಾಗುಳ್ಳ ಶಿಖರ, (೩) ಅಡ್ಡಡ್ಡವಾದ ಹಂತಗಳಿಂದ ಕೂಡಿದ ಶಿಖರ.

## ೨. ಕದಂಬರ ಶಿಲ್ಪ

ಕದಂಬರು ತಮ್ಮ ಮುಖ್ಯಪಟ್ಟಣಗಳಾದ ವೈಜಯಂತಿ (ಬನವಾಸಿ) ಮತ್ತು ಪಲಸಿಕ (ಹಲಸಿ) ಎಂಬಲ್ಲಿ ಹಲವಾರು ದೇವಾಲಯಗಳನ್ನು ಕಟ್ಟಿಸಿದರು. ಕರ್ನಾಟಕದ ವಾಸ್ತುಶಿಲ್ಪದ ಬೆಳವಣಿಗೆಯಲ್ಲಿ ಕದಂಬರ ಪಾತ್ರ ಬಹಳ ಮಹತ್ತರವಾದುದು. ಅವರೇ ಇಲ್ಲಿ ವಾಸ್ತುಶಿಲ್ಪದ ತಳಹದಿಯನ್ನು ಹಾಕಿದರೆಂದರೆ ತಪ್ಪಲ್ಲ. ೧೯ನೇ ಶತಮಾನದ ಕೊನೆಯಲ್ಲಿ ಬರೆಯುತ್ತಾ ಉದ್ದಾಮ ಪಾಶ್ಚಾತ್ಯ ಪಂಡಿತರಾದ ಫರ್‌ಗುಸನ್‌ರವರು ಕರ್ನಾಟಕದ ವಿವಿಧ ಪುರಾತನ ಕಟ್ಟಡಗಳೆಲ್ಲಾ ಚಾಲುಕ್ಯ ಸಂಪ್ರದಾಯಕ್ಕೆ ಸೇರಿದುವೆಂದು ಅಭಿಪ್ರಾಯಪಟ್ಟರು. ಇವರ ಮೇಲ್ಪಂಕ್ತಿಯನ್ನೇ ಅನುಸರಿಸಿ ಡಾ|| ಕಸೆನ್ಸ್‌ರವರು ತಮ್ಮ ಉತ್ತಮ ಗ್ರಂಥವಾದ "ಚಾಲುಕ್ಯರ ವಾಸ್ತುಶಿಲ್ಪ"ದಲ್ಲಿ ಚಾಲುಕ್ಯರ ಮತ್ತು ಕದಂಬರ ಕಟ್ಟಡಗಳನ್ನು ಬೇರ್ಪಡಿಸಿಲ್ಲ. ಕದಂಬರು ದೇವಾಲಯಗಳನ್ನು ಕಟ್ಟುವಾಗ ಗರ್ಭಗೃಹ ಮತ್ತು ಸುಕನಾಸಿ ಎಂಬುದಾಗಿ ಮೊಟ್ಟಮೊದಲು ಕರ್ನಾಟಕದಲ್ಲಿ ಎರಡು ಭಾಗಗಳನ್ನು ಬೇರೆಬೇರೆಯಾಗಿ ಮಾಡಿದರೆಂದೂ, ಅದಕ್ಕೆ ಮೊದಲು ಶಾತವಾಹನರು (ಆಂಧ್ರ ಭೃತ್ಯರು) ಇವೆರಡನ್ನೂ ಒಟ್ಟಿಗೆ ಸೇರಿಸಿ ಒಂದು ಹಜಾರದಂತಿರುವ (Hall) ದೇವಾಲಯವನ್ನು ಕಟ್ಟುತ್ತಿದ್ದರೆಂದೂ ಡಾ|| ಮೊರೆಸ್‌ರವರು ಅಭಿಪ್ರಾಯಪಡುತ್ತಾರೆ. ಚಾರಿತ್ರಿಕ ದೃಷ್ಟಿಯಿಂದ ಕದಂಬರ ಈ ತರಹ ಕಟ್ಟಡಗಳು ಈಗಲೂ ಉಳಿದು ಬಂದಿವೆಯೆಂದು ಹೇಳಬಹುದು. ೫ನೇ ಶತಮಾನದ ಕಾಕುತ್ಸವರ್ಮ ಮತ್ತು ಅವನ ಮಗ ಶಾಂತಿವರ್ಮ ಇವರುಗಳ ಕಾಲಕ್ಕೆ ಸೇರಿ ಕದಂಬರ ಚರಿತ್ರೆಯನ್ನು ಕಟ್ಟಲು ನಮಗೆ ಹೆಚ್ಚಾಗಿ ಸಹಾಯಕವಾಗಿರುವ ತಾಲಗುಂದದ ಶಾಸನವು ಶಾತಕರ್ಣಿ ಮೊದಲಾದ ರಾಜರು ಪೂಜೆ ಸಲ್ಲಿಸಿದ ಪ್ರಣವೇಶ್ವರಲಿಂಗದ ವಿಚಾರವನ್ನು ಹೇಳುವುದು. ಅಲ್ಲಿರುವ ದೇವಾಲಯದ ಕಟ್ಟಡವು ದಕ್ಷಿಣ ದೇಶದಲ್ಲೆಲ್ಲಾ ಅತಿ ಪುರಾತನವಾದುದೆಂದು ಹೇಳಬಹುದು. ಪ್ರಣವೇಶ್ವರಲಿಂಗವನ್ನೊಳಗೊಂಡ ಗರ್ಭಗುಡಿಯು ಕ್ರಿ. ಶ. ೪೫೦ಕ್ಕಿಂತ ಹಿಂದೆಯೇ ಇತ್ತೆಂದು ಹೇಳಲು ನಮಗೆ ಆಧಾರವಿದೆ. ಆ ಗರ್ಭಗೃಹದ ದ್ವಾರದ ಕಂಬದ (Jamb) ಮೇಲೆ ಮೃಗೇಶವರ್ಮನ ರಾಣಿಯಾದ ಪ್ರಭಾವತಿಯ ಶಾಸನವಿರುವುದರಿಂದ ಇದು ವ್ಯಕ್ತವಾಗಿದೆ. ಐಹೊಳೆಯ ದುರ್ಗಾ ದೇವಾಲಯವಾಗಲಿ, ಮಾಮಲ್ಲಪುರದ ಗುಹಾಂತರ ದೇವಾಲಯಗಳಾಗಲಿ ಇದಕ್ಕಿಂತ ಪ್ರಾಚೀನವಾದುವೇನೂ ಅಲ್ಲ. ಡಾ|| ಮೊರೆಸ್ ಹೇಳುವಂತೆ ಹಲಸಿಯಲ್ಲಿರುವ ಜೈನ ಬಸದಿಯು ಕದಂಬರ ಕಾಲದ ಇನ್ನೊಂದು ಅತ್ಯಂತ ಪುರಾತನ ಕಟ್ಟಡವೆಂದು ಹೇಳಬಹುದು. ಇದು ಕೂಡ ಐದನೆ ಶತಮಾನದಲ್ಲಿ ಆಳಿದ ಮೃಗೇಶವರ್ಮನಿಂದ ಕಟ್ಟಲ್ಪಟ್ಟಿತೆಂದು ಡಾ|| ಫ್ಲೀಟ್‌ರವರು ಶಾಸನದ ಸಹಾಯದಿಂದ ಗೊತ್ತು ಹಚ್ಚಿದ್ದಾರೆ.

ಹಲಸಿಯ 'ಕಲ್ಲೇಶ್ವರ' ದೇವಾಲಯವು ಕದಂಬರ ವಾಸ್ತುಶಿಲ್ಪದ ಮತ್ತೊಂದು ಹಂತವೆಂದು ಹೇಳಬಹುದು. ಅದರ ಕಂಬಗಳು ಘನಾಕೃತಿಯವಾಗಿಯೂ

ಮತ್ತು ಅಷ್ಟಮೂಲೆಯುಳ್ಳವಾಗಿಯೂ ಇವೆ. ಗರ್ಭಗೃಹ, ಸುಖನಾಸಿಗಳ ಜೊತೆಗೆ ಮಂಟಪವೂ ಸೇರಿಕೊಳ್ಳಲಾರಂಭವಾಯಿತು..

ಯಲವಟ್ಟಿಯ ದೇವಾಲಯಗಳಲ್ಲಿ ಕದಂಬರ ಕಾಲದ ಶಿಖರವನ್ನು ನಾವು ಕಾಣಬಹುದು. ಶಿಖರದಲ್ಲಿ ಅಡ್ಡಡ್ಡಲಾದ ಹಂತಗಳು ಒಂದಾದ ಮೇಲೊಂದು ಬರುವಂತೆ ಅಳವಡಿಸಿಕೊಂಡು ಹೋಗುವ ಒಂದು ಹೊಸ ರೀತಿಯು ಕದಂಬರ ವಾಸ್ತುಶಿಲ್ಪದ ಒಂದು ವೈಶಿಷ್ಟ್ಯವೆಂದು ಅನೇಕ ವಿದ್ವಾಂಸರ ನಂಬಿಕೆ. ಈ ಮಾದರಿಯ ಶಿಖರವನ್ನು ನಾವು ಮೈಸೂರು ದೇಶದ ಹಾಸನ ಜಿಲ್ಲೆಯಲ್ಲಿರುವ ದೊಡ್ಡಗದ್ದವಳ್ಳಿಯಲ್ಲಿ ವಿಷ್ಣುವರ್ಧನನಿಂದ ಕಟ್ಟಲ್ಪಟ್ಟ ಲಕ್ಷ್ಮೀದೇವಿ ದೇವಾಲಯದಲ್ಲಿ ನೋಡಬಹುದು.

ಕದಂಬರ ವಾಸ್ತುಶಿಲ್ಪದ ಅಂತಿಮ ಪ್ರಗತಿಯನ್ನು ನಾವು ದೆಗಾಂವೆಯ ಕಮಲಾನಾರಾಯಣ ದೇವಾಲಯದಲ್ಲಿ ಕಾಣಬಹುದು. ಹೊಯ್ಸಳ ಪ್ರಭಾವಕ್ಕೆ ಒಳಗಾದ ಈ ದೇವಾಲಯವನ್ನು ಬಂಕೇಶ್ವರ ದೇವನಿಗೆ ಪ್ರಿಯನಾದ ತಿಪ್ಪೋಜ ನೆಂಬುವನು ಗೋವಾ-ಕದಂಬ ರಾಜನಾದ ಶಿವಚಿತ್ತನ ರಾಣಿ ಕಮಲಾದೇವಿಗಾಗಿ ಹನ್ನೆರಡನೆ ಶತಮಾನದ ಮಧ್ಯದಲ್ಲಿ ಕಟ್ಟಿದನು.

## ೩. ಗಂಗರ ಶಿಲ್ಪ

ಗಂಗರು ಮೈಸೂರು ದೇಶದಲ್ಲಿ ಆಳಿ, ವಾಸ್ತುಶಿಲ್ಪದ ಪ್ರಗತಿಗೆ ಕಾರಣರಾದರು. ಅವರ ರಾಜಧಾನಿ ತಲಕಾಡು. ಅವರ ಕಾಲದ ಕಟ್ಟಡಗಳು ನಮಗೆ ಹೆಚ್ಚಾಗಿ ಉಳಿದು ಬಂದಿಲ್ಲ. ತಲಕಾಡಿನಲ್ಲಂತೂ ಅವರ ಅನೇಕ ಕಟ್ಟಡಗಳು ಮರಳಿನಲ್ಲಿ ಹೂತುಹೋಗಿವೆ. ಗಂಗರ ಕೆಲವು ಕಟ್ಟಡಗಳು ಶ್ರವಣಬೆಳಗೊಳದಲ್ಲಿ ಉಳಿದುಬಂದಿವೆ. ಸುಪ್ರಸಿದ್ಧ ಗೊಮ್ಮಟೇಶ್ವರ ವಿಗ್ರಹವು ಗಂಗರಾಜನಾದ ರಾಚಮಲ್ಲ ಸತ್ಯವಾಕ್ಯನ (Rachamalla, ೯೭೪-೯೮೪) ಮಂತ್ರಿಯಾದ ಚಾಮುಂಡರಾಯನಿಂದ ಕೆತ್ತಿಸಲ್ಪಟ್ಟಿತು. ಕ್ರಿ.ಶ. ೯೭೮ರಲ್ಲಿ ರಚಿತವಾದ ಚಾಮುಂಡರಾಯನ ಪುರಾಣದಲ್ಲಿ ಈ ವಿಗ್ರಹದ ವಿಷಯವನ್ನು ಹೇಳಿಲ್ಲವಾದ್ದರಿಂದ ಇದು ಆ ಕಾಲದಿಂದಾಚೆಗೆ ಕೆತ್ತಲ್ಪಟ್ಟಿರಬೇಕೆಂದು ಊಹಿಸಬಹುದು. ವಿಗ್ರಹವನ್ನು ಕೆತ್ತಿ ಮುಗಿಸಿದ ಕಾಲ ಕ್ರಿ.ಶ. ೯೮೩ ಎಂದು ಈಗಿರುವ ಆಧಾರದ ಮೇಲೆ ಹೇಳಬಹುದು. ಈ ವಿಗ್ರಹವು ಸುಮಾರು ಅರವತ್ತು ಅಡಿ ಎತ್ತರವುಳ್ಳ ಒಂದೇ ಗ್ರಾನೈಟ್ ಬಂಡೆಯಲ್ಲಿ (Granite Tor) ಕೆತ್ತಲ್ಪಟ್ಟಿದೆ. ಶಿಲ್ಪಿಯು ಈ ಅಮೋಘವಾದ ವಿಗ್ರಹವನ್ನು ಮಾಡಲು ತನ್ನ ಚಾತುರ್ಯವನ್ನೆಲ್ಲಾ ವೆಚ್ಚಮಾಡಿದ್ದಾನೆ. ವಿಗ್ರಹದ ಮುಖವು ವ್ಯಸನಪೂರಿತವಾದ ನಗುವಿನಿಂದ ಕೂಡಿದಂತೆ ನಮಗೆ ಭಾಸವಾಗುತ್ತದೆ. ಕಷ್ಟಕಾರ್ಪಣ್ಯಗಳಿಂದ ಕೂಡಿದ ಮಾನವನ ಜೀವನದಲ್ಲಿ ಸಹಾನುಭೂತಿಯನ್ನೂ, ಅಂತರಂಗದಲ್ಲಿ ಶಾಂತಿಯನ್ನೂ ಮತ್ತು ತ್ಯಾಗವನ್ನೂ ಗೊಮ್ಮಟೇಶ್ವರ ಮೂರ್ತಿಯು ತೋರಿಸುತ್ತಿದೆ. ಗೊಮ್ಮಟೇಶ್ವರ ವಿಗ್ರಹವು ಪ್ರಪಂಚದಲ್ಲೆಲ್ಲಾ ಅತ್ಯಂತ ಎತ್ತರವೂ ಮತ್ತು ಸುಂದರವೂ ಆದ ವಿಗ್ರಹಗಳಲ್ಲಿ ಒಂದಾಗಿದೆ.



ಅಖಂಡ ಗುಹಾಂತರ ದೇವಾಲಯ, ಬಾದಾಮಿ, ಬಿಜಾಪುರ ಜಿಲ್ಲೆ
(ಚಾಲುಕ್ಯರ ವಾಸ್ತುಶಿಲ್ಪ)



ಗೋಮಟೇಶ್ವರನ ಅಖಂಡ ಶಿಲಾಮೂರ್ತಿ, ಶ್ರವಣಬೆಳಗೊಳ, ಹಾಸನ ಜಿಲ್ಲೆ
(ಎತ್ತರ : ೫೮ ಅಡಿಗಳು)

ಗಂಗರ ಕಾಲಕ್ಕೆ ಸೇರದ ಇನ್ನೂ ಅನೇಕ ಗೊಮ್ಮಟೇಶ್ವರ ಮೂರ್ತಿಗಳು ಕರ್ಣಾಟಕದಲ್ಲಿ ಇವೆ. (ಇಲವಾಲದ ಹತ್ತಿರವಿರುವ ಶ್ರವಣಗುಡ್ಡದ ಮೇಲೆ ಸುಮಾರು ೧೪ನೇ ಶತಮಾನಕ್ಕೆ ಸೇರಿದ ೨೦ ಅಡಿ ಎತ್ತರದ ಗೊಮ್ಮಟ ವಿಗ್ರಹ ವಿದೆ. ಕೃಷ್ಣರಾಜಸಾಗರದಿಂದಾಚೆಗೆ ಸುಮಾರು ೧೫ ಮೈಲಿ ದೂರದಲ್ಲಿರುವ ಬಸ್ತಿಹಳ್ಳಿ-ಹೊಸಕೋಟೆಯಲ್ಲಿ ೧೮ ಅಡಿ ಎತ್ತರದ ಮತ್ತೊಂದು ಗೊಮ್ಮಟನ ವಿಗ್ರಹವನ್ನು ಮೈಸೂರು ಪ್ರಾಚ್ಯ ಸಂಶೋಧನ ಇಲಾಖೆಯವರು ಈಚೆಗೆ ಪತ್ತೆಹಚ್ಚಿದ್ದಾರೆ. ಇದರ ಹತ್ತಿರ ಗಂಗರ ಕಾಲದ ಬಸದಿಯ ಅವಶೇಷಗಳೂ ಮತ್ತು ವಿಷ್ಣುವರ್ಧನನ ಶಾಸನವಿರುವ ಮತ್ತೊಂದು ಮಂಟಪದ ಅವಶೇಷಗಳೂ ಇರುವುದರಿಂದ, ಇದರ ಕಾಲವು ವಿಷ್ಣುವರ್ಧನನ ಕಾಲಕ್ಕಿಂತ ಈಚಿನದೆಂದು ಹೇಳಲು ಸಾಧ್ಯವಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದಲ್ಲಿ ೪೧ ಅಡಿ ೫ ಅಂಗುಲ ಎತ್ತರವಿರುವ ಗೊಮ್ಮಟವಿಗ್ರಹವನ್ನು ಕ್ರಿ.ಶ. ೧೪೩೨ರಲ್ಲಿ ವೀರ ಪಾಂಡ್ಯನೆಂಬುವನು ಕೆತ್ತಿಸಿದನು. ಏಣೂರಿನಲ್ಲಿರುವ (ವೇಣೂರು) ೩೫ ಅಡಿ ಎತ್ತರದ ಗೊಮ್ಮಟವಿಗ್ರಹವನ್ನು ಬೆಳಗೊಳದ ಚಾರುಕೀರ್ತಿ ಪಂಡಿತನ ಪ್ರೇರಣೆಯ ಮೇಲೆ ತಿಮ್ಮರಾಜನೆಂಬುವನು ಕ್ರಿ.ಶ. ೧೬೦೪ರಲ್ಲಿ ನಿರ್ಮಿಸಿದನು.

ಗಂಗರ ಕಾಲದ ಪಂಚಲೋಹದ ವಿಗ್ರಹಗಳು (Bronze) ಇಲ್ಲವೇ ಇಲ್ಲವೆಂದು ಹೇಳಬಹುದು. ಕೆಲವು ಕಾಲದ ಹಿಂದೆ ಮಿ|| ಕ್ರಾಫರ್ಡ್ ಎಂಬುವರು ಮಂಜರಾಬಾದ್ ತಾಲ್ಲೂಕಿನ ತಮ್ಮ ಕಾಫಿ ತೋಟದಲ್ಲಿ ಅಗತೆ ಮಾಡಿಸುತ್ತಿದ್ದಾಗ ಅವರಿಗೆ ಅಕಸ್ಮಾತ್ತಾಗಿ ಅತ್ಯಂತ ಸುಂದರವಾದ ಪಂಚಲೋಹದ ಒಂದು ಜಿನ ವಿಗ್ರಹವು ಸಿಕ್ಕಿತು. ಅದರ ಪೀಠದಲ್ಲಿ ಅದೃಷ್ಟವಶಾತ್ ಶಾಸನವಿರುವುದರಿಂದ ಅದರ ಕಾಲವನ್ನು ಸುಲಭವಾಗಿ ನಿರ್ಣಯಿಸಬಹುದು. ಅದು ಗಂಗರಾಜನಾದ ನೊಳಂಬ ಕುಲಾಂತಕ ಎರಡನೇ ಮಾರಸಿಂಹನ (೯೬೧-೯೭೪) ಅಕ್ಕ ಕುಂದಣ ಸೋಮಿದೇವಿಯನ್ನು ಪ್ರಶಂಸಿಸುತ್ತದೆ. ಇದು ಈಗ ಶ್ರವಣಬೆಳಗೊಳದ ಜೈನ ಮಠದಲ್ಲಿ ಸುರಕ್ಷಿತವಾಗಿ ಇಡಲ್ಪಟ್ಟಿದೆ.

ಗಂಗರ ಕಾಲದ ಸುಂದರವಾದ ವಿಗ್ರಹಗಳಲ್ಲದೆ, ಶ್ರವಣಬೆಳಗೊಳದಲ್ಲಿ ಗಂಗರಕಾಲದ ಕಟ್ಟಡಗಳೂ ನಮಗೆ ಸಿಕ್ಕಿವೆ. ಇವುಗಳ ಕಾಲವನ್ನು ನಿಸ್ಸಂದೇಹ ವಾಗಿ ಶಾಸನಗಳ ಸಹಾಯದಿಂದ ಪತ್ತೆ ಮಾಡಬಹುದು. ಚಂದ್ರಪ್ರಭಾ ಬಸದಿಯು ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮಂಟಪ ಇವುಗಳಿಂದ ಕೂಡಿ ಎಂಟನೆ ತೀರ್ಥಂಕರನಾದ ಚಂದ್ರಪ್ರಭನ ವಿಗ್ರಹವನ್ನು ಹೊಂದಿದೆ. ಅವನ ಯಕ್ಷ ಮತ್ತು ಯಕ್ಷೀಯರಾದ ಶ್ಯಾಮ ಮತ್ತು ಜ್ವಾಲಾಮಾಲಿನಿಯರನ್ನು ಸುಖನಾಸಿ ಯಲ್ಲಿ ಕಾಣಬಹುದು. ನವರಂಗದಲ್ಲಿರುವ ಶಾಸನವು ಗಂಗರಾಜನಾದ ಎರಡನೆ ಶಿವಮಾರನು ಇದನ್ನು ಕಟ್ಟಿಸಿದನೆಂದು ಹೇಳುತ್ತದೆ. ಇದರ ಕಾಲವು ಕ್ರಿ.ಶ. ೮೦೦ ಎಂದು ಹೇಳಬಹುದಾದರೂ, ಹಳೆಯ ಬಸದಿಯ ಮೇಲೆ ಹೊಸ ಕಟ್ಟಡವನ್ನು ಕಟ್ಟಿರುವುದು ಕಾಣುತ್ತದೆ. ಚಾಮುಂಡರಾಯನ ಬಸದಿಯು ಎರಡು ಅಂತಸ್ತಿ ನಿಂದ ಕೂಡಿ ಶಿಖರವನ್ನುಳ್ಳದ್ದಾಗಿದೆ. ನೇಮಿನಾಥ, ಅವನ ಯಕ್ಷ ಮತ್ತು ಯಕ್ಷೀಯರಾದ ಸರ್ವಾಣ ಮತ್ತು ಕೂಶ್ಮಾಂಡಿನಿಯರಿಂದೊಡಗೂಡಿ ಇಲ್ಲಿ

ಇದ್ದಾನೆ. ಇಲ್ಲಿರುವ ಶಾಸನವು ಚಾಮುಂಡರಾಯನು ಇದನ್ನು ಕ್ರಿ.ಶ. ೯೮೨ರಲ್ಲಿ ಕಟ್ಟಿಸಿದನೆಂದು ತಿಳಿಸುತ್ತದೆ. ನೇಮಿನಾಥನ ಪೀಠದಲ್ಲಿ ಕ್ರಿ.ಶ. ೧೧೩೮ರಲ್ಲಿ ಬರೆಸಿದ ಈಚಣನ ಶಾಸನವಿರುವುದರಿಂದ ಅದು ಕಟ್ಟಡಕ್ಕಿಂತ ಈಚಿನದೆಂದೂ ಮತ್ತು ಅದನ್ನು ಅಲ್ಲಿಗೆ ಒಯ್ದಿಡಲಾಯಿತೆಂದೂ ಊಹಿಸಬಹುದು. ಚಾಮುಂಡರಾಯನ ಮಗನಾದ ಜಿನದೇವನು ಈ ಬಸದಿಯ ಎರಡನೆ ಅಂತಸ್ತನ್ನು ಕ್ರಿ.ಶ. ೯೯೫ರಲ್ಲಿ ಕಟ್ಟಿಸಿದನೆಂದು ಕಾಣುತ್ತದೆ.

ಶ್ರವಣಬೆಳಗೊಳದ ಸಮೀಪದಲ್ಲಿರುವ ಕಂಬದಹಳ್ಳಿ ಕರ್ಣಾಟಕ ವಾಸ್ತುಶಿಲ್ಪದಲ್ಲಿ ವಿಖ್ಯಾತವಾದುದು. ಅಲ್ಲಿ ಸುಮಾರು ಕ್ರಿ.ಶ. ೯೦೦ ಕ್ಕೆ ಸೇರಿದ ಕೆಲವು ಪುರಾತನ ಕಟ್ಟಡಗಳು ಇವೆ. ಇವುಗಳಲ್ಲಿ ಆದಿನಾಥನ ಬಸದಿಯು ಮುಖ್ಯವಾದುದು. ಇದರ ಶಿಖರವು ನಂದಿಯಲ್ಲಿರುವ ಭೋಗನಂದೀಶ್ವರ ಮತ್ತು ನರಸಮಂಗಲದ ರಾಮೇಶ್ವರ ದೇವಾಲಯಗಳ ಶಿಖರಗಳನ್ನು ಹೋಲುತ್ತದೆ.

## ೪. ಚಾಲುಕ್ಯರ ಶಿಲ್ಪ

ಕರ್ಣಾಟಕದ ವಾಸ್ತುಶಿಲ್ಪಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿದವರು ಬಾದಾಮಿಯ ಚಾಲುಕ್ಯರು. ಆರನೆ ಶತಮಾನದ ಪ್ರಥಮಾರ್ಧದಲ್ಲಿ ಒಂದನೆ ಪುಲಿಕೇಶಿಯು ಬಾದಾಮಿಯಲ್ಲಿ ಬಲವಾದ ಕೋಟೆಯನ್ನು ಕಟ್ಟಿದನು. ಅವನ ಮಗ ಒಂದನೆ ಕೀರ್ತಿವರ್ಮ ಮತ್ತು ಮಂಗಳೀಶ ಇವರು ಚಾಲುಕ್ಯರ ಪ್ರಾಬಲ್ಯವನ್ನು ಹೆಚ್ಚಿಸಿದರು. ಕೀರ್ತಿವರ್ಮನ ಮಗನಾದ ಎರಡನೆ ಪುಲಿಕೇಶಿಯ ಕಾಲಕ್ಕೆ ಸೇರಿದ ಐಹೊಳೆಯ ಶಾಸನವು ಚಾಲುಕ್ಯರ ಚರಿತ್ರೆಯನ್ನು ತಿಳಿಯಲು ನಮಗೆ ಅತ್ಯಂತ ಉಪಯುಕ್ತವಾಗಿದೆ. ಅದರಲ್ಲಿ ಚಾಲುಕ್ಯರು ಸಪ್ತಮಾತೃಕೆಯರನ್ನೂ ಮತ್ತು ಕಾರ್ತಿಕೇಯನನ್ನೂ ತಮ್ಮ ಮನೆದೇವರನ್ನಾಗಿ ಪೂಜಿಸುತ್ತಿದ್ದರೆಂದು ಹೇಳಿದೆ. ಸ್ವಲ್ಪಕಾಲದಲ್ಲೇ ಅವರು ವಿಷ್ಣುವಿನ ಭಕ್ತರಾಗಿ ಅವನ ವರಾಹಾವತಾರವನ್ನು ತಮ್ಮ ಲಾಂಛನವನ್ನಾಗಿ ಮಾಡಿಕೊಂಡರು. ಆದರೆ ಅವರು ವಿಷ್ಣುದೇವಾಲಯಗಳನ್ನು ಮಾತ್ರ ಕಟ್ಟದೆ ಜೈನ ಬಸದಿಗಳನ್ನೂ ಮತ್ತು ಶಿವಾಲಯಗಳನ್ನೂ ತಮ್ಮ ಪ್ರಜೆಗಳಿಗಾಗಿ ಕಟ್ಟಿಸಿದರು. ಪರಮ ಮಹಾಭಾಗವತನಾದ ಮಂಗಳೀಶನೂ ಮತ್ತು ಕೀರ್ತಿವರ್ಮನೂ ಬಾದಾಮಿಯಲ್ಲಿ ಐದು ಗುಹಾಂತರ ದೇವಾಲಯಗಳನ್ನು (Rock-cut Temples) ಕಟ್ಟಿಸಿದರು. ಒಂದು ಶಿವನದು, ಮತ್ತೊಂದು ಜಿನನದು, ಉಳಿದ ಮೂರು ವಿಷ್ಣುವಿನವು. ಈ ಗುಹಾಂತರ ದೇವಾಲಯಗಳ ಪಕ್ಕದಲ್ಲೇ ಸುಂದರವಾದ ಅನಂತಶಾಯಿಯ ವಿಗ್ರಹವು ಕೂಡಾ ಇದೆ. ಮಂಗಳೀಶನನ್ನು (ಕ್ರಿ. ಶ. ೫೯೭-೬೦೯) "ಚಾಲುಕ್ಯರ ವಾಸ್ತುಶಿಲ್ಪದ ತಂದೆ" ಎಂದು ಹೇಳಬಹುದು. ಬಾದಾಮಿಗಿಂತ ಐಹೊಳೆ ಚಾಲುಕ್ಯರ ವಾಸ್ತುಶಿಲ್ಪದ ತೌರುಮನೆಯೆಂದು ಹೇಳಬಹುದು. ಇಲ್ಲಿ ಕ್ರಿ. ಶ. ೪೫೦ರಿಂದ ೬೫೦ರ ತನಕ ಅಭಿವೃದ್ಧಿಗೆ ಬಂದ ಚಾಲುಕ್ಯರ ಶಿಲ್ಪದ ಬೆಳವಣಿಗೆಯು ಕಂಡುಬರುತ್ತದೆ. ಐಹೊಳೆಯಲ್ಲಿ ಸುಮಾರು ಎಪ್ಪತ್ತು ದೇವಾಲಯಗಳಿವೆ.

ಲಾಡ್‌ಖಾನ್ (Lad Khan) ದೇವಾಲಯವು ಐಹೊಳೆ ದೇವಾಲಯಗಳಲ್ಲೆಲ್ಲಾ ಪುರಾತನವಾದುದು. ಕ್ರಿ. ಶ. ೪೫೦ರಲ್ಲಿ ಕಟ್ಟಲ್ಪಟ್ಟ ಈ ವಿಷ್ಣುದೇವಾಲಯದಲ್ಲಿ ಸ್ವಲ್ಪಕಾಲ ಮುಸಲ್ಮಾನನೊಬ್ಬನು ವಾಸಮಾಡುತ್ತಿದ್ದುದರಿಂದ ಇದಕ್ಕೆ ಲಾಡ್‌ಖಾನ್ ದೇವಾಲಯವೆಂದು ಹೆಸರಾಯಿತು. ಕಲಶವನ್ನು (Water-pot) ಒಂದು ಅಲಂಕಾರದ ಚಿಹ್ನೆಯಾಗಿ ಉಪಯೋಗಿಸಿಕೊಂಡಿರುವುದು ಇಲ್ಲಿ ನಮಗೆ ಕಾಣುತ್ತದೆ. ಗಂಗಾ ಮತ್ತು ಯಮುನಾ ವಿಗ್ರಹಗಳು ಮಂಟಪದ ಕಂಬದ ಮೇಲೆ ಕೆತ್ತಲ್ಪಟ್ಟಿರುವುದು ಗಮನಾರ್ಹವಾಗಿದೆ. ಇವು ಗುಪ್ತರ ದೇವಾಲಯದ ಒಂದು ಕುರುಹಾದರೂ ಚಾಲುಕ್ಯರು ಅವನ್ನು ತಮ್ಮ ವಾಸ್ತುಶಿಲ್ಪದಲ್ಲಿ ಉಪಯೋಗಿಸಿಕೊಂಡರೆಂದು ಈ ದೇವಾಲಯದಿಂದ ಗೊತ್ತು ಮಾಡಬಹುದು. ಸುಮಾರು ಐವತ್ತು ಅಡಿ ಚದುರದ ಈ ದೇವಾಲಯದಲ್ಲಿ ಗೋಡೆಯಲ್ಲಿ ಬೆಳಕು ತೂರಿಬರಲು ಮಾಡಿರುವ ಜಾಲಂಧ್ರಗಳು (Perforated Windows) ಸುಂದರವಾಗಿಯೂ ಮತ್ತು ಜಾಣ್ಮೆಯಿಂದಲೂ ಕೆತ್ತಲ್ಪಟ್ಟಿವೆ. ಇದೇ ನಮೂನೆಗೆ ಸೇರಿದ ಕೊಂಟಗುಡಿಯು ದಪ್ಪವಾದ ಮತ್ತು ಕುಳ್ಳಾದ ನಾಲ್ಕು ಕಂಬಗಳಿಂದ ಕೂಡಿದೆ. ಅವು ಬೋದಿಗೆಗಳವರೆಗೂ (Capital) ಒಂದೇ ಸಮನಾಗಿ ಚದುರಾಕಾರವಾಗಿವೆ. ದುರ್ಗಾ ದೇವಾಲಯವು ಐಹೊಳೆಯ ಅತ್ಯಂತ ಸೊಗಸಾದ ಕಟ್ಟಡ. ಇದರಲ್ಲಿ ಬೌದ್ಧರ ಚೈತ್ಯದಲ್ಲಿ ಕಂಡುಬರುವ ಅಂಶವನ್ನು ಅಳವಡಿಸಲಾಗಿದೆ. ಕುದುರೆ ಲಾಳದ (Horse shoe) ಆಕಾರದ ಈ ದೇವಾಲಯದ ಕೈಸಾಲೆಯ ಕಂಬಗಳ ಮೇಲೆ ಸುಂದರವಾದ ಶಿಲ್ಪಗಳನ್ನು ಕೆತ್ತಿದೆ. ಮೆಗುತಿ ಎಂಬ ಜೈನ ದೇವಾಲಯವು ಎರಡನೆ ಪುಲಿಕೇಶಿಯ ಕಾಲದಲ್ಲಿ (ಕ್ರಿ. ಶ. ೬೩೪) ನಿರ್ಮಿತವಾಯಿತು.

ಎರಡನೆ ಪುಲಿಕೇಶಿಯು ಕಾಲವಾದ ನಂತರ ವಿಜಯಾದಿತ್ಯ ಮತ್ತು ಎರಡನೆ ವಿಕ್ರಮಾದಿತ್ಯ ಇವರುಗಳ ಕಾಲದಲ್ಲಿ ಚಾಲುಕ್ಯರು ಪಲ್ಲವರನ್ನು ಸೋಲಿಸಿ ಕಾಂಚಿಯ ಮೇಲೆ ನುಗ್ಗಿದರಷ್ಟೆ. ಕಾಂಚಿಯ ರಾಜಸಿಂಹೇಶ್ವರ ದೇವಾಲಯವನ್ನು ನೋಡಿ ಎರಡನೆ ವಿಕ್ರಮಾದಿತ್ಯನು ತನ್ನ ಮೆಚ್ಚುಗೆಯನ್ನು ತೋರಿಸಿದ್ದಲ್ಲದೆ, ಪಲ್ಲವ ರಾಜ್ಯದಿಂದ ದೇವಾಲಯಗಳನ್ನು ನಿರ್ಮಿಸಲು ಅನೇಕ ಶಿಲ್ಪಿಗಳನ್ನು ತನ್ನ ದೇಶಕ್ಕೆ ಒಯ್ದನು. ಈ ರೀತಿ ದ್ರಾವಿಡ ವಾಸ್ತುಶಿಲ್ಪದ ಅನೇಕ ಅಂಶಗಳು ಚಾಲುಕ್ಯರ ವಾಸ್ತುಶಿಲ್ಪಕ್ಕೆ ನೆರವಾದುವು. ಐಹೊಳೆಯಿಂದ ಹದಿನೈದು ಮೈಲಿ ದೂರದ ಪಟ್ಟದಕಲ್ಲಿನಲ್ಲಿ ಚಾಲುಕ್ಯ ಶಿಲ್ಪದ ಅತ್ಯಂತ ಪ್ರಗತಿದಾಯಕವಾದ ಹಂತವನ್ನು ನೋಡಬಹುದು. ಇದು ವಾಸ್ತುಶಿಲ್ಪದ ನಮೂನೆಗಳ ಮಿಳಿತಕ್ಕೆ ಒಳ್ಳೆಯ ಉದಾಹರಣೆ. ಇಲ್ಲಿ ಕಾಶಿನಾಥ, ಪಾಪನಾಥ ಮೊದಲಾದ ದೇವಾಲಯಗಳು ಉತ್ತರ ಭಾರತದ ನಮೂನೆಗೂ ಮತ್ತು ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ, ಗಳಗನಾಥ ಮೊದಲಾದುವು ದಕ್ಷಿಣ ಭಾರತದ ಸಂಪ್ರದಾಯಕ್ಕೂ ಸೇರಿವೆಯೆಂದು ಪರ್ಸಿಬ್ರೌನ್‌ರವರ ಅಭಿಪ್ರಾಯ. ಆದರೆ ಪಾಪನಾಥ ಮತ್ತು ವಿರೂಪಾಕ್ಷ ದೇವಾಲಯಗಳಲ್ಲಿ ಉತ್ತರ ಮತ್ತು ದಕ್ಷಿಣ ಭಾರತದ ಪ್ರಭಾವಗಳೆರಡೂ ಇವೆ. ಎರಡನೆ ವಿಕ್ರಮಾದಿತ್ಯನ ರಾಣಿ ಲೋಕಮಹಾದೇವಿ

ವಿರೂಪಾಕ್ಷ ದೇವಾಲಯವನ್ನೂ ಮತ್ತು ಆಕೆಯ ಸಹೋದರಿ ತ್ರೈಲೋಕೇಶ್ವರ (ಮಲ್ಲಿಕಾರ್ಜುನ) ದೇವಾಲಯವನ್ನೂ ಕಟ್ಟಿಸಿದರು.

ಚಾಲುಕ್ಯರ ವಾಸ್ತುಶಿಲ್ಪವು ಧಾರವಾಡ ಜಿಲ್ಲೆಯಲ್ಲಿ ಜನಿಸಿ ಪ್ರವರ್ಧಮಾನಕ್ಕೆ ಬಂದಿತಾದರೂ ಹನ್ನೊಂದನೆ ಶತಮಾನದಲ್ಲಿ ಮೈಸೂರು ದೇಶದ ಶಿವಮೊಗ್ಗ ಜಿಲ್ಲೆಗೂ ಪ್ರಸರಿಸಿತು. ಮೈಸೂರು ದೇಶದ ಹೊಯ್ಸಳ ರಾಜರು ಚಾಲುಕ್ಯರಿಗೆ ಅಧೀನರಾಗಿದ್ದುದರಿಂದ ಚಾಲುಕ್ಯರ ನಮೂನೆಯ ಕಟ್ಟಡಗಳನ್ನು ಇಲ್ಲೂ ಕಟ್ಟಲು ಪ್ರಾರಂಭಿಸಿದರು. ಶಿರಾಳಕೊಪ್ಪದ ಸಮೀಪದಲ್ಲಿರುವ ಬೆಳಗಾಮಿಯು ಇದಕ್ಕೆ ಉತ್ತಮವಾದ ಉದಾಹರಣೆ. ಕುಪ್ಪಗದ್ದೆ ಮತ್ತು ಆನವಟ್ಟಿ ಮೊದಲಾದ ಸ್ಥಳಗಳಲ್ಲೂ ಇದನ್ನು ಕಾಣಬಹುದು. ಬೆಳಗಾಮಿಯ ತ್ರಿಪುರಾಂತಕ (ಕ್ರಿ. ಶ. ೧೦೭೦) ದೇವಾಲಯದಲ್ಲಿ ರಾಮಾಯಣಕ್ಕೆ ಸೇರಿದ ಕೆಲವು ಶಿಲ್ಪಗಳಲ್ಲದೆ ಪಂಚತಂತ್ರದ ಅನೇಕ ಕಥೆಗಳನ್ನೂ ಕೆತ್ತಿದೆ. ಟಗರು ಮತ್ತು ನರಿ, ಕಪಿ ಮತ್ತು ಮೊಸಳೆ, ಆಮೆ ಮತ್ತು ಹಂಸ—ಇವುಗಳ ಕಥೆಗಳು ಅದರಲ್ಲಿ ಬಹಳ ಮುಖ್ಯವಾದುವು.

ಬೆಳಗಾಮಿಯ ಉಮಾಮಹೇಶ್ವರನು ಚಾಲುಕ್ಯ ಶಿಲ್ಪದ ಒಂದು ಅತ್ಯಂತ ಕಲಾಪೂರ್ಣವಾದ ಕೃತಿಯಾಗಿದೆ. ಶಿವನ ಬಲಪಾದವು ನಂದಿಯ ಬೆನ್ನಿನ ಮೇಲೆ ಇಡಲ್ಪಟ್ಟಿದೆ. ಪಾರ್ವತಿಯು ಶಿವನ ಎಡದ ತೊಡೆಯ ಮೇಲೆ ಕುಳಿತಿದ್ದಾಳೆ. ಶಿವನ ಒಂದು ಕೈ ಪಾರ್ವತಿಯ ಹೆಗಲ ಮೇಲೆ ಬಳ್ಳಿಯಂತೆ ಬಾಗಿ ಕುಳಿತಿದೆ. ಪಾರ್ವತಿಯ ಬಲಗೈ ಶಿವನ ಬಲಭುಜದ ಮೇಲೆ ಇಡಲ್ಪಟ್ಟಿದೆ. ಶಿವನ ಅಂದವಾದ ಜಟಾಮುಕುಟವು ಮತ್ತು ಯಜ್ಞೋಪವೀತವು ಎದ್ದು ಕಾಣುತ್ತಿದೆ. ಕಿವಿಯಲ್ಲಿ ಮಕರ ಕುಂಡಲವಿದೆ. ಮುಖದಲ್ಲಿ ಕಿರುನಗೆ ಇದೆ. ಪಾರ್ವತಿಯ ಕೇಶವು ಸುಂದರವಾದ ಗುಂಗುರುಗಳಿಂದ ಕೂಡಿದೆ. ಆಕೆಯ ಎಡಪಾದವು ಪದ್ಮದ ಮೇಲಿದೆ. ಪಕ್ಕಗಳೆರಡರಲ್ಲಿ ಕುಮಾರ ಮತ್ತು ಗಣಪತಿ ನಿಂತಿದ್ದಾರೆ. ಉಮಾಮಹೇಶ್ವರನ ಮೇಲೆ ಪ್ರಭಾವಳಿಯು ಅತ್ಯಂತ ಸುಂದರವಾದ ಬಳ್ಳಿಯಿಂದ ಕೂಡಿದಂತೆ ಕೆತ್ತಲ್ಪಟ್ಟಿದೆ.

## ೫. ಹೊಯ್ಸಳರ ಶಿಲ್ಪ

ಕರ್ಣಾಟಕ ವಾಸ್ತುಶಿಲ್ಪದಲ್ಲಿ ಹೊಯ್ಸಳರ ಪಾತ್ರ ಅತಿ ಮುಖ್ಯವಾದುದು. ಅವರು ಹನ್ನೊಂದನೆ ಶತಮಾನದಲ್ಲಿ ರಾಜ್ಯಕಟ್ಟಿ ವಿಷ್ಣುವರ್ಧನನ ಕಾಲದ ವೇಳೆಗೆ ಉಚ್ಛ್ರಾಯಸ್ಥಿತಿಗೇರಿದರು. ಅವರ ಎದುರಾಳಿಗಳಾದ ಚೋಳರು ತಲಕಾಡನ್ನು ಬಿಟ್ಟು ಓಡಿಹೋಗಬೇಕಾಯಿತು. ಕಾವೇರಿ ನದಿಯ ದಡದಲ್ಲಿ ನಡೆದ ಒಂದು ದೊಡ್ಡ ಯುದ್ಧದಲ್ಲಿ ಚೋಳರ ಸೇನಾಪತಿಯಾದ ಆದಿಯಮನನ್ನು ವಿಷ್ಣುವರ್ಧನನು ಸೋಲಿಸಿ "ತಲಕಾಡುಕೊಂಡ" ಎಂಬ ಬಿರುದನ್ನು ಪಡೆದನು. ಈ ವಿಜಯದ ಗುರುತಿಗಾಗಿ ವಿಷ್ಣುವರ್ಧನನು ಅನೇಕ ದೇವಾಲಯಗಳನ್ನು ಕಟ್ಟಿಸಿದನು. ಇವುಗಳಲ್ಲಿ ಬೇಲೂರಿನ ವಿಜಯನಾರಾಯಣ (ಕೇಶವ) ಮತ್ತು ತಲಕಾಡಿನ ಕೀರ್ತಿನಾರಾಯಣ ದೇವಾಲಯಗಳು ಮುಖ್ಯವಾದುವು. ಒಂದನೆ ಬಲ್ಲಾಳ



ಕೃಷ್ಣರಾಜ ಸಾಗರ ಹೊಟೇಲು, ಬೃಂದಾವನ



ಬೃಂದಾವನದ ದಕ್ಷಿಣಭಾಗ

ಮತ್ತು ಅವನ ತಮ್ಮ ವಿಷ್ಣುವರ್ಧನ ಇವರುಗಳ ಕಾಲದಲ್ಲಿ ಬೇಲೂರು ಹೊಯ್ಸಳರ ಮುಖ್ಯಪಟ್ಟಣವಾಗಿತ್ತು. ವಿಜಯನಾರಾಯಣನ ವಿಗ್ರಹದ ಪೀಠದ ಕೆಳಗೆ ಇರುವ ಶಾಸನದಿಂದ ಬೇಲೂರು ದೇವಾಲಯವು ಕ್ರಿ.ಶ. ೧೧೧೭ರಲ್ಲಿ ನಿರ್ಮಿಸಲ್ಪಟ್ಟಿತೆಂದು ತಿಳಿದುಬರುತ್ತದೆ. ಈ ದೇವಾಲಯದ ಜಾಲಂಧ್ರಕ್ಕೆ ಸೇರಿರುವ ಗೋಡೆಯ ಮೇಲೆ ವಿಷ್ಣುವರ್ಧನನ ದರ್ಬಾರನ್ನು ಕೆತ್ತಿದೆ.

ಹೊಯ್ಸಳರ ದೇವಾಲಯಗಳು ಇತರ ದಕ್ಷಿಣ ಭಾರತದ ದೇವಾಲಯಗಳಂತೆ ಹೆಚ್ಚಾಗಿ ಎತ್ತರವಾಗಿಲ್ಲ. ಅವುಗಳಿಗೆ ಉಪಯೋಗಿಸಿರುವ ಒಂದು ತರಹ ಬಳಪದ ಕಲ್ಲು (Cloritic Schist) ದೊಡ್ಡ ದೊಡ್ಡ ಪ್ರಮಾಣದಲ್ಲಿ ಸಿಕ್ಕದೆ ಇದ್ದುದ್ದು ಇದಕ್ಕೆ ಕಾರಣವಿರಬಹುದು. ಫರ್‌ಗುಸನ್ ಹೇಳುವಂತೆ ಹೊಯ್ಸಳ ದೇವಾಲಯವನ್ನು ದೂರದಿಂದ ನೋಡಿದರೆ ಅದರ ಮಹತ್ವವು ಅಷ್ಟು ಚೆನ್ನಾಗಿ ಗೋಚರವಾಗುವುದಿಲ್ಲ. ಆದರೆ ಅದರಲ್ಲಿರುವ ಅದ್ಭುತವಾದ ಕಲಾಕೌಶಲ್ಯವು ಸಮೀಪದಿಂದ ನೋಡಿದಾಗ ನಮ್ಮನ್ನು ಬೆರಗುಗೊಳಿಸುವುದು. ಹೊಯ್ಸಳರು ಚಾಲುಕ್ಯರ ಕಟ್ಟಡದ ನಮೂನೆಯನ್ನೇ ಅನುಸರಿಸಿ ಬೆಳೆಸಿಕೊಂಡು ಬಂದರು. ಆದರೆ ಅದಕ್ಕೆ ತಮ್ಮದೇ ಆದ ವಿಗ್ರಹ ಶಿಲ್ಪ, ಬಳ್ಳಿ ಮತ್ತು ಪ್ರಾಣಿಗಳ ಶಿಲ್ಪ ಇವುಗಳನ್ನು ವಿಪುಲವಾಗಿ ಸೇರಿಸಿದರು. ಅವರ ಕೆತ್ತನೆಯ ಕೆಲಸವು ಚಿನ್ನ ಬೆಳ್ಳಿಯಲ್ಲಿ ಕೆಲಸಮಾಡುವ ಅಕ್ಕಸಾಲಿಗರ ನೈಪುಣ್ಯಕ್ಕಿಂತಲೂ ಮಿಗಿಲಾದುದು.

ದೇವಾಲಯವು ಚಿಕ್ಕದಾದರೂ ಅದನ್ನು ಒಂದು ನಕ್ಷತ್ರಾಕಾರದ ಜಗತಿಯ ಮೇಲೆ (Platform) ಕಟ್ಟಿರುವುದರಿಂದ ಅವರ ವಾಸ್ತುಶಿಲ್ಪದ ರೀತಿಯು ಎದ್ದು ಕಾಣುತ್ತದೆ. ದೇವಾಲಯದ ಗೋಡೆಗಳನ್ನು ಅಲೆಗಳ ಏರುತಗ್ಗುಗಳಂತೆ ಬಿಡಿಸಿರುವುದರಿಂದ ಅಲ್ಲಿ ಬೆಳಕು ಮತ್ತು ನೆರಳಿನ ಪ್ರತಿಕ್ರಿಯೆಯು ಸ್ಪಷ್ಟವಾಗಿ ಕಾಣುವುದು. ಹೊಯ್ಸಳ ದೇವಾಲಯದಲ್ಲಿ ಭುವನೇಶ್ವರಿಯನ್ನು (Ceiling) ಕೆತ್ತಿದ ಮಾಟ ಮತ್ತೆಲ್ಲಿಯೂ ನಮಗೆ ಕಾಣದು (ಚಿತ್ರ ೧೦). ಇಷ್ಟೇ ಅಲ್ಲದೆ ದೇವಾಲಯದ ನವರಂಗದಲ್ಲಿ ವಿಧವಿಧವಾಗಿ ಕೆತ್ತಲ್ಪಟ್ಟಿರುವ ಕಂಬಗಳು ತಮ್ಮದೇ ಆದ ವೈವಿಧ್ಯದಿಂದ ಕೂಡಿವೆ. ಅವುಗಳಲ್ಲಿ ಹದಿನಾರು ಮೂಲೆಯವು, ಮೂವತ್ತೆರಡು ಮೂಲೆಯವು, ಸುಮ್ಮನೆ ವರ್ತುಲಾಕಾರದಿಂದ ಕೂಡಿದುವು, ಗಂಟೆಯಾಕಾರದವು—ಇವೇ ಮೊದಲಾದುವು ಕನ್ನಡಿಯಂತೆ ಕಾಣುವ ಹೊಳಪಿನಿಂದ ಕೂಡಿವೆ.

ಬೇಲೂರು ದೇವಸ್ಥಾನವನ್ನು ಜಕಣಾಚಾರಿ ಮತ್ತು ಡಕಣಾಚಾರಿ ಎಂಬ ಪ್ರಖ್ಯಾತರಾದ ಶಿಲ್ಪಿಗಳು ಕಟ್ಟಿದರೆಂದು ಪ್ರತೀತಿ ಇದೆ. ಆದರೆ ಇವರು ಚರಿತ್ರೆಗೆ ತಿಳಿದವರಲ್ಲ. ಊಹಾಪ್ರಪಂಚಕ್ಕೆ ಸೇರಿದವರು. ವಿಷ್ಣುವರ್ಧನನ ಅನೇಕ ಶಿಲ್ಪಿಗಳ ಹೆಸರುಗಳನ್ನು ಬೇಲೂರು ದೇವಸ್ಥಾನದಲ್ಲಿ ನಾವು ಕಾಣಬಹುದು. ಅವರು ತಾವು ಕೆತ್ತಿದ ವಿಗ್ರಹಗಳ ಕೆಳಗೆ ತಮ್ಮ ಹೆಸರುಗಳನ್ನು ಕೆತ್ತಿಕೊಂಡಿದ್ದಾರೆ. ದಾಸೋಜ ಮತ್ತು ಅವನ ಮಗ ಚಾವಣನೆಂಬುವರು ಬಳ್ಳಿಗ್ರಾಮೆಯಿಂದ (ಬೆಳಗಾಮಿ) ಬಂದವರು. ಇವರ ಶಿಲ್ಪಕಲೆಯ ಸೊಬಗನ್ನೂ, ಕುಶಲತೆಯನ್ನೂ ನೋಡಿದರೆ ಇವರನ್ನೇ ನಮ್ಮ ಜನ ಜಕಣಾಚಾರಿ ಮತ್ತು ಡಕಣಾಚಾರಿ ಎಂಬ

ಸಾಮಾನ್ಯ ಹೆಸರಿನಿಂದ ಕರೆದಿರಬಹುದು. ಇವರುಗಳು ಅನೇಕ ಬಿರುದುಗಳನ್ನು ಸಂಪಾದಿಸಿದರು. ದಾಸೋಜನಿಗೆ "ಬಿರುದರೂವಾರಿ ಗೊಂದಲ ಬಡಿವ" ಎಂದೂ, ಚಾವಣನಿಗೆ "ಬಿರುದರೂವಾರಿ ಮದನ ಮಹೇಶ" ಎಂದೂ, ಬಿರುದುಗಳಿತ್ತೆಂದು ಶಾಸನಗಳಿಂದ ನಮಗೆ ಗೊತ್ತಾಗಿದೆ. ದಾಸೋಜನು ಮತ್ತು ಚಾವಣನು ತಲಾ ನಾಲ್ಕು ಬೇಲೂರಿನ ಶಿಲಾಬಾಲಿಕೆಯರ ವಿಗ್ರಹಗಳನ್ನು ಮಾಡಿದರು. ದಾಸೋಜನ ಬೇಟೆಗಾತಿ (Huntress) ವಿಗ್ರಹವು ಅತ್ಯದ್ಭುತವಾದುದು. ಮಂಗವು ಯುವತಿಯ ಸೀರೆಯನ್ನೆಳೆಯುವಂತೆ ಕೆತ್ತಿದ ಚಾವಣನ ಶಿಲ್ಪವು ಪ್ರಶಂಸನೀಯವಾದುದು. ಕೊಳಲಿನ ನೃತ್ಯದ ಶಿಲಾಬಾಲಿಕೆಯ ವಿಗ್ರಹವನ್ನು ಕೆತ್ತಿದ ಮಲ್ಲಿಯಣ್ಣ, ನೃತ್ಯದಲ್ಲಿ ತೊಡಗಿರುವ ಯುವತಿಯ ಶಿಲ್ಪವನ್ನು ಕೆತ್ತಿದ ಗದುಗಿನ ನಾಗೋಜ, ನವರಂಗದಲ್ಲಿ ಶಿಲ್ಪ ಕೆಲಸಮಾಡಿದ ಚಿಕ್ಕಹಂಪ ಮತ್ತು ಪಾದರಿ ಮಲ್ಲೋಜ—ಇವರೆಲ್ಲರೂ ವಿಷ್ಣುವರ್ಧನನ ಶಿಲ್ಪಿಗಳು. ಇವರ ಕಾಲ ಸುಮಾರು ಕ್ರಿ.ಶ. ೧೧೧೭.

ಹಳೇಬೀಡು ಹೊಯ್ಸಳ ದೇವಾಲಯಗಳ ಬೀಡೆಂದರೆ ತಪ್ಪಲ್ಲ. ಹೊಯ್ಸಳ ರಾಜಧಾನಿಯಾಗಿದ್ದ ಹಳೇಬೀಡಿನಲ್ಲಿ ಅನೇಕ ದೇವಾಲಯಗಳಿದ್ದುದು ಆಶ್ಚರ್ಯವೇನೂ ಅಲ್ಲ. ಆದರೆ ಅಲ್ಲಿನ ಅನೇಕ ದೇವಾಲಯಗಳು ಈಗ ನಾಶವಾಗಿವೆ. ಹೊಯ್ಸಳೇಶ್ವರ ದೇವಾಲಯವನ್ನು ವಿಷ್ಣುವರ್ಧನನ ಅಧಿಕಾರಿಯಾದ ಕೇತಮಲ್ಲನೆಂಬುವನು ಕ್ರಿ.ಶ. ೧೧೨೧ರಲ್ಲಿ ಕಟ್ಟಿಸಿದನು. ಇಪ್ಪತ್ತು ವರ್ಷಗಳನಂತರ ಒಂದನೆ ನರಸಿಂಹನ ಪಟ್ಟಶಿಲ್ಪಿ ಕೇದಾರೋಜನು ನಾಲ್ಕು ದ್ವಾರಗಳನ್ನು ಮತ್ತು ಜಾಲಂಧ್ರಗಳನ್ನು ಸೇರಿಸಿದನು. ಅಲ್ಲಿರುವ ದಕ್ಷಿಣ ದ್ವಾರದ ಮೇಲಿನ ಈ ಕೆಳಗೆ ಕಂಡ ಶಾಸನವು ಇದನ್ನು ವ್ಯಕ್ತಪಡಿಸುತ್ತದೆ—

"ಸ್ವಸ್ತಿ ಶ್ರೀಮತು ಪ್ರತಾಪ ಹೊಯ್ಸಳ ನಾರಸಿಂಹದೇವನ
ರುವಾರಿ ಕೇದಾರೋಜಂಗೆ ಮಲಪರಗಂಡ
ಭೇರುಂಡ ರೂವಾರಿ ಗಿರಿವಜ್ರದಂಡ ರೂವಾರಿ ಕಾಳಿದಾಸಿ ಗೆಯ್ದ
ಮಕರ ತೋರಣ | ಮಂಗಳ ಶ್ರೀ"

ಇದೇ ದೇವಸ್ಥಾನಕ್ಕೆ ಸೇರಿದ ನೃತ್ಯಸರಸ್ವತಿಯ ವಿಗ್ರಹವನ್ನು ಹರಿಪನೆಂಬುವನು ಕೆತ್ತಿದನು. ಅನೇಕ ಶಿಲ್ಪಿಗಳು ತಾವು ಮಾಡಿದ ಕಲಾಕೃತಿಗಳ ಕೆಳಗೆ ತಮ್ಮ ನಾಮಾಂಕಿತದ ಮೊದಲನೆ ಅಕ್ಷರವನ್ನು ಮಾತ್ರ (Initial) ಕೊರೆಯುವ ಪದ್ಧತಿಯನ್ನು ಇಟ್ಟುಕೊಂಡಿದ್ದರೆಂದು ಕಾಣುತ್ತದೆ. ಹೊಯ್ಸಳೇಶ್ವರ ದೇವಾಲಯದ ಸುಪ್ರಸಿದ್ಧ ಶಿಲ್ಪಿಯಾದ ಮಾಬ ಎಂಬುವನು "ಮಾ" ಎಂಬ ಒಂದೇ ಅಕ್ಷರವನ್ನು ತನ್ನ ಹೆಸರನ್ನು ಸೂಚಿಸಲು ಹಾಕಿಕೊಂಡಿದ್ದಾನೆ. ಹದಿಮೂರನೆ ಶತಮಾನಕ್ಕೆ ಸೇರಿದ ಅರಳಗುಪ್ಪೆಯ ಕೇಶವ ದೇವಾಲಯದಲ್ಲಿ ಶಿಲ್ಪಿ ಹೋನೋಜ ಎಂಬುವನು ಇಪ್ಪತ್ತೇಳು ಶಿಲ್ಪಗಳ ಕೆಳಗೆ ತನ್ನ ಹೆಸರನ್ನು ಹಾಕಿಕೊಂಡಿದ್ದಾನೆ. ಅವುಗಳಲ್ಲಿ ಹನ್ನೆರಡರ ಕೆಳಗೆ ಕೇವಲ "ಹೋ" ಮಾತ್ರ ಇದೆ.

ಹೊಯ್ಸಳರ ಕಾಲದ ಇನ್ನೂ ಅನೇಕ ವಿಖ್ಯಾತ ಶಿಲ್ಪಿಗಳ ಚರಿತ್ರೆಯನ್ನು ಸ್ವಲ್ಪ ಮಟ್ಟಿಗೆ ನಾವು ತಿಳಿಯಬಹುದು. ಮಲ್ಲಿತಮ್ಮನೆಂಬುವನು ತರೀಕೆರೆ ತಾಲ್ಲೂಕು

ಅಮೃತಾಪುರದ ಅಮೃತೇಶ್ವರ ದೇವಾಲಯದ ಸೊಗಸಾದ ಭುವನೇಶ್ವರಿಗಳನ್ನು ಕ್ರಿ. ಶ. ೧೧೯೬ ರಲ್ಲಿ ರಚಿಸಿದನು. ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಕ್ರಿ. ಶ. ೧೨೪೯ರಲ್ಲಿಯೂ, ಮಂಡ್ಯ ಜಿಲ್ಲೆಯ ಗೋವಿಂದನಹಳ್ಳಿಯಲ್ಲಿರುವ ಪಂಚಲಿಂಗ ದೇವಾಲಯದಲ್ಲಿ, ಹಾಸನ ಜಿಲ್ಲೆಯ ಜಾವಗಲ್ಲಿನಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಮತ್ತು ಹಾರನಹಳ್ಳಿಯ ಕೇಶವ ದೇವಾಲಯದಲ್ಲಿ ಕ್ರಿ.ಶ. ೧೨೩೪ರಲ್ಲಿಯೂ, ಸೋಮನಾಥಪುರದ ಕೇಶವ ದೇವಾಲಯದಲ್ಲಿ ಕ್ರಿ. ಶ. ೧೨೬೮ರಲ್ಲಿಯೂ, ಇವನು ಅನೇಕ ಅಮೋಘ ಶಿಲ್ಪಗಳನ್ನು ಕೆತ್ತಿದನು. ಸೋಮನಾಥಪುರದ ಕೇಶವ ದೇವಾಲಯವೊಂದರಲ್ಲೇ ನಲವತ್ತು ವಿಗ್ರಹಗಳ ಕೆಳಗೆ ಇವನ ಹೆಸರಿದೆ.

## ೬. ಚೋಳರ ಶಿಲ್ಪ

ಚೋಳರ ವಾಸ್ತುಶಿಲ್ಪವು ಕರ್ಣಾಟಕದಲ್ಲಿ ವಿರಳವೆಂದು ಹೇಳಬಹುದು. ಕೋಲಾರ ಜಿಲ್ಲೆಯ ನಂದಿಯಲ್ಲಿರುವ ಭೋಗನಂದೀಶ್ವರ ದೇವಾಲಯದಲ್ಲಿ ಸ್ವಲ್ಪ ಮಟ್ಟಿಗೆ ಚೋಳರ ನಮೂನೆಯ ಕಟ್ಟಡವನ್ನು ಕಾಣಬಹುದು. ಈ ದೇವಸ್ಥಾನವು ಬಾಣರ ರಾಜವಂಶಕ್ಕೆ ಸೇರಿದ ರತ್ನಾವಳಿಯಿಂದ ಪ್ರಾರಂಭಿಸಲ್ಪಟ್ಟಿತು. ಆದರೆ ಈ ದೇವಾಲಯದ ಬಸವನ ಮಂಟಪವು ರಾಜೇಂದ್ರ ಚೋಳನ ಕಾಲದಲ್ಲಿ ಸ್ಥಾಪಿತವಾಯಿತು. ಬೆಂಗಳೂರಿನ ಸಮೀಪದಲ್ಲಿರುವ ಬೇಗೂರಿನಲ್ಲಿ ಸುಮಾರು ಹನ್ನೊಂದನೆ ಶತಮಾನಕ್ಕೆ ಸೇರಿದ ದೇವಾಲಯಗಳಲ್ಲಿ ಚೋಳರ ಶಿಲ್ಪದ ಹೋಲಿಕೆಯುಳ್ಳ ಅನೇಕ ಸುಂದರವಾದ ವಿಗ್ರಹಗಳಿವೆ.

## ೭. ವಿಜಯನಗರದ ಶಿಲ್ಪ

ವಿಜಯನಗರದ ಕಾಲದ ಹೊತ್ತಿಗೆ ಭಾರತೀಯ ಶಿಲ್ಪದಲ್ಲಿ ಮಹಮ್ಮದೀಯರ ಕಟ್ಟಡ ನಮೂನೆಯು ಮಿಳಿತವಾಗಿತ್ತು. ಇದಕ್ಕೆ ನಿದರ್ಶನವಾಗಿ ಹಂಪೆಯಲ್ಲೇ ಕೆಲವು ಕಟ್ಟಡಗಳು ಉಳಿದಿವೆ.

ಕ್ರಿ. ಶ. ೧೩೩೬ರಲ್ಲಿ ಹಕ್ಕಬುಕ್ಕರಿಂದ ಸ್ಥಾಪಿಸಲ್ಪಟ್ಟ ವಿಜಯನಗರದ ರಾಜ್ಯವು ಕರ್ನಾಟಕದಲ್ಲಿ ಮತ್ತು ಇತರ ಪ್ರದೇಶಗಳಲ್ಲಿ ಇದ್ದ ದೇವಾಲಯಗಳಿಗೆ ಗೋಪುರ, ಮಹಾದ್ವಾರ ಮುಂತಾದುವನ್ನು ಕಟ್ಟಿ ರಕ್ಷಣೆಯನ್ನು ನೀಡಿದ್ದುದಲ್ಲದೆ, ರಾಜಧಾನಿಯಾದ ಹಂಪೆಯಲ್ಲಿ ಅನೇಕ ಹೊಸ ಕಟ್ಟಡಗಳನ್ನು ಕಟ್ಟಿಸಿತು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಚಕ್ರಾಧಿಪತ್ಯವು ರಾಜಕೀಯದಲ್ಲಲ್ಲದೆ ಸಾಹಿತ್ಯ, ಸಂಸ್ಕೃತಿಯಲ್ಲಿ ಕೂಡಾ ಬಹಳ ಉಚ್ಛ್ರಾಯ ಸ್ಥಿತಿಗೆ ಬಂದಿತು.

ಹಂಪೆಯಲ್ಲಿರುವ ಮಹಾನವಮಿ ದಿಬ್ಬವು ಹಿಂದೆ ಸಿಂಹಾಸನದ ಜಗತಿಯಾಗಿತ್ತೆಂದೂ (Throne Platform), ಅದನ್ನು ಕೃಷ್ಣದೇವರಾಯನು ಒರಿಸ್ಸಾದೇಶದ ರಾಜನನ್ನು ಕ್ರಿ.ಶ. ೧೫೧೩ರಲ್ಲಿ ಗೆದ್ದು ಅದರ ಜ್ಞಾಪಕಾರ್ಥವಾಗಿ ಕಟ್ಟಿಸಿದನೆಂದೂ ಪೇಜ್ ಎಂಬ ವಿದೇಶೀಯನು ಹೇಳುತ್ತಾನೆ. ಈ ಜಗತಿಯ

ಬುಡವು ಅನೇಕ ಸುಂದರವಾದ ಶಿಲ್ಪಕೃತಿಗಳಿಂದ ಅಲಂಕರಿಸಲ್ಪಟ್ಟಿದೆ. ಸಿಂಹಾಸನದ ಜಗತಿಯಂತೆಯೇ ಕೃಷ್ಣದೇವರಾಯನು ಕ್ರಿ.ಶ. ೧೫೧೩ರಲ್ಲಿ ಹಜಾರ ರಾಮಸ್ವಾಮಿ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದನು. ಈ ದೇವಸ್ಥಾನದ ಕಂಬಗಳು ಚೆನ್ನಾಗಿ ಕೆತ್ತಲ್ಪಟ್ಟ ವಿಗ್ರಹಗಳಿಂದ ಕೂಡಿವೆ.

ಹಂಪೆಗೆ ಹೋಗುವ ದಾರಿಯಲ್ಲಿ ಸೊಗಸಾಗಿ ಕೆತ್ತಲ್ಪಟ್ಟ ಇಪ್ಪತ್ತೆರಡು ಅಡಿ ಎತ್ತರದ, ಕುಳಿತಿರುವ ನಾರಸಿಂಹ ವಿಗ್ರಹವು ಒಂದೇ ಬಂಡೆಯಿಂದ ಕೃಷ್ಣದೇವ ರಾಯನ ಆಳ್ವಿಕೆಯಲ್ಲಿ ಕ್ರಿ. ಶ. ೧೫೨೮ರಲ್ಲಿ ಕೆತ್ತಲ್ಪಟ್ಟಿತು. ಅದರ ಕೈ, ತೊಡೆಗಳು ಮುರಿದುಹೋಗಿದ್ದರೂ ಅದರ ಭವ್ಯತೆಯು ಈಗಲೂ ಕುಂದಿಲ್ಲ. ಅದರ ತೊಡೆಯ ಮೇಲೆ ಕುಳಿತಿದ್ದ ಲಕ್ಷ್ಮಿಯು ಚೂರುಚೂರಾಗಿ ಒಡೆದು ಹಾಕಲ್ಪಟ್ಟಿದೆ. ಕೃಷ್ಣದೇವರಾಯನು ಉದಯಗಿರಿಯಿಂದ ತಂದ ಕೃಷ್ಣನ ವಿಗ್ರಹವನ್ನು ಪೂಜಿಸಲು ಕೃಷ್ಣಸ್ವಾಮಿ ದೇವಾಲಯವನ್ನು ಕ್ರಿ. ಶ. ೧೫೧೩ರಲ್ಲಿ ಕಟ್ಟಿಸಿದನು. ಸುಪ್ರಸಿದ್ಧ ವಿಠಲಸ್ವಾಮಿಯ ದೇವಾಲಯವನ್ನು ಕೃಷ್ಣದೇವರಾಯನು ಕಟ್ಟಲು ಪ್ರಾರಂಭಿಸಿದನೆಂದು ನಮಗೆ ಶಾಸನದಿಂದ ತಿಳಿದುಬರುತ್ತದೆ. ಅಚ್ಯುತರಾಯ ಮತ್ತು ಸದಾಶಿವರಾಯ ಇವರುಗಳ ಕಾಲದಲ್ಲಿ ಕಟ್ಟಡದ ಕೆಲಸವು ಮುಂದುವರಿದರೂ ಈ ದೇವಾಲಯವು ಅಪೂರ್ಣವಾಗಿಯೇ ಉಳಿಯಿತು. ಸೊಗಸಾದ ಈ ದೇವಾಲಯದ ಶಿಲ್ಪವನ್ನೂ ಮತ್ತು ಕಂಬಗಳನ್ನೂ ಮಹಮ್ಮದೀಯರು ವಿಜಯನಗರವನ್ನು ಮುತ್ತಿದಾಗ ಒಡೆದುಹಾಕಿದರು. ಇದರ ಬಳಿ ಇರುವ ಕಲ್ಲಿನ ರಥವೇನೋ ಹಾಗೆಯೇ ಉಳಿದುಬಂದಿದೆ.

ವಿಜಯನಗರದ ದೇವಾಲಯಗಳಲ್ಲಿ ಬಹಳ ಪುರಾತನವಾದುದೆಂದರೆ ಪಂಪಾಪತಿಯದು. ಅದರ ಕೆಲವು ಭಾಗಗಳು ವಿಜಯನಗರದ ಸ್ಥಾಪನೆಗಿಂತ ಮುಂಚೆಯೇ ಇದ್ದುವೆಂದು ಮಿ|| ಲಾಂಗ್‌ಹರ್ಸ್ಟ್‌ರವರು ಅಭಿಪ್ರಾಯಪಡುತ್ತಾರೆ. ಒಂದನೆಯ ಹರಿಹರನು ತನ್ನ ಗುರುವಾದ ಮಾಧವ ಅಥವಾ ವಿದ್ಯಾರಣ್ಯರಿಗಾಗಿ ಈ ದೇವಾಲಯದ ಕೆಲವು ಭಾಗಗಳನ್ನು ಕಟ್ಟಿಸಿದನು. ಕೃಷ್ಣದೇವರಾಯನು ಈ ದೇವಾಲಯದ ರಂಗಮಂಟಪವನ್ನು ಕ್ರಿ.ಶ. ೧೫೦೯-೧೦ರಲ್ಲಿ ತನ್ನ ಕಿರೀಟ ಧಾರಣೆಯ ಮಹೋತ್ಸವದ ಜ್ಞಾಪಕಾರ್ಥವಾಗಿ ಕಟ್ಟಿಸಿದನೆಂದು ಶಾಸನದಿಂದ ತಿಳಿಯಬರುತ್ತದೆ. ಈ ದೇವಾಲಯವು ಕನ್ನಡ ನಾಡಿನ ಹಿರಿಮೆಯನ್ನು ಹಾಳು ಹಂಪೆಯಲ್ಲಿ ಈಗಲೂ ಎತ್ತಿ ತೋರಿಸುವಂತೆ ಕಾಣುತ್ತದೆ.

---

# ಕನ್ನಡ ನಾಡಿನ ಲಲಿತಕಲೆಗಳು

## — ನೃತ್ಯ —

ಲೇಖಕರು :
ಶ್ರೀಮತಿ ಎಸ್. ಎನ್. ಸ್ವಾಮಿ ಅವರು, ಮೈಸೂರು.

" ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್ "

— ಕಾಳಿದಾಸ

### ೧. ನೃತ್ಯ ಕಲೆಯ ಇತಿಹಾಸ

ಈ ಜಗತ್ತಿನಲ್ಲಿ ಅತ್ಯಂತ ಪ್ರಾಚೀನವೂ, ಪರಿಪೂರ್ಣವೂ ಆದ ನಾಟ್ಯ ಕಲೆಯ ಸೂಕ್ಷ್ಮ ಪರಿಚಯಮಾಡಿಕೊಡಲು ಬಯಸುತ್ತೇನೆ. ಮಾನವ ಜನಾಂಗದ ಉದಯದೊಡನೆ ಬೆಳೆದು ಬಂದುದು ನೃತ್ಯ. ಎಲ್ಲ ದೇಶಗಳಲ್ಲೂ ಇದು ಆಯಾ ಜನಾಂಗದ ಜೀವನ, ಸಾಂಸ್ಕೃತಿಕ ಬೆಳವಣಿಗೆಗಳಿಗೆ ಅನುಸಾರವಾಗಿ ಬೆಳೆದು ಬಂದಿದೆ. ಭಾರತದಲ್ಲಿ—ಜಗತ್ತಿನ ಎಲ್ಲಾ ದೇಶಗಳ ಸಂಸ್ಕೃತಿಗಳಿಗೂ ಮಡಿಲಾದ ಈ ಪುಣ್ಯಭೂಮಿಯಲ್ಲಿ—ಬೆಳೆದ ಭರತನಾಟ್ಯ ಜಗತ್ತಿನ ಎಲ್ಲಾ ನಾಟ್ಯಗಳಿಗೂ ಮೇಲ್ಮಟ್ಟದ್ದೆಂದು ಎನಿಸಿಕೊಂಡಿದೆ. ಸಾವಿರಾರು ವರ್ಷಗಳಿಂದ ದೇಶಾದ್ಯಂತ ಜನಾದರ ಪಡೆದ ಈ ನಾಟ್ಯಕ್ಕೆ ದೈವಿಕತೆಯನ್ನು ತಂದು ಕೊಟ್ಟದ್ದೇವೆ. ಎರಡು ಮೂರು ಸಾವಿರ ವರ್ಷಗಳ ಹಿಂದೆಯೇ ನಾಟ್ಯ ದೇಶದ ಜನಜೀವನದ ಅವಿಭಾಜ್ಯ ಅಂಗವಾಗಿತ್ತೆಂಬುದಕ್ಕೆ ಸಾಕಾದಷ್ಟು ಆಧಾರಗಳಿವೆ. ಇದಕ್ಕೆ ಪೂರಕವಾಗಿ ನಾಟ್ಯ ಸಂಪೂರ್ಣವಾಗಿ ಬೆಳೆದು ನಿಂತ ಒಂದು ಭಾಷೆ. ಅದರ ಕಟ್ಟು ಸಡಿಲಾಗಿ ಅದು ಕುಸಿದು ಬೀಳಬಾರದೆಂಬ ಅಭಿಪ್ರಾಯ ನೃತ್ಯಕಲಾ ಪಾರಂಗತರಲ್ಲಿ ಮೂಡಿ ಅದಕ್ಕನುಗುಣವಾಗಿ ನಾಟ್ಯ ಶಾಸ್ತ್ರದಂತಹ ಸೂತ್ರಗಳನ್ನು ಬರೆದಿದ್ದರು. ಎಂತಲೇ ಭಾರತದಲ್ಲಿ ನೃತ್ಯ ಬಹು ಪುರಾತನಕಾಲದಲ್ಲೇ ಪರಿಪೂರ್ಣತೆಯನ್ನು ಪಡೆದಿತ್ತು.

ವೇದಗಳ ಕಾಲದಿಂದ ಇಂದಿನವರಿವಿಗೂ ಭಾರತದ ಜನತೆಯ ಜೀವನದ ಉಸಿರಾಗಿ ಬೆಳೆದು, ಉಳಿದು ನಿಂತ ಈ ಭರತನಾಟ್ಯ ಇದೀಗ ಕೆಲವರ್ಷಗಳಿಂದ ಬಹಳ ಕಷ್ಟದಿಂದ ತಲೆ ಎತ್ತಲು ಯತ್ನಿಸುತ್ತಿದೆ. ಭಾರತ ಪರಕೀಯ ಆಕ್ರಮಣಗಳಿಗೆ ಒಳಗಾಗುವವರೆಗೂ ದೇಶದಲ್ಲಿ ಯಾವ ಅಂತಃಕಲಹವೇ ಸಾಗಿದ್ದರೂ ಕಲೆಗೆ ಘಾತಕವಾಗಲಿಲ್ಲ. ಆದರೆ ಮುಂದೆ ಪರಕೀಯ ಆಕ್ರಮಣಗಳ ಅಲೆಗಳ ಹೊಡೆತ ತಡೆಯಲಾರದೆ ಇತರ ಕಲೆಗಳಂತೆ ನೃತ್ಯವೂ ಅರಮನೆಗಳನ್ನುಳಿದು ಮಹಾಜನತೆಯೆಡೆ ಸರಿದು ಬಂತು. ಆಂಗ್ಲ ಆಕ್ರಮಣ ಭಾರತ ಸಂಸ್ಕೃತಿ, ಜನಜೀವನದ ಬೇರಿಗೆ ನೀರಿಡಲು ಮುಂದಾಯಿತು. ಮಹಾಜನತೆಯ ನಡುವಿನಲ್ಲಿ, ಬಡವರ ಗುಡಿಸಿಲಲ್ಲಿ, ದೇವಾಲಯಗಳಲ್ಲಿ, ಹೆಚ್ಚಿನದಾಗಿ ದೇವ

ಪುನಸ್ಸೋತಳು. ಇಂದು ಲೋಕ ವಿಖ್ಯಾತ ನರ್ತಕನಾಗಿ ನಿಂತ ಉದಯ ಶಂಕರನ ಸಾಮಾನ್ಯ ನೃತ್ಯವೊಂದನ್ನು ಇವಳು ಲಂಡನ್‌ನಲ್ಲಿ ನೋಡಿ ಮೆಚ್ಚಿದಳು. ತಾನು ತಿಳಿದುಕೊಂಡಿದ್ದ ಅಲ್ಪ ಸ್ವಲ್ಪ ನೃತ್ಯಗಳನ್ನೇ ತೋರಿಸಿದ ಉದಯಶಂಕರ್. ಲಂಡನ್, ಪ್ಯಾರಿಸ್, ಅಮೆರಿಕಾಗಳ ಕಲಾಪ್ರೇಮಿಗಳ ದೃಷ್ಟಿಯನ್ನು ಭಾರತದೆಡೆ ಹರಿಯಿಸಿದ. ಪರದೇಶದ ಜನ ನಮ್ಮ ಅಪೂರ್ವ ಕಲಾಭಂಡಾರದ ಮೇಲ್ಮೆ ಅರಿತು ಅದನ್ನು ಆದರಿಸಿದಾಗ ಆ ಕಲಾಭಂಡಾರದ ಬಗ್ಗೆ ನಮ್ಮ ಜನರ ಆದರ ಇನ್ನಷ್ಟು ಬೆಳೆಯಿತು. ನೃತ್ಯ ಕಲೆಯ ಕಡೆ ಗಮನ ಹೆಚ್ಚಾಯಿತು.

ಅಂದಿನಿಂದ ಭಾರತೀಯ ನೃತ್ಯ ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ನೂರಾರು ಎಡೆಗಳಲ್ಲಿ ಪ್ರದರ್ಶಿತವಾಗಿ ಜಗತ್ತಿನ ಮೂಲೆಮೂಲೆಯಲ್ಲಿಯೂ ಕಲಾ ಪ್ರೇಮಿಗಳ ಹೊಗಳಿಕೆಯನ್ನು ಪಡೆದು ಮೆರೆದಿದೆ. ಭಾರತದಿಂದ ಉದಯ ಶಂಕರ್, ರಾಮಗೋಪಾಲ್, ಶ್ರೀ ರುಕ್ಮಿಣಿದೇವಿ ಅರುಂಡೇಲ್, ಮೇನಕಾ, ಮುಂತಾದ ನರ್ತಕ ನರ್ತಕಿಯರು ಪರದೇಶಗಳಿಗೆ ತೆರಳಿ ಭಾರತೀಯ ನೃತ್ಯದ ಮೇಲ್ಮೆ ಸಾರಿದ್ದಾರೆ. ಪರದೇಶಗಳಿಂದ ಹಲವಾರು ಮಂದಿ ಭಾರತಕ್ಕೆ ಬಂದು ಇಲ್ಲಿನ ನೃತ್ಯಗಳನ್ನು ಅಭ್ಯಸಿಸಿದ್ದಾರೆ.

ಆದರೂ ನೃತ್ಯಕಲೆ ಇಂದಿಗೂ ಹಿಂದಿನ ಉಚ್ಚ ಸ್ಥಾನಮಾನಗಳನ್ನು ಮುಟ್ಟಿ ನಿಂತಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ನಮ್ಮ ಜೀವನದಷ್ಟೆ ಕೃತಕತೆಗೆ ಅದು ಇಳಿಯುತ್ತಿದೆ. ನೃತ್ಯ ಸಂಪ್ರದಾಯವೆಂದರೆ, ಅದೊಂದು ಪವಿತ್ರವಾದ ಕಲೆ; ಕಲೆಗಳಲ್ಲೆಲ್ಲಾ ಅತ್ಯಂತ ಪರಿಪೂರ್ಣವೂ ಪರಿಪುಷ್ಟವೂ ಆದದ್ದು; ಎಲ್ಲಾ ಕಲೆಗ ಳನ್ನೂ ಒಂದುಗೂಡಿಸಿ ನಿಂತ ಕಲಾರಂಗ—ಎಂಬುದನ್ನು ನಾವು ಇನ್ನೂ ಸಾಕಷ್ಟು ಅರಿತಿಲ್ಲ. ಸಾಧಿಸಿ, ಪರಿಶ್ರಮದಿಂದ ಕಲೆಯನ್ನು ಅಭ್ಯಾಸಿಸಿ, ತಾವು ಪರಿಪೂರ್ಣ ಜ್ಞಾನವನ್ನು ಪಡೆಯುವುದಲ್ಲದೆ ಜನತೆಗೂ ಅದನ್ನೊದಗಿಸುವ ಕಾರ್ಯಕ್ಕೆ ಇಳಿದವರು ವಿರಳ. ಎಂತಲೇ ಇಂದು ಬೆಳದು, ನಮ್ಮ ಜೀವನದಲ್ಲಿ ಬೆರೆತು ಹಿಂದಿನ ವೈಭವಯುಕ್ತ ಸ್ಥಾನಮಾನಗಳನ್ನು ಗಳಿಸಲು ಬಂದ ನೃತ್ಯ ಕಲೆಯನ್ನು ಶುಚಿಗೊಳಿಸಿ, ಅದರ ಮೇಲ್ಮೆಯನ್ನೂ ಕಲಾ ಅಂಶವನ್ನೂ ಕಾದು, ಬೆಳೆಸಿ, ಹರ ಡುವುದು ಕಲಾಪ್ರೇಮಿಗಳ ಕರ್ತವ್ಯವಾಗಿದೆ; ಅದನ್ನವರು ಚೆನ್ನಾಗಿ ಸಾಧಿಸಬೇಕು.

## ೩. ಭಾರತದ ನೃತ್ಯ ಸಂವಿಧಾನಗಳು

ಭಾರತದ—ಭಾರತೀಯ ಸಂಸ್ಕೃತಿಯ ಅಂಗವಾದ, ವೇದದಷ್ಟೇ ಪ್ರಧಾನ ವೆನಿಸಿದ—ಭರತನಾಟ್ಯ ಕಾಲಕಾಲಕ್ಕೆ ದೇಶದಲ್ಲಾದ ಬದಲಾವಣೆಗಳಿಗೆ ಅನುಸಾರವಾಗಿ ವಿವಿಧ ಬದಲಾವಣೆಗಳನ್ನು ಹೊಂದಬೇಕಾಯಿತು. ಪರಕೀಯ ಆಕ್ರಮಣಗಳಿಗೆ ಬೆದರಿ ರಾಷ್ಟ್ರದ ಪೂರ್ವಭಾಗಕ್ಕೆ ಸರಿದ ಈ ಸಂಪ್ರದಾಯ ಕಾಲಕ್ರಮೇಣ ಆ ಪ್ರಾಂತದ ಮಹಾಜನರ ನಿತ್ಯ ಜೀವನದಲ್ಲಿ ಬೆರೆತು ಮಣಿಪುರ ನೃತ್ಯ ಸಂವಿಧಾನವಾಯಿತು; ಪಶ್ಚಿಮ ಭಾರತದಲ್ಲಿ ಉಳಿದ ನೃತ್ಯ ಯವನ ಸಂಸ್ಕೃತಿಯ ಸಂಸರ್ಗ ಪಡೆದು ಕಥಕ್ ನೃತ್ಯ ಸಂಪ್ರದಾಯವಾಯಿತು. ಶುದ್ಧ

ಬೇಕು. ಬಾಯಲ್ಲಿ ಹಾಡುತ್ತಾ ಮುದ್ರೆಗಳ ಅರ್ಥವನ್ನು ವ್ಯಕ್ತಗೊಳಿಸಬೇಕು. ಕಣ್ಣುಗಳಿಂದ ಮನೋಭಾವವನ್ನು ತೋರಿಸಬೇಕು. ಪಾದಗಳಿಂದ ತಾಳವನ್ನು ಹಾಕುತ್ತಿರಬೇಕು. ಕೈ ಎತ್ತ ಕಡೆ ಹೋಗುತ್ತದೆಯೋ ಕಣ್ಣುಗಳು ಅತ್ತ ತಿರುಗ ಬೇಕು. ಕಣ್ಣುಗಳು ಹೋದಕಡೆ ಮನಸ್ಸು ಹೋಗಬೇಕು. ಮನಸ್ಸು ಹೋದ ಕಡೆ ಭಾವ ಪ್ರಸರಿಸಬೇಕು. ಭಾವವು ಹರಿದ ಕಡೆ ರಸೋತ್ಪನ್ನವಾಗುತ್ತದೆ. ಆಗ ಆತ್ಮ ದೇಹ ಎರಡೂ ಮಿಳಿನವಾಗಿ ವಿಶ್ವದ ತಾನಕ್ಕೆ ಸರಿಯಾಗಿ ತಾಳ ಹಾಕುವುದು. ಇದೇ ನಿಜವಾದ "ಭರತನಾಟ್ಯ"ದ ವೈಖರಿ. ಶ್ರೀ ನಟರಾಜ ಸ್ವಾಮಿಯ ನೃತ್ಯ ವಿಗ್ರಹದಲ್ಲಿ ಸೃಷ್ಟಿ, ಸ್ಥಿತಿ, ಲಯ, ಶಿರೋಭಾವ, ಅನುಗ್ರಹ ಈ ಪಂಚಕ್ರಿಯೆಗಳನ್ನೂ ಕಾಣಬಹುದು. ಅಭಿನಯದ ಮೇಲಣ ಲಕ್ಷಣ ಗ್ರಂಥದಲ್ಲಿ ಮುಖ್ಯವಾದುವುಗಳು ಯಾವುದೆಂದರೆ :—"ಭರತನಾಟ್ಯ ಶಾಸ್ತ್ರ", "ಅಭಿನಯ ದರ್ಪಣ", "ನಾಟ್ಯ ದರ್ಪಣ", "ನಾಟ್ಯ ಪ್ರದೀಪ", "ನಾಟ್ಯ ಚೂಡಾಮಣಿ", "ದಶರೂಪಕ", "ಅಗ್ನಿಪುರಾಣ", "ವಿಷ್ಣುಧರ್ಮೋತ್ತರ", "ಸಂಗೀತ ರತ್ನಾಕರ", "ಸಂಗೀತ ಮಕರಂದ"—ಇವುಗಳು ಸಾಹಿತ್ಯ, ಶಿಲ್ಪ ಮತ್ತು ಸಂಗೀತ ಲಕ್ಷಣ ಪ್ರತಿಪಾದನೆಗೇ ಅರ್ಪಿತವಾಗಿದ್ದರೂ ಇವೆಲ್ಲವುಗಳಲ್ಲಿ ರಸ, ಭಾವ, ಅಭಿನಯಗಳು ವರ್ಣಿತವಾಗಿವೆ. ಪುರಾತನ ಗ್ರಂಥಗಳಲ್ಲಿ "ಭರತನ ನಾಟ್ಯ ಶಾಸ್ತ್ರ" ಅತಿ ಪ್ರಾಚೀನವಾದದ್ದು.

ಹಿಂದೆ ತ್ರೇತಾಯುಗದಲ್ಲಿ ಮಹೇಂದ್ರ ಮುಂತಾದ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ತಮಗೆ ಆನಂದವಾಗಿ ಹೊತ್ತು ಹೋಗುವಂತೆ ಒಂದು ಕ್ರೀಡೆ ಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಚತುರ್ಮುಖ ಬ್ರಹ್ಮನು ಅದಕ್ಕೆ ಸಮ್ಮತಿಸಿ, ಋಗ್ವೇದದಿಂದ "ಪಾಠ್ಯ"ವನ್ನೂ ಯಜುರ್ವೇದ ದಿಂದ "ಅಭಿನಯವನ್ನೂ", ಸಾಮವೇದದಿಂದ "ಗಾನ"ವನ್ನೂ, ಅಥರ್ವ ವೇದದಿಂದ 'ರಸ'ಗಳನ್ನೂ ತೆಗೆದುಕೊಂಡು ಎಲ್ಲವನ್ನೂ ಸೇರಿಸಿ 'ನಾಟ್ಯ' ವೆಂಬ ಪಂಚಮ ವೇದವನ್ನು ಪೂರ್ಣಗೊಳಿಸಿ ಈ ನಾಟ್ಯವೇದವನ್ನು ಮರ್ತ್ಯರಲ್ಲಿ ಪ್ರತಿಷ್ಠಿಸುವ ಕಾರ್ಯಕ್ರಮವನ್ನು ಭರತನಿಗೆ ವಹಿಸಿಕೊಟ್ಟನು. ಆಗ ಭರತ ಮುನಿಯು ಆಯಾ ಪಾತ್ರಕ್ಕೆ ತಕ್ಕಂತೆ ತನ್ನ ನೂರು ಮಂದಿ ಮಕ್ಕಳಿಗೂ, ಮತ್ತು ತನ್ನ ಶಿಷ್ಯರನ್ನೂ ನಾಟ್ಯ ಪ್ರವೀಣರನ್ನಾಗಿ ಶಿಕ್ಷಣವನ್ನಿತ್ತನು. ಆದರೆ ಈ ನಾಟ್ಯದ ಮಹಾಶಾಸ್ತ್ರದಲ್ಲಿನ ಕೆಲವು ಅಂಶಗಳನ್ನು ಸರಿಯಾಗಿ ಪ್ರತಿಪಾದಿಸಲು ಸ್ತ್ರೀಯರೇ ನಟಿಸಬೇಕಾಗಿ ಕಂಡು ಬಂದಿತು. ಆಗ ಭರತ ಮುನಿಯು ಮತ್ತೆ ಬ್ರಹ್ಮನಿಗೆ ಪ್ರಾರ್ಥಿಸಲು ಆತನು ತಕ್ಷಣವೇ ಅಪ್ಸರೆಯರನ್ನು ಸೃಷ್ಟಿಸಿದನು.

ಭರತನು ದೇವಗಾಯಕ ಗಾಯಕಿಯರ ಸಹಾಯದಿಂದ ತನ್ನಲ್ಲಿ ಶಿಕ್ಷಣ ಪಡೆದಿದ್ದ ನರ್ತಕ ನರ್ತಕಿಯರಿಂದ 'ನಾಟ್ಯ' ಪ್ರದರ್ಶನ ಮಾಡಿಸಲು ಸಮಯ ನಿರೀಕ್ಷಿಸುತ್ತಿದ್ದನು. ಬ್ರಹ್ಮನ ಅಪ್ಪಣೆಯ ಪ್ರಕಾರ 'ನಾಟ್ಯ' ವು ಇಂದ್ರ ಧ್ವಜೋತ್ಸವದಲ್ಲಿ ಪ್ರದರ್ಶಿಸಲ್ಪಟ್ಟಿತು. ಆ ಸಮಯದಲ್ಲಿ ಪರಮೇಶ್ವರನೂ ಸಹ ಪಾರ್ವತಿಯೊಡನೆ ಸಭೆಯನ್ನಲಂಕರಿಸಿದ್ದನು. ಈ 'ನಾಟ್ಯ' ಪ್ರದರ್ಶನ

ವನ್ನು ನೋಡಿದಾಗ ಪರಮೇಶ್ವರನಿಗೆ ಪರಮಾನಂದವಾಯಿತು. ತತ್ಫಲವಾಗಿ ನಟರಾಜನು ಪಾರ್ವತಿಯೊಂದಿಗೆ ನೃತ್ಯಕ್ಕಾರಂಭಿಸಿದನು. 'ಸಂಧ್ಯಾ ತಾಂಡವ' ನೃತ್ಯ ಆರಂಭವಾಯಿತು. ಸರಸ್ವತಿ ವೀಣಾವಾದನವನ್ನು ಮಾಡುತ್ತಾಳೆ; ಇಂದ್ರನು ವೇಣುನಾದನವನ್ನು ಬಾರಿಸುತ್ತಾನೆ; ಬ್ರಹ್ಮನು ತಾಳಹಾಕುತ್ತಾನೆ; ವಿಷ್ಣುವು ಮೃದಂಗವಾದನವನ್ನು ನುಡಿಸುತ್ತಾನೆ; ಭಗವತಿ ರಮಾದೇವಿಯು ಮಧುರವಾದ ಗಾನವನ್ನು ಪ್ರಾರಂಭಿಸುತ್ತಾಳೆ; ಯಕ್ಷರು, ಗಂಧರ್ವರು, ಅಪ್ಸರೆಯರು ಮತ್ತು ಸಮಸ್ತ ದೇವತೆಗಳೂ ಈ ದಿವ್ಯನೃತ್ಯವನ್ನು ನೋಡಲು ಸೇರುತ್ತಾರೆ. ಆಗ್ಗೆ ಈ ನಟರಾಜನ ನೃತ್ಯವನ್ನು ದೇವತೆಗಳೂ, ಪಾರ್ವತಿಯು ಲಾಸ್ಯವೆಂಬ ನೃತ್ಯವನ್ನು ಅಪ್ಸರೆಯರೂ ಕಲಿತುಕೊಂಡರು.

ಅನಂತರ ಬ್ರಹ್ಮನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆದು ಭರತನಿಗಾಗಿ 'ನಾಟ್ಯಮಂದಿರ'ವನ್ನು ನಿರ್ಮಿಸುವಂತೆ ಆಜ್ಞಾಪಿಸಿದನು. ನಾಟ್ಯ ಮಂದಿರದ ನಾನಾ ಭಾಗಗಳಲ್ಲಿ ದಿಕ್ಪಾಲಕರೂ ಮತ್ತು ವಿವಿಧ ದೇವತೆಗಳೂ ಸೇರಿ ಅದನ್ನು ಕಾಪಾಡುತ್ತಿದ್ದರು.

ಆಗ್ಗೆ ಬ್ರಹ್ಮನು ಭರತನನ್ನು ಕರೆದು ''ನೀನು ಮನುವಿನೊಡನೆ ಭೂಲೋಕಕ್ಕೆ ಹೋಗಿ, ಈ ನಾಟ್ಯವೇದವನ್ನು ಎಲ್ಲೆಲ್ಲೂ ಪ್ರಚಾರಗೊಳಿಸು.'' ಎಂದು ತಿಳಿಸಿದನು.

ಬ್ರಹ್ಮನ ಆಜ್ಞೆಯಂತೆ ಭರತಮುನಿಯೂ ಮನುವಿನೊಡನೆ ಭೂಲೋಕಕ್ಕೆ ಬಂದನು. ಇಲ್ಲಿ ಭರತನು ಕೆಲವು ಮಂದಿ ದ್ವಿಜರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡು 'ನಾಟ್ಯ' ವೇದವನ್ನು ಅಧ್ಯಯನಮಾಡಿಸಿ ಭರತಖಂಡದ ಎಲ್ಲಾ ಕಡೆಗಳಲ್ಲೂ ಪ್ರಚಾರಮಾಡತೊಡಗಿದನು.

ಭರತನಾಟ್ಯವು ಪ್ರಚಾರವಾದ ತರುವಾಯ ಅದು ಸ್ಥಿರವಾಗಿ ನಿಲ್ಲುವುದಕ್ಕಾಗಿ ಭರತಮುನಿಯು ಗ್ರಂಥವನ್ನು ಬರೆಯಬೇಕಾಯಿತು. ಹನ್ನೆರಡು ಸಾವಿರ ಶ್ಲೋಕಗಳ ಒಂದು ಗ್ರಂಥವನ್ನು, ಆರುಸಾವಿರ ಶ್ಲೋಕಗಳ ಇನ್ನೊಂದು ಗ್ರಂಥವನ್ನೂ ಬರೆದನು—ಇದರಲ್ಲಿ ಎರಡನೆಯದೇ ನಾಟ್ಯ ವೇದದ ಗ್ರಂಥರೂಪವಾಗಿರುವುದು. ಈ ನಾಟ್ಯ ವೇದವು ಭರತ ಮುನಿಯ ಹೆಸರಿನಿಂದಲೇ ಈ ಜಗತ್ತಿನಲ್ಲಿ ಎಲ್ಲೆಲ್ಲೂ ಪ್ರಚುರವಾಗಿರುವುದು.

## ೫. ನರ್ತನ ವಿಮರ್ಶೆ

ನರ್ತನದಲ್ಲಿ ನೃತ್ತ, ನೃತ್ಯ, ನಾಟ್ಯ ಎಂಬ ಮೂರು ಭೇದಗಳುಂಟು. ಇವುಗಳಲ್ಲಿ ಪರಸ್ಪರ ವ್ಯತ್ಯಾಸವಿದೆ.

ನೃತ್ತ.—ಬರಿಯ ಕಾಲುಗೆಜ್ಜೆ ಅಂಗವಿನ್ಯಾಸಗಳಿರುತ್ತವೆ. ಇದರಲ್ಲಿ ರಸ ಭಾವಗಳಿಲ್ಲ.

ನೃತ್ಯ.—ಇದರಲ್ಲಿ ರಸ, ಭಾವ ಮತ್ತು ವ್ಯಂಜನಗಳು ಸೇರಿಕೊಂಡಿರುತ್ತವೆ.

ನಾಟ್ಯ.—ನರ್ತನ ದೃಶ್ಯಗರ್ಭಿತವಾಗಿ ಕಥೆಯು ನಾಟಕರೂಪದಲ್ಲಿ ನಾಟ್ಯವಾಡುವುದು. ನಾಟ್ಯದಲ್ಲಿ ಎರಡು ವಿಧಗಳುಂಟು: ಒಂದನೆ

ಯದು, 'ತಾಂಡವ'; ಎರಡನೆಯದು 'ಲಾಸ್ಯ'. ಪುರುಷ ಸಹಜವಾದ ದುಡುಕುತನ, ಉದ್ದಂಡತನ, ಹಾಗೂ ವೈಲಕ್ಷಣ್ಯಗಳನ್ನು ನಿರೂಪಿಸುವುದು ತಾಂಡವ; ನಯ, ಲಜ್ಜೆ, ಮರ್ಯಾದೆ, ಶಾಂತತೆ, ಮೃದುತ್ವ ಮತ್ತು ಮನೋರಂಜಕವನ್ನು ನಿರೂಪಿಸುವುದು ಲಾವಣ್ಯ; ಭಾವ, ರಸ ಮತ್ತು ವ್ಯಂಜನ ಕೂಡಿಕೊಂಡಿರುವುದಕ್ಕೆ 'ಅಭಿನಯ' ಎಂದು ಕರೆಯಲ್ಪಡುತ್ತದೆ.

ಭರತನಾಟ್ಯದಲ್ಲಿ ಅಭಿನಯಕ್ಕೆ ಹೆಚ್ಚು ಪ್ರಾಮುಖ್ಯವಿದೆ. ಅಭಿನಯದಲ್ಲಿ ನಾಲ್ಕು ವಿಧಗಳಿವೆ: ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕ. ಅಂಗಗಳಲ್ಲಿ ಮೂರು ಭಾಗಗಳಿವೆ:—ಅಂಗ, ಪ್ರತ್ಯಂಗ, ಉಪಾಂಗ. ಅಂಗಾಭಿನಯವೆಂದರೆ—ತಲೆ, ಕತ್ತು, ಕೈಗಳು, ಕಂಕುಳು, ಪಕ್ಕೆ, ಸೊಂಟ, ಕಾಲು, ಭುಜ, ಭುಜದ ಎಲುಬು, ಹೊಟ್ಟೆ, ಬೆನ್ನು, ತೊಡೆ, ಮೀನ ಖಂಡ, ಮೊಣಕಾಲು, ಮೊಣಕೈ ಇವುಗಳ ಅಭಿನಯ. ಉಪಾಂಗಾಭಿನಯವೆಂದರೆ.—ಕಣ್ಣು, ಕಣ್ಣುರೆಪ್ಪೆ, ಕೆನ್ನೆ, ಮೂಗು, ತುಟಿ, ಹಲ್ಲು, ಬೆರಳು, ಅಂಗೈ ಮತ್ತು ಹೆಬ್ಬೆಟ್ಟು ಇವುಗಳ ಅಭಿನಯ. ಭಂಗಿಗಳಲ್ಲಿ ನಾಲ್ಕು ವಿಧ: ಅಭಂಗ, ಸಮಭಂಗ, ಅತಿಭಂಗ, ತ್ರಿಭಂಗ.

ವಾಚಿಕಾಭಿನಯವು ನಾಟಕಗಳಲ್ಲಿ ಕೇವಲ ಶಬ್ದಗಳಿಂದ ಅಭಿನಯಿಸಲ್ಪಡುತ್ತದೆ. ಆಹಾರ್ಯಾಭಿನಯವು ಒಡವೆ, ಉಡುಪುಗಳ ಸಹಾಯದಿಂದ ಅಭಿನಯಿಸಲ್ಪಡುತ್ತದೆ. ಸಾತ್ವಿಕಾಭಿನಯವು ಮನೋವಿಕಾರಗಳಿಂದ ಬೆವರುವುದು, ಮತ್ತು ರೋಮಾಂಚವಾಗುವುದು ಇವೇ ಮುಂತಾದುವುಗಳಿಂದ ವ್ಯಕ್ತಗೊಳಿಸಬಹುದಾಗಿದೆ.

ಅಭಿನಯದಿಂದ ಆಗುವ ಚಿತ್ತಾಕರ್ಷವು ಅಷ್ಟಿಷ್ಟಲ್ಲ. ಮನೋಹರವಾದ ಅಭಿನಯದ ಜೊತೆಗೆ ತಾಳಲಯಬದ್ಧವಾದ ಹಾಡುಗಾರಿಕೆಯೂ ಸೇರಿರುತ್ತದೆ. ನರ್ತಕನು ತನ್ನ ಸೌಂದರ್ಯದೇಹ, ಮತ್ತು ದೇಹಾಂಗಗಳಿಂದಲೇ ಎಂತಹ ಆನಂದವನ್ನಾಗಲೀ ದುಃಖವನ್ನಾಗಲಿ ಅತ್ಯಾಶ್ಚರ್ಯವಾದ ರೀತಿಯಲ್ಲಿ ತೋರ್ಪಡಿಸಬಹುದು. ಅಭಿನಯಕಾರನಿಗೆ ಶಿರೋಭೇದ ಮತ್ತು ದೃಷ್ಟಿಭೇದಗಳ ಅರಿವು ಚೆನ್ನಾಗಿರಬೇಕು. ಯಾವ ಭಾವಕ್ಕೆ ಯಾವರೀತಿ ಶಿರಶ್ಚಲನ ಮಾಡಬೇಕೊ, ಹೇಗೆ ದೃಷ್ಟಿಯನ್ನು ಮಾರ್ಪಡಿಸಬೇಕೊ ಆ ರೀತಿಗಳೆಲ್ಲವನ್ನೂ ಚೆನ್ನಾಗಿ ಅರಿತು, ಕಲಿತು ಅಭಿನಯಿಸಿದರೆ ಆಗ ಅಭಿನಯವು ಹೃದಯಂಗಮವಾಗಿರುತ್ತದೆ. ಕೆಲವು ವೇಳೆ ಹಸ್ತವಿನ್ಯಾಸಕ್ಕಿಂತಲೂ ಶಿರೋದೃಷ್ಟಿವಿನ್ಯಾಸವು ಬಹಳ ಮುಖ್ಯವೆನಿಸುತ್ತದೆ. ನರ್ತಕನಿಗೆ ಸುಂದರವಾದ ದೇಹವೂ, ಚಾರುನೇತ್ರಗಳೂ, ಸುಂದರ ಮುಖವೂ, ಸಮಶಿರವೂ ಇದ್ದೇ ಇರಬೇಕೆಂದೂ, ಹಾಗಿಲ್ಲದಿದ್ದರೆ ಅವನು ನರ್ತಕನಾಗಲು ಅನರ್ಹನೆಂದೂ ಅಭಿನಯ ಶಾಸ್ತ್ರದ ಅಭಿಪ್ರಾಯ.

ಶಿರೋಭೇದಗಳು ಒಂಭತ್ತು ವಿಧಗಳು: ಸಮ, ಉದ್ವಾಹಿತ, ಅಧೋಮುಖ, ಆಲೋಳಿತ, ಧುತ, ಕಂಪಿತ, ಪರಾವೃತ್ತ, ಉತ್‌ಕ್ಷಿಪ್ತ, ಪರವಾಹಿತ.

ದೃಷ್ಟಿಭೇದಗಳಲ್ಲಿ ಎಂಟು ಚಲನೆಗಳು: ಸಮ, ಸಾಚಿ, ಆಲೋಕಿತ, ಪ್ರಲೋಕಿತ, ನಿಮೀಲಿತ, ಉಲ್ಲೋಕಿತ, ಅನುವೃತ, ಅವಲೋಕಿತ.

## ಹಸ್ತ ವಿನ್ಯಾಸಗಳು

















































ಗ್ರಂಥಗಳಲ್ಲಿ ದೃಷ್ಟಿ ಭೇದಗಳು ೪೪ ವಿಧಗಳೆಂದು ಅಭಿಪ್ರಾಯಪಟ್ಟಿದೆ. ಅವು ಯಾವುವೆಂದರೆ—ಸಮ, ಪ್ರಲೋಕಿತ, ಶೃಂಗಾರ, ಆಲೋಕಿತ, ಅದ್ಭುತ, ಕರುಣ, ವಿಸ್ಮಯ, ಸ್ನಿಗ್ಧ, ದೃಪ್ತ, ವಿಷಣ್ಣ, ಭಯಾನಕ, ಸಾಚಿ, ದೃತ, ವೀರ, ರೌದ್ರ, ದೂರ, ಇಂಗಿತ, ವಿಲೋಕಿತ, ವಿತರ್ಕಿತ, ಶಂಕಿತ, ಅಭಿತಪ್ತ, ಅವಲೋಕಿತ, ಶೂನ್ಯ, ಹರ್ಷ, ಉಗ್ರ, ವಿಭ್ರಾಂತ, ಶಾಂತ, ನಿಮೀಲಿತ, ಸೂಚನ, ಲಜ್ಜಿತ, ಮಲಿನ, ತ್ರಸ್ತ, ಮ್ಲಾನ, ಮುಕುಳ, ಕುಂಚಿತ, ಆಕಾಶ, ಅರ್ಧಮುಕುಳ, ಅನುವೃತ, ವಿಪ್ಲುತ, ಜಿಹ್ಮ, ವಿಕೋಶ, ಮದಿರ, ಹೃದ್ಯ, ಲಲಿತ, ಎಂಬಿವುಗಳು.

ಕಣ್ಣುಹುಬ್ಬುಗಳಲ್ಲಿ ಆರು ಚಲನಗಳಿವೆ: ಸಹಜ, ಪತಿತ, ಉತ್‌ಷಿಪ್ತ, ಚತುರ, ರೇಚಿತ, ಕುಂಚಿತ.

## ಕತ್ತಿನ ಚಲನಗಳು

ಕತ್ತಿನ ಚಲನಗಳನ್ನು ನಾಲ್ಕು ವಿಧವಾಗಿ ವಿಂಗಡಿಸಿದೆ: (೧) ಸುಂದರಿ, (೨) ಪರಿವರ್ತಿತ, (೩) ಪ್ರಕಂಪಿತ, (೪) ತಿರಶ್ಚೀನ.

೧. **ಸುಂದರಿ**—ಕತ್ತನ್ನು ಅಡ್ಡವಾಗಿ ತಿರುಗಿಸುವುದಕ್ಕೆ ಸುಂದರೀ ರೀತಿ ಎಂದು ಕರೆಯಲ್ಪಡುತ್ತದೆ. ಒಳ್ಳೆಯದು ಎಂದು ಹೇಳುವುದು, ಜ್ಞಾಪಕಮಾಡಿ ಕೊಳ್ಳುವುದು, ಸ್ನೇಹಮಾಡುವುದು, ಸರಸ ಮುಂತಾದುವುಗಳಲ್ಲಿ ಈ ಕತ್ತಿನ ಚಲನಗಳನ್ನು ಬಳಸಬೇಕಾಗುವುದು.

೨. **ಪರಿವರ್ತಿತ**.—ಅರ್ಧಚಂದ್ರಾಕಾರವಾಗಿ ಎಡಬಲಗಳಲ್ಲಿ ಕತ್ತು ತಿರುಗಿಸುವುದು. ಶೃಂಗಾರನಟನೆ, ಪ್ರೇಯಸಿಯ ಕೆನ್ನೆಯನ್ನು ಮುದ್ದಿಟ್ಟು ಕೊಳ್ಳುವುದು ಇವುಗಳಿಗೆ ಇದು ಅನ್ವಯಿಸುತ್ತದೆ.

೩. **ಪ್ರಕಂಪಿತ**.—ಪಾರಿವಾಳದ ಹಕ್ಕಿಯ ಹಾಗೆ ತಲೆಯನ್ನು ಅಲ್ಲಾಡಿಸುವುದು. ನಾನು-ನೀನು ಎಂದು ಹೇಳುವುದು, ಲೆಖ್ಖ, ಉಯ್ಯಾಲೆ, ಇವುಗಳಿಗೆ ಇದು ಅನ್ವಯಿಸುತ್ತದೆ.

೪. **ತಿರಶ್ಚೀನ**.—ಹಾವಿನಂತೆ ಎರಡು ಪಕ್ಕ, ಮೇಲು ಭಾಗಗಳಲ್ಲಿ ಕತ್ತನ್ನು ಅಲ್ಲಾಡಿಸುವುದು. ಕತ್ತಿವರಸೆ, ಹಾವಿನ ಚಲನವಲನ ಇವುಗಳಿಗೆ ಇದು ಅನ್ವಯಿಸುತ್ತದೆ.

## ಹಸ್ತಮುದ್ರೆಗಳು

ಹಸ್ತ ಮುದ್ರೆಗಳಲ್ಲಿ ಎರಡು ವಿಧ : ಅಸಂಯುತ ಹಸ್ತ, ಸಂಯುತ ಹಸ್ತ.

**ಅಸಂಯುತ ಹಸ್ತಗಳು**.—ಅಸಂಯುತ ಎಂದರೆ ಒಂದೇ ಹಸ್ತದಿಂದ ತೋರಿಸಬಲ್ಲ ಮುದ್ರೆಗಳು ೨೮ ಇವೆ. (೧) ಪತಾಕ, (೨) ತ್ರಿಪತಾಕ, (೩) ಅರ್ಧಪತಾಕ, (೪) ಕರ್ತರೀ ಮುಖ, (೫) ಮಯೂರ, (೬) ಅರ್ಧಚಂದ್ರ (೭) ಅರಾಳ, (೮) ಶುಕತುಂಡ, (೯) ಮುಷ್ಟಿ, (೧೦) ಶಿಖರ, (೧೧) ಕಪಿತ್ಥ, (೧೨) ಕಟಕಾಮುಖ, (೧೩) ಸೂಚೀ, (೧೪) ಚಂದ್ರಕಲಾ, (೧೫) ಪದ್ಮಕೋಶ

(೧೬) ಸರ್ಪಶೀರ್ಷ, (೧೭) ಮೃಗಶೀರ್ಷ, (೧೮) ಸಿಂಹಮುಖ, (೧೯) ಲಾಂಗೂಲ, (೨೦) ಅಲಪದ್ಮ, (೨೧) ಚತುರ, (೨೨) ಭ್ರಮರ, (೨೩) ಹಂಸಾಸ್ಯ, (೨೪) ಹಂಸಪಕ್ಷ, (೨೫) ಸಂದಂಶ, (೨೬) ಮುಕುಳ, (೨೭) ತಾಮ್ರಚೂಡ, (೨೮) ತ್ರಿಶೂಲ.

**ಸಂಯುತ ಹಸ್ತಗಳು.**—ಸಂಯುತ ಎಂದರೆ ಎರಡು ಕೈಗಳನ್ನೂ ಪ್ರಯೋಗಿಸಿ ತೋರಿಸುವ ಮುದ್ರೆಗಳು ೨೪ ಇವೆ.

(೧) ಅಂಜಲಿ, (೨) ಕಪೋತ, (೩) ಕರ್ಕಟ, (೪) ಸ್ವಸ್ತಿಕ, (೫) ಡೋಲಾ, (೬) ಪುಷ್ಪ ಪುಟ, (೭) ಉತ್ಸಂಗ, (೮) ಶಿವಲಿಂಗ, (೯) ಕಟಕಾವರ್ಧನ, (೧೦) ಕರ್ತರೀಸ್ವಸ್ತಿಕ, (೧೧) ಶಕಟ, (೧೨) ಶಂಖ (೧೩) ಚಕ್ರ, (೧೪) ಸಂಪುಟ, (೧೫) ಪಾಶ, (೧೬) ಕೀಲಕ, (೧೭) ಮತ್ಸ್ಯ (೧೮) ಕೂರ್ಮ, (೧೯) ವರಾಹ, (೨೦) ಗರುಡ, (೨೧) ನಾಗಬಂಧ, (೨೨) ಖಟ್ವಾ, (೨೩) ಭೇರುಂಡ, (೨೪) ಅವಹಿತ್ಥ. ಇವಲ್ಲದೆ ೩೦ ನೃತ್ಯ ಹಸ್ತಗಳೆಂದೂ ಹೇಳಲಾಗಿದೆ; ಮತ್ತು ಆರು ತರಹೆಯಲ್ಲಿ ಹುಬ್ಬನ್ನು ಚಲಿಸುವುದು "ಭ್ರೂಚಲನೆ" ಎಂದು ಹೆಸರು.

ಇವುಗಳ ಜೊತೆಗೆ ನೂರಾರು ವಿಧವಾದ ವಿಶೇಷ, ವಿಷಯ ವಿನ್ಯಾಸಗಳನ್ನು ಸಮಯಕ್ಕನುವಾದ ರೀತಿಯಲ್ಲಿ ವಿನ್ಯಾಸಿಸಬೇಕು. ಪ್ರತಿಯೊಂದು ಚಲನೆಯಲ್ಲಿಯೂ ಚಲನಕ್ಕೆ ಸರಿಯಾಗಿ ಅರ್ಥವಾಗುವ ರೀತಿಯಲ್ಲಿ ಅಂಗ ವಿನ್ಯಾಸ ಮಾಡಬೇಕು.

## ಭಾವ

ವಿಕಾರರಹಿತವಾದ ಮನಸ್ಸಿಗೆ ಉಂಟಾಗುವ ವಿಕಾರಗಳಿಗೆ ಭಾವ ಎಂದು ಹೆಸರು. ನೃತ್ಯವು ರಸ ಮತ್ತು ಭಾವಗಳೊಂದಿಗೆ ಸಂಮಿಳಿತವಾಗಿರುತ್ತದೆ. ಆ ಭಾವಗಳಲ್ಲಿ ವಿಭಾವ, ಅನುಭಾವ, ಸಂಚರೀಭಾವಗಳೆಂದು ಮೂರು ವಿಧವಾಗಿ ವಿಂಗಡಿಸಲ್ಪಟ್ಟಿದೆ.

ನವರಸಗಳು ಒಂಭತ್ತು ಸ್ಥಾಯಿ ಭಾವಗಳಿಂದ ಕೂಡಿವೆ. ಇವುಗಳನ್ನು ಅವಲಂಬಿಸುವ ಭಾವಗಳಿಗೆ "ವಿಭಾವ"ವೆಂದೂ, ನವರಸಗಳು ಉತ್ಪತ್ತಿಯಾದ ಮೇಲೆ ಅವುಗಳ ಅನುಸಾರವಾಗಿ ವ್ಯಕ್ತಪಡಿಸುವ ಭಾವಗಳಿಗೆ "ಅನುಭಾವ"ಗಳೆಂದೂ ಹೇಳಲ್ಪಡುತ್ತದೆ. ಇವುಗಳನ್ನು ಪ್ರದರ್ಶಿಸುವ ಚರ್ಯಗಳು 'ವ್ಯಭಿಚರೀ' ಅಥವಾ 'ಸಂಚರೀ' ಭಾವಗಳು.

ನಾಟ್ಯಾಭಿನಯದಲ್ಲಿ ೩೩ ವ್ಯಭಿಚರೀ ಅಥವಾ ಸಂಚರೀ ಭಾವಗಳೂ, ೯ ಸ್ಥಾಯಿಭಾವಗಳೂ, ೩ ಸಾತ್ವಿಕ ಭಾವಗಳೂ ಹೀಗೆ ನಾನಾವಿಧವಾಗಿ ೪೯ ಭಾವಗಳು ಪ್ರದರ್ಶಿಸಲ್ಪಡುತ್ತವೆ.

ನೃತ್ಯಕ್ಕೆ ಹಿನ್ನೆಲೆಯಾಗಿ ಸಂಗೀತವಿದ್ದರೂ ಇರಬಹುದು. ನೃತ್ಯವೆಂಬುದು ಸಾಮಾನ್ಯವಾಗಿ ಒಬ್ಬರೇ ಕುಣಿಯುವುದು. ಸಂಗೀತ, ತಾಳ ಮೇಳಗಳ ಹಿನ್ನೆಲೆಯಿರಬೇಕು.



ಗೋಳ ಗುಮ್ಮಟ, ಬಿಜಾಪುರ



ಪ್ರಾಚೀನ ಕನ್ನಡ ಲಿಪಿ (Palæographic) ವಸ್ತುಶಾಲೆ, ಧಾರವಾಡ



ವ್ಯವಸಾಯ ಕಾಲೇಜು, ಧಾರವಾಡ



ಕರ್ಣಾಟಕ ವಿಶ್ವವಿದ್ಯಾನಿಲಯದ ಕಾರ್ಯಭವನ, ಧಾರವಾಡ

ಅಭಿನಯದಲ್ಲಿ ರಸಾನುಭವವೂ, ತಲ್ಲೀನತೆಯೂ ಇರಬೇಕು ಮತ್ತು ಪ್ರೇಕ್ಷಕರ ಮನಸ್ಸಿನ ಮೇಲೆ ತನ್ನ ಅಭಿನಯದಿಂದ ಸ್ಥಾಯಿಭಾವಗಳು ಹುಟ್ಟುವಂತೆ ಮಾಡುವ ನೈಪುಣ್ಯತೆ ಇರಬೇಕು. ಇದೇ ಭರತನಾಟ್ಯದ ವೈಖರಿ.

## ೬. ಕನ್ನಡನಾಡಿನ ನಾಟ್ಯ ಸಂಪ್ರದಾಯ

ಕನ್ನಡನಾಡಿನಲ್ಲಿ ಪ್ರಚಾರದಲ್ಲಿರುವ ನಾಟ್ಯ ಸಂಪ್ರದಾಯ ಬಹಳ ಕಾಲದಿಂದಲೂ ದೇವದಾಸಿಯರ ಮಡಿಲಲ್ಲಿ ಉಳಿದು ಬೆಳೆದು ಬಂದಿದೆ. ಎಂತಲೇ ಈ ನೃತ್ಯವನ್ನು ಪರಿಪೂರ್ಣವಾಗಿ ಅಭ್ಯಾಸಿಸಿ ಅದನ್ನು ಪ್ರಚಾರಕ್ಕೆ ತಂದವರು ವಿರಳ. ನಾಟ್ಯವನ್ನು ಕೆಲವು ಕಾಲ ಅಭ್ಯಾಸಮಾಡಿ, ಅದನ್ನು ಸ್ವಲ್ಪಕಾಲ ಪ್ರದರ್ಶಿಸಿ ಕಲಾವಂತೆಯರಾಗಿ ಬಾಳಿ, ಅಲ್ಲಿಗೇ ನೃತ್ಯ ಕಲೆಯನ್ನು ಬಿಟ್ಟು ಜೀವನ ನಿರ್ವಹಣದ ಮಾರ್ಗಹಿಡಿದವರೇ ಅಧಿಕ. ತಮ್ಮ ಜೀವನವನ್ನು ಕಲೆಗಾಗಿ ಮೀಸಲುಮಾಡಿ ಅದನ್ನು ಉಳಿಸಿ ತಾವೂ ಕಲಾಸೇವಕಿಯಾಗಿ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಂಡು ವಿಶ್ವವಿಖ್ಯಾತರಾದವರಲ್ಲಿ ಮೈಸೂರಿನ ದಿವಂಗತ ಜಟ್ಟಿ ತಾಯಮ್ಮನವರು ಒಬ್ಬರೇ. ಶ್ರೀಮತಿ ತಾಯಮ್ಮನವರಿಂದ ವಿದ್ಯೆ ಕಲಿತವರು ಬಹಳ; ಆದರೆ ಪರಿಪೂರ್ಣತೆ ಪಡೆದವರು ಕೆಲವರು. ಭರತನಾಟ್ಯ ಸಂಪ್ರದಾಯದಲ್ಲಿ ಕೆಲವು ಕಾರಣಗಳಿಂದ ದಿನೇ ದಿನೇ ಮಾರ್ಪಾಡು ಬರಲು ಕಾರಣಗಳಿದ್ದರೂ, ತಾಯಮ್ಮನವರು ಹೇಳುತ್ತ ಬಂದ ಸಂಪ್ರದಾಯ ಕಳೆದ ಮುಕ್ಕಾಲು ಶತಮಾನದಿಂದ ಒಂದೇ ರೀತಿಯಾಗಿ ಉಳಿದಿದೆ. ಆದರೆ ವಿಷಾದಕರವಾದ ಅಂಶವೇನೆಂದರೆ ತಾಯಮ್ಮನವರು ನಾಡಿಗೆ ಉಳಿಸಿಕೊಟ್ಟ ಸಂಪ್ರದಾಯವನ್ನು ಇತರರಿಗೆ ಹೇಳಿಕೊಡಬಲ್ಲವರು ಕೆಲವೇ ಮಂದಿ. ಅವರ ನಂತರದಲ್ಲಿ ಈ ಸಂಪ್ರದಾಯದ ನೃತ್ಯವೇ ಅಳಿದು ಹೋಗುವ ಸ್ಥಿತಿಗೆ ಇಂದು ಮುಟ್ಟಿದೆ.

ಮೈಸೂರು ಸಂಪ್ರದಾಯದ ಭರತ ನಾಟ್ಯ ಹದಿನಾರಾಣೆ ಕನ್ನಡ ನೃತ್ಯ. ಇದರ ಪ್ರತಿಯೊಂದು ಅಂಗ ವಿನ್ಯಾಸದಲ್ಲೂ, ಅಭಿನಯದಲ್ಲೂ ಕನ್ನಡತನ ಎದ್ದು ಕುಣಿಯುತ್ತಲಿದೆ.

"ಅಮರುಕ ಕಾವ್ಯ", "ಗೀತಗೋವಿಂದ", ಕವಿಕಾಳಿದಾಸನ "ಮೇಘಧೂತ", ಕ್ಷೇತ್ರೀಯ ಪದಗಳು, ಕೃಷ್ಣ ಕರ್ಣಾಮೃತ, ಹಾಗೂ ದಾಸರ ನೂರಾರು ಕೀರ್ತನೆಗಳು ಮೈಸೂರು ಭರತನಾಟ್ಯದಲ್ಲಿ ಹಾಸು ಹೊಕ್ಕಲ್ಲಿ ನಿಂತಿವೆ. ಭಕ್ತಿ ರಸಪ್ರಧಾನವಾದ ದಾಸರ ಪದಗಳನ್ನು ಮನಮುಟ್ಟುವಂತೆ ಅಭಿನಯಿಸುವ ಪದ್ಧತಿಯ ಮೂಲಕ ನಾಡಿನಲ್ಲಿ ಇದು ಅಳಿಯದೆ ಉಳಿದಿದೆ. ಭಕ್ತಿರಸಪ್ರಧಾನವಾದ ಈ ಕೀರ್ತನೆಗಳನ್ನು ಮಕ್ಕಳು-ಹಿರಿಯರು ಸುಲಭವಾಗಿ ಮನನ ಮಾಡಿಕೊಂಡು ಅಭಿನಯಿಸಬಹುದಾಗಿದೆ.

## ೭. ನಮ್ಮ ಗುರಿ

ನೃತ್ಯ ಕಲಾಭ್ಯಾಸದಲ್ಲಿ ಮುನ್ನಡೆಯಬೇಕೆಂಬ ಕಲಾವಿದರು ಅಪರೂಪವಾದರೂ ಇಂದು ನೃತ್ಯ ಕಲೆಯ ಪ್ರಚಾರ ಸಾಕಷ್ಟು ನಡೆದು ಎಲ್ಲರೂ ಅಲ್ಪಸ್ವಲ್ಪ

ಕುಣಿತ ಅರಿತವರೇ ಆಗುತ್ತಿದ್ದಾರೆ. ನೆಗೆದು ಹಾರಾಡುವವರೆಲ್ಲಾ ನರ್ತಕರಲ್ಲ. ಕಲೆಗೆ ಅಪಚಾರವಾಗದಂತೆ ನಡೆದುಕೊಂಡು, ಕಲಾಭ್ಯಾಸ ಮುಂದುವರಿಸಿದವರು ವಿರಳ. ತಮ್ಮ ಕಲಾಜೀವನದ ಮೊದಲಹೆಜ್ಜೆ ನೈತಿಕ ಶಕ್ತಿ, ಜೀವನ, ಮನಸ್ಸು, ಆತ್ಮಗಳ ಶುದ್ಧಿ-ಎಂಬುದನ್ನು ನರ್ತನ ಕಲಾಪ್ರೇಮಿಗಳು, ಅಭ್ಯಾಸಿಗಳು ಅರಿತಿರಬೇಕು.

ಕಾಮುವನ್ನು ಸುಟ್ಟು ಕಲೆಯನ್ನು ಬೆಳೆಸಬೇಕು. ಕೃತಕತೆಯನ್ನು ಬಿಟ್ಟು ನೈಜತೆಯನ್ನು ಹೊಂದಬೇಕು. ಕಲೆಯ ಅಧಿಷ್ಠಾನವಾದ ದೇಹ ಸೌಂದರ್ಯ, ಅಂಗ ಸೌಂದರ್ಯಗಳನ್ನು ಹೆಚ್ಚಿಸಿಕೊಳ್ಳಲು ಅಗತ್ಯವಾದ ವ್ಯಾಯಾಮ, ಆಹಾರ, ಪರಿಶುದ್ಧ ಜೀವನಗಳನ್ನು ನಡೆಸಬೇಕು. ಆಗ ಕಲೆಯ ಮೇಲೆ ಕವಿದಿರುವ ಮೋಡ ಕರಗಿ ಅದರ ಪ್ರಕಾಶ ಪ್ರಸರಿಸಲು ಅವಕಾಶವಾಗುತ್ತದೆ.

ಅನೇಕ ಮಂದಿ ನಾಟ್ಯಕಲಾಭ್ಯಾಸಿಗಳಲ್ಲಿ ಕಲಾಸೇವೆಗಿಂತ ಹೆಚ್ಚಾಗಿ ಕಾಮ ವಾಸನೆ ಬಲವಾಗಿರುವುದರಿಂದಲೇ ಅವರ ನೃತ್ಯ ಕಲೆಗಳಲ್ಲಿ ಕಲಾ ಅಂಶ ಅಳಿದು ಕೃತಕತೆ ಬೆಳೆಯುತ್ತಿದೆ. ಅವರ ಜೀವನದ ಮೇಲಿನ ಮೋಡ ಕವಿದು ಅದರ ಪವಿತ್ರ ಉದ್ದೇಶ, ಸಾಧನೆ, ಕೀರ್ತಿಗೆ ಕಳಂಕ ಬರತೊಡಗಿದೆ.

ಭರತನಾಟ್ಯದ ಪವಿತ್ರತೆ, ಜನಾದರಣೆಗಳ ಉದಾಹರಣೆಗಾಗಿ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲೂ ತಲೆ ಎತ್ತಿನಿಂತ ದೇವಾಲಯಗಳೇ ಸಾಕ್ಷಿಯಾಗಿವೆ. ಕೈದಾಳ, ಬೇಲೂರು, ಹಳೇಬೀಡು, ಸೋಮನಾಥಪುರಗಳ ಭವ್ಯ ದೇವಾಲಯಗಳಲ್ಲಿರುವ ಪ್ರಾಚೀನ ವಿಗ್ರಹಗಳ ನಿಲವು, ಆ ತ್ರಿಭಂಗಿ ರಚನೆ, ಆ ಹಾವ ಭಾವಗಳ ವಿನ್ಯಾಸ, ನೃತ್ಯದ ಪವಿತ್ರತೆಯನ್ನೂ, ಇತಿಹಾಸವನ್ನೂ ಸಾರುತ್ತಿವೆ. ಈ ದೇವ ಮಂದಿರಗಳಲ್ಲಿ ಕೆತ್ತಲ್ಪಟ್ಟ ಸಹಸ್ರಾರು ನೃತ್ಯ ಭಂಗಿಗಳೇ ಸಜೀವ ನಾಟ್ಯ ಶಾಸ್ತ್ರವಾಗಿ ನಮ್ಮ ಮುಂದೆ ನಿಂತಿವೆ. ನರ್ತಕ ಮೊದಲು ಈ ಮಂದಿರಗಳಲ್ಲಿ ಪ್ರವೇಶಿಸಿ ನೃತ್ಯ ಭಂಗಿಗಳನ್ನು ಕಲಿತಾಗ ನರ್ತಕನಾಗುವ ಯೋಗ್ಯತೆ ಪಡೆದಾನು. ನಮ್ಮ ಪವಿತ್ರ ಕನ್ನಡನಾಡು ತನ್ನ ನೃತ್ಯ ಕಲೆಯನ್ನು ಅಮರಗೊಳಿಸಿದೆ. ಅಂದಮೇಲೆ ಕಲಾವಿದರು ಅದನ್ನು ಸಜೀವಗೊಳಿಸಬೇಕು. ಇದನ್ನು ಒತ್ತಿ ಹೇಳಬೇಕಾಗಿದೆ.

ಆಳಿದ ಮಹಾಪ್ರಭುಗಳ ಕಲಾಪ್ರೇಮದಿಂದಾಗಿಯೇ ಮೈಸೂರಿನಲ್ಲಿ ಭರತ ನಾಟ್ಯ ಇಷ್ಟುಕಾಲವಾದರೂ ಉಳಿದು ನಿಂತಿದೆ ಎಂದು ಧೈರ್ಯವಾಗಿ ಹೇಳಬಹುದು. ಅರಮನೆ ಗುರುಮನೆಗಳಿಂದ ಸಾಕಷ್ಟು ಬೆಂಬಲವಿಲ್ಲದಿದ್ದರೆ, ಈ ನಾಡಿನಲ್ಲಿ ಈ ಕಲೆಯನ್ನುಳಿಸುವ ಕಾರ್ಯ ಸುಲಭವಲ್ಲ. ಇತರ ಹಲವು ಮುಖ್ಯ ಸಂಸ್ಥಾನಗಳಲ್ಲಿ ನೃತ್ಯಕಲಾಕೇಂದ್ರಗಳಿಗೆ ಗಣನೀಯವಾದ ಸಹಕಾರ ದೊರೆತಿದೆ. ಆದರೆ ಭರತ ನಾಟ್ಯದ ಕೇಂದ್ರವೆನಿಸಿದ ಕನ್ನಡನಾಡಿನಲ್ಲಿ ನಾಟ್ಯ ಕಲೆಯ ಮೇಲ್ಮೆಗೆ ಬೇಕಾದ ಬೆಂಬಲ ಅರಮನೆಗಳಿಂದ ಬಂದಿಲ್ಲ. ಸ್ವತಂತ್ರ ಭಾರತದ ಉದಯವಾಗಿ ಸ್ವತಂತ್ರ ಕನ್ನಡ ನಾಡು ತಲೆಯೆತ್ತಿದೆ. ಈ ನಾಡಿನಲ್ಲಿ ತನ್ನ ಕಲೆಗೆ ಸ್ಥಾನ ಮಾನವಿಲ್ಲವೆಂದಾದರೆ ಅದು ವಿಷಾದಕರ. ವಿಶಾಲ ಮೈಸೂರು ಸರ್ಕಾರವೂ ಈ ಕಡೆ ಗಮನ ಹರಿಯಿಸಿ ಕನ್ನಡ ಕಲಾಕೇಂದ್ರ

ಸ್ಥಾಪನೆಗೆ ತನ್ಮೂಲಕ ಕನ್ನಡ-ನೃತ್ಯ ಸಂಪ್ರದಾಯದ ಪುನರುಜ್ಜೀವನಕ್ಕೆ ಸಹಕಾರಿಗಳಾಗಬೇಕು. ನೃತ್ಯವನ್ನು ವಿದ್ಯಾಕೇಂದ್ರಗಳಲ್ಲಿ ಕಲಿಸಬೇಕಾದ ಪಾಠಗಳಲ್ಲಿ ಒಂದಾಗಿ ಮಾಡಬೇಕು. ಸಂಗೀತಕ್ಕೆ ಕೊಟ್ಟಿರುವ ಸ್ಥಾನ ನೃತ್ಯಕ್ಕೂ ದೊರೆಯಬೇಕು. ನಮ್ಮ ಹೆಣ್ಣು ಮಕ್ಕಳ ಆರೋಗ್ಯ, ದೇಹಸೌಂದರ್ಯಗಳ ರಕ್ಷಣೆಯ ಸಾಧನವಾಗಿ ನೃತ್ಯ ನಿಲ್ಲಬೇಕು. ಈಗ ಉದಯವಾಗಿರುವ ಚೆಲುವ ಕನ್ನಡನಾಡಿನಲ್ಲಿ ಸರ್ವರ ಆತ್ಮೋನ್ನತಿಯ ಸಾಧನೆಗಾಗಿ ಸಂಸ್ಕೃತಿಯ ಜೀವಾಳವಾಗಿ ಉಳಿಯಬೇಕು.

——

# ಕನ್ನಡ ನಾಡಿನ ಲಲಿತಕಲೆಗಳು

## — ನಾಟಕ —

ಲೇಖಕರು:

ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿಗಳವರು, ಬೆಂಗಳೂರು.

### ೧. ಹಿನ್ನೆಲೆ

ಕನ್ನಡ ನಾಡು ಆರ್ಯ ದ್ರಾವಿಡ ಸಂಸ್ಕೃತಿಗಳ ಸಮ್ಮಿಳನ ಸ್ಥಾನವೆಂದು ಅನೇಕ ವಿದ್ವಾಂಸರು ಹೇಳುತ್ತಾರೆ. ಅಂತೂ ಈ ನಾಡು ಮೌರ್ಯ ಚಂದ್ರ ಗುಪ್ತನು ಇಲ್ಲಿಗೆ ಬರುವುದಕ್ಕಿಂತ ಬಲು ಮುಂಚೆಯೇ ಆರ್ಯವಾಗಿ, ಆರ್ಯ ಸಂಸ್ಕೃತಿಯನ್ನು ತಾಳಿಂದ ಋಡದವರೆಗೆ ಅಂಗೀಕರಿಸಿತ್ತು.

ಸಂಸ್ಕೃತ ಪ್ರಪಂಚದಲ್ಲಿ ಭರತ ಮಹರ್ಷಿಯು ನಾಟಕದ ಆದ್ಯರ್ಷಿ ಯೆನ್ನಿಸಿಕೊಂಡಿದ್ದಾನೆ. ತಮ್ಮ ಪುರಾಣಗಳ ಮಾತಿನಲ್ಲಿ ಆತನು ಸಮುದ್ರ ಮಥನದಷ್ಟು ಪ್ರಾಚೀನನು, ಎಂದರೆ ಅರ್ಥಾತ್ ಸಂಸ್ಕೃತ ನಾಟಕ ಅಮೃತದಷ್ಟು ಪ್ರಾಚೀನ; ಅಮೃತವು ಹುಟ್ಟಿದ ಕಾಲದಲ್ಲಿಯೇ ಹುಟ್ಟಿದುದು.

ಆಧುನಿಕ ವಿದ್ವಾಂಸರು ಎಲ್ಲವೂ ಬೀಜರೂಪದಲ್ಲಿದ್ದು ಬೆಳೆದು ಬಂತು ಎಂಬ ವಾದವನ್ನು ಪುರಸ್ಕರಿಸುತ್ತಾರೆ. ಪ್ರಾಚೀನ ಸಂಪ್ರದಾಯದವರು ಎಲ್ಲವೂ ಮೊದಲು ಪೂರ್ಣವಾಗಿದ್ದು ಬರುಬರುತ್ತಾ ಹ್ರಾಸವಾಗುತ್ತ ಬಂತು ಎನ್ನುತ್ತಾರೆ. ಆಧುನಿಕರ ಮತದಂತೆ ಸಂಸ್ಕೃತ ನಾಟಕದ ಬೀಜ ಋಗ್ವೇದದ ಸಂವಾದ ಸೂಕ್ತ ಗಳಲ್ಲಿ ಪ್ರಾಚೀನರ ಮತದಂತೆ ಅದನ್ನು ತನ್ನ ತಪಸ್ಸಿನಿಂದ ಕಂಡು ರೂಪಿಸಿದವನು ಭರತಮಹರ್ಷಿ.

ಈ ವಾದಗಳ ಮಾತಿರಲಿ: ಕನ್ನಡನಾಡಿನಲ್ಲಿ ಮಾತ್ರ, ಸಂಸ್ಕೃತಿಯ ಲಕ್ಷಣವಾದ ಧರ್ಮಾರ್ಥ ಕಾಮಮೋಕ್ಷಗಳು ಪ್ರಕಟವಾಗಿವೆಯಾದರೂ ನಾಟಕವು ಮಾತ್ರ ಶಾಲಿವಾಹನ, ಕದಂಬ, ಗಂಗ, ಚಾಳುಕ್ಯ ಪ್ರಭೃತಿ ರಾಜವಂಶಗಳ ಕಾಲದಲ್ಲಿ ಹೇಗಿತ್ತು ಎನ್ನುವುದಕ್ಕೆ ಯಾವ ಆಧಾರಗಳೂ ಇಲ್ಲ. ಹಾಗೆಂದು ಕರ್ನಾಟಕರಿಗೆ ನಾಟಕವು ಗೊತ್ತಿರಲಿಲ್ಲ ಎನ್ನುವುದಕ್ಕೂ ಸಾಧ್ಯವಿಲ್ಲ. ಸಂಸ್ಕೃತವನ್ನು ಚೆನ್ನಾಗಿ ಬಲ್ಲ ಕನ್ನಡಿಗರು ಸಂಸ್ಕೃತದ ನಾಟಕಗಳನ್ನು ನೋಡಿರಲಿಲ್ಲವೆ? ಬಹುಶಃ ಸಂಸ್ಕೃತದ ನಾಟಕಗಳಿಂದ ತೃಪ್ತರಾಗಿ, ಕನ್ನಡದಲ್ಲಿ ನಾಟಕ ರಚನೆಯಲ್ಲಿ ತೊಡಗಿರಲಿಲ್ಲವೋ ಏನೋ? ಕ್ರಿ. ಶ. ಸುಮಾರು ೩೦೦ರಲ್ಲಿ ಕನ್ನಡನಾಡಿನ ಹಿರಿಯರು ನೀಲಗಿರಿಯಲ್ಲಿ ಸೆಂಗುಟ್ಟವನ್ ಎಂಬ ತಮಿಳು ದೊರೆಗೆ ನಾಟಕ ವನ್ನಾಡಿ ತೋರಿಸಿದರೆಂದು ತಮಿಳು ಗ್ರಂಥದಲ್ಲಿದೆ.

ಕ್ರಿಸ್ತಶಕ ಸುಮಾರು ೪-೫ನೆಯ ಶತಮಾನದ ವೇಳೆಗೆ ಕರ್ನಾಟಕದಲ್ಲಿ ಕನ್ನಡದಲ್ಲಿ ಗ್ರಂಥಗಳನ್ನು ಬರೆಯುವ ವಾಡಿಕೆ ಬಂದಿತ್ತು. ಕಾವ್ಯವನ್ನು ಬರೆದ

ಜನ ನಾಟಕವನ್ನು ಬಿಟ್ಟಿರಲಾರರು. ಆ ಕಾಲದ ಸ್ವತಂತ್ರ ನಾಟಕಗಳು ನಮಗೆ ಸಿಕ್ಕಿಲ್ಲವಾದರೂ ಆ ಕಾಲದಲ್ಲಿ ಭಾಷಾಂತರವಾಗಿದ್ದ ವಿಕ್ರಮೋರ್ವಶೀಯದ ಪದ್ಯವೊಂದು ಸಿಕ್ಕಿ ನಮ್ಮ ಊಹೆಗೆ ಆಧಾರವಾಗುತ್ತದೆ.

ಹೊಯ್ಸಳರ, ಯಾದವರ, ಕಾಲದಲ್ಲಿ ದೇಶದಲ್ಲಿ ಶಿಲ್ಪ ಸಂಗೀತಗಳ ಕೃತಯುಗವೊಂದು ಆಗಿಹೋಯಿತು. ನೃತ್ಯವು ರಾಣಿವಾಸಗಳಲ್ಲಿ ತಾನೇ ತಾನಾಯಿತು. ಆಗಲೂ ನಾಟಕವು ಬಂದ ಗುರುತಿಲ್ಲ, ಎಂದರೆ ಆಗ ಬರೆದ ನಾಟಕಗಳು ನಮಗೆ ಸಿಕ್ಕಿಲ್ಲ. ಸಾಹಿತ್ಯದಲ್ಲಿ, ಶಿಲ್ಪದಲ್ಲಿ, ಸಂಗೀತದಲ್ಲಿ, ನಾಟಕೀಯತೆ ಕಂಡುಬಂದಿರಲು, ನಾಟಕವಿರಲಿಲ್ಲ ಎನ್ನುವುದು ಸಾಹಸದ ಮಾತಾದೀತು. ಆದರೂ, ನಮಗೆ ಪ್ರತ್ಯಕ್ಷದ ಆಧಾರಗಳಿಲ್ಲ.

## ೨. ಮೊದಲನೆಯ ಘಟ್ಟ

ಅಲ್ಲಿಂದ ಮುಂದೆ ಶತ್ರುಪರಾಭವಕ್ಕೊಳಗಾಗಿ ಸ್ಮಶಾನವಾಗಿ ಹೋಗಿದ್ದ ಕನ್ನಡನಾಡು ಮತ್ತೆ ಚೇತರಿಸಿಕೊಂಡು ವಿಜಯನಗರವನ್ನು ಕಟ್ಟಿತು. ವಿಜಯನಗರದಲ್ಲಿ ಮೆರೆದುದು ಕರ್ಣಾಟಕ ಸಂಸ್ಕೃತಿ ಎನ್ನುವುದಕ್ಕಿಂತ, ಅದು ಭಾರತದ ಆರ್ಯ ಸಂಸ್ಕೃತಿಯ ಪ್ರಾದೇಶಿಕ ಸ್ವರೂಪ ಎನ್ನುವುದು ಸರಿ. ಆಗ ನಾಟಕವು ಚಕ್ರವರ್ತಿಗಳ ಕೃಪೆಗೆ ಪಾತ್ರವಾದುದು ಮಾತ್ರವಲ್ಲ, ಅನೇಕ ನಟನಟಿಯರಿಗೆ ಮಾನ್ಯಗಳನ್ನು ಕೊಡಿಸಿತು. ಆಗಿನ ಕಾಲದ ಭರತೇಶ ವೈಭವದಲ್ಲಿ ನಾಟಕದ, ನಾಟಕ ಮಂಟಪದ, ನಟನಟಿಯರ ವಿಸ್ತಾರವಾದ ವರ್ಣನೆಗಳಿವೆ.

ಮತ್ತೆ ವಿಜಯನಗರವು ಲುಪ್ತವಾದಾಗ ಕನ್ನಡಿಗರ ಸರ್ವಸ್ವವೂ ಕೊಳ್ಳೆ ಹೋಯಿತು. ಮೈಸೂರು ಒಡೆಯರ ಕಾಲದಲ್ಲಿ ಅಲ್ಲಲ್ಲಿ ಅಳಿದುಳಿದಿದ್ದ ಕರ್ನಾಟಕ ಭಾಗ್ಯವು ಒಂದೆಡೆ ಸೇರಿ ಬೆಳೆಯಿತು. ಕರ್ಣಾಟಕದಲ್ಲಿ ಅಲ್ಲಲ್ಲಿ ರಾಜವಂಶಗಳು ತಲೆಯೆತ್ತಿದರೂ ಬಹುಕಾಲ ಉಳಿಯಲಿಲ್ಲ. ಅದರಿಂದ ಸಂಸ್ಕೃತಿವರ್ಧನ ಕಾರ್ಯವು ನಡೆಯಲಿಲ್ಲ.

ಒಡೆಯರ ಕಾಲದಲ್ಲಿ ಹೈದರನು ತಲೆಯೆತ್ತಿದ್ದಾಗ ನಾಟಕಗಳು ಇದ್ದುವು ಎಂದು ಆಧಾರಗಳಿವೆ. ಚಿಕ್ಕದೇವರಾಜ ಒಡೆಯರ ಕಾಲದ "ಮಿತ್ರಾವಿಂದ ಗೋವಿಂದ" ಗ್ರಂಥದಲ್ಲಿ ಇದು ಕಾಣುವುದು. ಈ ನಾಟಕಗಳು ಅಂದೇ, ಆಗಿನ ಕಾಲದಲ್ಲಿಯೇ, ಹುಟ್ಟಿಬಂದವೆನ್ನುವುದಕ್ಕಿಂತ ಗತವೈಭವದ ಪ್ರತೀಕಗಳು ಎನ್ನುವುದು ಸರಿ. ಆದರೂ ಆ ನಾಟಕಗಳು ತಲೆಯೆತ್ತಲಿಲ್ಲ. ಪ್ರತ್ಯೇಕವಾಗಿ ನಿಂತು ಬೆಳೆಯಲಿಲ್ಲ. ಚದುರಿಹೋಗಿ ಹಳ್ಳಿಗಳಲ್ಲಿ ಪಾಳೆಯಗಾರರ ಆಶ್ರಯಗಳಲ್ಲಿ ಯಕ್ಷಗಾನ ಪ್ರಸಂಗಗಳಾಗಿ ಉಳಿದುವು.

ಮತ್ತೆ ಕರ್ನಾಟಕದಲ್ಲಿ ನಾಟಕಗಳು ತಲೆಯೆತ್ತಿದುದು ಸುಮಾರು ೧೮೫೦-೬೦ ರಲ್ಲಿ. ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಆಳುತ್ತಿದ್ದಾಗ, ಮಂಗಳೂರಿನ ದಶಾವತಾರದ ಆಟಗಾರರು ಬಂದು ಅರಮನೆಯ ಮುಂದೆ ಚಪ್ಪರ ಹಾಕಿ ಆಡಿದರಂತೆ. ಅದರಿಂದ ಉತ್ಸಾಹಗೊಂಡ ತರುಣರ ಗುಂಪೊಂದು ನಾಟಕವನ್ನು ಆರಂಭಿಸಿತು. ಹಾಗೆ ಅವರು ಆಡಿದ ನಾಟಕ

ಈಗಿನ ಟೌನ್ ಹಾಲ್ ಕಾಂಪೌಂಡಿನಲ್ಲಿ ಹಾಕಿದ್ದ ಚಪ್ಪರದಲ್ಲಿ. ಅದು ಈಗಿನ ಕನ್ನಡದ ಮೊದಲನೆಯ ನಾಟಕ "ದ್ರೌಪದೀ ಸ್ವಯಂವರ"; ಗದಗಿನ ಭಾರತ ವನ್ನು ಹಿಡಿದು ಬರೆದುದು. ಬರೆದವರು ಗಿರಿಭಟ್ಟರ ತಮ್ಮಯ್ಯ. ಅದಾದ ಮೇಲೆ "ಸುಧನ್ವನ ಕಾಳಗ"; ಜೈಮಿನಿಯನ್ನು ಅನುಸರಿಸಿ ಬರೆದುದು.

ಹಾಗೆಯೇ ಈ ನಾಟಕದ ಹಂಬಲ ಮೈಸೂರಿಂದ ಸುತ್ತಮುತ್ತಲೂ ಪಸರಿಸಿತು. ರಾತ್ರಿಯೆಲ್ಲಾ ಕುಣಿಯುತ್ತಿದ್ದ ಯಕ್ಷಗಾನದ ಬದಲು ನಾಟ ಕವು ಜನರ ಮನಸ್ಸಿಗೆ ಹಿಡಿಯಿತು. ಯಳಂದೂರಿನಂತಹ ಮೂಲೆಯಲ್ಲಿ ಒಂದು ಕಂಪನಿ ಹುಟ್ಟಿ, ಮೈಸೂರು ಬೆಂಗಳೂರುಗಳಲ್ಲೂ ಕೀರ್ತಿಯನ್ನು ಸಂಪಾದಿಸಿತು.

ಇದೇ ಸುಮಾರಿನಲ್ಲಿ ಧಾರವಾಡದಲ್ಲಿ ಕೀರ್ತಿಶೇಷ ಶೇಷಗಿರಿರಾಯರು ಸಂಸ್ಕೃತದ ಶಾಕುಂತಲವನ್ನು ಕನ್ನಡದಲ್ಲಿ ವಿಸ್ತಾರವಾಗಿ ಬರೆದು ಆಡಿದರು. ಅದನ್ನು ಕಂಡು ಮಹಾರಾಷ್ಟ್ರದ ಕೀರ್ತಿಶೇಷ ಅಣ್ಣಾಸಾಹೇಬರು ತಮ್ಮ ನಾಟಕ ವನ್ನು ಆರಂಭಿಸಿದರು. ಹಾಗೆ ಅತ್ತ ಮಹಾರಾಷ್ಟ್ರದಲ್ಲಿ ನಾಟಕವು ಮತ್ತೆ ಆರಂಭವಾದುದು ಕನ್ನಡ ನಾಟಕದಿಂದ. *†

## ೩. ಎರಡನೆಯ ಘಟ್ಟ

ಕನ್ನಡ ನಾಟಕದ ಇತಿಹಾಸದಲ್ಲಿ ಅರಮನೆಯಲ್ಲಿ ಚಂದ್ರಶಾಲೆ ಎಂಬ ಹೆಸರಿನಿಂದ ಆರಂಭಿಸಿದುದು ಎರಡನೆಯ ಘಟ್ಟ. ವಿದ್ವಾಂಸರು, ರೂಪವಂತರು, ಬುದ್ಧಿವಂತರು, ಎಲ್ಲರೂ ಒಂದು ಕಡೆ ಕಲೆತು, ಅಶನ ವಸನಗಳ ಯೋಚನೆ ಯಿಲ್ಲದೆ ಕಲೋಪಾಸಕರಾಗಲು ಅವಕಾಶವಾಯಿತು,

ಆ ವೇಳೆಗೆ ರಾಜಧಾನಿಯಲ್ಲಿ ಇಂಗ್ಲೀಷ್ ವಿದ್ಯಾಭ್ಯಾಸವು ರೂಢಮೂಲ ವಾಗಿತ್ತು. ಷೇಕ್ಸ್‌ಪಿಯರಿನ ನಾಟಕಗಳನ್ನು ಓದಿದವರು ಅಲ್ಲಲ್ಲಿ ಇದ್ದರು. ಆಳಿಯ ಲಿಂಗರಾಜಅರಸಿನವರ ಆಶ್ರಯದಲ್ಲಿದ್ದ ಕವಿಗಳಲ್ಲಿ ಕೆಲವರು ಸಂಸ್ಕೃತ ದಿಂದ, ಕೆಲವರು ಇಂಗ್ಲೀಷಿನಿಂದ, ನಾಟಕಗಳನ್ನು ತರ್ಜುಮೆಮಾಡಿದರು.

ಕಳೆದ ಶತಮಾನದ ಕೊನೆಯ ದಿನಗಳು ಮೈಸೂರಿನ ನಾಟಕದ ಇತಿಹಾಸ ದಲ್ಲಿ ಚಿರಸ್ಮರಣೀಯವಾದವು. ಅಭಿನವ ಕಾಳಿದಾಸನೆಂದು ವಿಖ್ಯಾತರಾದ ಬಸವಪ್ಪ ಶಾಸ್ತ್ರಿಗಳು, ರಾಜಕವಿ ತಿರುಮಲೆ ಶ್ರೀನಿವಾಸಯ್ಯಂಗಾರ್ಯರು ಎಂಬಿಬ್ಬರು ಮಹಾಕವಿಗಳು ಅವತರಿಸಿ ನಾಟಕ ಪ್ರಪಂಚವನ್ನು ತಮ್ಮ ಕೀರ್ತಿಯಿಂದ ಬೆಳಗಿದರು.

---

* ಇನ್ನೂ ಭಾರತಾದ್ಯಂತದ ನಾಟಕದ ಚರಿತ್ರೆ ಸಿದ್ಧವಾಗಿಲ್ಲ. ಬಹುಶಃ ಸುಮಾರು ೧೮೮೦ರಲ್ಲಿ ಇನ್ನೂ ಭಾರತದಲ್ಲಿ ಎಲ್ಲಿಯೂ ನಾಟಕಗಳು ಆರಂಭವಾಗಿದ್ದಂತೆ ತೋರುವುದಿಲ್ಲ. ಬಹುಶಃ ಕನ್ನಡ ನಾಡಿನಲ್ಲಿಯೇ ಆಧುನಿಕ ನಾಟಕದ ಮೊದಲು ಎನ್ನಿಸುತ್ತದೆ. ವಿದ್ವಾಂಸರು ಈ ಅಂಶವನ್ನು ಗಮನಿಸಬೇಕು.

† ಪಾರ್ಸಿ ಕಂಪೆನಿಯವರು ಬಂದು ಹೋದ ಮೇಲೆ ಕನ್ನಡ ನಾಟಕವು ಹುಟ್ಟಿತು ಎನ್ನುವವರೂ ಇದ್ದಾರೆ.

ಮೈಸೂರಿನಲ್ಲಿ ನಾಟಕವು ಬೆಳೆದುದು ಮಹಾಜನರ ಆಶ್ರಯದಲ್ಲಿ. ಒಬ್ಬೊಬ್ಬ ಕಲಾಶೇಖರನೂ ಸಾಹುಕಾರರ ದೃಷ್ಟಿಯನ್ನು ತನ್ನತ್ತ ಸೆಳೆದುಕೊಂಡು ತನ್ನ ಹಂಬಲವಾದ ಕಲೆಗೆ ಕೀರ್ತಿಯನ್ನು ತಂದಿದ್ದಾನೆ. ಜುಂಜೋಟಿ ರಂಗಾ ಚಾರ್ಯರು ಬಹುಶಃ ನಮಗೆ ತಿಳಿದವುಟ್ಟಿಗೆ ಇಂತಹ ಮೊಮ್ಮೊದಲಿನ ಕಲಾ ವಂತರು. ಮನೋಹರವಾದ, ಮಾಟವಾದ, ಮುದ್ದಾದ ರೂಪ; ಅದರಂತೆಯೇ ಗಂಭೀರವಾಗಿ, ಯಾರಾದರೂ ಒಪ್ಪಿಕೊಳ್ಳುವಂತಹ ಹಾವ ಭಾವಗಳು; ಗಾನ ದೇವಿಯೂ ಭಲೆ ಎನ್ನುವಂತಹ ಶಾರೀರ; ಅದಕ್ಕೆ ತಕ್ಕ ಸಂಗೀತ; ಇದು ರಂಗಾಚಾರ್ಯರ ಮೂರ್ತಿ. ಅವರು ಸಂತೇಪೇಟೆಯ ದೇವಸ್ಥಾನದ ಆವರಣದಲ್ಲಿ ಹಾಕಿದ ಚಪ್ಪರದಲ್ಲಿ ಹಾಡುತ್ತಿದ್ದರೆ ಅರ್ಧ ಮೈಲಿಯಾಚೆ ಕುಳಿತು ಸುಖವಾಗಿ ಕೇಳ ಬಹುದಾಗಿತ್ತಂತೆ. ಅಂತಹ ಉಚ್ಚ ರೀತಿಯಲ್ಲಿ ಆರಂಭವಾಯಿತು ಕನ್ನಡ ನಾಟಕ.

## ೪. ಕನ್ನಡ ನಾಟಕದ ಸ್ವರೂಪ

ಕನ್ನಡ ನಾಟಕವು ಮೊದಲಿನಿಂದ ಸಂಗೀತವನ್ನು ಬಹುಮಟ್ಟಿಗೆ ಬಳಸಿ ಕೊಂಡಿದೆ. ಗಂಡು ಪಾರ್ಟಿನವರು ಒಮ್ಮೊಮ್ಮೆ ಸಂಗೀತ ಕಚೇರಿಗಳಲ್ಲಿ ಸಂಗೀತಗಾರರು ಪಲ್ಲವಿಗಳನ್ನು ಬೆಳೆಸುವಂತೆ ತಮ್ಮ ಹಾಡುಗಳನ್ನು ಬೆಳೆಸಿರುವು ದುಂಟು. ಕೀರ್ತಿಶೇಷ ವರದಾಚಾರ್ಯರು ಒಮ್ಮೆ ರತ್ನಾವಳಿಯಲ್ಲಿ "ರಾರಾಜಿಪ ಳೀಪರಿ ಸ್ತ್ರೀರೂಪದೆ ಮಾಧವಿ" ಎಂಬ ಹಾಡನ್ನು ಮುಕ್ಕಾಲು ಗಂಟೆ ಹಾಡಿರು ವುದುಂಟು. ಹಾಗೆಯೇ, ಗುಲೇಬಕಾವಲಿಯಲ್ಲಿ ಒಂದು ವೃತ್ತವನ್ನು ಹದಿನೈದು ನಿಮಿಷ ಹಾಡಿರುವುದುಂಟು. ಆಗ ಎಂದರೆ ಸುಮಾರು ಮೊದಲನೆಯ ಯುದ್ಧದ ವೇಳೆಗೆ ಆ ಯುಗವು ಮುಗಿಯಿತು ಎನ್ನಬಹುದು. ನಾಟಕವು ಜನರಿಗೆ ಮೆಚ್ಚಿಗೆ ಯಾಗಿ, ಪ್ರಿಯವಾಗಿ, ವಿಲಾಸ ವಸ್ತುವಾಗಿ ಇತ್ತು. ಆಗಲೂ ನಾಟಕವೆಂದರೆ ಜಂಗಮ ವಿಶ್ವವಿದ್ಯಾಲಯ (Mobile University) ಎನ್ನುವವರು ಇದ್ದರು. ಆದರೂ ಪ್ರಧಾನವಾಗಿ ಅದು ವಿಲಾಸ ವಸ್ತು. ಶೃಂಗಾರರಸಪೂರ್ಣವಾದ ನಾಟಕ ಗಳು ಜನತೆಯ ಪೂರ್ಣಾಭಿಮಾನಕ್ಕೆ ಪಾತ್ರವಾದುವು. ಮೈಸೂರಿನ ರಸಪುರಿ ಮಾವಿನ ಹಣ್ಣಿನಂತೆ ಆಗಿನ ನಾಟಕ.

'ಶಾಕುಂತಲ', 'ರತ್ನಾವಳಿ' ಗಳು ಆಗಿನ A1 ನಾಟಕಗಳು. ಸ್ವತಂತ್ರ ವಾಗಿ ಹುಟ್ಟಿ ಅವೆರಡಕ್ಕೂ ಸಮವಾಗಿ ನಿಂತು ಮೆರೆದ ನಾಟಕ 'ಮನ್ಮಥ ವಿಜಯ'. ಇನ್ನೂ ಕನ್ನಡಿಗನಿಗೆ ತನ್ನದೆಂಬ ಕೆಚ್ಚು ಮೂಡಿಲ್ಲ. ಆ ಕೆಚ್ಚು ಮೂಡಿದಾಗ 'ಮನ್ಮಥ ವಿಜಯ'ಕ್ಕೆ ಎಲ್ಲೂ ಇಲ್ಲದ ಪ್ರಾಶಸ್ತ್ಯ ಬರುವುದು.

ಹಾಗೆಯೇ ಹಳ್ಳಿಯ ಕಡೆಯಿಂದ ಬಂದ ಇನ್ನೆರಡು ನಾಟಕಗಳು ಗಮ ನಾರ್ಹವಾದವು. ಒಂದು 'ಕಲಾವತೀ ಪರಿಣಯ'; ಮತ್ತೊಂದು 'ಸದಾರಮೆ'. 'ಸದಾರಮೆ'ಯು ಇನ್ನೂ ರಂಗದಲ್ಲಿದೆ. ಎಲ್ಲರಿಗೂ ತಿಳಿದಿದೆ. ಆದರೂ ಒಂದು ಮಾತು ಹೇಳಬೇಕು. ಇಲ್ಲಿಯ ಪಾತ್ರ ವೈವಿಧ್ಯ, ಸನ್ನಿವೇಶಗಳು, ಇವೆಲ್ಲ ನಮ್ಮ ಜನತೆಯಿಂದ ಆರಿಸಿಕೊಂಡವು. ನಾಟಕವು ಆಳವಾಗಿ ಹೋಗಿ ಹೃದಯ ವನ್ನು ಕಲಕುವುದಿಲ್ಲವಾದರೂ, ಬಲು ಹಗುರವೂ ಅಲ್ಲ. ಹಿಂದಿನ ಕಾಲದ

'ಮಂಗಳಗೌರೀ ಕಥೆ'ಯ ಒಂದೆರಡು ಅಂಶಗಳನ್ನೂ ತೆಗೆದುಕೊಂಡಿದೆ. ಆದರೂ ನಮ್ಮವರು ಎಲ್ಲಿಯೂ "ಹೀಗುಂಟೆ?" ಎಂದು ಮೂಗು ಮುರಿಯು ವಂತಿಲ್ಲ. ಅದು ಈ ನಾಟಕದ ಹಿರಿಮೆ.

'ಕಲಾವತಿ'ಯು ರಸಪೂರ್ಣವಾದ ಕಾವ್ಯಮಯವಾದ ನಾಟಕ. ಅದರ ವಸ್ತುವೂ ಕೂಡ ನಮ್ಮ ಜನಪದ ಸಾಹಿತ್ಯದ ಕಥೆಗಳಿಂದ ಆಯ್ದುಕೊಂಡುದು. ಆದರೂ ಅದೊಂದು ಸೊಗಸಾದ ನಾಟಕ. ಜನರ ಚಿತ್ತವೃತ್ತಿಯು ಹೊರಳಿ ಆ ನಾಟಕವನ್ನು ಜನ ಮರೆತಿದೆ.

ಹಿಂದಿನ ಕಾಲದವರಿಗೆ ಪ್ರಿಯವಾಗಿದ್ದ ಇನ್ನೊಂದು ನಾಟಕದ ವಿಷಯ ಪ್ರಸ್ತಾಪಿಸಿ ಮುಂದಿನ ವಿಷಯಕ್ಕೆ ಹೋಗೋಣ. ಆ ನಾಟಕ ಪ್ರಭಾವತೀ ಪರಿಣಯ; ಜೈಮಿನಿ ಭಾರತದಿಂದ ಆಯ್ದ ವಸ್ತು. ಆ ನಾಟಕ ಸಂಪೂರ್ಣ ವಾಗಿ ಸಂಗೀತ ನಾಟಕ. ಪ್ರಭಾವತಿಯ ಪಾರ್ಟುಮಾಡುವವರು ಸಂಗೀತವನ್ನು ಚೆನ್ನಾಗಿ ಅರಿತಿದ್ದರೆ ಮಾತ್ರ ಆ ನಾಟಕ. ಈಗ ರಂಗದಲ್ಲಿ ಸಂಗೀತ ಅಷ್ಟು ಬೇಕಿಲ್ಲ. ಅದರಿಂದ ಆ ನಾಟಕ ಈಗ ಕಣ್ಮರೆಯಾಗಿದೆ.

ಇಂಗ್ಲಿಷ್ ಭಾಷಾಂತರ ನಾಟಕಗಳಲ್ಲಿ ರಾಮವರ್ಮ ಲೀಲಾವತಿ (Romeo and Juliet), ಶೂರಸೇನ (Othello), ನಿರುಪಮಾ (Robert McCaire)—ಇವು ಜನರ ಮನಸ್ಸನ್ನು ಸೂರೆಗೊಂಡವು. ಆದರೂ ಅವು ಜನರ ಮನಸ್ಸಿನಲ್ಲಿ ಬಹು ದಿವಸ ಉಳಿಯಲಿಲ್ಲ.

## ೫. ಮುಖ್ಯ ಕಲೋಪಾಸಕರು

ರಾಜಾಶ್ರಯದಲ್ಲಿ ನಾಟಕಕಲೆಯು ಚೆನ್ನಾಗಿ ಪಲ್ಲವಿಸಿತು. ದೇವರಾಜ್, ಸುಬ್ಬಣ್ಣ, ಲಕ್ಷ್ಮೀಪತಿಶಾಸ್ತ್ರಿ, ಶಾಮಣ್ಣ, ಮಲ್ಲಪ್ಪ, ಮೊದಲಾದ ಕಲೆಗಾರರು ವಿರಾಜಿಸಿದರು. ಆದರೂ ಮಹಾಜನಾಶ್ರಯದಲ್ಲಿ ಬೆಳೆದ 'ರತ್ನಾವಳೀ' ಕಂಪೆ ನಿಯು 'ಅರಮನೆ'ಯ ಕಂಪೆನಿಯನ್ನು ನುಂಗಿತು. ಅರಮನೆಯ ಕಂಪೆನಿಯು ಸುಮಾರು ೧೫ ವರ್ಷ ಚೆನ್ನಾಗಿ ಮೆರೆಯಿತು ಎಂದರೆ ತಪ್ಪಿಲ್ಲ. ಸುಮಾರು ೧೯೦೫ರ ವೇಳೆಗೆ ಅದಕ್ಕೆ ಗ್ರಹಣವು ಹಿಡಿದಿತ್ತು.

೧೯೦೭-ಲರಿಂದ ರತ್ನಾವಳೀ ಕಂಪೆನಿಯ ದಶೆಯು ಆರಂಭವಾಯಿತು. ಸುಮಾರು ಹತ್ತುಹನ್ನೆರಡು ವರ್ಷ ನಡೆದ ಆ ದಶೆಯು ಕನ್ನಡ ನಾಟಕಗಳ ರಾಜ ದೆಶೆ ಎನ್ನಬಹುದು. ಅದನ್ನೇ ಹೆಸರಿಟ್ಟು ಕರೆಯುವುದಾದರೆ ಅದು ವರದಾಚಾರ್ಯರ ಯುಗ. ಆಚಾರ್ಯರು ನಾಟಕದ ಇತಿಹಾಸದಲ್ಲಿ ಒಂದು ಅಧ್ಯಾಯಕ್ಕೆ ತಮ್ಮ ಹೆಸರನ್ನು ಕೊಡುವಷ್ಟುಮಟ್ಟಿನ ದೊಡ್ಡವರು. ಅದರಲ್ಲಿ ಸಂದೇಹವಿಲ್ಲ.

ಆಚಾರ್ಯರು ರೂಪವಂತರು. ಅವರನ್ನು ಕಂಡವರು ಯಾರೇ ಆದರೂ ಮೆಚ್ಚುವರು. ಹಾಗೆಯೇ ಇಂಗ್ಲೀಷ್, ಸಂಸ್ಕೃತ, ಕನ್ನಡಗಳಲ್ಲಿ ಪಂಡಿತರು. ಆದರೂ ಆ ರೂಪ ಪಾಂಡಿತ್ಯಗಳು ಮೆರೆದುದು ಅನ್ಯಾದೃಶವಾದ ಬಲಿಷ್ಠವೂ ಮನೋಹರವೂ ಆದ ಕಂಠ, ಮತ್ತು ಗಾನಮಾಧುರ್ಯಗಳ ಬಲದಿಂದ ಎಂದರೆ ತಪ್ಪಿಲ್ಲ.

ಕವೀಂದ್ರ ರವೀಂದ್ರರೂ ಆಚಾರ್ಯರ ಅಭಿನಯವನ್ನು ಬಲು ಮೆಚ್ಚಿದ್ದರು. ಆದಾಗ್ಗೂ ಅವರ ಅಭಿನಯುವು ಒಂದು ವಿಚಿತ್ರ. ಶಾಕುಂತಲದಲ್ಲಿ "ಪೆಂಡ ಖರ್ಜೂರವನ್ನು ಮೆದ್ದು ಬಾಯಿ ಕೆಟ್ಟವನು ಕಾಡುಹುಣಿಸೆಕಾಯನ್ನು ಬಯುಸಿ ದಂತೆ" ರಾಣೀವಾಸವಿದ್ದರಸನು ಕಾಡಿನ ಹುಡುಗಿ ಶಾಕುಂತಲೆಯನ್ನು ಕಾಮಿಸು ತ್ತಾನೆ. ಶಕುಂತಲೆಯನ್ನು ತನ್ನ ವಂಶಕ್ಕೆ ಭೂಷಣವಾದ ಭೂಮಿಯಂತೆ ಬಗೆದು ಅಂಗೀಕರಿಸುತ್ತಾನೆ. ರತ್ನಾವಳಿಯಲ್ಲಿ ತಾನಾಗಿ ಒಲಿದು ಬಂದ ವಾಸವದತ್ತೆಯ ಗಂಡ ವತ್ಸರಾಜನು ಅನಾಥಳಾಗಿ ರಾಜಾಶ್ರಯುವನ್ನು ಪಡೆದ ಸಾಗರಿಕೆಯನ್ನು ಮೋಹಿಸಿ ಮದುವೆಯಾಗುತ್ತಾನೆ. ಹೀಗೆ ಬಹುವಾಗಿ ಸಮಾನವಾದ ಸಂದರ್ಭ ಗಳಲ್ಲಿ, ದುಷ್ಯಂತ, ವತ್ಸರಾಜರು ಹೇಗೆ ಬೇರೆಬೇರೆಯಾಗಿ ಕಾಣಿಸುತ್ತಿದ್ದರು ಎಂಬುದನ್ನು ನೋಡಿದವರು ಬಲ್ಲರು. ಅದರಂತೆಯೇ ಉದ್ಧತನಾಗಿ ಬೀದಿಯಲ್ಲಿ ಹೋಗುತ್ತಿದ್ದ ಸೈರಂಧ್ರಿಯನ್ನು ಅಡ್ಡಗಟ್ಟುವ ರಾಜವಲ್ಲಭ ಕೀಚಕ, ಕಮಲೆಯ ಕಾಮುಕನಾದ ಸಂತಾಪಕ, ಎರಡಕ್ಕೂ ಎಷ್ಟು ವ್ಯತ್ಯಾಸ! ಮನ್ಮಥ ವಿಜಯದಲ್ಲಿ ಹೆಂಗಳ ಗುಂಪಿನ ನಾಯಕನಾದ ಮನ್ಮಥನ ಪಾತ್ರ ಇತರರಿಂದ ನಿರ್ವಹಿಸಲು ಅಸಾಧ್ಯ. ಇವೆಲ್ಲವನ್ನೂ ವಹಿಸಿ ಭಲೆ ಎನ್ನಿಸಿಕೊಳ್ಳುವ ಚಾತುರ್ಯ, ನೈಪುಣ್ಯ ಆಚಾರ್ಯರದು.

ಸುಮಾರು ೧೯೧೨ರ ವೇಳೆಗೆ ಆಚಾರ್ಯರ ಪ್ರಹ್ಲಾದ ವಿಜಯ, ಚಂದ್ರಹಾಸ ಗಳು ಬಂದುವು. ಅದುವರೆಗೆ ರಾಜಾ ಪಾರ್ಟಿನವರು ಸುರ್ವಾಲುಗಳನ್ನು ಹಾಕಿ ಕೊಳ್ಳುತ್ತಿದ್ದರು. ಆಚಾರ್ಯರ ಪ್ರಹ್ಲಾದ ಚರಿತ್ರೆಯಲ್ಲಿ ವೇಷಭೂಷಣಗಳ ಕ್ರಾಂತಿಯಾಯಿತು. ಹಿರಣ್ಯಕಶಿಪುವು ರವಿವರ್ಮನ ಸೀತಾಪಹರಣದ ಚಿತ್ರದ ರಾವಣನಂತೆ ಪಂಚೆಯನ್ನುಟ್ಟು ಬಂದನು.

ಅದರಂತೆಯೇ ಅವರಿಗೆ ಸಹಾಯಕರಾದ ನಟರೂ ಉತ್ತಮರಾಗಿದ್ದರು. ಪಂಡಿತರು, ಶಾಮಣ್ಣ, ಕೃಷ್ಣಮೂರ್ತಿ, ಬೋಧರಾವ್, ಜಯರಾವ್, ಶಾಮ ರಾವ್, ಮೊದಲಾದವರೆಲ್ಲ ನಿಜವಾಗಿಯೂ ಪ್ರಖ್ಯಾತರು.

ಆಚಾರ್ಯರು ರಂಗಸ್ಥಳವನ್ನು ಹೊಕ್ಕರೆ, ಅದೇ ಒಂದು ಪ್ರಪಂಚ. ಆಚ್ಯಾರರ ಅಭಿನಯೋತ್ಸಾಹಕ್ಕೆ ಒಂದು ಉದಾಹರಣೆ ಕೊಟ್ಟು ಮುಂದೆ ಹೋಗೋಣ.

ಒಂದು ದಿನ ಹರಿಶ್ಚಂದ್ರ ನಾಟಕ. ಆಚಾರ್ಯರಿಗೆ ಸಣ್ಣ ಕಜ್ಜಿ ಹಿಡಿದು ಸುರ್ವಾಲ್ ಹಾಕಿ ತೆಗೆಯುವುದೂ ಎದ್ದು ಓಡಾಡುವುದೂ ಕಷ್ಟವಾಗಿದೆ. ಆ ನಾಟಕದ ಉತ್ತರಾರ್ಧದಲ್ಲಿ ಹರಿಶ್ಚಂದ್ರನು ಒಂದು ಕಡೆ ಕೂರುವಂತಿಲ್ಲ. ಇಬ್ಬರು ಆಚಾರ್ಯರನ್ನು ಕರೆದುಕೊಂಡು ಹೋಗಿ ರಂಗದೊಳಕ್ಕೆ ಬಿಟ್ಟರು. ರಂಗದೊಳಕ್ಕೆ ಬರುತ್ತಲೂ ಆಚಾರ್ಯರು ದೇಹದಲ್ಲಿ ಏನೂ ತೊಂದರೆಯಿಲ್ಲದವರಂತೆ ರಂಗವನ್ನೆಲ್ಲಾ ತಿರುಗಿದರು.

ನಾಟಕದಲ್ಲಿ ಯುಗಪುರುಷನೆಂದರೇನು ಎಂಬುದನ್ನು ಹೇಳಿ ಮುಂದೆ ಹೋಗೋಣ. ರಂಗಕ್ಕೆ ಬರುವ ನಟನಿಗೆ ಒಂದು ಆದರ್ಶವಿರಬೇಕು: ಇದ್ದೇ ಇರು ತ್ತದೆ. ಅವಿದ್ಯಾವಂತ ನಟನು ಯಾರಾದರೂ ಇನ್ನೊಬ್ಬ ನಟನಂತೆ ಪಾರ್ಟುಮಾಡಿ ದರೆ ತಾನು ಕೃತಾರ್ಥನಾದೇನು ಎಂದುಕೊಳ್ಳುತ್ತಾನೆ. ವಿದ್ಯಾವಂತ ನಟನು

ತಾನು ಮಾಡಬೇಕೆಂದಿರುವ ಪಾತ್ರದ ಸ್ವರೂಪ ಸ್ವಭಾವಗಳು ಪ್ರೇಕ್ಷಕರ ಕಣ್ಣಿಗೆ ಕಟ್ಟುವಂತೆ ಮಾಡುವುದೇ ತನ್ನ ಕೃತಾರ್ಥತೆ ಎಂದುಕೊಳ್ಳುತ್ತಾನೆ. ವರದಾ ಚಾರ್ಯರು ಈ ಎರಡನೆಯ ಜಾತಿಯ ನಟರಾಗಿ ಮೊದಲನೆಯವರ ಲಕ್ಷ್ಯವಾದರು. ಆಚಾರ್ಯರ ಅಭಿನಯ ಕೌಶಲ್ಯವನ್ನು ಸಂಗೀತದ ಸೊಂಪನ್ನು ಪ್ರದರ್ಶಿಸಲಾರದ ವರೂ ಅವರ ಗದ್ಗದ ಕಂಠವನ್ನು ತಪ್ಪದೆ ಕಲಿತು ಮೆರೆಸುತ್ತಿದ್ದರು. ಜೊತೆಗೆ ಅವರೊಂದು ರಾಗದಲ್ಲಿ ಒಂದು ಕಂದವನ್ನು ಹಾಡಿದರೆ ಅದನ್ನು ಆಲೈಸಿ, ಕೇಳಿ, ಕಲಿತು, ಅದನ್ನು ಹಾಡಿಕೊಂಡು ಆ ರಾಗವನ್ನು ಕಲಿತೆವೆಂದುಕೊಳ್ಳುತ್ತಿದ್ದವರು ಎಷ್ಟು ಜನ! ಇಲ್ಲಿ ಅವರು ಇತರರ ತಲೆಯ ಮೇಲೆ ಹಾರಿದ್ದುದು. ಎಲ್ಲದಕ್ಕಿಂತ ಹೆಚ್ಚಾಗಿ, ಸುತ್ತುಮುತ್ತಲಿನ ಹಳ್ಳಿಯವರೆಲ್ಲ ಅವರ ನಾಟಕಕ್ಕೆ ಮೊಗಚುತ್ತಿದ್ದರು. ಅವರ ನಾಟಕವೆಂದರೆ, ಸಾಹಿತಿಗಳ ಸಮಾರಾಧನೆ, ಸಂಗೀತಗಾರರ ಹಬ್ಬದೂಟ, ಪಾಮರರ ರಸಕವಳ. ಅದರಿಂದ ಅವರು ಯುಗಪುರುಷರಾದರು.

ಆಚಾರ್ಯರನ್ನು ಸಂಗೀತ ಸಾಹಿತ್ಯಗಳಲ್ಲಿ ಅರೆದವರು ಗೌರೀನರಸಿಂಹಯ್ಯ ನವರು ಎನ್ನುತ್ತಾರೆ. ಇನ್ನು ಕೆಲವರು ಅವರು ಮೈಸೂರಿಗೆ ಬರುವುದರೊಳ ಗಾಗಿ ನಿಪುಣರಾಗಿದ್ದರು ಎನ್ನುತ್ತಾರೆ. ಗೆಲ್ಲುವವರಿಗೆ ಬೇಕಾದ ಅಂಗಸೌಷ್ಠವ ಗಳೆಲ್ಲ ಆಚಾರ್ಯರಿಗೆ ಲಭಿಸಿದ್ದುವು. ಆಡಳಿತವನ್ನು ನಿರ್ದುಷ್ಟವಾಗಿ ನಿರ್ವಹಿಸ ಬಲ್ಲವನೊಬ್ಬ ತಮ್ಮ, ನಾಟಕದಲ್ಲಿ ತಮ್ಮ ಜೊತೆಜೊತೆಗೆ ಬರುವ ನಟವರ್ಗ, ತಮ್ಮಿಂದಲೇ ತಯಾರಾದ ವಾದ್ಯಗಾರರು, ಸೀನರಿಗಳನ್ನು ಬರೆಸಬಲ್ಲ ಚಾತುರ್ಯ—ಎಲ್ಲವೂ ಅವರಿಗೆ ಒಲಿದಿದ್ದುವು.

ಆಗಿನ ಕಾಲದಲ್ಲಿ ಉತ್ತರ ಕರ್ನಾಟಕದಿಂದ ವೆಂಕೋಬರಾಯರ ಸಿರಹಟ್ಟಿ ಕಂಪೆನಿಯು ಮೈಸೂರಿಗೆ ಬಂತು. ಬೆಂಗಳೂರಿನಲ್ಲಿ ಖ್ಯಾತಿಪಡೆದು ವಿದ್ವಾನ್ ವೆಂಕಟಾಚಾರ್ಯರು ಬರೆದ ಭೋಜಪ್ರಬಂಧವನ್ನಾಡಿ ಹೆಸರಾಂತು ಮೈಸೂರಿಗೆ ಬಂದರು. ಈಗಿನ ನಟವರ್ಗದಲ್ಲಿ ಪ್ರಥಮವರ್ಗದವರೆಂದು ಖ್ಯಾತರಾದ ಶ್ರೀಮಾನ್ ಕೊಟ್ಟೂರಪ್ಪನವರು, ವೆಂಕೋಬರಾಯರು, ವಾಮನರಾಯರು ಮುಂತಾದವರು ಅಲ್ಲಿನವರು. ಅವರ ಪದ್ಮಾವತೀ ಪರಿಣಯ, ವಿವೇಕ ವಿಜಯ, ಭೋಜಪ್ರಬಂಧಗಳು ಜನರಿಗೆ ಬಹು ಪ್ರಿಯವಾದುವು. ಆದರೂ ಈಗ ಉಳಿ ದಿರುವುದು ಭೋಜಪ್ರಬಂಧವೊಂದೇ!

ಭೋಜಪ್ರಬಂಧವು ಭೋಜ ಕಾಲಿದಾಸರನ್ನು ಹಿಡಿದು ಬರೆದಿದ್ದ ಹಿಂದಿನ ಕಾವ್ಯವೊಂದರ ನಾಟಕರೂಪ. ಅದರಲ್ಲಿ ಭೋಜರಾಜನ ಉದಾರತೆ, ಕಾಲಿ ದಾಸನ ಹಿರಿಮೆ ಇವು ವಸ್ತು. ಉತ್ತರ, ಪಶ್ಚಿಮ, ದಕ್ಷಿಣ ಕರ್ನಾಟಕ ಪ್ರಾಂತ ಗಳಲ್ಲೆಲ್ಲಾ ಜನಾದರಣೆಯನ್ನು ಪಡೆದ ನಾಟಕ ಇದೊಂದೇ ಏನೋ!

ರತ್ನಾವಳೀ ಕಂಪೆನಿಯು ತಿರುಚನಾಪಳ್ಳಿಯಿಂದ ಹುಬ್ಬಳ್ಳಿ, ಧಾರವಾಡ, ಮಂಗಳೂರು, ಕೊಯಮುತ್ತೂರು ಮೊದಲಾದೆಡೆಗಳಲ್ಲಿ ಸಂಚರಿಸಿ ಪ್ರಸಿದ್ಧ ವಾಯಿತು. ಮಾನ್ಯರಾದ ಅನ್ನಿಬೆಸೆಂಟ್‌ರವರು ಆಚಾರ್ಯರಿಗೆ 'ಗಿಫ್ಟೆಡ್ ಆಕ್ಟರ್' ಎಂಬ ಬಿರುದು ಕೊಟ್ಟರು. ಸುಮಾರು ೧೯೧೦ರ ವೇಳೆಗೆ ರತ್ನಾವಳಿ ಕಂಪೆನಿಗೆ ದೆಸೆಯು ಕಳೆಯುತ್ತಾ ಬಂದಿತ್ತು.

ಆ ಯುಗದಲ್ಲಿ ಮೈಸೂರಿನಲ್ಲಿ, ಮಂಗಳೂರಿನಲ್ಲಿ, ಉತ್ತರ ಕರ್ನಾಟಕದಲ್ಲಿ ಅನೇಕ ಕಂಪನಿಗಳಿದ್ದುವು. ಉತ್ತರ ಕರ್ನಾಟಕವು ಆದೇನೋ, ಮಹಾರಾಷ್ಟ್ರದ ರಾಜಧಾನಿಯಾದ ಪೂನಾ ನಗರದ ಸಂಗೀತ ಸಾಹಿತ್ಯಗಳನ್ನು ಹೆಚ್ಚಾಗಿ ಅನುಕರಿಸುತ್ತಾ ಬಂತು. ಮೈಸೂರು ತನ್ನದೇ ಆದ ಸಂಗೀತ ಸಾಹಿತ್ಯ ಕಲೆಗಳನ್ನು ಬೆಳೆಸಿಕೊಂಡಂತೆ, ಉತ್ತರ ಕರ್ನಾಟಕದಲ್ಲಿ ಸ್ವತಂತ್ರವಾಗಿ ಸಂಗೀತ ಸಾಹಿತ್ಯ ಸಂಪ್ರದಾಯಗಳು ಬೆಳೆದಂತಿಲ್ಲ ಎಂದರೆ ತಪ್ಪಾಗದು.

ಇತ್ತ ಮಂಗಳೂರಿನಲ್ಲಿ ಕ್ರಿಶ್ಚಿಯರ್ನ ಪ್ರಭಾವದಿಂದ ಆದರದೇ ಒಂದು ಸಂಗೀತ ಸಾಹಿತ್ಯ ಪರಂಪರೆ ಬೆಳೆಯಿತು ಎಂದರೆ ತಪ್ಪಿಲ್ಲ.

ಮೈಸೂರು ಬೆಂಗಳೂರುಗಳಲ್ಲಿ ಕಂದ ವೃತ್ತಗಳನ್ನು ಹಾಡುವ ಸಂಪ್ರದಾಯ ಬೆಳೆದಂತೆ, ಉತ್ತರದಲ್ಲಿ ಓವೀ ಅಭಂಗಗಳ, ಹಾಡುಗಳಲ್ಲಿ ನಡುವೆ ತಾಳವನ್ನು ಬಿಟ್ಟು ತಾನವನ್ನು ಹಿಡಿಯುವ, ಸಂಪ್ರದಾಯ ಬಂತು. ಮೈಸೂರಿನಲ್ಲಿ ನವೀನವೆಂದು ಉತ್ತರದ ಸಂಪ್ರದಾಯವನ್ನು ರಂಗವು ಅನುಸರಿಸಿತು. ಆದರೆ ಉತ್ತರವು ದಕ್ಷಿಣ ಮಾರ್ಗವನ್ನು ಹಿಡಿಯಲಿಲ್ಲ.

೧೯೨೧ರಲ್ಲಿ ಒಂದು ಹೊಸ ಯುಗವು ಆರಂಭಿಸಿತು. ಸುಮಾರು ೩೦ ವರ್ಷಗಳ ಹಿಂದೆ ಹುಟ್ಟಿದ್ದ ಗುಬ್ಬಿಯ ಕಂಪನಿಯು ಶ್ರೀ ವೀರಣ್ಣನವರ ಕೈಗೆ ಬಂದು ಬೆಂಗಳೂರಲ್ಲಿ ಖ್ಯಾತಿ ಗಳಿಸಿ ಮೈಸೂರಿಗೆ ಬಂತು. ಅದು ಎರಡನೆಯ ಸಲ. ರಾಜಧಾನಿಯು ಗುಬ್ಬಿಯ ಕಂಪನಿಯನ್ನು ಮೆಚ್ಚಿಕೊಂಡಿತು. ಹಳ್ಳಿಯಲ್ಲಿ ಹುಟ್ಟಿದ ಕಂಪನಿ ರಾಜಧಾನಿಯ ರಸಿಕರ ಹೃದಯವನ್ನು ಸೂರೆಗೊಂಡಿತು. ಕಬೀರ್‌ದಾಸ್, ಸದಾರಮೆ, ಅವರ ಪ್ರಸಿದ್ಧ ನಾಟಕಗಳು. ಆ ಎರಡು ನಾಟಕಗಳೂ ಕಾವ್ಯಮಯಗಳಲ್ಲ; ಅಲ್ಲಿ ಹೆಸರಾದ ಸಂಗೀತವೂ ಇಲ್ಲ. ಆದರೂ ಜನರಿಗೆ ಹಿಡಿದುವು. ಹೊಸದೊಂದು ಯುಗವು ಆರಂಭವಾಯಿತು. ಅದು ವೀರಣ್ಣನವರ ಯುಗ.

ಕನ್ನಡ ನಾಟಕಕ್ಕೆ ಶ್ರೀ ವೀರಣ್ಣನವರದು ಒಂದು ವಿಚಿತ್ರವಾದ ಕಾಣಿಕೆ. ವೀರಣ್ಣನವರು ಸಂಗೀತ ಸಾಹಿತ್ಯಗಳಲ್ಲಿ ಯಾವುದರಲ್ಲಿಯೂ ಪಂಡಿತರಲ್ಲ. ಸಣ್ಣವಯಸ್ಸಿನಿಂದ ನಾಟಕದಲ್ಲಿ ಬಿದ್ದು ಒದ್ದಾಡಿ, ಆ ಸಮುದ್ರವನ್ನು ಕಡೆದು ವಿಷ-ಅಮೃತ ಎರಡನ್ನೂ ಪಡೆದು, ವಿಷಕ್ಕೆ ಬಲಿಯಾಗದೆ ಅಮೃತವನ್ನು ಸೇವಿಸಿ ಅಮರರಾದರು. ಅವರ ಅದೃಷ್ಟಬಲ ಅವರಿಗೆ ಇತರರಿಗೆ ದೊರೆಯದಂತಹ ರಾಜಾನುಗ್ರಹ, ಪ್ರಜಾ ವಿಶ್ವಾಸಗಳನ್ನು ಸಂಪಾದಿಸಿಕೊಟ್ಟಿತು. ಬಹುಶಃ ಕರ್ನಾಟಕವನ್ನೆಲ್ಲಾ ಸಂಚಾರಮಾಡಿ, ಹಳ್ಳಿಗರಿಂದ ಹಿಡಿದು ನಗರವಾಸಿಗಳವರೆಗೆ ಎಲ್ಲರ ಅಭಿಮಾನವನ್ನೂ ಪಡೆದವರು ಅವರು ಒಬ್ಬರೇ ಎಂದರೆ ತಪ್ಪಿಲ್ಲ. ಈ ದಿನ ಪ್ರಸಿದ್ಧರಾಗಿರುವ ನಟರು ಒಂದಲ್ಲ ಒಂದು ವಿಧದಿಂದ ಅವರಿಗೆ ಅಂಕಿತರು. ಹಿಂದೆ ನಟರೆಲ್ಲರೂ ವರದಾಚಾರ್ಯರ ಹಾಗೆ ಗಂಟಲು ಬಿಗಿದುಕೊಂಡು ಬಿಕ್ಕಲು ಮಾತಾಡುತ್ತಿದ್ದಂತೆ, ಈ ದಿನ ರಾಜಾಪಾರ್ಟಿನವರಿಂದ ಹಿಡಿದು ಆಳಿನ ಪಾರ್ಟಿನವರೆಗೂ ಸರ್ವರೂ ಒಂದಲ್ಲ ಒಂದು ವಿಧದಲ್ಲಿ ವೀರಣ್ಣನವರ ಮುದ್ರೆ ಪ್ರದರ್ಶಿಸುತ್ತಾರೆ.

ಶ್ರೀ ವೀರಣ್ಣನವರು ಅಂತಹ ಪ್ರತಿಭಾವಂತರೇ ಎಂದರೆ ಉತ್ತರ ಕೊಡುವುದು ಕಷ್ಟ. ಆದರೆ, ಅವರು ಜನರನ್ನು ನಗಿಸಬಲ್ಲ ಶಕ್ತರು. ಅವರ ಪಾರ್ಟುಗಳಲ್ಲಿ ಬಹಳ ಪ್ರಸಿದ್ಧವಾದುದು ಸದಾರಮೆಯ ಕಳ್ಳನ ಪಾತ್ರ. ಅನೇಕರು ಆ ಪಾತ್ರವನ್ನು ಮಾಡಿದ್ದಾರೆ. ಆದರೆ ಆ ಪಾತ್ರವನ್ನು ಸಾಮಾನ್ಯನ ಮಟ್ಟಕ್ಕೆ ಇಳಿಸಿ, ಆ ದೃಷ್ಟಿಯಿಂದ ಜನವರ್ಗವನ್ನು ಸಂಗ್ರಹಿಸಿದವರು ಇನ್ನು ಯಾರೂ ಇಲ್ಲ. ಅವರು ಯಾವ ಪಾತ್ರವನ್ನು ವಹಿಸಿದರೂ ಜನರು ನಗುವಂತೆ ಮಾಡಬಲ್ಲ ಒಂದು ವಿಚಿತ್ರ ಶಕ್ತಿ ಅವರಿಗೆ ದೈವದತ್ತವಾದುದು. ಉದಾಹರಣೆಗೆ, 'ರಾಜಭಕ್ತಿ'ಯಲ್ಲಿ ಅವರು ವಹಿಸುತ್ತಿದ್ದ ಪಾತ್ರ ಬಹು ಗಂಭೀರವಾದುದು. ಆದರೂ ಅಲ್ಲಿ ತನ್ನ ದುರ್ಗಕ್ಕೆ ಹಿಂದಿರುಗಿಬಂದಾಗ ಹೆಂಡತಿಯು ದುರ್ಗದ ಬಾಗಿಲು ಮುಚ್ಚಿ ಅವನನ್ನು ಹೊರಗೆ ನಿಲ್ಲಿಸುತ್ತಾಳೆ. ಆಗ ಅವರು "ನನ್ನ ದುರ್ಗದಲ್ಲೇ ನನಗೆ ಅವಮಾನ, ಅದೂ ನನ್ನ ಹೆಂಡತಿಯಿಂದ." ಎಂದಾಗ ಜನ ನಗುತ್ತದೆ. ಅಂತಹ ಗಂಭೀರ ಸಂದರ್ಭದಲ್ಲೂ ನಗು ಬರುವಂತೆ ಮಾಡುವುದು ಅವರ ವೈಶಿಷ್ಟ್ಯ.

ಇವರು ಇಂದಿನ ಪ್ರಜಾಯುಗದ ಪ್ರತೀಕ. ಇವರ ವಿಶೇಷವೆಂದರೆ ಹೊರನಾಡುಗಳಲ್ಲಿಯೂ ಕೀರ್ತಿಗಳಿಸಿದುದು; ಜೊತೆಗೆ ಸಿನೀಮಾದಲ್ಲೂ ಗೆದ್ದಿರುವುದು. ಇವರ ಪ್ರಾದುರ್ಭಾವ ಕಾಲದಲ್ಲಿ ಇವರಿಗೆ ಬಲಗೈಯಾಗಿ ನಾಟಕಗಳನ್ನು ಬರೆದವರು ಶ್ರೀ. ಬೆಳ್ಳಾವೆ ನರಹರಿಶಾಸ್ತ್ರಿಗಳು.

ಈ ಕಾಲದಲ್ಲಿ, ಎಂದರೆ ೧೯೩೦ರಿಂದ ೧೯೫೦ರ ವರೆಗೆ ಒಳ್ಳೊಳ್ಳೆಯ ಕಂಪನಿಗಳಾಗಿವೆ: ಒಳ್ಳೊಳ್ಳೆಯ ನಟರಾಗಿದ್ದಾರೆ. ಅವರಲ್ಲಿ ಪೀರ್ ಸಾಹೇಬರ ಕಂಪೆನಿ, ಚಾಮುಂಡೇಶ್ವರಿ ಕಂಪೆನಿ ಇವು ನಿಜವಾಗಿಯೂ ಹೆಸರಾದುವು. ಪೀರ್ ಸಾಹೇಬರು, ಸಿಂಹ, ಡಿಕ್ಕಿ ಮಾಧವರಾವ್, ಕೊಟ್ಟೂರಪ್ಪ, ಬಸವರಾಜ್ ಸೋದರರು, ಸುಂದರಮ್ಮ, ಗಂಗಾಧರರಾಯರು, ಮೊದಲಾದವರೆಲ್ಲ ನಿಜವಾಗಿ ಉತ್ತಮ ವರ್ಗದ ನಟರು. ನಾಗೇಂದ್ರರಾವ್, ಮರಿರಾವ್, ನಾಗೇಶರಾಯರು, ಮೊದಲಾದವರೆಲ್ಲ ಈ ಯುಗದಲ್ಲಿ ಪ್ರಸಿದ್ಧರಾದರೂ ಅವರೆಲ್ಲ ವರದಾಚಾರ್ಯರ ಯುಗದವರು.

## ೬. ಅಮೆಚೂರ್ ಸಂಸ್ಥೆಗಳು

ಈ ಯುಗದಲ್ಲಿ ಮೈಸೂರು, ಬೆಂಗಳೂರು, ಧಾರವಾಡ, ಬಳ್ಳಾರಿ, ಮಂಗಳೂರು ಮೊದಲಾದ ಕಡೆಗಳಲ್ಲಿ ಅಮೆಚೂರು ಕಂಪೆನಿಗಳು ಬಂದುದು ಒಂದು ವಿಶೇಷ. ಈ ಕಂಪೆನಿಗಳಲ್ಲಿ ವಿದ್ವಾಂಸರು ಆಸಕ್ತಿ ವಹಿಸುತ್ತಿದ್ದರು. ಆದರೂ, ಇವುಗಳ ಪ್ರಭಾವ ಜನಸಾಮಾನ್ಯದ ಮೇಲೆ ಅಷ್ಟಾಗಿ ಬೀಳಲಿಲ್ಲ.

ಈ ಅಮೆಚೂರ್ ಕಂಪೆನಿಗಳಲ್ಲೆಲ್ಲಾ ಬಹಳ ಕಾರ್ಯ ಮಾಡಿದುದು ಬೆಂಗಳೂರಿನ ಎ.ಡಿ.ಎ. ಕಂಪೆನಿ. ಬಳ್ಳಾರಿಯ ರಾಘವಾಚಾರ್ಯರು ಇದರ ಜೀವ. ಆ ಜೀವವು ಭದ್ರವಾಗಿರುವವರೆಗೂ ಇದೂ ಭದ್ರವಾಗಿತ್ತು. ಆಚಾರ್ಯರ ಜೊತೆಗೆ, ರಾಜೈಯ್ಯಂಗಾರ್, ಶಾಸ್ತ್ರಿ, ವಾಸುದೇವರಾವ್, ವೆಂಕಟಸುಬ್ಬು ಮೊದಲಾದ

ಉತ್ತಮ ವರ್ಗದ ನಟರಿದ್ದರು. ಹಾಗೆಯೇ ಅವರ ನಾಟಕಗಳೂ ಉತ್ತಮವಾದುವು. ಆಚಾರ್ಯರ ಶಿವಾಜಿ, ರಾಮದಾಸ್, ವಿಜಯನಗರ ಪತನ, ಮುಂತಾದ ಹಲವು ನಾಟಕಗಳು ಜನರಿಗೆ ಒಪ್ಪಿಗೆಯಾದುವು. ಆದರೂ ಯಾವ ಕಂಪೆನಿಯವರೂ ಆ ನಾಟಕಗಳನ್ನು ತೆಗೆದುಕೊಂಡು ಆಡಲಿಲ್ಲ.

ಆಚಾರ್ಯರ ವಿಚಾರವಾಗಿ ಒಂದು ಮಾತು ಹೇಳಿ ಮುಂದೆ ಹೋಗೋಣ. ಆಚಾರ್ಯರ ಸಂಗೀತಕ್ಕಿಂತ ಅಭಿನಯ, ಅದಕ್ಕಿಂತ ಅವರು ಮಾಡಿದ ಪಾತ್ರಗಳಲ್ಲಿ ಅವರು ತೋರಿಸುತ್ತಿದ್ದ ಒಂದು ವೈಶಿಷ್ಟ್ಯ, ಅದೆಲ್ಲದಕ್ಕಿಂತಲೂ ಅವರು ಧ್ವನಿಯನ್ನು ಬದಲಾಯಿಸುವಿಕೆ—ಇವು ಅವರ ಹಿರಿಮೆಯ ಗುರುತು. ಧ್ವನಿಯನ್ನು ಬದಲಾಯಿಸಿ ತನ್ನ ಹೃದಯದ ಭಾವವು ಪ್ರೇಕ್ಷಕರಲ್ಲಿ ಮೂಡುವಂತೆ ಮಾಡುವ ವಿಶೇಷ ನೈಪುಣ್ಯವನ್ನು ಅವರಿಂದ ಯಾರೂ ಕಲಿಯಲಿಲ್ಲ.

ಶ್ರೀಮಾನ್ ಗರೂಡ ಸದಾಶಿವರಾಯರು ಒಂದು ಅದ್ಭುತ ವ್ಯಕ್ತಿ. ಅವರು ಆಡಿದ ನಾಟಕಗಳಲ್ಲಿ ಎಚ್ಚಮ್ಮನಾಯಕ ಇಂದಿಗೂ ರಂಗದಲ್ಲಿದೆ. ಅವರು ಹೇಳಿದ ಒಂದು ಮಾತು ಅವರ ದೊಡ್ಡತನವನ್ನು ತೋರಿಸುತ್ತದೆ. "ಪದ್ಯದಲ್ಲಿ ಇರುವಂತೆ ಗದ್ಯದಲ್ಲಿಯೂ ಓಟವಿದೆ, ಓಜಸ್ಸಿದೆ, ಯತಿಯಿದೆ, ನಿಯತಿಯಿದೆ." ಎನ್ನುತ್ತಿದ್ದರು.

ನನಗೆ ಮೈಸೂರಿನ ಚಿಕ್ಕರಾಮರಾಯರು, ಬಳ್ಳಾರಿಯ ರಾಘವರು, ಗರೂಡ ಸದಾಶಿವರಾಯರು ಮೂವರೂ ಅಭಿನಯಿಸಿದ ದಶರಥ ಪಾತ್ರವನ್ನು ನೋಡುವ ಸುಯೋಗವಿತ್ತು. ಅಬ್ಬಾ! ಒಬ್ಬೊಬ್ಬರದು ಒಂದೊಂದು ವಿಧ. ಆದರೆ ಮೂರೂ ಮನೋಹರ: ಅದು ಪಾತ್ರನಿರ್ವಹಣ. ರಾಮಾಯಣದ ದಶರಥನ ಪುತ್ರವಾತ್ಸಲ್ಯ ಅತಿಶಯವಾದುದು. ವಾತ್ಸಲ್ಯದಲ್ಲಿ ಕರಗಿಹೋಗಿ ಕಂಬನಿಯಿಟ್ಟು ಕಣ್ಣೀರು ಕರೆಸುವ ಚಿಕ್ಕರಾಮರಾಯರು; ಮೂಸೆಯಲ್ಲಿ ಕರಗಿದ್ದ ಚಿನ್ನ, ತಾನು ಕರಗಿದ್ದರೂ ಮೂಸೆಯನ್ನು ಬಿಟ್ಟು ಹೊರಗೆ ಹೋಗದಂತೆ ಒಳಗೇ ಕುದಿಯುವ ಮಹಾರಾಜನನ್ನು ಚಿತ್ರಿಸುವ ಸದಾಶಿವರಾಯರು; ತನಗೆ ಸಲ್ಲದ ದುಃಖವನ್ನು ಅನುಭವಿಸುತ್ತ, ಹುಲ್ಲಿನ ಹಗ್ಗದಿಂದ ಕಟ್ಟಿಸಿಕೊಂಡು, ಆ ಹಗ್ಗವನ್ನು ಕಿತ್ತೆಸೆಯಲು ಸಾಮರ್ಥ್ಯವಿದ್ದರೂ ಕಿತ್ತೆಸೆಯದೆ ಒದ್ದಾಡುವ ಗಜರಾಜನಂತೆ ದುಃಖವನ್ನು ಚಿತ್ರಿಸುವ ಆಚಾರ್ಯರು, ಇವರಲ್ಲಿ ಯಾರನ್ನು ಕಡಿಮೆಯೆನ್ನುವುದು? ಯಾರನ್ನು ಹೆಚ್ಚೆನ್ನುವುದು?

ಇದೇ ಉಸಿರಿನಲ್ಲಿ ವಾಮನರಾಯರನ್ನೂ, ಗಂಗೂಬಾಯಿಯವರನ್ನೂ ಹೇಳಬೇಕು. ವಿರಹವನ್ನು ತೋರಿಸುವುದರಲ್ಲಿ ಮಳವಳ್ಳಿಯ ಸುಂದರಮ್ಮ, ಗಾಂಭೀರ್ಯದಲ್ಲಿ ವೀರಣ್ಣನವರ ಸುಂದರಮ್ಮ ಹೇಗೋ ಹಾಗೆ ಭಕ್ತಿ, ಕರುಣಗಳನ್ನು ತೋರಿಸುವುದರಲ್ಲಿ ಗಂಗೂಬಾಯಿಯವರದು ಎತ್ತಿದ ಕೈ. ವಾಮನರಾಯರ ಕಾಲಿದಾಸ ಇನ್ನೂ ಮರೆಯುವಂತಿಲ್ಲ.

## ೭. ಜನಸಾಮಾನ್ಯರಿಗಾಗಿ

ಈ ಕಾಲದಲ್ಲಿ ಹೊಸ ನಾಟಕಗಳು ಬಂದುವು. ಕೈ. ಅವರು, ಶ್ರೀ. ಯವರು, ಶ್ರೀನಿವಾಸರು, ವೆಂಕಟರಾಮಯ್ಯನವರು, ಮೊದಲಾದವರು ಮೈಸೂರಿನಲ್ಲಿ,

ಶ್ರೀರಂಗರು, ಬೇಂದ್ರೆಯವರು ಮೊದಲಾದವರು ಉತ್ತರಕರ್ನಾಟಕದಲ್ಲಿ, ರಮಾನಂದರಾಯರು ಮೊದಲಾದವರು ಮದರಾಸಿನಲ್ಲಿ, ನಾಟಕಗಳನ್ನು ಬರೆದರು.

ಕೈ. ಅವರ ನಾಟಕಗಳು ಕರುಣವಿದ್ಧವಾದ ಸಾಮಾಜಿಕ ಚಿತ್ರಗಳು. ಅವರ ಪರ್ಪಸ್ ಮೊದಲಾದವು ವಿಚಾರಪೂರ್ಣವಾದವು. ಸಾಮಾನ್ಯರಿಗೆ ಅಟ್ಟದ ಆಚೆಯವು. ಶ್ರೀ. ಯವರ ನಾಟಕಗಳು ಗ್ರೀಕ್ ನಾಟಕದ ಪ್ರೇರಣೆಯಿಂದ ಬಂದವು. ಶ್ರೀನಿವಾಸರು ಬರೆದ ಹಲವು ನಾಟಕಗಳಲ್ಲಿ ಯಶೋಧರೆ, ವೆಂಕಟ ರಾಮಯ್ಯನವರ ನಾಟಕಗಳಲ್ಲಿ ಮಂಡೋದರಿ, ನಚಿಕೇತ, ತೆನ್ನಾಲಿ ರಾಮಕೃಷ್ಣ ಇವು ರಂಗಕ್ಕೆ ಬಂದುವು. ಇವು ಜನಸಾಮಾನ್ಯರಿಗೂ ಹಿಡಿಯಬೇಕಾದುವು. ಆದರೂ ಕುಡಿ ಬೆಳೆದು ಮುಂದುವರಿಯಲಿಲ್ಲ. ಶ್ರೀರಂಗರು ಬಹುವಾಗಿ ವಿಡಂಬನಕಾರರು. ಬೇಂದ್ರೆಯವರ ನಾಟಕದಲ್ಲಿಯೂ ವಿಡಂಬನ ಗುಣ ಎದ್ದು ಕಂಡುಬರುತ್ತದೆ. ನಾಟಕವೆಂದರೆ ವಿಲಾಸಿಗಳ ಸ್ವತ್ತೆನ್ನುವ ಜನತೆ ವಿಚಾರಪೂರ್ಣವಾಗಿ ತನ್ನನ್ನು ತಿದ್ದಲೆಂದು ಬರೆದ ನಾಟಕಗಳನ್ನು ಒಪ್ಪುವುದೆಂತು ?

ಇದುವರೆಗೆ ಕರ್ನಾಟಕವು ತುಂಡುತುಂಡಾಗಿಹೋಗಿ, ಗರೂಡರು ಹೇಳು ತ್ತಿದ್ದಂತೆ ಒಬ್ಬರಿಗೊಬ್ಬರು ೫೬ ಆಗಿಹೋಗಿದ್ದರು.* ಆದರಿಂದಲೇ ಏನೋ ನಮ್ಮಲ್ಲಿ ನಾಟಕ ಸಂಪ್ರದಾಯ ಬೆಳೆದಿಲ್ಲ. ಬಹುಶಃ ಜನತೆಯಲ್ಲಿ ಒಂದು ವೈಶಿಷ್ಟ್ಯ ಬೆಳೆಯುವವರೆಗೂ ಅದೂ ಬೆಳೆಯುವುದಿಲ್ಲವೋ ಏನೋ ?

ಆಡುವ ನಾಟಕಕ್ಕೆ ಪ್ರೋತ್ಸಾಹ ದೊರೆಯುತ್ತದೆ. ಆದರೆ ಓದುವ ನಾಟಕಕ್ಕೆ ಇನ್ನೂ ಪ್ರೋತ್ಸಾಹ ದೊರೆತಿಲ್ಲ. ರಂಗಮಂಟಪದಲ್ಲಿ ಜನಪ್ರಿಯ ವಾದ ನಾಟಕಗಳು ಯಾವುವೂ ವಿದ್ವಾಂಸರ ಗಮನಕ್ಕೆ ಬಂದಿಲ್ಲ. ಪಠ್ಯಪುಸ್ತಕ ಗಳಾಗಿ ನಿಯಮಿಸುವಾಗ ಇನ್ನೂ ಶಾಕುಂತಲ, ನಾಗಾನಂದ, ರತ್ನಾವಳಿಗಳೇ ಕಣ್ಣೆದುರು ನಿಲ್ಲುತ್ತವೆ. ರಂಗದಲ್ಲಿ ಯಶಸ್ವಿಯಾದ ನಾಟಕಗಳು ಯಾವವೂ ಅಚ್ಚಾಗಿ ಬಂದು ನಾಟಕಪ್ರಿಯರ ಭಂಡಾರಗಳಲ್ಲಿ ಕುಳಿತಿಲ್ಲ. ಹಾಗೆಯೇ ನಾಟಕಗಳಲ್ಲಿ ವೈವಿಧ್ಯವಿಲ್ಲ: ಇನ್ನೂ ಏನೇನೊ ಇಲ್ಲ.

ಆದರೆ ತರುಣರಲ್ಲಿ ಅಭಿಮಾನವಿದೆ: ಉತ್ಸಾಹವಿದೆ. ಅಲ್ಲಲ್ಲಿ ಅಭಿನಯ ಗಳು ನಡೆಯುತ್ತಿವೆ. ಇವೆಲ್ಲವೂ ಏಕವೇಣಿಯಾಗಬೇಕು.

ನಗರಗಳಲ್ಲ ಸಾಮಾಜಿಕ ನಾಟಕಗಳ ಮೇಲೆ ಅಭಿಮಾನವಿರುವಂತೆ ಇತರ ಕಡೆಗಳಲ್ಲಿ ಪುರಾಣದ ನಾಟಕಗಳ ಮೇಲೆ ಅಭಿಮಾನ ಹೆಚ್ಚಾಗಿದೆ. ನಗರಗಳಲ್ಲಿ ನಾಟಕವನ್ನು ನೋಡುವ ಜನ ಯಾರು ಎಂಬುದನ್ನು ನೋಡಿದರೆ, ಹೆಚ್ಚು ಕಡಿಮೆ ಸಿನೀಮಾ ನೋಡುವ ಜನದ ಅಂತಸ್ತಿನ ಜನ.

ಸಿನೀಮಾ ಬಂದು ನಾಟಕದಲ್ಲಿ ಬದಲಾವಣೆಗಳಾಗಿವೆ. ಆದರೂ ಜನಕ್ಕೆ ಹಿಂದಿನ ವೀರರ ಅಭಿಮಾನ ಹೋಗಿಲ್ಲ. ಭೂಕೈಲಾಸ, ಕುರುಕ್ಷೇತ್ರ, ಈಚಿನ

---

* ೧೯೫೬ರಲ್ಲಿ ಒಂದಂಕಿಯ ೫ರ ಮೊಕ ಒಂದು ಕಡೆ, ಇನ್ನೊಂದು ಅಂಕಿಯ ೬ರ ಮೊಕ ಇನ್ನೊಂದು ಕಡೆ ಎಂಬ ಅರ್ಥದಲ್ಲಿ.

ದಶಾವತಾರ, ಈ ನಾಟಕಗಳು ಮಿಕ್ಕೆಲ್ಲ ನಾಟಕಗಳಿಗಿಂತ ಜನಪ್ರಿಯವಾಗಿ ಬೇಕಾದ ಹಾಗೆ ಸಂಪಾದಿಸಿವೆ. ಅವುಗಳ ಗುಟ್ಟೇನು? ಬರಿಯ ಮನೋಮೋಹಕವಾದ ದೀಪ, ರಂಗಿನ ಪರದೆ, ಇವೇನೇ? ಅಲ್ಲ. ಅವುಗಳಲ್ಲಿ ಅಭಿನಯವೆಷ್ಟಿತ್ತು? ಕಾವ್ಯವೆಷ್ಟಿತ್ತು? ಅವನ್ನು ಹುಡುಕಿ ನೋಡಬೇಕು.

ಜೊತೆಗೆ ದಶಾವತಾರ ಗೆದ್ದಿರುವುದರ ಗುಟ್ಟೇನು? ಮತ್ತೆ ಪುರಾಣ ನಾಟಕಗಳ ಯುಗವು ಬಂತೆ? ಕನ್ನಡದಲ್ಲಿ ಎಚ್ಚಮ್ಮನಾಯಕ ಗೆದ್ದಿದ್ದರೂ ಚಾರಿತ್ರಿಕ ನಾಟಕಗಳೇಕೆ ಬರಲಿಲ್ಲ? ಇವು ಗಮನಿಸಬೇಕಾದ ಅಂಶಗಳು.

ನಟವರ್ಗ ಇದುವರೆಗೆ ಗಣ್ಯರಾದ ವಿದ್ವಾಂಸರನ್ನು ತನ್ನೊಳಗೆ ಐಕ್ಯ ಮಾಡಿಕೊಂಡಂತಿಲ್ಲ. ಕರ್ನಾಟಕ ರಂಗಮಂಟಪವು ಅವಿದ್ವಾಂಸರಿಗೇ ಮೀಸಲಾಗಿರಬೇಕೇನು? ಸರ್ಕಾರದ ನೌಕರಿಗಳನ್ನು ಹುಡುಕಿಕೊಂಡು ಹೋಗುವ ವಿದ್ಯಾವಂತರು ನಾಟಕದೇವಿಯ ಆರಾಧನ ಮಾಡಿದರೆ ತಪ್ಪೇನು?

## ೮. ನಮ್ಮ ಸಂಪ್ರದಾಯ

ಇಂದು ನಮ್ಮ ಪ್ರೇರಕವಸ್ತು ಪಾಶ್ಯಾತ್ಯ ಸಂಸ್ಕೃತಿ, ಪಾಶ್ಚಾತ್ಯ ಸಾಹಿತ್ಯ. ನಾವು ಪೌರ್ವಾತ್ಯರು, ನಮ್ಮದೊಂದು ವಿಶಿಷ್ಟ ಸಂಪ್ರದಾಯವಿದೆ ಎನ್ನುವುದು ನಮ್ಮ ಮನಸ್ಸಿಗೆ ಬಂದಿಲ್ಲ. ಅಷ್ಟೇ ಅಲ್ಲ. ನಾವು ಯಾವ ಪಾಶ್ಚಾತ್ಯ ಸಾಹಿತ್ಯವನ್ನು ಆರಾಧಿಸುತ್ತೇವೋ ಅಲ್ಲಿಯೂ ಉತ್ತಮ ನಾಟಕವಿದೆ ಎನ್ನುವುದನ್ನೂ ಮರೆತಿದ್ದೇವೆ. ಜೊತೆಗೆ ಪ್ರಪಂಚದ ಶ್ರೇಷ್ಠ ನಾಟಕಗಳನ್ನು ನಮ್ಮ ಜನತೆಯ ಮುಂದಿಟ್ಟು ಆರಾಧಿಸುವ ಕಾರ್ಯವಂತೂ ನಡೆದೇ ಇಲ್ಲ ಎಂದರೂ ತಪ್ಪಿಲ್ಲ. ಇದು ತಪ್ಪಬೇಕು. ನಮ್ಮ ಸಂಪ್ರದಾಯದ ನಾಟಕಗಳೂ ಬರಬೇಕು. ಹೊರದೇಶದ ಉತ್ತಮ ನಾಟಕಗಳೂ ಬರಬೇಕು. ಜೊತೆಗೆ ಮಂಟಪ ಸಂವಿಧಾನದಲ್ಲಿ ಅವರಿಂದ ನಾವು ಎಷ್ಟೋ ಕಲಿಯಬೇಕು.

ಜೊತೆಗೆ ವಿಮರ್ಶಕ ವರ್ಗ ಬೆಳೆಯಬೇಕು. ಒಮ್ಮೆ ರಂಗಸ್ಥಲದಲ್ಲಿ ಸೊಗಸಾದ ನಾಟಕವನ್ನು ಕುರಿತು ಒಬ್ಬರು, ಇದು ರಂಗಸ್ಥಳದಲ್ಲಿ ಖಂಡಿತವಾಗಿ ಒಪ್ಪುವುದಿಲ್ಲ, ಎಂದರು. ಇಂತಹ ವಿಮರ್ಶಕರು ಬೇಕಿಲ್ಲ. ಒಟ್ಟಿನಲ್ಲಿ ನಾಟಕ ಪ್ರಪಂಚದಲ್ಲಿ ಕವಿ, ನಟ, ವಿಮರ್ಶಕ, ಪ್ರೇಕ್ಷಕ, ಇವರೆಲ್ಲರೂ ಒಟ್ಟುಗೂಡಿಲ್ಲ. ಹಾಗೆ ಒಟ್ಟುಗೂಡುವವರೆಗೆ ನಾಟಕ ಗೋಪುರವನ್ನೇರುವುದಿಲ್ಲ.

ಕರ್ನಾಟಕವು ಒಂದುಗೂಡಿದೆ. ಭಾರತದಲ್ಲಿ ಕರ್ನಾಟಕದಂತೆ ತುಂಡು ತುಂಡಾಗಿದ್ದು ಹರಿದುಹೋಗಿದ್ದ ನಾಡು ಇನ್ನೊಂದಿಲ್ಲ. ಹಿಂದೆ ಈಗಿನ ಬಂಗಾಳ, ಈಗಿನ ನೇಪಾಳಗಳಿಗೆ ರಾಜರನ್ನು ಕೊಟ್ಟಿದ್ದ ಕರ್ನಾಟಕ, ಉತ್ತರದವರನ್ನು ದಕ್ಷಿಣಾಪಥಕ್ಕೆ ಕಾಲಿಡದಂತೆ ಹಿಮ್ಮೆಟ್ಟಿಸಿದ ವೀರ ಪುಲಿಕೇಶಿಯ ನಾಡಾದ ಕರ್ನಾಟಕ, ಭಾರತದ ಜಗದ್ಗುರುಗಳು ಮೂವರನ್ನು ತನ್ನ ಬಸಿರಲ್ಲಿಟ್ಟುಕೊಂಡ ಕರ್ನಾಟಕ, ಭಕ್ತಿಭಂಡಾರಿಯ ಕರ್ನಾಟಕ, ಪ್ರವಾಹದಂತೆ ಹರಿದುಬಂದ ಮುಸಲ್ಮಾನರನ್ನು ಅಡ್ಡಕಟ್ಟಿ ಭಾರತೀಯ ಸಂಸ್ಕೃತಿಯನ್ನು ಉಳಿಸಿ ಪುಟವಿಕ್ಕಿದ ವಿಜಯನಗರವನ್ನು ಮೆರೆಸಿದ ಕರ್ನಾಟಕ, ಮಿಕ್ಕೆಡೆಯಲ್ಲೆಲ್ಲಾ ಎಣ್ಣೆ ಬತ್ತಿಗಳಿಲ್ಲದೆ



ಮಂಗಳೂರು ಸಮುದ್ರ ತೀರದಲ್ಲಿ ಮೀನು ಒಣಗಿಸುತ್ತಿರುವುದು



ವೆನ್‌ಲಾಕ್ ಆಸ್ಪತ್ರೆ, ಮಂಗಳೂರು



ಸೆಯಿಂಟ್ ಆಲೋಸೀಯಸ್ ಕಾಲೇಜು, ಮಂಗಳೂರು

ಆರಿಹೋದ ಭಾರತೀಯ ಸಂಸ್ಕೃತಿಯ ನಂದಾದೀಪವನ್ನು ಬೆಳಗಿದ ಒಡೆಯರ ಕರ್ನಾಟಕ, ಇಂದು ಮತ್ತೆ ರೂಪುಗೊಂಡು ಮೆರೆಯುತ್ತಿದೆ.

ಜೊತೆಗೆ ಕೇಂದ್ರ ಸರ್ಕಾರದಂತೆ ಪ್ರಾಂತ ಸರ್ಕಾರಗಳೂ ನಾಟಕವನ್ನು ಪೋಷಿಸಲು ಮುಂದೆ ಬಂದಿವೆ. ಇಪ್ಪತ್ತನೆಯ ಶತಮಾನವು ಮುಗಿಯಲು ಇನ್ನೂ ನಾಲ್ಕೂವರೆ ದಶಕಗಳಿವೆ. ನಮ್ಮ ತರುಣರು ಎಚ್ಚೆತ್ತು, ನಾಟಕವನ್ನು ಸೃಷ್ಟಿಸಲಿ. ಕನ್ನಡ ನಾಟಕವು ಕಾವ್ಯಾಭಿನಯ ದೇವತೆಗಳು ಇಬ್ಬರೂ ಒಪ್ಪುವ ನಾಟಕರತ್ನವಾಗಿ ಮೆರೆಯಲಿ. ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದ ನಾಟಕ ಪ್ರಪಂಚವು ಉತ್ತಮೋತ್ತಮ ಕವಿ, ನಟ, ವಿಮರ್ಶಕರನ್ನು ಕಂಡಿತೆಂಬ ಖ್ಯಾತಿಯನ್ನು ಹೊಂದಲಿ.

---

# ಕನ್ನಡ ನಾಡಿನ ಲಲಿತಕಲೆಗಳು

## — ಸಂಗೀತ —

ಲೇಖಕರು :

ಶ್ರೀಮಾನ್ ಬಿ. ವಿ. ಕೃಷ್ಣಶಾಸ್ತ್ರಿಗಳು, ಮೈಸೂರು.

### ೧. ಒಂದು ನಾಣ್ಣುಡಿ

"ಸಂಗೀತವು ಹುಟ್ಟಿದುದು ಕರ್ಣಾಟಕದಲ್ಲಿ; ಬೆಳೆದುದು ಅಯೋಧ್ಯೆಯಲ್ಲಿ ಅದರ ಸಾವು ಪಂಜಾಬಿನಲ್ಲಿ." ಎಂಬ ಒಂದು ನಾಣ್ಣುಡಿ ಇದೆಯಂತೆ. ಇತರ ಸಂದರ್ಭದಲ್ಲಿ ಇದೇ ನುಡಿಯು ದೇಶದ ಬೇರೆ ಭಾಗಗಳಿಗೂ ಅನ್ವಯಿಸಲಾಗಿದೆ. ಅದೆಲ್ಲೇ ಹುಟ್ಟಲಿ, ಅದೆಲ್ಲೇ ಬೆಳೆಯಲಿ, ಸಂಗೀತದ ಹುಟ್ಟು ಕರ್ಣಾಟಕದಲ್ಲಿ ಎಂದು ಹೇಳುವುದರ ಅಭಿಪ್ರಾಯವಿಷ್ಟೆ: ಭಾರತೀಯ ಸಂಗೀತದ ಶುದ್ಧಸ್ವರೂಪವು ಕರ್ಣಾಟಕದಲ್ಲಿ ಎಂಬ ಭಾವನಾಸೂಚಕವೆನ್ನಬಹುದು.

ಕರ್ಣಾಟಕ ಸಂಗೀತವೆಂದರೇನು? ಅದರ ಸ್ವರೂಪವೆಂತಹದು? ಭಾರತೀಯ ಸಂಗೀತದ ಶುದ್ಧಸ್ವರೂಪವಿರುವುದು ಅದೊಂದರಲ್ಲಿಯೇನು? ಎಂಬ ಪ್ರಶ್ನೆಗಳು ಮೂಡುವುದು ಸ್ವಾಭಾವಿಕ. ಈ ಹೆಸರು ಯಾವ ಕಾರಣದಿಂದಲೇ ಬರಲಿ, ಅದರ ಅಭಿವೃದ್ಧಿಗೆ ಯಾವ ಯಾವ ಜನಾಂಗದವರೇ ಶ್ರಮಿಸಿರಲಿ, ಕರ್ಣಾಟಕ ಸಂಗೀತವೆಂದರೆ ಭಾರತೀಯ ಸಂಗೀತಕ್ಷೇತ್ರದಲ್ಲಿ ಬಹು ಹಳೆಯ ಪದ್ಧತಿಯೆಂಬ ಭಾವನೆಯಿರುವುದು ನಿಜ. ಅಂತೆಯೇ ಭಾರತೀಯ ಸಂಗೀತದ ಇತಿಹಾಸವನ್ನು ಪರಿಶೀಲಿಸಿದಲ್ಲಿ, ಕರ್ಣಾಟಕ ದೇಶವು ಸಂಗೀತಕಲೆಯ ಅಭಿವೃದ್ಧಿಯಲ್ಲಿ ಒಂದು ಮುಖ್ಯಪಾತ್ರವನ್ನು ವಹಿಸಿರುವುದೂ ನಿಜ.

ಭಾರತೀಯ ಸಂಗೀತದಲ್ಲಿ ಎರಡು ಪದ್ಧತಿಗಳಿರುವುದು ಎಲ್ಲರೂ ಬಲ್ಲ ವಿಷಯ. ಬರೀ ಹಿಂದಿಯೇ ಅಲ್ಲದೆ ವಿವಿಧಭಾಷೆಗಳಿಂದ ಕೂಡಿದ ಸೌರಾಷ್ಟ್ರದಿಂದ ಕಾಮರೂಪ ಮತ್ತು ಮಹಾರಾಷ್ಟ್ರದಿಂದ ಕಾಶ್ಮೀರದವರೆಗಿನ ಭೂಭಾಗದಲ್ಲಿ ವ್ಯವಹಾರದಲ್ಲಿರುವ ಪದ್ಧತಿಯು ಹಿಂದೂಸ್ತಾನಿ ಸಂಗೀತವೆಂದೂ, ಕರ್ಣಾಟಕ ಅದರಲ್ಲಿಯೂ ತುಂಗಭದ್ರೆಯಿಂದ ದಕ್ಷಿಣಕ್ಕಿರುವ ಬರೀ ಕನ್ನಡಪ್ರದೇಶವೇ ಅಲ್ಲದ ಇಡೀ ದಕ್ಷಿಣ ಭಾರತದಲ್ಲಿ ವ್ಯವಹಾರದಲ್ಲಿರುವ ಪದ್ಧತಿಯು ಕರ್ನಾಟಕ ಸಂಗೀತವೆಂದೂ ಕರೆಯಲ್ಪಡುತ್ತಿವೆ. ಇದಕ್ಕೆ ಕರ್ಣಾಟಕ ಸಂಗೀತವೆಂದು ಹೆಸರು ಹೇಗೆ ಬಂದಿತು? ಕರ್ಣಾಟಕದಿಂದಲೇ ಉದ್ಭವಿಸಿತೇ? ಬರೀ ಕನ್ನಡ ಸಂಗೀತವೇ? ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಡುತ್ತಿದೆಯೇ? ದ್ರಾವಿಡ, ಆಂಧ್ರ, ಅಥವಾ ದಕ್ಷಿಣ ಭಾರತೀಯ ಸಂಗೀತ ಎಂದು ಏಕೆ ಕರೆಯಲ್ಪಡುತ್ತಿಲ್ಲ? ಎಂಬ ವಿಷಯಗಳು ಪರಿಶೀಲನಾರ್ಹವಾದವು.

## ೨. ಸಂಗೀತದ ಇತಿಹಾಸ

ಭಾರತೀಯ ಸಂಗೀತದ ಇತಿಹಾಸವನ್ನು ಪರಿಶೀಲಿಸಿದಲ್ಲಿ ನಾನಾ ಸಂದರ್ಭಗಳಲ್ಲಿ ಮತ್ತು ಕಾಲಕ್ಕೆ ತಕ್ಕಂತೆ, ಮೂಲ ರೂಪವು ಒಂದೇ ಇದ್ದರೂ, ವಿವಿಧ ಅಂಗಗಳಲ್ಲಿ ಅದು ಆಗಾಗ್ಗೆ ಪರಿವರ್ತಿತವಾಗಿರುವುದನ್ನು ಕಾಣಬಹುದಾಗಿದೆ. ಆದರೆ ಈ ಬದಲಾವಣೆಯು ಹನ್ನೆರಡು ಹದಿಮೂರನೆಯ ಶತಮಾನಗಳಿಂದ ಸ್ವಲ್ಪ ಸ್ವಲ್ಪ ಸ್ಪಷ್ಟಕರವಾಗಿ ಉತ್ತರ ಮತ್ತು ದಕ್ಷಿಣ ಅಥವಾ ಹಿಂದೂಸ್ಥಾನಿ ಮತ್ತು ಕರ್ಣಾಟಕ ಪದ್ಧತಿಗಳ ಕವಲುಗಳಾಗಿ ಒಡೆದುದನು ಕಾಣಬಹುದಾಗಿದೆ. ಆದರೂ ಭಾರತೀಯ ಸಂಗೀತದ ಬಹುಭಾಗ ಲಕ್ಷಣಗ್ರಂಥಗಳಲ್ಲಿ ಹಿಂದೂಸ್ತಾನಿ ಮತ್ತು ಕರ್ಣಾಟಕ ಪದ್ಧತಿಗಳೆಂದು ಸ್ಪಷ್ಟವಾದ ಉಲ್ಲೇಖವಿಲ್ಲ. ಈ ಹೆಸರುಗಳು ಕೇವಲ ವ್ಯಾವಹಾರಿಕವಾಗಿವೆ.

ಕರ್ಣಾಟಕ ಶಬ್ದದ ಉಲ್ಲೇಖವು ಪ್ರಥಮವಾಗಿ ಕಂಡುಬರುವುದು ಚಾಲುಕ್ಯ ಸೋಮೇಶ್ವರನ ವಿಶ್ವಕೋಶ ರೂಪಕವಾದ 'ಮಾನಸೋಲ್ಲಾಸ' ಅಥವಾ 'ಅಭಿಲಕ್ಷಿತಾರ್ಥ ಚಿಂತಾಮಣಿ'ಯ ಸಂದರ್ಭದಲ್ಲಿ. ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಆಳಿದ ಸೋಮೇಶ್ವರನು ತನ್ನ ರಾಜಕಾರ್ಯಗಳ ಮಧ್ಯದಲ್ಲಿಯೂ ಗೀತ ನೃತ್ಯಗಳ ಪೋಷಣೆಗೆ ಗಮನವನ್ನಿತ್ತು ಅವನು ಮಾಡಿದ ಅನೇಕ ಸುಧಾರಣೆಗಳ ಫಲವಾಗಿ ದಾಕ್ಷಿಣಾತ್ಯ ಸಂಗೀತವು ಅವನು ಆಳಿದ ಕರ್ಣಾಟಕದ ಹೆಸರನ್ನು ಪಡೆಯಿತೆಂದು ಹೇಳಲಾಗಿದೆ. ಅಲ್ಲಿಂದ ಮುಂದೆ ಸುಮಾರು ಹದಿನಾರನೆಯ ಶತಮಾನದವರೆಗೂ ದಕ್ಷಿಣಭಾರತದ ಸಂಗೀತ ಕ್ಷೇತ್ರದಲ್ಲಿ ಲಕ್ಷಣ ಮತ್ತು ಲಕ್ಷ್ಯಗಳ ಬಹುಭಾಗ ಕೃತಿಗಳೆಲ್ಲಾ ಕರ್ಣಾಟಕ ದೇಶದಲ್ಲಿ ಅಥವಾ ಕರ್ಣಾಟಕ ದೇಶೀಯರಿಂದಲೇ ಆದುದು ಗಮನಾರ್ಹವಲ್ಲದೆ, ಇದರಲ್ಲಿ ಕರ್ಣಾಟಕ ಸಂಸ್ಕೃತಿಯ ಕೇಂದ್ರವಾಗಿದ್ದ ವಿಜಯನಗರದ ಪಾತ್ರವೂ ಸರ್ವವಿದಿತವಾದುದು. ವಿಜಯನಗರ ಸಾಮ್ರಾಜ್ಯದ ಪತನಾನಂತರವೂ ದಕ್ಷಿಣಭಾರತ ಸಂಗೀತ ಕ್ಷೇತ್ರದಲ್ಲಿ ಅದರ ಪ್ರಭಾವವು ಇದ್ದು ಇಂದಿನ ಶೈಲಿಯು ರೂಪಿತವಾದುದರಲ್ಲಿಯೂ ಸಹಾಯಕವಾಗಿದೆಯೆನ್ನಬೇಕು. ವಿವಿಧ ವಿಭಾಗ ವ್ಯಕ್ತಿಗಳ ಶ್ರಮದಿಂದ ರೂಪಿತವಾಗಿರುವ ಇಂದಿನ ಕರ್ಣಾಟಕ ಸಂಗೀತವನ್ನು ಒಂದು ನಾಡಿನ ಪದ್ಧತಿಗಿಂತ ಒಂದು ಸಂಸ್ಕೃತಿಯ ಫಲವೆನ್ನಬೇಕು.

ಈಗ ವ್ಯವಹಾರದಲ್ಲಿರುವ ಕರ್ಣಾಟಕ ಸಂಗೀತವೆಂದರೆ ಏನೆಂಬುದನ್ನು ಪರಿಶೀಲಿಸೋಣ. ಇಂದು ದಕ್ಷಿಣ ಭಾರತದಲ್ಲಿರುವ ಆಂಧ್ರರೇ ಆಗಲಿ, ತಮಿಳರೇ ಆಗಲಿ, ಕನ್ನಡಿಗರೇ ಆಗಲಿ ಇಲ್ಲಿಯ ಸಂಗೀತವನ್ನು ಕರ್ಣಾಟಕ ಸಂಗೀತವೆಂದೇ ಕರೆಯುತ್ತಿದ್ದಾರೆ. ಅಲ್ಲಿಗೆ ಅದು ಬರೇ ಕರ್ಣಾಟಕ ದೇಶದಲ್ಲಿಯೇ ರೂಪಿತವಾದ ಸಂಗೀತವೆಂಬ ಅರ್ಥವೇ? ನಾವು ಕರ್ಣಾಟಕ ಲಕ್ಷಣಕಾರ ಶಾಙದೇವ, ವಿದ್ಯಾರಣ್ಯ, ರಾಮಾಮಾತ್ಯ, ಮುಂತಾದವರನ್ನೂ, ಇಂದಿನ ಸಜೀವ ಕಲೆಯ ಆದ್ಯಪ್ರವರ್ತಕರಾದ ಪುರಂದರದಾಸರನ್ನೂ ನೆನೆಯುತ್ತೇವೆ. ಹಾಗೆಯೇ ತೆಲುಗಿನಲ್ಲಿಯೇ ಕೃತಿ ರಚಿಸಿರುವ ಅಣ್ಣಮಾಚಾರ್ಯ, ಕ್ಷೇತ್ರಯ್ಯ, ತ್ಯಾಗರಾಜ

ಮುಂತಾದ ಆಂಧ್ರರನ್ನೂ, ಶಾಮಶಾಸ್ತ್ರಿಗಳೇ ಮೊದಲಾದ ತಮಿಳರನ್ನೂ, ತಮಿಳಿನಲ್ಲಿಯೇ ಕೃತಿ ರಚಿಸಿರುವ ಗೋಪಾಲಕೃಷ್ಣ ಭಾರತಿ ಮುಂತಾದವರನ್ನೂ ನೆನೆಯುತ್ತೇವೆ. ವಿವರವಾಗಿ ಪರಿಶೀಲಿಸಿದಲ್ಲಿ, ಇಂದಿನ ಕರ್ಣಾಟಕ ಸಂಗೀತವು ಒಂದೇ ದೇಶ ಒಂದೇ ಕುಲದವರಿಂದ ನಿರ್ಮಿತವಾದುದದಲ್ಲ. ಪ್ರಾರಂಭದಲ್ಲಿ ಈ ಸಂಗೀತ ಪದ್ಧತಿಯು ಕರ್ಣಾಟಕದಲ್ಲಿ ರೂಪಿತವಾಗಿ ಇತರ ಭಾಗಗಳಲ್ಲಿಯೂ ವೃದ್ಧಿಪಡಿಸಲ್ಪಟ್ಟು, ಕ್ರಮೇಣ ಇಂದಿನ ರೂಪವನ್ನು ಪಡೆದಿದೆ. ಇದರಲ್ಲಿ ದಕ್ಷಿಣ ಭಾರತದ ವಿವಿಧ ಜನಾಂಗವೆಲ್ಲವೂ ಹೃತ್ಪೂರ್ವಕವಾಗಿ ಸಹಕರಿಸಿದೆಯೆನ್ನಬೇಕು.

ಕರ್ಣಾಟಕ ಸಂಗೀತ ಪದ್ಧತಿಯು ಹಿಂದೂಸ್ತಾನಿ ಪದ್ಧತಿಗಿಂತ ಹಳೆಯದೆಂಬ ಭಾವನೆಗೆ ಕಾರಣವೇನು? ಪ್ರಥಮತಃ ಅದರ ಸ್ವರೂಪ. ಭಾರತೀಯ ಸಂಗೀತದ ಮೂಲ, ವೇದಗಳು. ಸಂಗೀತವು ಜನತೆಯ ಆಧ್ಯಾತ್ಮ ಪ್ರವೃತ್ತಿಯ ಒಂದು ಅಂಗ. ಭಗವದಾರಾಧನೆ, ಆತ್ಮಾನುಭವ ಮತ್ತು ಮೋಕ್ಷ ಮಾರ್ಗದ ಒಂದು ಸಾಧನ. ಈ ಪ್ರವೃತ್ತಿಯು ಮುಸಲ್ಮಾನರ ಆಕ್ರಮಣಕ್ಕೆ ಪೂರ್ವ ಭಾರತೀಯ ಸಂಗೀತ ಕ್ಷೇತ್ರದಲ್ಲಿ ಒಂದೇ ರೀತಿಯಲ್ಲಿದ್ದರೂ, ಕ್ರಮೇಣ ಉತ್ತರ ಭಾರತದಲ್ಲಿ ಬದಲಿಸಿದ ಸ್ಥಿತಿಗತಿಗಳ ನಿಮಿತ್ತ ಸಂಗೀತವು ಇಂದ್ರಿಯ ಚಾಪಲ್ಯದ ಸಾಧನವೂ ಆಯಿತು. ಆದರೆ ಆಕ್ರಮಣದ ಅಲ್ಲೋಲಕಲ್ಲೋಲಗಳಿಗೆ ಅಲ್ಲಿನಷ್ಟು ಹೆಚ್ಚಾಗಿ ಸಿಲುಕದ ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಸ್ಥೂಲವಾಗಿ ಆ ಹಳೆಯ ತತ್ವಗಳೇ ಉಳಿದುಕೊಂಡು ಬಂದವು. ಇದರ ಜೊತೆಗೆ ಕಲೆಯ ನಿರೂಪಣೆ ಮತ್ತು ಪ್ರಯೋಗಗಳಲ್ಲಿಯೂ ಕರ್ಣಾಟಕ ಪದ್ಧತಿಯಲ್ಲಿ ಹೆಚ್ಚಿನ ಶಿಸ್ತು, ಕ್ರಮ ಮತ್ತು ನಿರ್ಬಂಧಗಳ ಮೂಲಕ ಪರಕೀಯ ಸಂಸ್ಕೃತಿಯ ಪ್ರಭಾವವು ಉತ್ತರ ಭಾರತದಷ್ಟು ಆಗಲಿಲ್ಲವೆನ್ನಬೇಕು.

ಕರ್ಣಾಟಕ ಸಂಗೀತದ ಪ್ರಾಚೀನತೆಗೆ ಇನ್ನೂ ಒಂದು ಉದಾಹರಣೆಯನ್ನು ಹೇಳಬಹುದು. ಇಂದಿನ ಭಾರತೀಯ ಸಂಗೀತವನ್ನು ಪರಿಶೀಲಿಸಿದಲ್ಲಿ ಅದು ಹಿಂದೂಸ್ತಾನಿಯೇ ಆಗಲಿ, ಕರ್ಣಾಟಕವೇ ಆಗಲಿ ಪಾರಿಭಾಷಿಕ ಶಬ್ದಗಳು ಎರಡಕ್ಕೂ ಒಂದೇ. ಆದರೆ ಪ್ರಯೋಗಗಳಲ್ಲಿ ಮಾತ್ರ ವ್ಯತ್ಯಾಸ. ಉತ್ತರ ಭಾರತದಲ್ಲಿ ಹೇಗೆ ಇರಲಿ, ದಕ್ಷಿಣದಲ್ಲಂತೂ ದ್ರಾವಿಡ ಸಂಗೀತವೂ ಹಿಂದೆ ಪ್ರಭಾವಶಾಲಿಯಾಗಿದ್ದು ಅದೂ ಕ್ರಮೇಣ ಸಂಸ್ಕೃತ ಪಾರಿಭಾಷಿಕ ಪದಗಳ ಕವಚವನ್ನು ಪಡೆದುದಲ್ಲದೆ, ಹೊಸ ಕಳೆ ಮತ್ತು ಹೊಸ ಹೆಸರುಗಳನ್ನು ಪಡೆಯಿತು. ದ್ರಾವಿಡ ಸಂಗೀತದ ಅನೇಕ ಪುರಾತನ ಪಣ್‌ಗಳಿಗೂ ಇಂದು ವ್ಯವಹಾರದಲ್ಲಿರುವ ಅನೇಕ ರಾಗಗಳಿಗೂ ರೂಪದಲ್ಲಿ ಸಾಮ್ಯವಿದ್ದರೂ, ಅವೆಲ್ಲಾ ಕರೆಯಲ್ಪಡುವುದು ರಾಗಗಳ ಹೆಸರಿನಲ್ಲಿಯೇ. ಪಣ್‌ಗಳ ಹೆಸರನ್ನು ಪುರಾತನ ದೇವಾಲಯಗಳಲ್ಲಿ ತೇವಾರ ಮತ್ತು ವಂಶಪಾರಂಪರ್ಯವಾಗಿ ತಿರುಪ್ಪುಗಳನ್ನು ಹಾಡುವ ಕೆಲವು ಓದುವರ್‌ಗಳ-ಗಾಯಕರ-ವಿನಾ, ಮಿಕ್ಕ ವ್ಯವಹಾರದಲ್ಲಿ ಆ ಹೆಸರುಗಳು ಅಷ್ಟಾಗಿ ಉಪಯೋಗದಲ್ಲಿಲ್ಲ. ಹಾಗೆಯೇ ಕನ್ನಡದಲ್ಲಿಯೂ ಇದ್ದ ಪ್ರಾಚೀನ ಪಾರಿಭಾಷಿಕ ಶಬ್ದಗಳಾದ ಪೊಗರ್, ನಯ, ಠಾಯ, ಆಳತಿ, ಸಾಳಗ, ವಹಿಣಿ, ಬಜಾವಣೆ

ಇತ್ಯಾದಿ ಶಬ್ದಗಳೂ ಇಂದು ಆಚರಣೆಯಲ್ಲಿಲ್ಲದೆ, ಅವುಗಳ ಬದಲು ಸಂಸ್ಕೃತ ಪಾರಿಭಾಷಿಕ ಶಬ್ದಗಳೇ ಇವೆ.

## ೩. ಕರ್ಣಾಟಕ ಸಂಗೀತದ ಸ್ವರೂಪ

ಈಗ ಕರ್ಣಾಟಕ ಸಂಗೀತದ ಸ್ವರೂಪವೆಂತಹುದೆಂಬುದನ್ನು ಪರಿಶೀಲಿಸುವ. ಭಾರತೀಯ ಸಂಗೀತವನ್ನು ಪರಿಶೀಲಿಸಿದಲ್ಲಿ, ಇಡೀ ದೇಶದಲ್ಲೆಲ್ಲಾ ಶ್ರುತಿ, ಸ್ವರ, ಮೂರ್ಛನ, ಅಲಂಕಾರ ಮುಂತಾದ ಭಾಗಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲದೆ ಒಂದೇ ಕ್ರಮವು ಸರ್ವಮಾನ್ಯವಾಗಿರುವುದೂ, ಮುಂದೆ ರಾಗ-ತಾಳ ಭಾಗದಿಂದ ಕವಲೊಡೆದು ಔತ್ತರೇಯ ಮತ್ತು ದಾಕ್ಷಿಣಾತ್ಯ ಪದ್ಧತಿಗಳಿಗೆ ಪರಸ್ಪರ ಭಿನ್ನತೆ ಯುಂಟಾಗಿರುವುದೂ ಕಾಣಬರುತ್ತದೆ. ಎರಡು ಪದ್ಧತಿಯಲ್ಲಿಯೂ ಒಂದೇ ಹೆಸರಿನ ರಾಗಗಳಿದ್ದರೂ ಅವುಗಳ ರೂಪವು ಬೇರೆ ಬೇರೆ. ಅಂತೆಯೇ ಸ್ಥೂಲವಾಗಿ ಒಂದೇ ಸ್ವರೂಪದ ರಾಗಗಳಿದ್ದರೂ ಅವುಗಳ ಉಭಯ ಪದ್ಧತಿಯಲ್ಲಿಯೂ ಹೆಸರಿನಲ್ಲಿ ಭಿನ್ನವಾಗಿವೆ. ಇದಲ್ಲದೆ ಅವುಗಳ ವರ್ಗೀಕರಣವೂ ಅಷ್ಟೆ. ಹಿಂದೂಸ್ತಾನಿಯಲ್ಲಿ ರಾಗರಾಗಿಣಿ ಪದ್ಧತಿ. ವಿವಿಧ ಮತಾನುಸಾರವಾಗಿ ಪುರುಷ ಮತ್ತು ಸ್ತ್ರೀ ರಾಗಗಳು ರಚಿತವಾಗಿವೆ. ಭರತ, ಶಿವ, ಹನುಮಾ, ಕಲ್ಲಿನಾಥ, ಸೋಮೇಶ್ವರ, ರಾಗಾರ್ಣವ ಹೀಗೆ ವಿವಿಧ ಲಕ್ಷಣಕಾರರ ಅಭಿಪ್ರಾಯಗಳಿಗನುಸಾರವಾಗಿ ಐದೋ, ಆರೋ ಪುರುಷ ರಾಗಗಳೂ, ಅವಕ್ಕೆ ತಲಾ ಐದೋ ಆರೋ ಸ್ತ್ರೀ ರಾಗಗಳೂ ಏರ್ಪಡಿಸಲ್ಪಟ್ಟಿವೆ. ಇನ್ನೂ ಕೆಲವು ವೇಳೆ ಇವಕ್ಕೆ ಪುತ್ರರೂ, ಪುತ್ರ ವಧುಗಳೂ ಉಂಟು. ವಿವಿಧ ಮತಾನುಸಾರ ರಚಿತವಾಗಿರುವ ರಾಗರಾಗಿಣೀ ಸಮೂಹಗಳನ್ನು ಪರಸ್ಪರ ಪರಿಶೀಲಿಸಿದಲ್ಲಿ ಸರಿಯಾದ ಕ್ರಮದ ಅಭಾವವು ಕಂಡುಬರುವುದು. ಕೆಲವು ವೇಳೆ ಒಂದರ ಪುರುಷರಾಗವು ಇನ್ನೊಂದರಲ್ಲಿ ಸ್ತ್ರೀರಾಗ; ಇನ್ನೊಂದರ ಸ್ತ್ರೀ ರಾಗವು ಮತ್ತೊಂದರ ಪುರುಷ ರಾಗವಾಗಿದೆ. ಈ ರಾಗರಾಗಿಣೀ ಸಮೂಹಗಳು ಯಾವ ತತ್ವದ ಮೇಲೆ ರಚಿತವಾದುವು? ಪರಸ್ಪರ ರೂಪಸಾಮ್ಯತೆಯಿಂದಲೇ? ಅಲ್ಲವೆನ್ನಬೇಕು. ಬಹುತೇಕ ಪುರುಷ ರಾಗಕ್ಕೂ, ಅದರ ಸ್ತ್ರೀ ರಾಗ ಗಳಿಗೂ ಸ್ವರೂಪದಲ್ಲಿ ಯಾವ ಸಾಮ್ಯತೆಯೂ ಇರುವುದಿಲ್ಲ. ಅಥವಾ, ರಸಭಾವದ ಸಾಮ್ಯತೆಯಿಂದ ರಚಿಸಲ್ಪಟ್ಟಿವೆಯೇ? ಯಾವುದನ್ನೂ ಹೇಳುವುದು ಕಷ್ಟ.

ಕರ್ಣಾಟಕ ಸಂಗೀತದಲ್ಲಿ ರಾಗ ವರ್ಗೀಕರಣಕ್ಕೆ ಅನುಸರಿಸುವುದು ಮೇಳ ಪದ್ಧತಿ. ಹಿಂದೂಸ್ತಾನಿ ರಾಗವರ್ಗೀಕರಣಕ್ಕೆ ತುಲನೆ ಮಾಡಿ ನೋಡಿದಲ್ಲಿ ಕರ್ಣಾಟಕ ಪದ್ಧತಿಯಲ್ಲಿ ಒಂದು ವ್ಯವಸ್ಥೆಯಿದೆ. ಒಂದು ಕ್ರಮವಿದೆ. ಸಪ್ತ ಸ್ವರಗಳಲ್ಲಿ ಪ್ರಕೃತಿ ವಿಕೃತಿ ಸ್ವರಗಳಿಂದ ಕಲ್ಪಿತವಾದ ವಿವಿಧ ಸ್ವರಸಪ್ತಕಗಳಿಂದ ೭೨ ಜನಕ ಮೇಳಗಳನ್ನು ರಚಿಸಿ, ವ್ಯವಹಾರದಲ್ಲಿರುವ ರಾಗಗಳೆಲ್ಲಾ ಈ ೭೨ ಜನಕ ಮೇಳಗಳಿಂದ ಜನ್ಯವಾಗಿರುವಂತೆ ವರ್ಗೀಕರಿಸಲಾಗಿದೆ. ಇದರಲ್ಲಿ ಜನಕ ಮೇಳಕ್ಕೂ ಜನ್ಯ ರಾಗಕ್ಕೂ ರೂಪಸಾಮ್ಯತೆಯಿದ್ದು, ಆಯಾ ರಾಗಸ್ಥಾನವನ್ನು ನಿರ್ದೇಶಿಸಲು ಸಹಾಯಕವಾಗಿದೆ. ಈಚೀಚೆಗೆ ಹಿಂದೂಸ್ತಾನಿಯಲ್ಲಿ ಆಚರಣೆಗೆ

ತಂದಿರುವ ·ಠಾಠ್ ಪದ್ಧತಿಯು ಸ್ಥೂಲವಾಗಿ ಇದೇ ಕ್ರಮವನ್ನು ಅನುಸರಿಸಿದ್ದು, ಈಗೀಗ ಆ ಕ್ಷೇತ್ರದಲ್ಲಿಯೂ ಬಹು ಸೌಕರ್ಯವನ್ನುಂಟುಮಾಡಿದೆ. ಲಕ್ಷ್ಯ ಭಾಗದಲ್ಲಿ ನೋಡಿದಲ್ಲಿ, ಹಿಂದೂಸ್ತಾನಿ ಮತ್ತು ಕರ್ಣಾಟಕ ಪದ್ಧತಿಗಳಲ್ಲಿ ಗಮಕ ಪ್ರಯೋಗದಲ್ಲಿ ಭಿನ್ನತೆಯಿರುವುದು ಕಾಣಬರುತ್ತದೆ. ಒಂದೇ ಬೇರಿನಿಂದ ಬಂದ ಪದ್ಧತಿಯಾದರೂ, ಒಂದೇ ದೇಶದಲ್ಲಿ ವಿವಿಧ ಆಚಾರ ವ್ಯವಹಾರವಿರುವಂತೆ ಶೈಲಿಯಲ್ಲಿಯೂ ಕ್ರಮದಲ್ಲಿಯೂ ವ್ಯತ್ಯಾಸವಿದೆ. ಒಂದೇ ಮಾತಿನಲ್ಲಿ ಹೇಳ ಬಹುದಾದಲ್ಲಿ ಹಿಂದೂಸ್ತಾನಿ ಸಂಗೀತವು ನಾದಪ್ರಧಾನ; ಕರ್ಣಾಟಕ ಸಂಗೀತವು ಲಯಪ್ರಧಾನ.

ಸಂಗೀತ ಇತಿಹಾಸಕಾರ ವಿಷ್ಣುನಾರಾಯಣ ಭಾತ್ಖಂಡೆಯವರು ಭಾರತೀಯ ಸಂಗೀತವನ್ನು ಅದರ ವಿಶಿಷ್ಟ ಅಂಗಗಳೂ ಅಡಕವಾಗಿರುವಂತೆ ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಿದ್ದಾರೆ. ಗ್ರಂಥ ಸಂಗೀತ, ಅಧುನಾಪ್ರಸಿದ್ಧ ಸಂಗೀತ ಮತ್ತು ಭಾವೀ ಸಂಗೀತ. ಗ್ರಂಥ ಸಂಗೀತವೆಂದರೆ ಲಕ್ಷ್ಯ ಲಕ್ಷಣಗಳಿಗೆ ಸಂಬಂಧಿಸಿದ ವಿಶಿಷ್ಟ ಪುಸ್ತಕ ಮತ್ತು ಬರಹ. ಅಧುನಾಪ್ರಸಿದ್ಧ ಸಂಗೀತವೆಂದರೆ ಇಂದು ವ್ಯವಹಾರದಲ್ಲಿರುವ ಪದ್ಧತಿ. ಭಾವೀ ಸಂಗೀತವೆಂದರೆ ಮುಂದೆ ಬರ ಬಹುದಾದ ವಿವಿಧ ಶೈಲಿ ಸಂಪ್ರದಾಯಗಳು. ಭಾರತದ ವಿವಿಧ ಭಾಗದ ಜನತೆ ಯೆಲ್ಲವೂ ಈ ಭಾಗಗಳಲ್ಲಿ ಯಥಾಶಕ್ತಿ ತಮ್ಮ ತಮ್ಮ ಸೇವೆ ಸಲ್ಲಿಸಿವೆ. ಭಾರತೀಯ ಸಂಗೀತವು ಉತ್ತಮ ರೂಪದಲ್ಲಿ ಹೊಳೆಯುವಂತೆ ಮಾಡಿದ್ದರೂ ಕರ್ಣಾಟಕ ದೇಶವೂ ಮತ್ತು ದೇಶೀಯರೂ ಇದರಲ್ಲಿ ಒಂದು ಪ್ರಧಾನ ಪಾತ್ರವಹಿಸಿರುವುದು ಗಮನಾರ್ಹವಾದುದು. ಶತಶತಮಾನಗಳಿಂದ ಅನೇಕ ಲಕ್ಷಣ ಮತ್ತು ಲಕ್ಷ್ಯ ಶಾಸ್ತ್ರಜ್ಞರು ಕರ್ಣಾಟಕ ದೇಶವೊಂದರಲ್ಲಿಯೇ ಅಲ್ಲದೆ ಹೊರಗೂ ತಮ್ಮ ನಿಸ್ವಾರ್ಥ ಸೇವೆಯಿಂದ ಕಲೆಯು ಉತ್ತಮ ರೂಪದಲ್ಲಿ ಬೆಳಗುವಂತೆ ಮಾಡಿದ್ದಾರೆ. ಇದು ಬರೇ ದಾಕ್ಷಿಣಾತ್ಯ ಸಂಗೀತವೊಂದೇ ಅಲ್ಲದೆ, ಔತ್ತರೇಯ ಸಂಗೀತ ಕ್ಷೇತ್ರಕ್ಕೂ ಅನ್ವಯಿಸುತ್ತದೆ. ಭಾರತೀಯ ಸಂಗೀತ ಕ್ಷೇತ್ರದಲ್ಲಿ ಒಂದೇ ಪದ್ಧತಿ ಇದ್ದಾಗಲೂ, ಅದು ಎರಡಾಗಿ ಕವಲೊಡೆದಾಗಲೂ, ಅನೇಕ ಕರ್ಣಾಟಕ ವಿದ್ವನ್ಮಣಿಗಳು ಕಲೆಯ ಅಭಿವೃದ್ಧಿಗೆ ದುಡಿದಿದ್ದಾರೆ. ವಿವರವಾಗಿ ಪರಿಶೀಲಿಸಿದಲ್ಲಿ, ಸೇವೆಯು ಅಂತಹ ಅಲ್ಪವಾದುದೇನೂ ಅಲ್ಲದೆ ಮಹತ್ತರವಾದುದೆಂಬುದು ತಿಳಿದುಬರುವುದು. ಇದಕ್ಕೆ ಕರ್ಣಾಟಕ ದೇಶ, ಆ ಸಂಸ್ಕೃತಿಯ ಕೇಂದ್ರಗಳು, ವಿವಿಧ ಸಂಸ್ಕೃತಿಗಳ ಸಂಗಮವಾಗಲು ಸಾಧ್ಯವಾದ ವಿಶೇಷ ನೆಲೆ, ಸಂದರ್ಭ—ಇವೂ ಕಾರಣವೆನ್ನ ಬಹುದು. ಇದಲ್ಲದೆ ಕರ್ಣಾಟಕ ದೇಶದ ಭೌಗೋಳಿಕ ಸ್ಥಾನವೂ ಸ್ವಲ್ಪ ಮುಖ್ಯ ಕಾರಣವೆನ್ನಬಹುದು.

ಭಾರತದ ಭೂಪಟವನ್ನು ಪರಿಶೀಲಿಸಿದಲ್ಲಿ ಕರ್ಣಾಟಕ ದೇಶವು ಇಂದು ದಕ್ಷಿಣ ಭಾರತದ ಸ್ವಲ್ಪ ಪಶ್ಚಿಮದೆಡೆಗಿರುವ ಮಧ್ಯಾರ್ಧ ಭಾಗದಲ್ಲಿ ಹರಡಿರುವು ದನ್ನು ನೋಡಬಹುದು. ಹಿಂದೆ ಇದೇ ಕರ್ಣಾಟಕ ದೇಶವು ಹತ್ತಿರ ಹತ್ತಿರ ವಿಂಧ್ಯಪರ್ವತದವರೆಗೂ ಪ್ರಸರಿಸಿದ್ದುದನ್ನು ಇತಿಹಾಸವನ್ನು ಓದಿದವರೆಲ್ಲಾ ತಿಳಿದ ವಿಷಯವೇ ಆಗಿದೆ. ದಕ್ಷಿಣಾಪಥದೆಡೆಗೆ ಆರ್ಯರು ಬಂದುದು ಕರ್ಣಾಟಕದ

ಮೂಲಕ. ಅಂತೆಯೇ ಆರ್ಯ ಸಂಸ್ಕೃತಿಯ ಒಂದು ಪ್ರಧಾನಾಂಗವಾದ ಸಂಗೀತವೂ ಇತ್ತೀಚೆಗೆ ಹರಿದುದು ಕರ್ಣಾಟಕದ ಮೂಲಕವೇ. ಆ ವೇಳೆಗಾಗಲೇ ಸ್ಥೂಲವಾಗಿ ಅಷ್ಟೇ ಉತ್ತಮ ರೂಪವನ್ನು ಪಡೆದಿದ್ದ ದ್ರಾವಿಡ ಸಂಗೀತವೂ ಆರ್ಯಸಂಗೀತವೂ ಸಂಧಿಸಿದುದು ಕರ್ಣಾಟಕದಲ್ಲಿಯೇ ; ಎರಡರ ಮಿಲಿನವೂ, ತತ್ಫಲವಾಗಿ ಉದ್ಭವಿಸಿದ ನೂತನ ಶೈಲಿಯೂ ಆದುದು ಕರ್ಣಾಟಕದಲ್ಲಿಯೇ ಎನ್ನಬಹುದು.

## ೪ ಕರ್ಣಾಟಕ ಸಂಗೀತ ಗ್ರಂಥಗಳು

ಈಗ ಗ್ರಂಥಸಂಗೀತ ಭಾಗದಲ್ಲಿ ಕರ್ಣಾಟಕರು ಸಲ್ಲಿಸಿರುವ ಸೇವೆಯನ್ನು ಪರಿಶೀಲಿಸುವ. ಭಾರತೀಯ ಸಂಗೀತದ ಲಕ್ಷಣಭಾಗದ ಪ್ರಮುಖ ಗ್ರಂಥಗಳಲ್ಲಿ ಒಂದು ಮುಖ್ಯಭಾಗವು ಕರ್ಣಾಟಕರಿಂದ ರಚಿತವಾಗಿರುವುದು ಒಂದು ವೈಶಿಷ್ಟ್ಯ. ಭಾರತೀಯ ಸಂಗೀತಗ್ರಂಥಗಳ ಹೆಸರು ಹೇಳುವಾಗ ಮೊದಲು ಬರುವುದು ಭರತನ ನಾಟ್ಯಶಾಸ್ತ್ರ. ಅನಂತರ ಸಂಗೀತರತ್ನಾಕರ. ನಾಟ್ಯಶಾಸ್ತ್ರವು ಮೂಲಗ್ರಂಥ ವಾದರೂ ಬಹುಭಾಗ ಭಾರತೀಯ ಸಂಗೀತಗ್ರಂಥಗಳು ಉದಹರಿಸುವುದು ರತ್ನಾ ಕರದಿಂದ; ಅನುಸರಿಸಿರುವುದು ಅದರ ಕ್ರಮುವನ್ನು. ಅದು ಭಾರತೀಯ ಸಂಗೀತಕ್ಕೆ ಕರ್ಣಾಟಕದ ಕಾಣಿಕೆ ಎನ್ನಬಹುದು. ರತ್ನಾಕರವು ರಚಿತವಾದ ಒಂದೆರಡು ಶತಮಾನಗಳ ಪೂರ್ವದಲ್ಲಿಯೇ ಈ ಬಗೆಯ ಲಕ್ಷಣಗ್ರಂಥಗಳು ಬಿಡಿಬಿಡಿ ಯಾಗಿಯೂ, ವಿಶ್ವಕೋಶಗಳ ವಿಭಾಗಗಳಾಗಿಯೂ ರಚಿತವಾಗಿರುವುದು ಕಂಡು ಬರುವುದು. ಇವುಗಳಲ್ಲಿ ಪ್ರಥಮವಾಗಿ ಚಾಲುಕ್ಯ ಚಕ್ರವರ್ತಿ, ಭೂಲೋಕಮಲ್ಲ ಸೋಮೇಶ್ವರನಿಂದ ರಚಿತವಾದ 'ಮಾನಸೋಲ್ಲಾಸ' ಅಥವಾ 'ಅಭಿಲಕ್ಷಿತಾರ್ಥ ಚಿಂತಾಮಣಿ'ಯನ್ನು ಹೇಳಬಹುದು. ಸ್ವತಃ ಸಂಗೀತ ಭರತಶಾಸ್ತ್ರ ವಿಶಾರದನಾದ ಸೋಮೇಶ್ವರನು ತನ್ನ ರಾಜಕಾರ್ಯದ ಮಧ್ಯದಲ್ಲಿಯೂ ಬಿಡುವುಮಾಡಿಕೊಂಡು ಈ ಬೃಹತ್ ಗ್ರಂಥವನ್ನು ಬರೆದುದೇ ಅಲ್ಲದೆ, ಆಸ್ಥಾನದ ಒಬ್ಬ ನೃತ್ಯಕಲಾವಿದೆಗೆ ಮುಂದೆ 'ಗೊಂಡಿನಿ' ಎಂಬ ಹೆಸರು ಪಡೆದ 'ಕುಂಡಲಿ' ಎಂಬ ನೃತ್ಯಶೈಲಿ ಯನ್ನು ಕಲಿಸಿದನಂತೆ. ಇವನು ಲಕ್ಷಣ ಮತ್ತು ಲಕ್ಷ್ಯ ಭಾಗದಲ್ಲಿ ನಡೆಸಿದ ಅನೇಕ ಪರಿಶೋಧನೆ ಮತ್ತು ಪ್ರಯೋಗಗಳ ಫಲವಾಗಿ ದಾಕ್ಷಿಣಾತ್ಯ ಪದ್ಧತಿಯು ಇವನ ಕಾಲದಿಂದ ಕರ್ಣಾಟ ಎಂಬ ಹೆಸರು ಪಡೆಯಿತೆಂದೂ ಹೇಳಲಾಗಿದೆ. ಇವನು ಸೃಜಿಸಿದ ರಾಗರಾಗಿಣೀ ಪರಿವಾರ ಪದ್ಧತಿಯು ಹಿಂದೂಸ್ತಾನಿ ಸಂಗೀತದಲ್ಲಿ ಸೋಮೇಶ್ವರ ಮತವೆಂಬ ಹೆಸರನ್ನು ತಾಳಿದೆ. ಮುಂದಿನ ಲಕ್ಷಣಕಾರರಲ್ಲಿ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಪ್ರತಾಪ ಚಕ್ರವರ್ತಿಯ 'ಸಂಗೀತ ಚೂಡಾಮಣಿ'. ಇವನ ಜ್ಞಾತಿ ಇಂದಿನ ಬಿಹಾರ್ ಪ್ರಾಂತ್ಯದ ಉತ್ತರಭಾಗ ಮಿಥಿಲಾದೇಶದ ಅಧಿಪತಿಯಾಗಿಯೂ ಇಂದಿನ ನೇಪಾಳ ರಾಜಮನೆತನದ ಪೂರ್ವಜನೂ ಆದ ಮಹಾಸಂಸ್ಥಾನಾಧಿಪತಿ ಮಿಥಿಲೇಶ್ವರ, ಕರ್ಣಾಟಕ ಕುಲ ಭೂಷಣ ನಾನ್ಯದೇವನ 'ಸರಸ್ವತಿ ಹೃದಯಾಲಂಕಾರಹಾರ'ಎಂಬ ಹೆಸರು ಪಡೆದ 'ಭರತಭಾಷ್ಯ'ವನ್ನೂ ಹೇಳಬೇಕು.

ಇವುಗಳನಂತರ ಬಂದ ಗ್ರಂಥಗಳಲ್ಲಿ ಪ್ರಮುಖವಾದುದು 'ಸಂಗೀತ ರತ್ನಾಕರ'. ಯಾದವರ ರಾಜಧಾನಿ ದೇವಗಿರಿಯಲ್ಲಿ ಸಿಂಹಣ ಅಥವಾ ಸಿಂಘಣ ರಾಜನ ಆಸ್ಥಾನದಲ್ಲಿ ಪ್ರಧಾನ ಕೋಶಾಧಿಕಾರಿಯಾಗಿದ್ದ ನಿಶ್ಶಂಕಶಾರ್ಙ್ಗದೇವನು ಪೂರ್ವಕೃತ ಗ್ರಂಥಗಳನ್ನೆಲ್ಲಾ ಪರಿಶೀಲಿಸಿ ಮತ್ತು ಕ್ರೋಢೀಕರಿಸಿ ಬರೆದ ಬೃಹದ್ಗ್ರಂಥವಿದು. ಸ್ವರರಾಗ, ಪ್ರಕೀರ್ಣಕ, ಪ್ರಬಂಧ, ತಾಳ, ವಾದ್ಯ ಮತ್ತು ನರ್ತನವೆಂಬುದಾಗಿ ವಿಭಾಗಿಸಿದ ಏಳು ಅಧ್ಯಾಯಗಳಿಂದ ಕೂಡಿದ ಬೃಹದ್ಗ್ರಂಥ 'ಸಂಗೀತರತ್ನಾಕರ'ವು ಭಾರತೀಯ ಸಂಗೀತದ ಪ್ರಮುಖ ಮತ್ತು ಆಧಾರಭೂತ ಗ್ರಂಥ. ಇದರಲ್ಲಿ ಉಕ್ತವಾಗಿರುವ ಪದ್ಧತಿಗಳನೇಕವು ಇಂದು ಲುಪ್ತವಾಗಿದ್ದರೂ ಸ್ಥಿತವಾಗಿರುವ ಅಂಶಗಳಿಗೆಲ್ಲಾ ಇಂದೂ 'ಸಂಗೀತರತ್ನಾಕರ'ವು ಆಧಾರಭೂತ ವಾಗಿದ್ದು, ಅನಂತರ ಬಂದ ಲಕ್ಷಣಗ್ರಂಥಗಳಿಗೆಲ್ಲಾ ಮೇಲ್ಪಂಕ್ತಿಯಾಗಿಯೂ ಇದೆ. ಅನೇಕ ಚಿಕ್ಕಪುಟ್ಟ ಗ್ರಂಥಗಳೆಲ್ಲಾ ರತ್ನಾಕರವೆಂಬ ಹೆಸರಿನಿಂದ ಕರೆದು ಕೊಂಡಿರುವುದೇ ಈ ಗ್ರಂಥದ ವೈಶಿಷ್ಟ್ಯಕ್ಕೆ ಒಂದು ಸಾಕ್ಷಿ. ಮುಂದೆ ಬಂದ ಗ್ರಂಥ ಗಳಲ್ಲಿ ನಾಟ್ಯದ ಮೇಲೆ ವಿಶೇಷ ವಿಮರ್ಶೆ ಮಾಡಿರುವ ಹರಿಪಾಲದೇವನ 'ಸಂಗೀತ ಸುಧಾಕರ' ಮತ್ತು ಹೊಯ್ಸಳರಾಜ ಮುಮ್ಮಡಿ ಬಲ್ಲಾಳನ ಆಸ್ಥಾನ ವಿದ್ವಾಂಸ ವಿದ್ಯಾಚಕ್ರವರ್ತಿಯ 'ಭರತ ಸಂಗ್ರಹ' ಇವುಗಳನ್ನು ಹೇಳಬಹುದು.

## ೫. ದಾಕ್ಷಿಣಾತ್ಯ ಸಂಗೀತ ಪದ್ಧತಿ

ದಾಕ್ಷಿಣಾತ್ಯ ಸಂಗೀತ ಪದ್ಧತಿಗೆ ಕರ್ಣಾಟಕವೆಂಬ ಹೆಸರು ಚಾಲುಕ್ಯ ಸೋಮೇಶ್ವರನಿಂದ ಬಂದಿತೆಂದು ಹೇಳಲಾಗಿದ್ದರೂ, ಅದು ವ್ಯವಹಾರದಲ್ಲಿ ನಿಂತುದು ಕರ್ಣಾಟಕ ಸಂಸ್ಕೃತಿಯ ಕೇಂದ್ರವಾಗಿದ್ದ ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ. ಸ್ವಯಂ ವಿದ್ಯಾವಂತರೂ ವಿದ್ಯಾಪಕ್ಷಪಾತಿಗಳೂ ಉದಾರಿಗಳೂ ಆಗಿದ್ದ ಅನೇಕ ರಾಜರುಗಳ ಕಾಲದಲ್ಲಿ ಸಂಗೀತವು ಪೋಷಿಸಲ್ಪಟ್ಟು, ಲಕ್ಷಣ ಲಕ್ಷ್ಯ ವಿಭಾಗ ಗಳಲ್ಲಿ ಬಹಳ ಅಭಿವೃದ್ಧಿಯುಂಟಾಗಿ, ಇಂದು ದಕ್ಷಿಣ ಭಾರತದ ಸಂಗೀತದ ಸಜೀವ ಭಾಗದ ಶೈಲಿ ಸಂಪ್ರದಾಯಗಳೆಲ್ಲಾ ವಿಜಯನಗರದಿಂದ ಸ್ಫೂರ್ತಿಪಡೆದು ಅಂದಿ ನಿಂದ ರೂಪಿತವಾದುದು ಎಂದು ಹೇಳಬಹುದು. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಪ್ರಥಮವಾಗಿ ಕಂಡುಬರುವ ಲಕ್ಷಣಗ್ರಂಥ ವಿದ್ಯಾರಣ್ಯರಿಂದ ರಚಿತ ವಾದ 'ಸಂಗೀತ ಸಾರ'. ಈ ಗ್ರಂಥವು ದೊರೆತಿಲ್ಲ. ಎರಡು ಶತಮಾನಗಳ ಅನಂತರ 'ಸಂಗೀತ ಸುಧಾ' ಗ್ರಂಥವನ್ನು ಬರೆದ ಗೋವಿಂದ ದೀಕ್ಷಿತರು ಕರ್ಣಾಟಕ ಸಿಂಹಾಸನ ಭಾಗ್ಯವಿಧಾತ ವಿದ್ಯಾರಣ್ಯರ 'ಸಂಗೀತ ಸಾರ'ವನ್ನು ಸ್ಮರಿಸಿ, ಆ ಪದ್ಧತಿಯನ್ನೇ ತಾವು ಅನುಸರಿಸಿರುವುದಾಗಿ ಹೇಳಿಕೊಂಡಿದ್ದಾರೆ. ಅದರಂತೆ ಕರ್ಣಾಟಕ ಸಂಗೀತದ ಜೀವಾಳವಾದ ಮೇಳಪದ್ಧತಿಯ ಆದ್ಯ ಪ್ರವರ್ತ ಕರು ವಿದ್ಯಾರಣ್ಯರೆಂದೂ, ಹದಿನೈದು ಮೇಳಗಳಿಂದ ಕೂಡಿದ ಅವರ ಮೇಳ ಪದ್ಧತಿಯೇ ಬಹು ಪ್ರಾಚೀನವಾದುದೆಂದೂ ತಿಳಿದುಬರುತ್ತದೆ. ವಿಜಯನಗರ ಕಾಲದ ಇತರ ಲಕ್ಷಣಗ್ರಂಥಗಳೆಂದರೆ 'ಸಂಗೀತ ರತ್ನಾಕರ'ಕ್ಕೆ ಕಲ್ಲಿನಾಥನು ಬರೆದ ವ್ಯಾಖ್ಯೆ. ಕಲಾನಿಧಿ ದೇವಣ್ಣಭಟ್ಟನ 'ಸಂಗೀತ ಮುಕ್ತಾವಳಿ', ಲಕ್ಷಣ

ಭಟ್ಟ ಅಥವಾ ಲಕ್ಷ್ಮೀಧರನ 'ಲಕ್ಷಣಭರತ'ವೆಂಬ ಹೆಸರು ಪಡೆದ 'ಸಂಗೀತ ಸೂರ್ಯೋದಯ', ಗೋಪೇಂದ್ರ ತಿಪ್ಪ ಭೂಪಾಲನ 'ತಾಳದೀಪಿಕೆ', ಸಂಗೀತ ಮತ್ತು ನಾಟ್ಯದ ಮೇಲಿನ ಗ್ರಂಥ ಕಾಮದೇವಿಯ ' ಸಂಗೀತ ಯುಗ ದರ್ಪಣ', 'ಸಂಗೀತ ವಿದ್ಯಾವಿನೋದ' ಇವುಗಳ ಹೆಸರನ್ನು ಹೇಳಬಹುದು.

ಕರ್ಣಾಟಕ ಸಂಗೀತದ ಸಜೀವಭಾಗವು ರೂಪಿತವಾದುದು ವಿಜಯನಗರದ ಕಾಲದಲ್ಲಿ ಎಂದು ಹೇಳಿದ್ದೇನೆ. ಈ ಭಾಗದಲ್ಲಿ ಮುಖ್ಯವಾದ ಗ್ರಂಥ ರಾಮಾ ಮಾತ್ಯನಿಂದ ರಚಿತವಾದ 'ಸ್ವರಮೇಳ ಕಲಾನಿಧಿ'. ವಿದ್ಯಾರಣ್ಯರ ಹದಿನೈದು ಮೇಳಗಳು ರಾಮಾಮಾತ್ಯನ ಗ್ರಂಥದಲ್ಲಿ ಇಪ್ಪತ್ತಕ್ಕೆ ಏರಿವೆ. ಅನೇಕ ರಾಗ ಲಕ್ಷಣಗಳ ವ್ಯಾಖ್ಯೆಯ ಜೊತೆಗೆ ರಾಮಾಮಾತ್ಯನು ಲಕ್ಷಣ ಗೀತಗಳನ್ನು ರಚಿಸಿರುವನೆಂದು ಹೇಳಲಾಗಿದೆ. ಮೇಳ ಪದ್ಧತಿಯ ಕ್ರಮಬದ್ಧ ಪ್ರಸ್ತಾರ ಮಾರ್ಗವನ್ನು ಸೂಚಿಸಿದ ' ರಾಗವಿಭೋಧ ' ಗ್ರಂಥವು ಸೋಮನಾಥನಿಂದ ರಚಿತ ವಾದುದು ಇದರನಂತರ. ವಿಜಯನಗರದ ಪತನಾನಂತರ ದಶದಿಕ್ಕುಗಳಿಗೂ ಚದರಿಹೋದ ವಿದ್ವನ್ಮಣಿಗಳಲ್ಲಿ ಗೋವಿಂದ ದೀಕ್ಷಿತರೆಂಬ ಕರ್ಣಾಟ ಬ್ರಾಹ್ಮಣರು ತಂಜಾವೂರು ರಘುನಾಥನಾಯಕನ ಮಂತ್ರಿಯಾಗಿದ್ದು ' ಸಂಗೀತ ಸುಧಾ ' ಎಂಬ ರಸಪೂರ್ಣ ಸಂಗೀತ ಗ್ರಂಥವನ್ನು ರಚಿಸಿದರು. ಗೀತ, ಆಲಾಪ, ಠಾಯ ಮತ್ತು ಪ್ರಬಂಧವೆಂಬ ನಾಲ್ಕು ಅಂಗಗಳಿಂದ ಕೂಡಿದ ' ಚತುರ್ದಂಡಿ ' ಎಂಬ ಅರ್ಥದ ಇಂದಿನ ದಾಕ್ಷಿಣಾತ್ಯ ಸಂಗೀತ ಪದ್ಧತಿಯ ಆಧಾರ ಗ್ರಂಥವಾದ 'ಚತುರ್ದಂಡಿ ಪ್ರಕಾಶಿಕೆ'ಯನ್ನು ರಚಿಸಿದ ವೆಂಕಟೇಶ್ವರ ದೀಕ್ಷಿತ ಅಥವಾ ವೆಂಕಟ ಮಖಿಗಳು ಗೋವಿಂದ ದೀಕ್ಷಿತರ ಪುತ್ರರು. ಮುಂದೆ ಇವರ ವಂಶಜ ವೆಂಕಟ ವೈದ್ಯನಾಥ ದೀಕ್ಷಿತರ ಶಿಷ್ಯ ರಾಮಸ್ವಾಮಿ ದೀಕ್ಷಿತರು, ಅವರ ಪುತ್ರ ದಾಕ್ಷಿಣಾತ್ಯ ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರಾದ ಮುದ್ದುಸ್ವಾಮಿ ದೀಕ್ಷಿತರು, ಅವರ ಕೃತಿಗಳಿಂದ ಕರ್ಣಾಟಕ ಸಂಗೀತ ಲಕ್ಷ್ಯ ಸಂಪತ್ತಿಯನ್ನು ಹೆಚ್ಚಿಸಿರುವುದು ಎಲ್ಲರೂ ಬಲ್ಲ ವಿಷಯ.

## ೬. ಔತ್ತರೇಯ ಪದ್ಧತಿ

ಔತ್ತರೇಯ ಪದ್ಧತಿಯ ಮೇಲೆ ಪ್ರಭಾವ ಬೀರಿರುವ ಲಕ್ಷಣಕಾರರಲ್ಲಿ ಪುಂಡರೀಕ ವಿಠ್ಠಲಾರ್ಯನು ಮುಖ್ಯನು. ಬಹು ಅವ್ಯವಸ್ಥೆಯಲ್ಲಿದ್ದ ಸಂಗೀತ ಕಲೆಯನ್ನು ಕ್ರೋಢೀಕರಿಸಿ ಒಂದು ಲಕ್ಷಣ ಗ್ರಂಥವನ್ನು ಬರೆಯಬೇಕೆಂದು ಅಹಮದ್ ನಗರದ ಅಧಿಪತಿ ಬುರ್‌ಹಾನ್‌ಖಾನನು ಕೋರಿದಂತೆ ಪುಂಡರೀಕ ವಿಠಲನು ' ಸದ್ರಾಗ ಚಂದ್ರೋದಯ 'ವನ್ನು ಬರೆದನೆಂದು ಹೇಳಿದೆ. ಪುನಃಪುನಃ ' ಕರ್ಣಾಟಕ ಜಾತೀಯ ' ನೆಂದು ಹೇಳಿಕೊಳ್ಳುವ ಪುಂಡರೀಕ ವಿಠ್ಠಲನು ' ಸದ್ರಾಗ ಚಂದ್ರೋದಯ 'ದಲ್ಲಿ ಮೇಳಪದ್ಧತಿಯ ವಿಮರ್ಶೆಯನ್ನು ' ರಾಗಮಾಲಾ ' ಮತ್ತು ' ರಾಗಮಂಜರಿ 'ಯಲ್ಲಿ ರಾಗರಾಗಿಣೀ ಪದ್ಧತಿಯನ್ನೂ, ' ನರ್ತನ ನಿರ್ಣಯ 'ದಲ್ಲಿ ನಾಟ್ಯಕಲೆಯನ್ನೂ ವಿಮರ್ಶಿಸಿರುವನು. ಈತನು ಅಹಮದ್‌ನಗರದ ಪತನಾನಂತರ ಉತ್ತರದಲ್ಲಿ ಗ್ವಾಲಿಯರ್ ಅಧಿಪತಿ ಮಾನಸಿಂಹನ ಆಸ್ಥಾನದಲ್ಲಿದ್ದು ಅನಂತರ

ಅಕ್ಬರ್ ಚಕ್ರವರ್ತಿಯ ಆಸ್ಥಾನವನ್ನು ಸೇರಿದನೆಂದು ತಿಳಿದುಬರುತ್ತದೆ. 'ಸಂಗೀತ ಸೂರ್ಯೋದಯ'ದ ಕರ್ತೃ ಲಕ್ಷ್ಮೀಧರನ ಮಗ ದಾಮೋದರ ಪಂಡಿತನು ಜಹಾಂಗೀರ್ ಚಕ್ರವರ್ತಿಯ ಆಸ್ಥಾನವನ್ನು ಸೇರಿ 'ಸಂಗೀತ ದರ್ಪಣ' ವನ್ನು ರಚಿಸಿದನು.

ಇತರ ಲಕ್ಷಣಕಾರರಲ್ಲಿ ನಿಜಗುಣ ಶಿವಯೋಗಿಗಳ ಹೆಸರನ್ನು ಹೇಳಬೇಕು. ವೇದಾಂತ ಮತ್ತು ಧರ್ಮದ ವಿಶ್ವಕೋಶವಾದ 'ವಿವೇಕ ಚಿಂತಾಮಣಿ' ಯಲ್ಲಿ ಒಂದು ಭಾಗವನ್ನು ನಿಜಗುಣರು ಸಂಗೀತಕಲೆಗೂ ಮೀಸಲು ಮಾಡಿರುವರು. ಶೃತಿ, ಸ್ವರ, ಅಲಂಕಾರ, ಗ್ರಾಮ, ಜಾತಿ, ರಾಗ, ವಾದ್ಯ ಮುಂತಾದ ವಿಭಾಗಗಳ ನ್ನೊಳಗೊಂಡ ಈ ಗ್ರಂಥದಲ್ಲಿ ನಿಜಗುಣರು ರಾಗಗಳನ್ನು ರಾಗಾಂಗ, ಭಾಷಾಂಗ, ಕ್ರಿಯಾಂಗ, ಉಪಾಂಗ ಭಾಗವಾಗಿ ವಿವರಿಸಿರುವುದೇ ಅಲ್ಲದೆ ಪುರುಷ, ಸ್ತ್ರೀ, ನಪುಂಸಕ, ದಾಸಿ, ಮುಂತಾದ ಭಾಗಗಳಾಗಿಯೂ ವಿಂಗಡಿಸಿರುವರು. ಕನ್ನಡ ದಲ್ಲಿಯೇ ಸಂಗೀತ ವಿಷಯಕವಾಗಿ ರಚಿತವಾಗಿರುವ ಗ್ರಂಥಗಳಲ್ಲಿ ಇದೇ ಮೊದಲನೆಯದೆನ್ನಬಹುದು.

ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ಜೀವಿತನಾಗಿದ್ದ ಕೆಳದಿಯ ಅರಸು ಇಮ್ಮಡಿ ಬಸವಪ್ಪನಾಯಕನ ಬೃಹದ್ಗ್ರಂಥ ವಿಶ್ವಕೋಶರೂಪಕವಾದ 'ಶಿವತತ್ವ ರತ್ನಾಕರ'ದ ಆರನೆಯ ಕಲ್ಲೋಲದ ಏಳು ಎಂಟು ಒಂಭತ್ತನೆಯ ತರಂಗಗಳು ಸಂಗೀತ ವಿಷಯಗಳಾಗಿವೆ. ಬಸವಪ್ಪನಾಯಕನು ಈ ಗ್ರಂಥದಲ್ಲಿ ರಾಗಪರಿವಾರ ಪದ್ಧತಿಯನ್ನು ಅನುಸರಿಸಿದ್ದಾನೆ. ಮೊದಲು ಎಂಟು ಪುರುಷ ಮತ್ತು ಇಪ್ಪತ್ತನಾಲ್ಕು ಸ್ತ್ರೀರಾಗಗಳನ್ನು ವಿವರಿಸಿ, ಅನಂತರ ಹನುಮಾನ್ ರೂಪದ ರಾಗರಾಗಿಣಿಗಳನ್ನು ವಿವರಿಸಿರುವನು.

ಹೆಚ್ಚು ಕಡಿಮೆ ಇದೇ ಕಾಲದಲ್ಲಿ ರಚಿತವಾಗಿರುವ ಇನ್ನೊಂದು ಲಕ್ಷಣ ಗ್ರಂಥವೆಂದರೆ ಮುಮ್ಮಡಿ ಚಿಕ್ಕಭೂಪಾಲ ವಿರಚಿತ 'ಅಭಿನವ ಭರತಸಾರ ಸಂಗ್ರಹ'. ಇದರಲ್ಲಿ ರಾಗಗಳನ್ನು ಉತ್ತಮ ಮಧ್ಯಮ ಮತ್ತು ಅಧಮವರ್ಗ ವಾಗಿ ವಿಭಾಗಿಸಿರುವುದೇ ಅಲ್ಲದೆ, ವಾದ್ಯಗಳ ಮೇಲೆ ವಿಸ್ತಾರಪೂರ್ವಕ ವ್ಯಾಖ್ಯೆ ಯಿದೆ. ಮುಮ್ಮಡಿ ಕೃಷ್ಣರಾಜರಿಂದ ರಚಿತವಾದ ಬೃಹತ್‌ಗ್ರಂಥ ವಿಶ್ವಕೋಶ ರೂಪಕವಾದ 'ಶ್ರೀ ತತ್ವನಿಧಿ'ಯು ಇನ್ನೊಂದು ಮುಖ್ಯ ಲಕ್ಷಣಗ್ರಂಥ. ಇದರಲ್ಲಿ ಹನುಮಾನ್ ಮತಪ್ರಕಾರ ರಾಗಪರಿವಾರ ಪದ್ಧತಿಯನ್ನೇ ಅನುಸರಿಸಿ, ಜೊತೆಗೆ ಆ ರಾಗ ಮತ್ತು ತಾಳಗಳ ಚಿತ್ರಗಳಿಂದ ಉದಹರಿಸಿರುವುದು ಗ್ರಂಥಕ್ಕೆ ಒಂದು ವೈಶಿಷ್ಟ್ಯವನ್ನುಂಟುಮಾಡಿದೆ.

ಇತ್ತೀಚಿನ ಗ್ರಂಥಗಳಲ್ಲಿ ಈ ಶತಮಾನದ ಆದಿಭಾಗದಲ್ಲಿ ಬೆಂಗಳೂರಿನಲ್ಲಿ ವೆಂಕಟರಂಗಾಸಾನಿಯವರಿಂದ ರಚಿತವಾದ 'ಭಾರತಜನ ಮನೋಲ್ಲಾಸಿನೀ' ಎಂಬ ಸಂಗೀತ ಮತ್ತು ನಾಟ್ಯ ವಿಷಯಕ ಗ್ರಂಥವು ಗಮನಾರ್ಹವಾದುದು. ಹಾಗೆಯೇ ಬರೇ ರಾಗಗಳ ಆರೋಹಣ ಅವರೋಹಣಗಳನ್ನುಳ್ಳ ಗ್ರಂಥಕರ್ತನ ಹೆಸರಿಲ್ಲದ 'ಕನ್ನಡ ಸಂಗೀತ ರತ್ನಾಕರ'ವೂ ಇನ್ನೊಂದು ಗ್ರಂಥವೆನ್ನಬೇಕು. ಕರ್ಣಾಟಕದ ಗ್ರಂಥಸಂಗೀತ ಸಂದರ್ಭದಲ್ಲಿ ಜೀವಮಾನ ಪರ್ಯಂತ ದುಡಿದ

ಸ್ವರ್ಗೀಯ ಹುಲಗೂರು ಕೃಷ್ಣಾಚಾರ್ಯರನ್ನೂ ಅವರ ಸೇವೆಯನ್ನೂ ಸ್ಮರಿಸ ಬೇಕಾದುದು ಅಗತ್ಯ. ನಾನಾ ಸಮ್ಮೇಳನ ಮತ್ತು ಅದರ ಚರ್ಚೆಗಳಲ್ಲಿ ಭಾಗ ವಹಿಸಿದುದೇ ಅಲ್ಲದೆ, ಕರ್ಣಾಟಕ ಸಂಗೀತದ ಮೇಲೆ ಕನ್ನಡದಲ್ಲಿಯೇ ವಿಸ್ತಾರ ಪೂರ್ವಕ ಗ್ರಂಥವನ್ನು ಇವರು ಬರೆದಿದ್ದಾರೆ. ಕೆಲವು ವಾದಗ್ರಸ್ತ ವಿಷಯಗಳಿದ್ದರೂ ಕನ್ನಡದಲ್ಲಿ ಸಂಗೀತ ವಿಷಯಕವಾಗಿ ಇಂತಹ ವಿದ್ವತ್ಪೂರ್ಣ ಗ್ರಂಥವು ಇದೊಂದೇ ಎನ್ನಬಹುದು.

ಗ್ರಂಥ ಸಂಗೀತ ವಿಭಾಗದಲ್ಲಿ ಕರ್ಣಾಟಕ ದೇಶ ಮತ್ತು ದೇಶೀಯರ ಪ್ರಧಾನಪಾತ್ರವಿದ್ದರೂ, ಹದಿನಾರು ಹದಿನೇಳನೆಯ ಶತಮಾನಗಳನಂತರ ಸಂಗೀತ ಗ್ರಂಥಗಳು ತಮಿಳು ದೇಶದಲ್ಲಿ ಹೆಚ್ಚು ರಚಿತವಾದವು. ಅವುಗಳಲ್ಲಿ ಸಂಸ್ಕೃತಭಾಷೆ ಯಲ್ಲಿರುವ ತುಳಜಾಜಿಯ 'ಸಂಗೀತಸಾರಾಮೃತ', ಗೋವಿಂದಾಚಾರ್ಯನ 'ಸಂಗ್ರಹ ಚೂಡಾಮಣಿ', ತೆಲುಗು ಭಾಷೆಯಲ್ಲಿರುವ 'ಸಂಗೀತ ಸರ್ವಾರ್ಥ ಸಾರಸಂಗ್ರಹ', ಸುಬ್ಬರಾಮು ದೀಕ್ಷಿತರ 'ಸಂಗೀತ ಸಂಪ್ರದಾಯ ಪ್ರದರ್ಶಿನಿ', ತಿರುವಯ್ಯಾರ್ ಸುಬ್ರಹ್ಮಣ್ಯಯ್ಯರ್‌ರವರ 'ಸಂಗೀತ ಕೌಮುದೀ', ತಚ್ಚೂರು ಶಿಂಗ್ರಾಚಾರ್ಯ ಸಹೋದರರ ಪುಸ್ತಕಗಳು, ತಮಿಳಿನಲ್ಲಿರುವ ಏಬ್ರಹಾಂ ಪಂಡಿತರ ಬೃಹದ್ಗ್ರಂಥ 'ಕರುಣಾಮೃತ ಸಾಗರ', ಮುತ್ತಯ್ಯ ಭಾಗವತರ 'ಸಂಗೀತ ಕಲ್ಪದ್ರುಮಾಂಕುರ' ಇವುಗಳು ಮುಖ್ಯವೆನ್ನಬೇಕು.

## ೭. ಆಧುನಿಕ ಸಂಗೀತ ಪದ್ಧತಿ

ಇನ್ನು ಅಧುನಾಪ್ರಸಿದ್ಧ ಸಂಗೀತ ಅಥವಾ ಸಂಗೀತದ ಸಜೀವ ವಿಭಾಗದಲ್ಲಿ ಕರ್ಣಾಟಕದ ಪಾತ್ರವನ್ನು ಪರಿಶೀಲಿಸುವ. ಇಂದು ಕರ್ಣಾಟಕ ದೇಶದಲ್ಲಿ ಹಿಂದೂ ಸ್ತಾನಿ ಮತ್ತು ಕರ್ಣಾಟಕ ಪದ್ಧತಿಗಳೆರಡೂ ಪ್ರಚಾರದಲ್ಲಿಯೂ ವ್ಯವಹಾರ ದಲ್ಲಿಯೂ ಇರುವುದು ಒಂದು ವೈಶಿಷ್ಟ್ಯ. ತುಂಗಭದ್ರೆಯಿಂದ ದಕ್ಷಿಣಕ್ಕೆಲ್ಲಾ ಕರ್ಣಾಟಕ ಶೈಲಿಯೂ ಉತ್ತರಕ್ಕೆ ಹಿಂದೂಸ್ತಾನಿ ಶೈಲಿಯೂ ಪ್ರಚಾರದಲ್ಲಿವೆ. ಉಭಯ ಶೈಲಿಗಳೂ ವ್ಯವಹಾರದಲ್ಲಿದ್ದರೂ ಇದುವರೆಗೆ ಅವು ಪರಸ್ಪರ ಪ್ರಭಾವ ವನ್ನೇನೂ ಉಂಟುಮಾಡಿಲ್ಲ. ಕಾರಣ, ಕರ್ಣಾಟಕ ಶೈಲಿಯು ರೂಢಿಯಲ್ಲಿರುವ ಕ್ಷೇತ್ರದ ಸಂಪರ್ಕವೆಲ್ಲಾ ದಕ್ಷಿಣದ ಕಡೆಗೆ, ತಮಿಳುನಾಡಿನ ಕಡೆಗೆ. ಹಿಂದೂ ಸ್ತಾನಿ ಪದ್ಧತಿಯ ವ್ಯವಹಾರವಿರುವ ಭಾಗದ ಸಂಪರ್ಕ ಮಹಾರಾಷ್ಟ್ರದ ಕಡೆಗೆ ಹೆಚ್ಚು. ಇವೆರಡರಲ್ಲಿ ಯಾವ ಪದ್ಧತಿ ಹಳೆಯದೆಂಬ ಪ್ರಶ್ನೆಯು ಈಗ ಅಗತ್ಯ ವಿಲ್ಲದಿದ್ದರೂ ಮೈಸೂರಿನ ಕಡೆಗಿರುವ ಕರ್ಣಾಟಕ ಪದ್ಧತಿಯೇ ಹಳೆಯದೆಂಬುದು ನಿಸ್ಸಂದೇಹವಾದುದು. ಕಾರಣ, ಹಿಂದೂಸ್ತಾನಿ ಪದ್ಧತಿಯು ಮಹಾರಾಷ್ಟ್ರದಲ್ಲಿ ಪ್ರಚಾರಕ್ಕೆ ಬಂದುದು ಕಳೆದ ಶತಮಾನಾಂತ್ಯದಿಂದ. ಅದಕ್ಕೆ ಹಿಂದೆ ಅಲ್ಲಿಯ ಸಂಗೀತದ ಮೇಲೂ ಕರ್ಣಾಟಕ ಶೈಲಿಯ ಪ್ರಭಾವವೇ ಅಧಿಕವಾಗಿದ್ದಿತು.

ಇಂದಿನ ಕರ್ಣಾಟಕ ಸಂಗೀತದ ಸಜೀವ ಸ್ವರೂಪವು ರೂಪಿತವಾದುದು ವಿಜಯನಗರದ ಕಾಲದಲ್ಲಿ ಎಂದು ಹೇಳಿದ್ದೇನೆ. ಆಸ್ಥಾನದಲ್ಲಿದ್ದ ಅನೇಕ ವಾಗ್ಗೇಯಕಾರರೂ, ಹೊರಗಿನ ಅನೇಕ ಭಕ್ತಪಂಥದ ಸಾಧುಸಂತರುಗಳೂ

ಅಸಂಖ್ಯಾತವಾಗಿ ಕೃತಿಗಳನ್ನು ರಚಿಸಿ ಕಲೆಯನ್ನು ಬೆಳಗಿದರು. ಭಕ್ತಿಯುಗದಲ್ಲಿ ಈ ಕ್ರಮವು ಭರತಖಂಡದ ವಿವಿಧಭಾಗಗಳಲ್ಲೆಲ್ಲಾ ನಡೆದಿದೆ. ಈ ಭಕ್ತಗಣದಲ್ಲಿ ಒಬ್ಬರಾದ ಪುರಂದರದಾಸರು ಇಂದು ದಕ್ಷಿಣಭಾರತದಲ್ಲೆಲ್ಲಾ ಪ್ರಚಾರದಲ್ಲಿರುವ ಸಂಗೀತಶೈಲಿಗೆ ಆದ್ಯಪ್ರವರ್ತಕರಾಗಿ ಕರ್ಣಾಟಕ ಸಂಗೀತ ಪಿತಾಮಹರೆನ್ನಿಸಿ ಕೊಂಡರು. ಇವರು ಸಂಗೀತಶೈಲಿಗೆ ಸ್ಫೂರ್ತಿಯನ್ನಿತ್ತರೂ, ಇಂದು ಸಂಗೀತದ ಪ್ರಾರಂಭ ಶಿಕ್ಷಣ ಮತ್ತು ಕಛೇರಿಗಳ ಕಡೆಯ ಭಾಗ ವಿನಾ ಮಿಕ್ಕ ವಿಭಾಗಗಳಲ್ಲಿ ಪುರಂದರ ದಾಸರ ಪ್ರಭಾವ ಅಷ್ಟಾಗಿಲ್ಲ. ಜೊತೆಗೆ ಇವರ ಮತ್ತು ಇತರ ಅನೇಕ ಭಕ್ತಿಪಂಥ ಶರಣವರ್ಗದವರ ಕೃತಿಗಳೆಲ್ಲಾ ಸಂಗೀತಮೂಲವನ್ನು ಕಳೆದುಕೊಂಡು ಕೇವಲ ಸಾಹಿತ್ಯದ ಅಸ್ಥಿಪಂಜರಗಳಾಗಿವೆ. ಇಂದು ಸಂಗೀತಕ್ಷೇತ್ರದಲ್ಲಿ ನೋಡಿದಲ್ಲಿ ವ್ಯವಹಾರದಲ್ಲಿ ಹೆಚ್ಚಾಗಿರುವುದು ತೆಲುಗು ಕೃತಿಗಳು. ಅನಂತರ ಅದರ ಕಾಲು ಭಾಗದಷ್ಟು ಸಂಸ್ಕೃತ ಮತ್ತು ತಮಿಳು. ಎಲ್ಲೋ ಶಾಸ್ತ್ರಕ್ಕೆ ಒಂದೋ ಎರಡೋ ಕನ್ನಡ ಕೃತಿಗಳು. ತೆಲುಗು ಕೃತಿಗಳಲ್ಲಿಯೂ ಬಹುತೇಕ ತ್ಯಾಗರಾಜರದು. ವ್ಯಾವಹಾರಿಕ ಅಥವಾ ಪ್ರಯೋಗಭಾಗದಲ್ಲಿಯಾಗಲಿ ಅಥವಾ ಪ್ರೋತ್ಸಾಹದಲ್ಲಿ ಯಾಗಲಿ ತಮಿಳರದು ಮುಂಗೈಯಾಗಿದೆ. ಸಂಸ್ಕೃತವೇನೋ ಸರಿ, ಹಿಂದಿನಿಂದ ಬಂದ ಸಂಪ್ರದಾಯವೆನ್ನಬಹುದು. ಆದರೆ ತೆಲುಗು ಕೃತಿಗಳು ಹೆಚ್ಚಾಗಲು ಕಾರಣವೇನು? ಸಂಗೀತಕ್ಕೆ ತೆಲುಗು ಭಾಷೆಯೇ ಚೆನ್ನಾಗಿ ಒದಗಿಬರು ತ್ತದೆಯೇ? ಅಥವಾ ಅದೇ ಸಂಗೀತ ರಾಜಭಾಷೆಯೇ? ಎಂಬ ಪ್ರಶ್ನೆಗಳು ಸ್ವಾಭಾವಿಕ.

ಕರ್ಣಾಟಕ ಸಂಗೀತದಲ್ಲಿ ಬಹುಸಂಖ್ಯೆಯ ತೆಲುಗು ಕೃತಿಗಳಿಗೆ ಕಾರಣ ವನ್ನೇನೂ ಹೆಚ್ಚಾಗಿ ಹುಡುಕಬೇಕಾಗಿಲ್ಲ. ವಿಜಯನಗರ ಪತನಾನಂತರ ದಕ್ಷಿಣ ಭಾರತದ ಬಹುಭಾಗವು ಅವ್ಯವಸ್ಥೆಯಿಂದಿದ್ದುದು ತಮಿಳುನಾಡಿನ ಮಧ್ಯೆ. ಸ್ವಲ್ಪ ಶಾಂತವಾತಾವರಣವಿದ್ದ ತಂಜಾವೂರಿನಲ್ಲಿ ಆ ಸಂಸ್ಕೃತಿಯು ಪ್ರವೇಶಿಸಿ ನೆಲಸಿತು. ಆಂಧ್ರ ಕಾವ್ಯ ಮತ್ತು ಕೃತಿರಚನೆಯು ಆ ಆಸ್ಥಾನದಲ್ಲಿ ವೃದ್ಧಿಯಾಗಿ ಎಲ್ಲೆಡೆಗೂ ಹರಡಿತು. ಕನ್ನಡಿಗ ಪಚ್ಚಾಮಿರಿಯಂ ಆದಿ ಅಪ್ಪಯ್ಯ, ತಮಿಳು ರಾಮಸ್ವಾಮಿ ದೀಕ್ಷಿತ, ಶಾಮಾಶಾಸ್ತ್ರಿ, ಪಲ್ಲವಿ ಗೋಪಾಲಯ್ಯ, ದೊರೆಸ್ವಾಮಿ ಐಯ್ಯರ್, ಮರಾಠಿ ರಾಜರಾದ ಷಹಾಜಿ, ಶರಭೋಜ ಮುಂತಾದವರೆಲ್ಲ ತೆಲುಗಿನಲ್ಲಿಯೇ ಕೃತಿರಚಿಸಿ ಹಾಡಿ ಕೇಳಿ ಆನಂದಿಸಿದ್ದಾರೆ. ಇವರಲ್ಲಿ ಜನಾಂಗ, ಭಾಷೆ, ಮುಂತಾದ ಅಂಥಾಭಿ ಮಾನಕ್ಕೆಡೆಯಿಲ್ಲದೆ ಪರಸ್ಪರ ಸೌಹಾರ್ದ, ಕಲಾನುಭವ ಮತ್ತು ಅದರ ಸೌಂದರ್ಯೋಪಾಸನೆ ಇವೇ ಪ್ರಧಾನವಾಗಿ ಕಲೆಯು ಸರ್ವತೋಮುಖವಾಗಿ ಅಭಿವೃದ್ಧಿಯಾಗಲೂ ಸುಂದರ ರೂಪದಲ್ಲಿ ಬೆಳಗಲೂ ಸಾಧ್ಯವಾಯಿತು. ಶತಮಾನ ಗಳ ಹಿಂದೆ ಕಾಶ್ಮೀರದವರೆಗೂ ಹೋದ ಕರ್ಣಾಟಕ ಕಲಾವಿದರಂತೆ ದಕ್ಷಿಣ ಭಾರತದಲ್ಲಿಯೂ ಪರಸ್ಪರ ಕಲೆ ಮತ್ತು ಕಲಾವಿನಿಮಯ ನಡೆದಿದೆ. ಕರ್ಣಾಟಕ ದಲ್ಲಿಯೇ ಈ ಭಾಗದಲ್ಲಿ ಮುಖ್ಯಪಾತ್ರವು ಮೈಸೂರು ಮತ್ತು ಅಲ್ಲಿಯ ರಾಜಾ ಸ್ಥಾನದ್ದೆಂದು ಹೇಳಬೇಕಾಗಿದೆ. ತ್ಯಾಗರಾಜರ ಗುರು ಶುಂಠಿ ವೆಂಕಟರಮಣಯ್ಯ ನವರು ವೃತ್ತಿಯನ್ನೈದಿದುದು ಮೈಸೂರಿನಲ್ಲಿ. ತ್ಯಾಗರಾಜರ ಪ್ರಶಿಷ್ಯ, ಸದಾಶಿವ

ರಾಯರು ಇಂದಿನ ಮೈಸೂರು ಸಂಗೀತಕ್ಷೇತ್ರದ ಆದ್ಯ ಪ್ರವರ್ತಕರು. ಅವರೂ ಮಹಾರಾಷ್ಟ್ರರು. ಆದರೆ ಕಾಲಧರ್ಮದಂತೆ ಅವರ ಕೃತಿಗಳು ರಚನೆಯಾದುದು ತೆಲುಗಿನಲ್ಲಿ. ಶೇಷಣ್ಣನವರ ಪೂರ್ವಿಕರು ತಂಜಾವೂರಿಗೆ ಹೋದುದು ಶ್ರೀರಂಗ ಪಟ್ಟಣದ ನವಾಬರ ಆಸ್ಥಾನದಿಂದ. ವಾಸುದೇವಾಚಾರ್ಯರು ವಿದ್ಯಾವ್ಯಾಸಂಗ ವನ್ನು ಮುಂದುವರಿಸಿದುದು ತಿರುವಯ್ಯಾರಿನಲ್ಲಿ. ಮತ್ತು, ಅವರ ಕೃತಿರಚನೆ ಯಾಗಿರುವುದು ಸಂಸ್ಕೃತ ಮತ್ತು ತೆಲುಗಿನಲ್ಲಿ. ಹೀಗೆ ಆ ಕಾಲದಲ್ಲಿ ಕಲೆ ಮತ್ತು ಕಲಾವಿದರ ಪರಸ್ಪರ ವಿನಿಮಯ ಮತ್ತು ಯಾವ ಭಿನ್ನಭಾವವೂ ಇಲ್ಲದ ವಿದ್ಯಾ ಪಕ್ಷಪಾತ ಮತ್ತು ಪ್ರೋತ್ಸಾಹ, ಇವು ಸಂಗೀತದ ಅಭಿವೃದ್ಧಿಗೆ ಕಾರಣವಾದವು. ಅಂತೆಯೇ ಈ ತೆಲುಗು ಸಂಗೀತ ಕೃತಿಗಳಲ್ಲಿಯೂ ಬಹುಭಾಗ ಅವುಗಳ ಸಾಹಿತ್ಯ ಸಂಗೀತ ಸುಂದರ ಸಮನ್ವಯ ರಾಗ ಸೌಂದರ್ಯದಿಂದ ಮತ್ತು ರಸಪುಷ್ಟಿಯಿಂದ ಆಕರ್ಷಕವಾಗಿ ಸಚೇತನವಾಗಿವೆ. ಈ ಭಾಗಗಳಲ್ಲಿ ಅವನ್ನು ಮೀರಿಸುವ ಸುಂದರ ಕೃತಿರಚನೆಯಾಗಿ ಪ್ರಚಾರಕ್ಕೆ ಬರುವವರೆಗೂ ಸಂಗೀತಕ್ಷೇತ್ರದಲ್ಲಿ ಅವುಗಳ ಪ್ರಭಾವವು ಕಡಿಮೆಯಾಗಲು ಸಾಧ್ಯವಿಲ್ಲ.

## ೮. ಕರ್ಣಾಟಕ ಸಂಗೀತದ ಭವಿಷ್ಯ

ಕರ್ಣಾಟಕವೆಲ್ಲವೂ ಒಂದಾಗಿ ಹೊಸ ಮೈಸೂರು ಪ್ರದೇಶವು ಉದಯವಾಗ ಲಿರುವ ಈ ಸಮಯದಲ್ಲಿ ಭಾವೀ ಸಂಗೀತಸ್ಥಾನ ರೂಪುರೇಖೆಗಳನ್ನು ಕುರಿತು ಆಲೋಚಿಸುವುದು ಆವಶ್ಯಕ. ಯಾವ ಉದ್ವೇಗವೂ ಇಲ್ಲದೆ ಗಾಢವಾಗಿಯೂ ಕಾರ್ಯತತ್ಪರತಾ ದೃಷ್ಟಿಯಿಂದಲೂ ಈ ವಿಷಯವನ್ನು ಪರಿಶೀಲಿಸುವುದು ಅಗತ್ಯ. ಬರೀ ಗತವೈಭವವನ್ನೇ ನೆನೆಯುತ್ತಾ ಕುಳಿತಿರದೆ ಆ ಸಂಗೀತವು ಹೇಗಿರಬೇಕು, ಅದರ ಶೈಲಿಯೇನು, ಅದು ಬರೀ ಕನ್ನಡ ಸಂಗೀತವೇ ಮುಂತಾದುವುಗಳನ್ನು ಗಾಢವಾಗಿಯೂ ಕೂಲಂಕಷವಾಗಿಯೂ ಆಲೋಚಿಸುವುದು ಅವಶ್ಯಕವಾಗಿದೆ. ಅದು ಯಾವ ರೂಪೇ ತಳೆದಿರಲಿ, ಅದರ ಶೈಲಿಯೇನೇ ಇರಲಿ, ಆ ಸಂಗೀತವು ಕರ್ಣಾಟಕದ ವೈಶಿಷ್ಟ್ಯವನ್ನು ಎತ್ತಿಸಾರುವಂತಿರಬೇಕು. ಸಂಗೀತ ಕ್ಷೇತ್ರದಲ್ಲಿ ಹಲವು ತಲೆಮಾರುಗಳ ಹಿಂದೆ ಕೈಬಿಟ್ಟು ಹೋದ ಅಗ್ರಸ್ಥಾನವು ಕರ್ಣಾಟಕಕ್ಕೇ ಪುನಃ ಉಳಿದುಬರುವಂತಾಗಿರಬೇಕು. ಇದಕ್ಕೆ ಸೂಕ್ತ ಸಾಧನೆಗಳಿವೆಯೇ ? ಕೆಲವು ವಿಷಯಗಳಲ್ಲಿವೆ. ಇನ್ನು ಕೆಲವು ಭಾಗಗಳಲ್ಲಿ ನಾವು ಹೊಸದಾಗಿ ಸೃಷ್ಟಿಸಬೇಕಾಗಿದೆ. ಅಂತೆಯೇ ಹೊಸ ಸಂಪ್ರದಾಯಗಳನ್ನು ರೂಪಿಸಬೇಕಾಗಿದೆ.

ಈಗ ಭಾವೀ ಸಂಗೀತ ವಿಷಯದಲ್ಲಿ ನಮಗೆ ಸ್ಫೂರ್ತಿ ಕೊಡಬಲ್ಲ, ಭಾರತದಲ್ಲಿ ಇನ್ನು ಯಾವ ಸಂಸ್ಥಾನದಲ್ಲಿಯೂ ದೊರೆಯಲಾಗದ, ಹೊಸ ಮೈಸೂರಿನ ಒಂದು ವೈಶಿಷ್ಟ್ಯ—ಹಿಂದೂಸ್ತಾನಿ ಮತ್ತು ಕರ್ಣಾಟಕ ಪದ್ಧತಿಗಳೆರಡೂ ಒಂದೇ ಎಡೆಯಲ್ಲಿ ಪ್ರಚಾರದಲ್ಲಿರುವುದು. ಎರಡನೆಯದು, ಪ್ರಕೃತಿದತ್ತವಾದ ಉತ್ತಮ ಶಾರೀರ ಮತ್ತು ಸಾಹಿತ್ಯ, ಸ್ಪಷ್ಟ ಉಚ್ಚಾರಣೆ ಮತ್ತು ಎಲ್ಲಕ್ಕೂ ಮಿಗಿಲಾಗಿ ಒಂದು ಸಂಪ್ರದಾಯ ಪರಂಪರೆ. ಈ ವೈಶಿಷ್ಟ್ಯಗಳನ್ನು ಸೂಕ್ತವಾಗಿ ಉಪಯೋಗಿಸಿ ವೃದ್ಧಿಪಡಿಸಿ, ಪರಸ್ಪರ ಪ್ರಭಾವ ಬೀರುವುದರ ಮೂಲಕ

ಉಭಯ ಪದ್ಧತಿಗಳಿಗೂ ಒಂದು ಹೊಸಕಳೆ ಮತ್ತು ಪುಷ್ಟಿಯನ್ನು ಕೊಡುವುದರ ಜೊತೆಗೆ, ಬಹು ಜನಾಕರ್ಷಣೀಯವಾದ ನವ್ಯಶೈಲಿಯನ್ನು ಸೃಜಿಸಬಹುದು. ನೂತನ ಶೈಲಿಯು ಉದ್ಭವವಾಗಬೇಕಾದಲ್ಲಿ ಅದಕ್ಕೆಷ್ಟೋ ಬಗೆಯ ಸಲಕರಣೆ ಮತ್ತು ಉಪಸಾಧನಗಳು ಬೇಕಾಗುವುವು. ಅವುಗಳಲ್ಲಿ ಮೊದಲನೆಯದು, ಕರ್ಣಾಟಕ ಸಂಗೀತ ವಿಷಯಕವಾದ ಪರಿಶೋಧನೆ ಮತ್ತು ಪ್ರಚಾರ. ಎರಡನೆಯದು, ಇಂದಿರುವ ದುರ್ದೆಶೆಯಿಂದ ಉದ್ಧರಿಸಿ ಸಂಗೀತಕ್ಕೆ ಜನಜೀವನದಲ್ಲಿ ಯುಕ್ತಸ್ಥಾನ. ಇತ್ತೀಚಿನವರೆಗೂ ಸಂಗೀತವು ಕರ್ಣಾಟಕ ಜನತೆಯ ಜೀವನದ ಪ್ರಧಾನಾಂಗವಾಗಿದ್ದಿತು. ಹುಟ್ಟಿನಿಂದ ಸಾವಿನವರೆಗೂ ಜೀವನದ ಎಲ್ಲಾ ಅಂಗಗಳಲ್ಲಿಯೂ ಸಂಗೀತವು ತುಂಬಿದ್ದು ಜೀವನವನ್ನು ರಸಮಯವನ್ನಾಗಿ ಮಾಡಿದ್ದಿತು. ಆದರೆ ಆಧುನಿಕ ಸಂಸ್ಕೃತಿ, ಅದರ ಫಲದ ಒಂದು ಬಗೆಯ ಸಂಕುಚಿತತೆಯ ಫಲವಾಗಿ ನಿತ್ಯಜೀವನದಲ್ಲಿದ್ದ ಸ್ಥಾನವನ್ನು ಬಿಡಬೇಕಾಗಿ ಬಂದಿತು. ಪ್ರೌಢ ಸಂಗೀತಕಲೆಯ ಬೇರುಗಳಿಗೆ ಜನತಾಜೀವನ ಮತ್ತು ಜಾನಪದ ಸಂಗೀತದಲ್ಲಿ ಉತ್ತಮ ಫಲ ದೊರೆಯಲು ಈ ಭಾಗ ಶೀಘ್ರದಲ್ಲಿ ಪುನರುದ್ಧಾರವಾಗಲೇಬೇಕು.

ಮೈಸೂರಿನ ಭಾವೀ ಸಂಗೀತವು ಕನ್ನಡ ಸಂಗೀತವೇ ಆಗಿರಬೇಕೆ? ಈ ಪ್ರಶ್ನೆಗೆ ಉತ್ತರ ಕೊಡುವ ಮೊದಲು ಈ ಭಾಗದಲ್ಲಿ ನಮಗಿರುವ ಲಕ್ಷ್ಯ ಸಂಪತ್ತನ್ನು ಪರಿಶೀಲಿಸಬೇಕು. ಇಂದು ಸಂಗೀತದಲ್ಲಿ ಕನ್ನಡರೂಪವಾಗಿ ನಮಗೆ ದೊರೆಯುವುದು ಹರಿದಾಸರ ಮತ್ತು ಶರಣವರ್ಗದವರ ಕೃತಿಗಳೇ ಅಲ್ಲದೆ ಇತರ ಎಷ್ಟೋ ರಚನಕಾರರ ಪದ, ಕೀರ್ತನೆ, ಯಕ್ಷಗಾನ, ಗೀತಾನಾಟಕ ಇತ್ಯಾದಿಗಳಿವೆ. ಆದರೆ, ಲಭ್ಯವಿರುವುದು ಅವುಗಳ ಸಾಹಿತ್ಯ ಮಾತ್ರ. ಇದರ ಮಧ್ಯೆ ಎಷ್ಟೋ ಕೃತಿಗಳು ವಿದ್ವಾಂಸರ ಅನಾದರಣೆಗೆ ಸಿಕ್ಕಿ ಜಾನಪದ ಸಂಗೀತದಲ್ಲಿ ಸೇರಿ ನಷ್ಟವಾಗಿ ಹೋದುವು. ಇದಿಷ್ಟೇ ಲಕ್ಷ್ಯ ಸಂಪತ್ತು ಕನ್ನಡ ಸಂಗೀತ ಒಂದಕ್ಕೇ ಸಾಕೇ? ಸಾಲದು. ಪ್ರೌಢ ಸಂಗೀತಕ್ಕೆ ಅವಶ್ಯಕವಾದ ಶ್ರೇಷ್ಠ ಗೇಯ ಪ್ರಬಂಧಗಳೂ, ವಾದ್ಯಪ್ರಬಂಧಗಳೂ, ಲಲಿತಗಾನಕ್ಕೆ ಅವಶ್ಯಕವಾದ ಸುಂದರ ಸಾಹಿತ್ಯ ಸಂಗೀತಮಿಳಿತವಾದ ಸರಳಕೃತಿಗಳೂ ರಚಿತವಾಗಬೇಕು. ಸಂಗೀತ ಕ್ಷೇತ್ರದಲ್ಲಿ ಭಾಷೆಯ ಬೊಬ್ಬೆಯೆಬ್ಬಿಸಿದವರಲ್ಲಿ ತಮಿಳರೇ ಮೊದಲನೆಯವರು. ಅದಕ್ಕೆ ತಕ್ಕಂತೆ ಹಳೆಯ ಕೃತಿ ಸಾಮಗ್ರಿಯನ್ನೇ ನೆಚ್ಚಿಕೊಳ್ಳದೆ ಬಹು ಸಂಖ್ಯೆಯಲ್ಲಿ ಹೊಸ ಕೃತಿಗಳನ್ನು ರಚಿಸಿ, ತಮ್ಮ ಕಾರ್ಯತತ್ಪರತೆಯನ್ನು ವ್ಯಕ್ತಪಡಿಸಿದ್ದಾರೆ. ಆದರೆ ಅಂತಹವರಿಗೂ ಈಗ ಪ್ರಚಾರದಲ್ಲಿರುವ ಸಂಸ್ಕೃತ ಮತ್ತು ತೆಲುಗು ಲಕ್ಷ್ಯ ಸಾಮಗ್ರಿಯನ್ನು ತೊಡೆದುಹಾಕಲು ಸಾಧ್ಯವಾಗಿಲ್ಲ. ಜನತೆಯಲ್ಲಿ ಕಲಾಸಕ್ತಿ ಮತ್ತು ಕಲಾಭಿರುಚಿಯು ಹೆಚ್ಚಾಗಲು ಸಂಗೀತಕಲೆಯ ಸೌಂದರ್ಯವು ಗ್ರಾಹ್ಯವಾಗಬೇಕು. ಅದರ ರಸಾಸ್ವಾದನೆ ಮತ್ತು ಆನಂದದ ಅನುಭವ ಸರ್ವವ್ಯಾಪಿಯಾಗಬೇಕು. ರಾಗ ಲಯಗಳ ರೂಪ ಸೌಂದರ್ಯಗಳು ಅದರದರ ಪ್ರಭಾವ ಮತ್ತು ಸ್ಪಂದನವನ್ನು ಉಂಟುಮಾಡಿದರೂ, ಪೂರ್ಣ ರಸಾನುಭವಕ್ಕೆ ಕಲೆಯ ಕೆಲವು ಅಂಗಗಳ ಪರಿಚಯವಾದರೂ ಆವಶ್ಯಕ.

ಆದರೆ ಕಲೆಯ ದಿವ್ಯ ಅನುಭವ, ಆನಂದ, ಅದರ ಫಲವಾಗಿ ವಿವಿಧ ಚಿತ್ತವೃತ್ತಿ ಮತ್ತು ಚಿತ್ರಗಳೆಲ್ಲಾ ಮೂಡಲು ಸಾಹಿತ್ಯವು ಸಹಕಾರಿ. ಸಾಹಿತ್ಯದ ಮೂಲಕ ಕಲೆಯ ಪೂರ್ಣ ರಸಾನುಭವ ಪಡೆಯಲು ಸಾಧ್ಯ. ಕಾವ್ಯ, ಸಂಗೀತ, ಎರಡೂ ಒಂದೇ ಧಾರೆಯಲ್ಲಿ ಹರಿದಲ್ಲಿ, ಎರಡೂ ಪುಷ್ಟಿಯಾಗಲೂ ಪ್ರವರ್ಧಿಸಲೂ ಸಹಾಯಕವೆನ್ನಬಹುದು. ಇದಲ್ಲದೆ ಹಳೆಯ ಕನ್ನಡ ಕೃತಿಗಳನ್ನು ಹಾಡುವುದರಲ್ಲಿ ಈಗ ಒಂದು ಕ್ರಮವಿಲ್ಲ. ಒಬ್ಬೊಬ್ಬ ಕಲಾವಿದರೂ ಅವರವರ ಅಭಿರುಚಿಗೆ ಅನುಗುಣವಾಗಿ ವಿವಿಧ ರಾಗತಾಳಗಳಲ್ಲಿ ಹಾಡುವರು. ಈ ಕೃತಿಗಳು ಸಜೀವ ವಾಗ್ಗಿ ಪ್ರಕಾಶಿಸಬೇಕಾದಲ್ಲಿ ಇವುಗಳಿಗೆ ಸರ್ವಮಾನ್ಯವಾದ ಸಂಗೀತ ಮತ್ತು ಕ್ರಮ ಇವು ಅವಶ್ಯಕ. ಇದಕ್ಕಾಗಿ ವಿದ್ವತ್‌ಗೋಷ್ಠಿಗಳು ಕಲೆಯಬೇಕು. ಅಲ್ಲಿ ಈ ಕೃತಿಗಳನ್ನು ಹಾಡುತ್ತಿರುವ ವಿವಿಧ ಕ್ರಮಗಳ ತುಲನೆಮಾಡಿ, ಅವಕ್ಕೆ ಉತ್ತಮ ಸಂಗೀತವು ಸರ್ವಗ್ರಾಹ್ಯವಾಗಿ ಬರೇ ವಾದ್ಯದಲ್ಲಿ ನುಡಿಸುವಾಗಲೂ ಇಂತಹುದೇ ಕೃತಿ ಎಂದು ನಿರ್ದೇಶಿಸಲು ಸಹಾಯಕವಾಗುವಂತೆ ಏರ್ಪಡಿಸುವುದವಶ್ಯಕ. ಕಷ್ಟವೇನೋ ನಿಜ. ಆದರೆ ಕಲಾಭಿವೃದ್ಧಿಯ ದೃಷ್ಟಿಯಿಂದ ನಾವು ಪಡ ಬೇಕಾದ ಯುಕ್ತ ಶ್ರಮವಿದು. ಇದು ಭಾವೀ ಸಂಗೀತಾಭಿವೃದ್ಧಿಯಲ್ಲಿ ಮೊದಲ ಹೆಜ್ಜೆ.

ಅದು ಕನ್ನಡ ಸಂಗೀತವಾಗಲಿ, ತೆಲುಗು ಸಂಗೀತವಾಗಲಿ ಅಥವಾ ಹಿಂದೂಸ್ತಾನಿ ಸಂಗೀತವಾಗಲಿ ಯಾವುದು ವೃದ್ಧಿಯಾಗಬೇಕಾದರೂ ಅದಕ್ಕೆ ಅವಶ್ಯಕವಾಗಿ ಬೇಕಾದುದು ಉತ್ತಮ ಮನೋಧರ್ಮಪೂರಿತ ಕಲಾವಿದರು, ಕೊಡುಗೈಯ ಪೋಷಕರು ಮತ್ತು ಎಲ್ಲಕ್ಕೂ ಮಿಗಿಲಾಗಿ ಒಂದು ಸುಸಂಸ್ಕೃತ ರಸಿಕವರ್ಗ. ಇಂದು ಕಲಾವಿದರಿಗೆ ನಮ್ಮಲ್ಲಿ ಕೊರತೆಯಿಲ್ಲ. ಆದರೆ ಕಲಾ ಪ್ರಗತಿಯಲ್ಲಿ ನಾವು ಇನ್ನೂ ಹೆಚ್ಚುಕಡಿಮೆ ಕಾಲು ಶತಮಾನ ಹಿಂದೆ ಇದ್ದೇವೆ ಎನ್ನಬೇಕು. ಕಲೆಯು ನವ್ಯರೂಪದಲ್ಲಿ ಉದಯಿಸಬೇಕಾದಲ್ಲಿ, ದಾಸ್ಯಮನೋ ಭಾವಕ್ಕೆ ಬಲಿಯಾಗದೆ ಹಂಸಕ್ಷೀರ ನ್ಯಾಯದಂತೆ ನಾನಾ ಪದ್ಧತಿ ಮತ್ತು ಶೈಲಿ ಗಳಿಂದ ಸ್ಫೂರ್ತಿಪಡೆದು, ತಮ್ಮದೇ ಒಂದು ಜನಪ್ರಿಯ ಶೈಲಿಯನ್ನು ಕಲ್ಪಿಸಬಲ್ಲ ಕಲಾವಿದರು ಹೆಚ್ಚು ಸಂಖ್ಯೆಯಲ್ಲಿ ಅವಶ್ಯಕ.

ನೆರೆಯ ಪ್ರಾಂತಗಳನ್ನು ನೋಡಿದಲ್ಲಿ ಕಲಾವಿದರ ಬಗ್ಗೆ ನಾವು ತಾಳಿರುವ ಮನೋಭಾವ ಅಷ್ಟು ಯುಕ್ತವಾಗಿಲ್ಲ. ಇಂದು ಅವರು ಒಂದು ಭೋಗಸಾಮುಗ್ರಿ ಯಂತಾಗಿದ್ದಾರೆ. ರಷ್ಯಾದೇಶಕ್ಕೆ ಭೇಟಿ ಕೊಟ್ಟವರೆಲ್ಲಾ ಅಲ್ಲಿ ಕಲಾವಿದರು ಗೌರವಿಸಲ್ಪಡುತ್ತಿರುವ ರೀತಿಯನ್ನೂ, ಅವರು ಬಂದಲ್ಲಿ ಮಂತ್ರಿಗಳೇ ಮೊದಲಾದ ಶ್ರೇಷ್ಠ ಅಧಿಕಾರವರ್ಗವೆಲ್ಲಾ ಎದ್ದು ನಿಲ್ಲುವುದನ್ನೂ ನೋಡಿದ್ದಾರೆ. ನಮ್ಮ ಲ್ಲಿಯೂ ಆ ರೀತಿಯ ಉದಾತ್ತ ಭಾವನೆಗಳು ಮೂಡಬೇಕು. ಕಲಾವಿದರನ್ನು ಗೌರವಿಸುವುದರಲ್ಲಿ ನಮ್ಮನ್ನೂ ನಾವು ಗೌರವಿಸಿಕೊಂಡಂತೆ. ಕಲಾಪೋಷಣೆ ಯಲ್ಲಿಯೂ ಅಷ್ಟೆ. ಇಂದು ಸಂಗೀತಕಲೆಯು ರಾಜಾಸ್ಥಾನಗಳನ್ನು ಬಿಟ್ಟು ಜನತೆಯ ಮಧ್ಯೆ ಬಂದಿದೆ. ಅದನ್ನೂ ಅದರ ಆರಾಧಕರಾದ ಕಲಾವಿದರನ್ನೂ ಪೋಷಿಸುವ ಜವಾಬ್ದಾರಿ ಜನತೆಯ ಮೇಲೆ. ಕಲೆಗೂ ಒಂದು ಬೆಲೆಯಿದೆ



ಗೋಮಟೇಶ್ವರ ಶಿಲಾಮೂರ್ತಿ, ಕಾರ್ಕಳ



ದ್ವಾರಮಂಟಪ, ಮಂಜುನಾಥ ದೇವಾಲಯ, ಧರ್ಮಸ್ಥಳ



ದೇವಾಲಯದ ಒಳಭಾಗ, ಮೂಡಬಿದರೆ

ಎಂಬುದನ್ನು ನಾವು ಅರಿಯಬೇಕು. ಇದರಲ್ಲಿಯೂ ನೆರೆನಾಡಿನಿಂದ ನಾವು ಕಲಿಯಬಹುದಾದುದೆಷ್ಟೋ ಇದೆ.

ಹಿಂದೆ ಒಂದು ಕಾಲದಲ್ಲಿ ನೆರೆನಾಡಿನ ಕಲಾವಿದರು ಮೈಸೂರಿನ ಜನತೆಯ ಮುಂದೆ ಹಾಡಿ ಮೆಚ್ಚಿಗೆ ಪಡೆದಲ್ಲಿ ಏನೋ ಮಹತ್ತರ ಸಾಧನೆ ಮಾಡಿದಂತೆ ಭಾವಿಸುತ್ತಿದ್ದರು. ಅದು ಅಂತಹ ಶ್ರೇಣಿಯ ರಸಿಕವರ್ಗ ಕಲೆಯು ಉತ್ತಮ ರೂಪದಲ್ಲಿ ಬೆಳಗಲು ಸಾಧಕವಾಗಿದ್ದಿತು. ಜನತೆಯ ಮೇಲೆ ಕಲಾಭಿವೃದ್ಧಿಯ ಜವಾಬ್ದಾರಿ ಬಿದ್ದಂತೆಲ್ಲಾ ಈ ಬಗೆಯ ಒಂದು ಸುಸಂಸ್ಕೃತ ರಸಿಕವರ್ಗವು ಅಧಿಕ ಸಂಖ್ಯೆಯಲ್ಲಿ ವೃದ್ಧಿಯಾದಲ್ಲಿ, ಕಲೆಯು ಕೀಳುದರ್ಜೆಗೆ ಇಳಿಯಲು ತಡೆಯಾಗಿ ಶ್ರೇಷ್ಠವರ್ಗದ ಕಲೆ ಮತ್ತು ಕಲಾವಿದರು ವೃದ್ಧಿಯಾಗಲು ಸಾಧಕ.

ಬರೇ ಪೋಷಕ ಮತ್ತು ರಸಿಕವರ್ಗದ ಮಧ್ಯೆಯೇ ಕಲೆಯು ಅಭಿವೃದ್ಧಿಯಾಗಲು ಸಾಧ್ಯವೇ ? ನೆರೆನಾಡಿನಲ್ಲಿ ಕಲೆ ಹೆಚ್ಚಿನ ಅಂಶದಲ್ಲಿ ವೃದ್ಧಿಯಾಗಿರಲು ಕಲಾವಿದ ಮತ್ತು ಜನತೆಯ ನಿಕಟ ಸಂಪರ್ಕವೇ ಕಾರಣ. ಇದರಲ್ಲಿ ಅಲ್ಲಿಯ ಮಠಗಳು ಆದರ್ಶಪ್ರಾಯವಾಗಿವೆ. ಕಲೆಗೂ ಜನತೆಗೂ ಸಂಪರ್ಕ ಹೆಚ್ಚಾಗಲು ನಮ್ಮಲ್ಲಿಯೂ ಆಗಾಗ್ಗೆ ಪುರಂದರದಾಸರ ಆವಾಸಸ್ಥಾನವಾಗಿದ್ದ ಹಂಪೆಯ ಪುರಂದರ ಮಂಟಪ, ಕೂಡಲಿಯ ಸಂಗಮ ಮಂಟಪದೆಡೆಗಳಲ್ಲಿ ಸಂಗೀತ ಪರಿಷೆಗಳಾಗುವುದೇ ಅಲ್ಲದೆ, ನಮ್ಮ ವಿವಿಧ ಮಠಗಳು ಅವುಗಳ ವಿಶೇಷೋತ್ಸವ ಸಂದರ್ಭಗಳಲ್ಲಿ ಸಂಗೀತಗೋಷ್ಠಿಗಳನ್ನೇರ್ಪಡಿಸಿ ಕಲೆ ಮತ್ತು ಕಲಾವಿದರಿಗೆ ಉತ್ತೇಜನ ನೀಡಬೇಕು.

ಹೇಳುತ್ತಾಹೋದಲ್ಲಿ ನಮ್ಮಲ್ಲಿ ಕಲೆಯ ಅಭಿವೃದ್ಧಿಗೆ ಎಷ್ಟೋ ಸಾಧನೆಗಳಿವೆ ಮತ್ತು ಉತ್ತೇಜನಕ್ಕೆ ಎಷ್ಟೋ ಮಾರ್ಗಗಳಿವೆ. ಒಂದೇ ಮಾತಿನಲ್ಲಿ ಹೇಳಬಹುದಾದರೆ, ಹೊಸ ಸಂಸ್ಥಾನದ ನಾನಾ ವರ್ಗದ ಕಲಾಭಿಮಾನಿಗಳೂ, ಕಲಾವಿದರೂ ಬಿಚ್ಚುಮನಸ್ಸಿನಿಂದ ಸಹಕರಿಸಿದಲ್ಲಿ ಕರ್ಣಾಟಕ ಸಂಗೀತದ ನವೋದಯವಾಗಲು ಸಾಧ್ಯವಿದೆ.

---

# ಕನ್ನಡ ನಾಡಿನ ಲಲಿತಕಲೆಗಳು

## — ಚಿತ್ರಕಲೆ —

ಲೇಖಕರು:

ಶ್ರೀಮಾನ್ ಅ. ನ. ಸುಬ್ಬರಾವ್ ಅವರು, ಕಲಾಮಂದಿರ, ಬೆಂಗಳೂರು

### ೧. ಕಲಾಸ್ವರೂಪ

ಭಾರತೀಯ ಭಾಷೆಯಲ್ಲಿ "ಕಲೆ" ಎಂಬ ಪದ ಇಂಗ್ಲೀಷಿನ 'ಆರ್ಟ್' (Art) ಎಂಬ ಪದದಂತೆ, ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥದಲ್ಲಿ ಪ್ರಯೋಗವಾಗುತ್ತಿದೆ. "ಕಲೆ" ಎಂಬ ಪದಕ್ಕೆ ನಿಷ್ಕೃಷ್ಟ ವಿವರಣೆಯಿತ್ತು ಪದದ ವ್ಯಾಪ್ತಿಯನ್ನು ನಿಶ್ಚಿತಗೊಳಿಸುವುದು ಸುಲಭಸಾಧ್ಯವಲ್ಲ. ಕೆಲವು ಪದಗಳ ಅರ್ಥ ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿರದೆ ಆಗಾಗ ಬದಲಾಗುವುದು. ವಿವರಣೆಯಲ್ಲಿ ಎಷ್ಟೇ ವ್ಯತ್ಯಾಸವಿರಲಿ, ವೈವಿಧ್ಯತೆಯಿರಲಿ, ಕಲೆಯ ಪ್ರಧಾನ ಗುರಿ 'ಆನಂದ'. ಆತ್ಮಾನಂದದಿಂದಲೇ ಕಲೆಯ ಜನ್ಮ ಎನ್ನಲು ಅಡ್ಡಿ ಇಲ್ಲ. ನಮ್ಮ ಸಂಸ್ಕೃತಿಯ ಲಾಂಛನರೂಪವಾದ ಶ್ರುತಿಸಂಹಿತೆಗಳೂ ಇದನ್ನೇ ಘೋಷಿಸುತ್ತವೆ.

ಆಶಾಬಾಧಿತ ಪ್ರಪಂಚದಲ್ಲಿ ಮಾನವನ ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮ ಆಶಿಸುವುದು ಒಂದಲ್ಲ; ಹಲವಾರು ಬಗೆ. ತನ್ನ ಜೀವನ ಸುಖಮಯ, ಶಾಂತಿಮಯ, ಆನಂದಮಯವಾಗಬೇಕೆಂದು ಅವನ ಹಂಬಲ. ಈ ಆಶಯದಿಂದಲೇ ಅವನು ಕಷ್ಟಪಟ್ಟು ಕಲಿಯುವನು, ದುಡಿಯುವನು, ಕಾಡುವನು, ಬೇಡುವನು! ಅಂತೇ ಹಲವಾರು ಬಗೆಯಲ್ಲಿ ಯತ್ನಿಸುವನು. ಆದರೂ ಅದೆಷ್ಟು ಮಂದಿಗೆ ಆಶಿಸುವ ಆನಂದ ದೊರೆಯುವುದೋ ನಾನರಿಯೆ! ಶಾರೀರಕ ಕ್ಷುಧಾತೃಪ್ತಿಯಾಗದೆ ಜೀವನಕ್ಕೆ ಶಾಂತಿ ದೊರೆಯದು. ರಸನವಾಶಿಸುವುದು ಬಗೆ ಬಗೆಯ ತಿಂಡಿ ತಿನಿಸುಗಳನ್ನು; ಘ್ರಾಣಕ್ಕೆ ಗಂಧಬೇಕು; ಕರ್ಣಕ್ಕೆ ನಾದಬೇಕು; ನಯನ ರೂಪು ನೋಡಿ, ಸ್ಪರ್ಶನ ಅಂಗವೇಷ್ಟನಗೊಂಡು ಆನಂದ ಪಡುವುದು. ಆದರೆ ಜೀವಕ್ಕೆ ಇವುಗಳಿಂದ ತೃಪ್ತಿ ದೊರೆಯದು. ಅದು ಪ್ರೇಮವನ್ನುಂಡು ರಸಾಸ್ವಾದನೆಗೈದು ತಣಿಯುತ್ತದೆ. ಮತ್ತಾವುದರಿಂದಲೂ ಅದು ತೃಪ್ತಿಪಡಲಾರದು. ಲಲಿತ ಕಲೆಗಳಲ್ಲಿ ಆತ್ಮಾನಂದವೀಯಬಲ್ಲ ಈ ರಸಸಿಂಧು ಅಪಾರವಾಗಿದೆ. ಈ ರಸಾನುಭವ ಎಲ್ಲರಿಗೂ ಬೇಕು. ಕವಿಗಳೂ, ಕಲಾವಿದರೂ ಈ ಬಗೆಯ ರಸವಾಹಕರು; ಜನತೆಗೆ ರಸವೂರಸುವ ಸವಿಯೂಟವಿಡಬಲ್ಲ ರಸಋಷಿಗಳಿವರು.

# ೨. ಅಭಿರುಚಿಯ ವೈವಿಧ್ಯತೆ

ಜಗತ್ತು ಸೌಂದರ್ಯಮಯ. ಪ್ರಕೃತಿಯಲ್ಲಿ ಕಾಣದ ಬಣ್ಣವಿಲ್ಲ. ನೋಡಲಾಗದ ಆಕೃತಿಯಿಲ್ಲ. ಸೃಷ್ಟಿಯೊಡಮೂಡಿ ಬಂದ ನಾದದ ವೈವಿಧ್ಯತೆ ಅನಂತ. ಮಾನವನ ಮನೋರಾಜ್ಯದ ಬೆಳವಣಿಗೆ ಪ್ರಕೃತಿಯಿಂದಲೇ! ಪ್ರಕೃತಿ ನಿಯಮ ಬೆಳಕು-ಕತ್ತಲೆ, ಸುಖ-ದುಃಖ, ಸುರೂಪು-ಕುರೂಪು, ಹೀಗೆ ದ್ವಂದ್ವ ಮಯ. ಆದರೂ ನಮಗೆ ಎಲ್ಲೆಲ್ಲಿಯೂ ಕಂಡುಬರುವುದು ಸೃಷ್ಟಿಯ ಸೌಂದರ್ಯ ರಾಶಿ. ಮಾನವನಿಗೆ ಸೌಂದರ್ಯಾಭಿರುಚಿ ನಿಸರ್ಗದತ್ತ ಗುಣ. ಆದುದರಿಂದಲೇ ಅವನು ಸುಂದರ ದೃಶ್ಯಗಳನ್ನು ನೋಡಲು, ಸುಶ್ರಾವ್ಯ ನಾದವನ್ನಾಲಿಸಲು ಆಶಿಸುವನು. ಈ ತತ್ವವರಿತೇ ಶಿಕ್ಷಣವೇತ್ತರು ಮಕ್ಕಳಿಗೆ ಮೊದಲಿನಿಂದ ಪ್ರಕೃತಿ ಸಂಸರ್ಗವನ್ನುಂಟುಮಾಡಿ, ಉತ್ತಮ ವಾತಾವರಣದಲ್ಲಿ ಅವರ ಮನ ವಿಕಾಸ ವಾಗಲು ಅವಕಾಶ ಕಲ್ಪಿಸಬೇಕು ಎಂದು ಅಭಿಪ್ರಾಯಪಡುವರು. ಮಕ್ಕಳ ಅಭಿರುಚಿ ಉತ್ತಮಗೊಳ್ಳಲೆಂಬುದೇ ಅವರ ಮುಖ್ಯ ಆಶಯ.

ಒಂದೇ ಸನ್ನಿವೇಶದಲ್ಲಿ, ಒಂದೇ ಬಗೆಯ ವಿಷಯಸಂಗ್ರಹಣೆಗೈದರೂ, ಎಲ್ಲರ ಅಭಿರುಚಿಯೂ ಒಂದೇ ಬಗೆಯಲ್ಲಿರುವುದು ಅಸಂಭವ. ಅವರವರ ಮನೋಧರ್ಮ ಕ್ಕನುಗುಣವಾಗಿ ಈ ಅಭಿರುಚಿ ಒಬ್ಬೊಬ್ಬರಲ್ಲಿ ಒಂದೊಂದು ಬಗೆಯಲ್ಲಿ ವಿಶೇಷ ರೀತಿ ವ್ಯಕ್ತವಾಗುವುದು. ಕೆಲವರಿಗೆ ಸುಂದರ ದೃಶ್ಯಗಳ ಸಂದರ್ಶನದಲ್ಲಿ ಆಸಕ್ತಿ; ಮತ್ತೆ ಕೆಲವರಿಗೆ ಮನವೊಲಿದ ದೃಶ್ಯಗಳನ್ನು ಕೃತಿರೂಪಕ್ಕೆ ತರುವ ಹಂಬಲ; ಓರ್ವ ಕವಿತಾರಚನೆಯಲ್ಲಿ ಮನಮಾಡಿದರೆ, ಮತ್ತೋರ್ವ ಚಿತ್ರ ರಚನೆಯಲ್ಲಿ ಅಥವಾ ಮೂರ್ತಿ ನಿರ್ಮಾಣದಲ್ಲಿ ಅಪಾರ ಆಸಕ್ತಿ ತೋರುವನು. ಕವಿಯು, ಕಾವ್ಯ ರಚನೆಯಲ್ಲಿ ತೊಡಗಿದರೆ, ಗಾಯಕನು ಭಾವಪೂರಿತ ಗಾನದಲ್ಲಿ ಮಗ್ನನಾಗುವನು. ಅಂತೆ ರೂವಾರಿ ಶಿಲಾಶಿಲ್ಪದಲ್ಲಿ, ಸ್ತಪತಿ ಎರಕ ಹೊಯ್ಯುವುದರಲ್ಲಿ, ನೇಕಾರ ನೇಯಿಗೆಯಲ್ಲಿ ತನ್ನ ಪ್ರತಿಭೆಯನ್ನು ಪ್ರದರ್ಶಿಸುವನು. ಈ ಬಗೆಯ ಕೃತಿಗಳಲ್ಲಿ ಕರ್ತೃವಿನ ಅನುಭವ, ಅಭ್ಯಾಸ, ಚತುರತೆ, ಕಾರ್ಯಕ್ಕೊದಗಿದ ಸಲಕರಣೆ ಮತ್ತು ಕೃತಿಕಾರನು ತೋರುವ ಶ್ರದ್ಧಾಭಕ್ತಿ—ಇವುಗಳೆಲ್ಲ ಸಂಕೀರ್ಣಗೊಂಡಿರುವುವು. ಕೃತಿಯ ಅಂತಸ್ತು, ಇವುಗಳ ಪರಿಶ್ರಮ ಮತ್ತು ಪ್ರೌಢಿಮೆಗನುಗುಣವಾಗಿರುವುದು. ಪೂರ್ವಸಂಸ್ಕಾರ ಪಡೆದ ಪ್ರತಿಭಾಸಂಪನ್ನರ ವಿಷಯ ಬೇರೆ! ಅವರು ಕಂಡು, ಕೇಳಿ, ಅರಿತ ಅಂಶಗಳು ಕೇವಲ ಸಾಧನಗಳು. ಅಂತಹ ಪ್ರತಿಭಾವಂತರು ಸಹಜತೆಯ ಎಲ್ಲೆಮೀರಿ, ಕಲ್ಪನಾಸಾಮರ್ಥ್ಯದಿಂದ ರೂಪುಗೊಂಡ ಭಾವನಾ ಪ್ರಪಂಚದಲ್ಲಿ ಓಲಾಡುವರು. ಆನಂದದಲ್ಲಿ ಭಾಸವಾದ ಭವ್ಯ ರೂಪನ್ನು ತಮ್ಮ ಕೃತಿಯಲ್ಲಿ ರೂಪಿಸುವರು. ಅದು ನಿಜಕ್ಕೂ ಅಮರ ಕೃತಿಯಾಗಿ ಪರಿಣಮಿ ಸುವುದು. ಎಲ್ಲರಿಂದ ಈ ಬಗೆಯ ಅಸದೃಶ ಕೃತಿ ನಿರ್ಮಾಣ ಸಾಧ್ಯವಾಗದಿರ ಬಹುದು. ಆದರೆ ಅವರವರ ಅನುಭವಕ್ಕೆ ತಕ್ಕಂತೆ, ಬುದ್ಧಿಸಾಮರ್ಥ್ಯಕ್ಕೆ ತಕ್ಕಂತೆ, ಅಭಿರುಚಿಗನುಗುಣವಾಗಿ, ತಮಗೆ ತೋರಿದ ಭಾವನೆಗೆ ಕೃತಿಯ ರೂಪು ಕೊಡು ತ್ತಾರೆ. ಅಮರಕೃತಿಯೊಂದಿಗೆ ಅದನ್ನು ಹೋಲಿಸಿ ಅಲ್ಲಗಳೆಯುವುದು ತುಂಬ

ತಪ್ಪಾದೀತು. ಅಭಿಮಾನದಿಂದ ನೋಡುವುದಾದರೆ ಕೃತಿಯಲ್ಲಿನ ವೈಶಿಷ್ಟ್ಯವೂ ಸೊಗಸೂ ತೋರಿಬರುವುದು. ಹೀಗೆಯೇ ಜನಸಾಮಾನ್ಯರಲ್ಲಿ ಕೃತಿ ನಿರ್ಮಾಣ ಶಕ್ತಿಯೂ, ಉತ್ತಮ ಕೃತಿಯನ್ನು ನೋಡಿ ಮೆಚ್ಚುವ ಕಲಾಭಿರುಚಿಯೂ ಬೆಳೆಯಬೇಕು. ಕಲಾವಿದರ ಸಂಖ್ಯೆ ಬೆಳೆದಂತೆ, ಕಲಾಭಿಮಾನಿಗಳ ಬಳಗವೂ ಅತಿ ಅತ್ಯಗತ್ಯ.

## ೩. ಭಾರತೀಯ ಕಲೆ—ಧಾರ್ಮಿಕ (ಸಾತ್ವಿಕ) ಸ್ವರೂಪ

ಭಾರತ ಪುಣ್ಯಭೂಮಿ. ಆದಿಕಾಲದಿಂದ ಇಲ್ಲಿನ ಜನ ಅಪಾರ ಧರ್ಮ ಶ್ರದ್ಧೆಯುಳ್ಳವರಾಗಿ ಬಾಳಿಬದುಕಿದವರು. ನಾನಾ ಮತ ಮತ್ತು ಧಾರ್ಮಿಕ ಪದ್ಧತಿಗಳಿಗೆ ಭಾರತ ಉಗಮಸ್ಥಾನವಾದುದರಿಂದ ಜನತೆಯಲ್ಲಿ ಹಿಂದಿನಿಂದ ಧಾರ್ಮಿಕ ಭಾವನೆಗಳು ಬೇರೂರಿ ಬಂದಿವೆ. ರಾಜ್ಯಗಳನ್ನು ಕಟ್ಟಿ ಚಕ್ರಾಧಿಪತ್ಯ ಗಳನ್ನು ಆಳಿದ ರಾಜಮಹಾರಾಜರುಗಳೂ, ಧರ್ಮಪ್ರಚಾರವೇ ತಮ್ಮ ಗುರಿ ಯೆಂದು ಸಾರಿಹೇಳಿ ಅದರಂತೆ ವರ್ತಿಸಿರುವರು. ಕಲೆಯು ರಸರೂಪಿ. ಜನತೆಗೆ ಆನಂದ ನೀಡಬಲ್ಲ ಉತ್ತಮ ಸಾಧನ. ಆದುದರಿಂದ ಪುಣ್ಯವೂ, ಪವಿತ್ರವೂ ಆದ ಕಾರ್ಯಗಳಿಗೆ ಕಲೆಯನ್ನು ಉಪಯೋಗಿಸುವುದು ಪೂರ್ವದಿಂದ ಬಂದ ಸತ್ಸಂಪ್ರ ದಾಯ. ಪ್ರಾಚೀನ ಕಲಾವಿದರು ಕಲೆಯೇ ದೇವತಾಸ್ವರೂಪವೆಂದೂ, ಕಲೆಯ ಮೂಲಕ ತಮ್ಮ ಜನ್ಮ ಸಾರ್ಥಕ ಮಾಡಿಕೊಂಡು ಮೋಕ್ಷ ಸಾಧಿಸಬಹುದೆಂದೂ ದೃಢವಾಗಿ ನಂಬಿದ್ದರು. ಹೀಗೆ ಭಾರತದಲ್ಲಿ ಕಲೆಯು ಧಾರ್ಮಿಕ ಹಿನ್ನೆಲೆ ಯಲ್ಲಿಯೇ ಬಹುಮಟ್ಟಿಗೆ ಬೆಳೆಯುತ್ತ ಬಂದಿತು. ಸತ್ವರಜಸ್ತಮೋಗುಣಗಳಿಂದ ಆವೃತ ಪ್ರಪಂಚದಲ್ಲಿ ಎಲ್ಲರಲ್ಲಿ ಸಾತ್ವಿಕ ಅಭಿರುಚಿಯೊಂದೇ ಪ್ರಚೋದಿತವಾಗುವು ದೆಂದು ಭಾವಿಸಲಾಗದು. ಕೆಲವರ ಅಭಿರುಚಿ ರಜೋಗುಣಪ್ರಧಾನವಾಗಿ, ಮತ್ತೆ ಕೆಲವರ ಅಭಿರುಚಿ ತಮೋಗುಣಪ್ರಧಾನವಾಗಿ ಇರುವುದು. ಅಂತೇ ಕೃತಿನಿರ್ಮಾಣ ದಲ್ಲೂ, ಕಾರ್ಯದ ಮೆಚ್ಚಿಗೆಯಲ್ಲೂ ವೈವಿಧ್ಯತೆ! ಭಾರತೀಯ ಕಲೆಯ ಮತ್ತೊಂದು ಮಹತ್ವವೆಂದರೆ ಕಲೆಯನ್ನು ಸಾರ್ವಜನಿಕರ ಸ್ವತ್ತನ್ನಾಗಿ ಮಾಡಿ ಜನತೆಯ ಉಡಿಗೆ ತೊಡಿಗೆಗಳಲ್ಲಿ, ಆಚಾರ ವ್ಯವಹಾರಗಳಲ್ಲಿ, ಮನೆಬಳಕೆಯ ವಸ್ತುಗಳಲ್ಲಿ, ಕಲೆಯನ್ನು ಸಮ್ಮಿಶ್ರಣಗೊಳಿಸಿ ಜನಪ್ರಿಯವಾಗುವಂತೆ ಮಾಡಿದುದು.

ಭಾರತೀಯರು ಕಲೆಯ ಮಹತ್ವವನ್ನು ಪ್ರಾಚೀನ ಕಾಲದಲ್ಲಿಯೇ ಅರಿತು ಅನೇಕ ಅದ್ಭುತ ಕೃತಿ ನಿರ್ಮಾಪಕರಾಗಿದ್ದರೆಂಬುದಕ್ಕೆ ಅನೇಕ ನಿದರ್ಶನಗಳಿವೆ. ಪ್ರಾಚ್ಯ ಸಂಶೋಧನೆ ಫಲವಾಗಿ ಮಹಂಜೊದಾರೋವಿನಲ್ಲಿ ದೊರೆತ ಬಣ್ಣ ಹಾಕಿದ ವಿಗ್ರಹಗಳಿಂದ ನಾಲ್ಕು ಸಾವಿರದ ಐನೂರು ವರ್ಷಗಳ ಹಿಂದೆಯೇ ವಿವಿಧ ಬಣ್ಣಗಳನ್ನು ಉಪಯೋಗಿಸಿ ವಸ್ತುಗಳನ್ನು ಅಲಂಕರಿಸುವುದು ರೂಢಿ ಯಲ್ಲಿತ್ತೆಂದು ಸಿದ್ಧವಾಗಿದೆ. ಅಜಂತದ ಗುಹೆಗಳಲ್ಲಿರುವ ಭಿತ್ತಿ ಚಿತ್ರಗಳೂ, ಮೂರ್ತಿಗಳೂ ಬುದ್ಧ ಭಿಕ್ಷುಗಳಿಂದ ಕ್ರಿಸ್ತಪೂರ್ವದಲ್ಲಿಯೇ ಬರೆಯಲ್ಪಟ್ಟುವೆಂದು ದೃಢಪಟ್ಟಿವೆ. ಇದರಂತೆ ಪುದುಕೋಟೆಯ ಬಳಿಯಲ್ಲಿರುವ ಸಿತಾನ್ನಿವಾಸದಲ್ಲಿಯೂ

ಪುರಾತನ ಭಿತ್ತಿ ಚಿತ್ರಗಳೂ ದೊರೆತಿವೆ. ಕೆಲವು ಪ್ರಾಚೀನ ದೇವಾಲಯಗಳಲ್ಲಿ ಕ್ರಿ.ಶ. ಏಳು-ಎಂಟನೆಯ ಶತಮಾನಗಳಲ್ಲಿ ಬರೆದ ಅನೇಕ ಪೌರಾಣಿಕ ಮತ್ತು ಐತಿಹಾಸಿಕ ಚಿತ್ರಗಳು ಅಂದಿನ ಕಲಾವಿದರ ಪ್ರತಿಭೆಯ ಪ್ರದರ್ಶನದಂತಿವೆ.

## ೪. ಕಲಾವಿದರ ಭವ್ಯಕಲ್ಪನೆ

ಭಾರತೀಯ ಕಲಾವಿದನ ಊಹೆಗೆ ಪರಿಮಿತಿ ಇಲ್ಲ. ಆ ಕಲ್ಪನೆ ಹಿಮವತ್ಪರ್ವತವನ್ನು ಪರಶಿವನ ಆವಾಸಸ್ಥಾನವನ್ನಾಗಿ ಮಾಡಿದೆ. ಜಗದ್ರಕ್ಷಕ ಮಹಾವಿಷ್ಣುವನ್ನು ಕ್ಷೀರಸಮುದ್ರದಲ್ಲಿ, ಆದಿಶೇಷನ ಸುಪ್ಪತ್ತಿಗೆಯಮೇಲೆ ಪವಡಿಸುವಂತೆ ಮಾಡುವ ಭವ್ಯ ಭಾವನೆಗಳಿಗೆ ನಮ್ಮ ಕಲೆಯ ಇತಿಹಾಸದಲ್ಲಿ ಮಿತಿ ಇಲ್ಲ. ವಿಶ್ವಕಲ್ಯಾಣಕ್ಕಾಗಿ ಸಕಲ ಸುಖಗಳನ್ನೂ ತೊರೆದು ತಪಗೈದು ಜ್ಞಾನಾರ್ಜನೆಗೈದ ಗೌತಮಬುದ್ಧನನ್ನು ಸರಿಯಾಗಿ ರೂಪಿಸಬಲ್ಲವರು ಭಾರತೀಯ ಕಲಾವಿದರು ಮಾತ್ರ. ಮಹೋನ್ನತ ಧ್ಯೇಯಗಳ ಗುರಿಯಿಟ್ಟು ಭಾವನಾ ಪರವಶನಾಗಿ ಕೃತಿನಿರ್ಮಾಣಮಾಡುವ ಕಲಾವಿದನ ಶೈಲಿಯೇ ಪ್ರತ್ಯೇಕ. ತಾನು ರೂಪಿಸುವ ಚಿತ್ರದಲ್ಲಿ ಅಂಗಾಂಗಗಳ ರೂಪುರಚನೆಯ ಕಡೆ ಹೆಚ್ಚು ಲಕ್ಷ್ಯವಿಡದೆ ಅಂತರ್ಯಭಾವ ಪ್ರಚೋದನೆಯತ್ತ ಹೆಚ್ಚು ಗಮನವೀಯುವ ಕಲಾವಿದನ ಶೈಲಿಯೇ ಪ್ರತ್ಯೇಕ. ನೈಸರ್ಗಿಕ ನಿಯಮದಲ್ಲಿ ಇಂದ್ರಿಯ ತೃಪ್ತಿಗಾಗಿ ಯತ್ನಿಸುವ ಭೋಗಿಯ ದೇಹದ ಅಂಗಾಂಗಗಳಂತೆ ಯೋಗಿಯ ದೇಹ ದಷ್ಟಪುಷ್ಟವಾಗಿ ಬೆಳೆಯುವುದಿಲ್ಲ. ಆದುದರಿಂದಲೇ ಭಗವಾನ್ ಬುದ್ಧದೇವನ ಮೂರ್ತಿಯಲ್ಲಾಗಲಿ, ಜಿನದೇವನ ಮೂರ್ತಿಯಲ್ಲಾಗಲಿ ನಾವು ಕಾಣುವ ಅಂಗಾಂಗಗಳ ರೀತಿಯೆ ಬೇರೆ. ಮೈಕಲ್ ಆಂಜಲೊ ನಿರ್ಮಿತ ಕೃತಿಗಳಲ್ಲಿ ಕಂಡುಬರುವ ಬಗೆಬಗೆಯ ಮಾಂಸ ಖಂಡಗಳಿಂದ ಮೆರೆಯುವ ಶಾರೀರಕ ಸೊಬಗನ್ನು, ಬುದ್ಧದೇವನ ಅಂಗರಚನೆ ಯಲ್ಲಿ ಕಾಣಲಾರಿರಿ. ಬುದ್ಧದೇವನ ಕೃತಿಯಲ್ಲಿ ನಾವು ಕಾಣುವುದು ಪ್ರಕೃತಿ ಯೊಡನೆ ಸಾಮರಸ್ಯಪಡೆದ ಸರಳ ಸುಂದರ ದೇಹವನ್ನು ಮಾತ್ರ.

ಹೀಗೆಂದ ಮಾತ್ರಕ್ಕೆ ಭಾರತೀಯ ಕಲಾವಿದ ಧಾರ್ಮಿಕ ಭಾವನೆಗಳಲ್ಲಿಯೇ ಮಗ್ನನಾಗಿ ತನ್ನ ಸುತ್ತುಮುತ್ತಿನ ರಸಾವಿಷ್ಟ ಸೊಬಗು ಸೌಂದರ್ಯವನ್ನು, ಆಕರ್ಷಕ ಸನ್ನಿವೇಶಗಳನ್ನು, ಜನಸಾಮಾನ್ಯರ ರಸಿಕ ಜೀವನವನ್ನು, ವನ್ಯ ಮೃಗಗಳ ಭೀಕರ ಸ್ವರೂಪವನ್ನು, ಸಾಕುಪ್ರಾಣಿಗಳಾದ ಮೃಗಪಕ್ಷಿಗಳ ಆಕರ್ಷಕ ಸರಳಜೀವನವನ್ನು ಕಡೆಗಣಿಸಿದ್ದನೆಂದಾಗಲಿ, ಕೈಬಿಟ್ಟಿದ್ದನೆಂದಾಗಲಿ ಭಾವಿಸಲು ಕಾರಣವಿಲ್ಲ. ಚಿತ್ರಸೃಷ್ಟಿಯಲ್ಲಿ ತಮ್ಮ ಪ್ರಧಾನಗುರಿ ಮರೆಯದೆ, ಸನ್ನಿವೇಶಕ್ಕೆ ಹೊಂದಿಕೊಂಡಿರುವ ಪ್ರತಿಯೊಂದಂಶಕ್ಕೂ, ಅವುಗಳ ಪ್ರಾಮುಖ್ಯತೆಗನುಗುಣ ವಾದ ಸ್ಥಾನವನ್ನಿತ್ತಿರುವರು. ಪ್ರಾಚೀನ ಕಾಲದ ಭಾರತೀಯ ಕಲಾವಿದರು ಕಲೆಯೇ ತಮ್ಮ ಜೀವನ ಸರ್ವಸ್ವವೆಂಬ ದೃಢ ನಂಬಿಕೆಯಿಂದ ವಂಶಪಾರಂಪರ್ಯ ವಾಗಿ ಕಲೆಯನ್ನವಲಂಬಿಸಿ ಕಲೆಯಲ್ಲಿ ವಿಪುಲ ಪ್ರಗತಿ ಸಾಧಿಸಿದರು.

ಕವಿಗಳೂ, ಸಾಹಿತಿಗಳೂ, ತಮ್ಮ ಕೃತಿಗಳಲ್ಲಿ ಕಲೆಗೆ ವಿಶೇಷ ಗಮನವಿತ್ತು ಕಲಾಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಪುಲವಾಗಿ ವಿವರಿಸಿರುವರು.

ಅನೇಕ ಶಿಲ್ಪಗ್ರಂಥಗಳೂ ಅಲಂಕಾರ ಗ್ರಂಥಗಳೂ ರಚಿತವಾದುವು. ಚಿತ್ರಲೇಖನ ಮತ್ತು ವರ್ಣಿಕಾಭಂಗ ವಿಚಾರವಾದ ಪ್ರತ್ಯೇಕ ಗ್ರಂಥ ದೊರೆಯದಿದ್ದರೂ ಇದಕ್ಕೆ ಸಂಬಂಧಿಸಿದ ವಿಷಯಗಳು ಪುರಾಣೇತಿಹಾಸಗಳಲ್ಲಿ ತತ್ವಗ್ರಂಥಗಳಲ್ಲಿ ಕಂಡು ಬರುವುವು. ನಿದರ್ಶನಕ್ಕಾಗಿ ಬರೆದ ಶ್ಲೋಕವೊಂದನ್ನು ಕೊಡಲಾಗಿದೆ:—

*ಚಿತ್ರ ಷಡಂಗ

ರೂಪಭೇದಾಃ ಪ್ರಮಾಣಾನಿ ಭಾವ ಲಾವಣ್ಯ ಯೋಜನಮ್
ಸಾದೃಶಂ ವರ್ಣಿಕಾಭಂಗಂ ಇತಿಚಿತ್ರ ಷಡಂಗಕಮ್ ॥

ಚಿತ್ರ ಷಡಂಗ ಅಂದರೆ ಚಿತ್ರದಲ್ಲಿರಬೇಕಾದ ಆರು ಲಕ್ಷಣಗಳು. ಈ ಲಕ್ಷಣಗಳಲ್ಲಿ ರೂಪಭೇದಕ್ಕೆ ಮೊದಲನೆ ಸ್ಥಾನವೀಯಲಾಗಿದೆ. ಕಣ್ಣಿಂದ ಕಾಣುವ ದೃಶ್ಯಗಳು ನಾನಾ ಬಗೆಯ ನಾನಾ ರೀತಿಯವು. ಮನಸ್ಸಿಗೆ ಹೊಳೆಯುವ ರೂಪಗಳಂತೂ ಅನಂತವಾಗಿವೆ. ಇಲ್ಲಿ ರೂಪ ಎಂಬ ಪದಕ್ಕೆ ಬದಲಾಗಿ "ರೂಪಭೇದ" ಎಂಬ ಪದ ಪ್ರಯೋಗ ಮಾಡಲಾಗಿದೆ. ಆದುದರಿಂದ ರೂಪಿನ ವೈವಿಧ್ಯತೆಯನ್ನು, ಅವುಗಳ ಸೂಕ್ಷ್ಮ ಭೇದ ಪ್ರಭೇದಗಳನ್ನೂ ಅರಿಯುವುದು ಪ್ರಥಮ ಹಂತ. ಒಂದು ಸ್ತ್ರೀ ವ್ಯಕ್ತಿ, ತಾಯಿಯಾಗಿರಬಹುದು, ಪತ್ನಿಯಾಗಿರಬಹುದು, ಪುತ್ರಿಯಾಗಿರಬಹುದು, ಇಲ್ಲವೇ ಸೇವಕಿಯಾಗಿರಬಹುದು. ಇವುಗಳ ಪೂರ್ಣ ಪರಿಜ್ಞಾನ ಕಲಾವಿದನಿಗಿದ್ದು, ಅಂತಹ ಭಾವನೆ ತನ್ನ ಕೃತಿಯಲ್ಲಿ ಮೂಡಿಬರುವಂತೆ ಮಾಡುವುದು ಕಲಾವಿದನ ಪ್ರಥಮ ಕಾರ್ಯ.

ಎರಡನೆಯ ಲಕ್ಷಣವೆಂದರೆ ಪ್ರಮಾಣ. ದೃಶ್ಯಪ್ರಪಂಚದ ಅನುಭವದಿಂದ ಹೇಳುವುದಾದರೆ ವಸ್ತುವಿನ ಅಂಗಾಂಗಗಳಿಗೆ ಒಂದು ಪ್ರಮಾಣವಿದೆ. ಒಬ್ಬ ಮನುಷ್ಯನ ಶಿರಸ್ಸು ಅವನ ಎತ್ತರದ ಏಳರ ಒಂದಂಶವಾಗಿರಬಹುದು. ಮನುಷ್ಯಾಕೃತಿಯ ದೇವನನ್ನು ಅಥವಾ ಧೀರೋದಾತ್ತ ಪುರುಷನನ್ನು ಚಿತ್ರಿಸುವಾಗ ಶಿರಸ್ಸು ಎಂಟರಲ್ಲಿ ಒಂದಂಶವಿರಬಹುದು. ಮಗುವಿನಲ್ಲಿ ಈ ಪ್ರಮಾಣ ಐದರಲ್ಲಿ ಒಂದಾಗಿರಬಹುದು. ತೆಂಗಿನಮರ ಮಾನವನ ಹತ್ತರಷ್ಟು ಎತ್ತರವಿರಬಹುದು. ಕಲಾವಿದನಿಗೆ ಈ ಬಗೆಯ "ಪ್ರಮಾ" ಅಂದರೆ ಪರಸ್ಪರ ಪ್ರಮಾಣದ ಅರಿವೆ ಅಗತ್ಯ. ಈ ಪ್ರಮಾಣ ಅಡಿ ಅಂಗುಲದ ಕಡ್ಡಿಯಿಂದ ಅಳೆದು ನಿಶ್ಚಯಿಸುವುದೆಂದು ಮಾತ್ರ ತಿಳಿಯಬಾರದು, ಅಥವಾ ಕೇವಲ ದೃಶ್ಯ ಪ್ರಪಂಚದಲ್ಲಿ ದೃಗ್ಗೋಚರವಾಗುವ ಸ್ಥೂಲ ವಸ್ತುಗಳಿಗೆ ಸಂಬಂಧಿಸಿದುದೆಂದು ತಿಳಿಯುವುದೂ ತಪ್ಪಾಗುವುದು. ಸಹಜವಾಗಿರುವ ಈ 'ಪ್ರಮಾ' ಚೈತನ್ಯದಿಂದ ರೂಪು, ವರ್ಣ, ಗಾತ್ರ, ಧ್ವನಿ, ಸ್ಪರ್ಶ, ಇವುಗಳಿಗೆ ಸಂಬಂಧಿಸಿದ ಪರಸ್ಪರ ಪ್ರಮಾಣವನ್ನು ನಿರ್ಧರಿಸುವ ಶಕ್ತಿ ಬೆಳೆಯಬೇಕು. ಸಮುದ್ರದ ದಂಡೆಯ ಚಿತ್ರ ನಿರ್ಮಿಸುವ ಕಲಾವಿದನಿಗೆ ತನ್ನೆದುರಿರುವ ಹಸಿರು ವೃಕ್ಷಗಳು, ಜಲಧಿಯ ತಡಿಯಲ್ಲಿರುವ ಮರಳು, ಪಾರಾವಾರವಿಲ್ಲದ ಅಪಾರ ಜಲರಾಶಿ, ಆಗಾಗ ಅಗಾಧವಾಗಿ ಏಳುವ,

---

*ಕಲಾಪತ್ರಿಕೆಯಿಂದ ಆರಿಸಿದುದು.

ಬೀಳುವ ತರಂಗ ಸಂದೋಹ, ಅನಂತ ವಾರಿಧಿಯಾಚೆನಂತೆ ತೋರುವ ದಿಗಂತ, ಅದರೊಡನೆ ಬೆರೆತ ನೀಲಿಮಾಕಾಶ, ಆ ಆಕಾಶದಲ್ಲಿ ಚಲಿಸುವ ಮೇಘರಾಶಿ, ಅವುಗಳಲ್ಲಿ ರಂಜಿಸುವ ವರ್ಣವೈಖರಿ, ಪ್ರಶಾಂತ ವಾತಾವರಣ—ಇವುಗಳ ಪರಸ್ಪರ ಪ್ರಮಾಣವನ್ನು, ವರ್ಣವೈವಿಧ್ಯತೆಯನ್ನು, ವಿವಿಧವರ್ಣಗಳ ಸಾಂದ್ರತೆಯ ತಾರತಮ್ಯವನ್ನು ಅರಿತು ಕೃತಿ ರೂಪಕ್ಕೆ ತರಲು—ಒಂದು ಪರಿಮಿತಿಯಲ್ಲಿ ಆ ಭವ್ಯ ದೃಶ್ಯವನ್ನು ಪ್ರತಿಬಿಂಬಿಸಲು—ಈ ಪ್ರಮಾಣ ಚೈತನ್ಯ ಅಪಾರವಾಗಿ ಬೆಳೆಯಬೇಕು. ನಮ್ಮ ಕಣ್ಣಿಗೆ ಕಾಣುವ, ನಾವು ಮನದಲ್ಲಿ ಭಾವಿಸುವ ವಸ್ತುಗಳ ಅಭ್ಯಾಸಮಾಡಿ, ತದೇಕ ಚಿತ್ತರಾಗಿ ಕೃತಿ ನಿರ್ಮಾಣ ಮಾಡುತ್ತಾ ಬಂದಲ್ಲಿ ಈ ಅಳಿದುಕೊಳ್ಳುವ "ಪ್ರಮಾ" ಚೈತನ್ಯ ಹದವಾಗಿ, ಹರಿತವಾಗಿ, ನಮಗೆ ಸರ್ವಕಾಲದಲ್ಲಿ ಸಖನಂತೆ, ಗುರುವಂತೆ, ನೆರವಾಗುವುದು.

ಮೂರನೆ ಲಕ್ಷಣ: ಭಾವ. ಮಾನವನ ಮನಸ್ಸು ಸಾಮಾನ್ಯವಾಗಿ, ಗಾಳಿಯಿಲ್ಲದಾಗ ಶಾಂತವಾಗಿರುವ ಜಲರಾಶಿಯಂತೆ ಶಾಂತವಾದುದು. ಇಂತಹ ಶಾಂತತೆಯಲ್ಲಿ ಉದ್ವೇಗವನ್ನುಂಟುಮಾಡುವುದು ಭಾವನಾ ತರಂಗಗಳು. ಇದರ ಫಲವಾಗಿ ಉತ್ಪನ್ನವಾಗುವ ಚಲನವಲನಗಳು ಮನದ ಶಾಂತತೆಯನ್ನು ಸ್ಥಿರತೆಯನ್ನು ಳಿಸಿ, ಭಂಗಿಯ ರೂಪದಲ್ಲಿ ವ್ಯಕ್ತವಾಗುವುದು.

ವಸಂತವಲ್ಲರಿಯಲ್ಲಿ ಪುಷ್ಪಭರಿತ ವೃಕ್ಷಗಳ ಮೇಲೆ ಹಾಯ್ದುಬರುವ ಸುಳಿಗಾಳಿ ಸೇವಿಸಿದಾಗ ಆಗುವ ಆನಂದ, ಆಪ್ತೇಷ್ಟರ ಅಗಲುವಿಕೆಯಿಂದಾಗುವ ದುಃಖ, ಅನ್ಯಾಯವಾಗಿ ಪರಪೀಡನದಲ್ಲಿ ನಿರತನಾದವನನ್ನು ಕಂಡಾಗ ಉಂಟಾಗುವ ಕ್ರೋಧ—ಇವು ಮಾನವನಲ್ಲಿ ಸಹಜ ಮನೋಧರ್ಮಗಳು. ಕಲಾವಿದನು ಜೀವಂತ ವಸ್ತುಗಳ ಗುರಿಯಿಟ್ಟು ಕೃತಿ ನಿರ್ಮಿಸುವಾಗ, ಈ ಬಗೆಯ ಭಾವನೆಗಳಿಗೆ ಹೆಚ್ಚು ಪ್ರಾಧಾನ್ಯತೆ ಇದ್ದೇ ಇರುವುದು. ಭಾವನೆಗಳಿಲ್ಲದ ಕೃತಿ ಜೀವಶವದಂತೆ. ಆದುದರಿಂದ ಚಿತ್ರರಚನೆಯಲ್ಲಿ ಭಾವಕ್ಕೆ ಜೀವದಷ್ಟೇ ಹೆಚ್ಚು ಪ್ರಾಮುಖ್ಯತೆ ಉಂಟು. ಬೆಳದಿಂಗಳ ಪ್ರಶಾಂತ ವಾತಾವರಣದಲ್ಲಿ ಚೂತಿಕಾ ವೃಕ್ಷದ ಕೊಂಬೆಯೊಂದರಲ್ಲಿ ಕುಳಿತ ಚಕೋರದ್ವಯವನ್ನು ಚಿತ್ರಿಸುವಾಗ, ಪ್ರೇಕ್ಷಕನ ಮನದಲ್ಲಿ ಅನುರಾಗದ ಆವಿರ್ಭಾವವುಂಟುಮಾಡುವುದು ಚಿತ್ರಗಾರನ ಆಶಯ. ಅಂತೆ ಮನೆಯ ಮಹಾದ್ವಾರವನ್ನು ತಳಿರು, ತೋರಣದಿಂದ ಅಲಂಕರಿಸುವುದು, ಶುಭದ ಚಿಹ್ನೆ. ಅಂತೆ ಕಮಲ, ಹಂಸ, ಆನೆ, ಇವು ಶುಭ ಸಂಕೇತಗಳು. ನಿರ್ಜನ ಪ್ರದೇಶದಲ್ಲಿನ ಒಣಮರ, ಒಡಕುಮಡಕೆ, ಇವು ನಿರಾಶೆ ಸೂಚಿಸುವ ಸಂಕೇತ ಸಾಧನಗಳನ್ನಾಗಿ ಚಿತ್ರಗಾರ ಉಪಯೋಗಿಸುವನು. ಈ ಸಂಕೇತಗಳು, ಸಲಕರಣೆಗಳು, ಆಯಾ ಜನಾಂಗದ ಸಂಸ್ಕೃತಿಗನುಗುಣವಾಗಿ ಬದಲಾಗುವುದು. ಆದುದರಿಂದ ಈ ಭಾವ, ಲಾವಣ್ಯ ಸಾದೃಶ್ಯ ಸಂಪತ್ತು ಸಂಸ್ಕೃತಿಯ ಮಟ್ಟದಂತೆ, ಕುಶಲತೆಗನುಗುಣವಾಗಿ ರಂಜಿತವಾಗುವುದು.

ವರ್ಣಿಕಾಭಂಗವೆಂಬುದು ಚಿತ್ರಲೇಖನದ ಆರನೆಯ ಲಕ್ಷಣ. ಅದೂ ಅತಿಮುಖ್ಯ ಲಕ್ಷಣ, ನೋಟಕರ ಗಮನವನ್ನು ಸೆಳೆಯುವ ಪ್ರಧಾನಸಾಧನ ಬಣ್ಣ. ಬಣ್ಣವೇ ಮೊಟ್ಟಮೊದಲು ದೃಗ್ಗೋಚರವಾಗುವುದು. ಮನದ ಭಾವವನ್ನು



ಚಿತ್ರಗಾರ ವೀರಂಣಾ
(ಪು. ೧೯೪)



ಚಿತ್ರಗಾರ ಯಲ್ಲೈಯಾ



ಮೂಡಬಿದರೆಯ ಕಂಬದ ಚಿತ್ರ



ಅರಳೀ ಎಲೆ ನಕಾಸೆ
(ಅಕ್ಕಸಾಲಿಗರ ಹಳೆಯ ಸಂಗ್ರಹದಿಂದ)





ಕಲಾಭ್ಯಾಸಿಗಳಿಗೆ ಬರೆಸಲು ಅನುಗೊಳಿಸಿದ ನಮೂನೆ ಚಿತ್ರಗಳು

ರೂಪಿಸಲು ಬಗೆಬಗೆಯ ಅಂಗಭಂಗಿಗಳನ್ನು ಪ್ರಧಾನ ಸಾಧನವಾಗಿ ಉಪಯೋಗಿಸುವಂತೆ, ರಸರೂಪು ನಿರೂಪಣೆಗೆ, ಭಾವಪ್ರಚೋದನೆಗೆ, ವರ್ಣಿಕಾಭಂಗವು ಅಪಾರ ಸಾಧನ. ಬಗೆಬಗೆಯ ಬಣ್ಣಗಳು; ಅವುಗಳಲ್ಲಿನ ಭೇದ ಪ್ರಭೇದ ಮತ್ತು ಮಿಶ್ರಣ ರೀತಿ; ಪ್ರಭೆಯ ಪ್ರಭೇದ; ಸಾಂದ್ರತೆಯ ವೈವಿಧ್ಯತೆ—ಈ ಬಗೆಯ ವರ್ಣಿಕಾಭಂಗ ಚಿತ್ರ ರಚನೆಯಲ್ಲಿ, ಭಾವರಸ ಪ್ರಚೋದನೆಯಲ್ಲಿ ಅಗತ್ಯ. ವರ್ಣಜ್ಞಾನ ಅವುಗಳ ಬಗೆಬಗೆಯ ಭಂಗಗಳ ಅರಿವು ಅಗತ್ಯ. ಉತ್ತಮ ಬಣ್ಣಗಳಿಂದ ಸುವ್ಯವಸ್ಥಿತ ರೀತಿಯಲ್ಲಿ ವರ್ಣಸಂಯೋಜಿತಗೊಂಡ ಚಿತ್ರ ಪ್ರಭಾವ ಬೀರುವಂತೆ ಸಾಮಾನ್ಯ ರೇಖಾಚಿತ್ರ ಆಕರ್ಷಕವಾಗಲಾರದು. ಆದುದರಿಂದ ಚಿತ್ರ ವ್ಯಾಸಂಗಮಾಡುವ ಪ್ರತಿಯೋರ್ವನೂ ಈ ಚಿತ್ರ ಷಡಂಗದ ಮರ್ಮವರಿತು, ತನ್ನ ಕೃತಿಯಲ್ಲಿ ಸಮರಸವಾಗಿ ಸಂಯೋಜನೆಗೊಳಿಸಿದರೆ ಅದು ಉತ್ತಮ ಕಲಾಕೃತಿಯಾಗುವುದು.

ಭಾರತೀಯ ಲಲಿತ ಕಲೆಗಳಲ್ಲಿ ವೈವಿಧ್ಯತೆ ಅಪಾರವಾಗಿದೆ. ಸಂಗೀತ ಶ್ರಾವ್ಯ ಕಲೆಯಾದರೆ ಚಿತ್ರ, ಶಿಲ್ಪ, ಎರಕ, ಕೆತ್ತನೆ, ಮುಂತಾದವು ದೃಶ್ಯಕಲೆಗಳು. ಇವುಗಳಿಗೆಲ್ಲ ಚಿತ್ರಕಲೆ ಮಾತೃಸ್ಥಾನದಲ್ಲಿರುವುದು. ಯಾವ ವಿಭಾಗವನ್ನು ಆರಿಸಿಕೊಂಡರೂ ಪ್ರಥಮತಃ ಚಿತ್ರರೂಪದಲ್ಲಿ ಸಿದ್ಧತೆಮಾಡಿಕೊಳ್ಳಲೇಬೇಕಾಗಿದೆ. ಆದುದರಿಂದ ಶಿಲ್ಪಿಯಾಗಲಿ, ಸ್ತಪತಿಯಾಗಲಿ, ಮೂರ್ತಿ ನಿರ್ಮಾಪಕನಾಗಲಿ, ಚಿತ್ರಲೇಖನವನ್ನು ವ್ಯಾಸಂಗ ಮಾಡಲೇಬೇಕಾಗಿದೆ.

ಆದ್ದರಿಂದ ಚಿತ್ರಲೇಖನ ಆಯಾ ಕಸಬು ಕೈಗಾರಿಕೆಗಳಿಗನುಕೂಲಿಸುವಂತೆ ನಾನಾ ರೂಪು ತಳೆದಿದೆ. ವರ್ಣಚಿತ್ರ ತಯಾರಿಕೆಗೆ ಬರೆದುಕೊಳ್ಳುವ ಚಿತ್ರಕ್ಕೂ, ಮರದ ಕೆತ್ತನೆಗೆ ಇಲ್ಲವೇ ಶಿಲಾಶಿಲ್ಪಕ್ಕೆ ಅಥವಾ ಎರಕಕ್ಕೆ ತಯಾರಿಸಿಕೊಳ್ಳುವ ಚಿತ್ರಕ್ಕೂ ಅಪಾರ ತಾರತಮ್ಯವಿರುವುದು. ಬಟ್ಟೆಯ ನೇಯಿಗೆಗಾಗಿ ತಯಾರಿಸುವ ನಮೂನೆಯೆ ಬೇರೆ. ಅಲ್ಲದೆ ಮಾನವನ ರೂಪು ಚಿತ್ರದ ನಮೂನೆಗೂ, ದೇವತಾ ಮೂರ್ತಿಯ ಚಿತ್ರಕ್ಕೂ ಅಪಾರ ವ್ಯತ್ಯಾಸವುಂಟು. ಈ ಬಗೆಯಲ್ಲಿ ಚಿತ್ರಲೇಖನದಲ್ಲಿ ಅನೇಕ ಶಾಖೆಗಳೂ ಉಪಶಾಖೆಗಳೂ ಕಂಡುಬರುತ್ತವೆ. ಕಲೆಯನ್ನು ವಂಶ ಪಾರಂಪರ್ಯವಾಗಿ ಅನುಸರಿಸುತ್ತಾ ಬಂದಿರುವ ಮನೆತನದಲ್ಲಿ, ಮಕ್ಕಳಿಗೆ ಮೊದಲಿನಿಂದ ಮುಂದೆ ಅನುಕೂಲಿಸುವಂಥ ವಿವಿಧ ನಮೂನೆಗಳ ಚಿತ್ರಾಭ್ಯಾಸ ಮಾಡಿಸುತ್ತಿದ್ದುದು ವಾಡಿಕೆಯಾಗಿದ್ದಿತು. ಅಂತಹ ಮನೆತನಗಳಲ್ಲಿ ಅಲ್ಲಲ್ಲಿ ಅನೇಕ ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ನಮೂನೆಗಳು ದೊರಕುತ್ತವೆ. ಇಂತಹ ನಮೂನೆಗಳ ಶೇಖರಣೆ ನಡೆದು, ಅವು ಗ್ರಂಥ ರೂಪದಲ್ಲಿ ಹೊರಬೀಳುವುದಾದರೆ. ನಿಜಕ್ಕೂ ಅದೊಂದು ಮಹದುಪಕಾರವಾದೀತು.

## ೫. ಕಲೆಯ ಪ್ರಗತಿಗೆ ಪ್ರಕೃತಿ ಸಂಪತ್ತಿನ ನೆರವು

ಕಲಾವಿದನ ಅಂತರ್ಯದ ಆನಂದಾನುಭವವನ್ನು ದೊರೆತ ಸಾಧನಗಳಿಂದ ರೂಪಿಸುವ ಮಾರ್ಗವೇ ಕಲಾಕೃತಿ, ಎಂದರುಹಿದೆ. ಹಿಂದಿನಿಂದ ಇಂತಹ ಕೃತಿ ನಿರ್ಮಾಣಕ್ಕೆ ಕಲಾವಿದನು ತನ್ನ ಸುತ್ತಮುತ್ತಲೂ ಅಪಾರವಾಗಿ ದೊರೆಯುವ

ಎ. ಯಸ್. ಮೂರ್ತಿ, ಎಂ. ಗೋಪಾಲ್ ಮುಂತಾದ ಕಲಾವಿದರೂ, ಪರಪ್ರಾಂತ ಗಳಲ್ಲಿ ಕಾರ್ಯನಿರತರಾಗಿರುವ ಕಲಾವಿದ ಸುಬ್ಬಕೃಷ್ಣ, ಎಂ. ಟಿ. ವಿ. ಆಚಾರ್ ಮುಂತಾದ ಕಲಾವಿದರೂ ಕನ್ನಡ ನಾಡಿನ ಕಲಾಪ್ರಪಂಚದಲ್ಲಿ ಅಪಾರ ಸೇವೆ ಸಲ್ಲಿಸುತ್ತಿದ್ದಾರೆ.

ಇದೇ ಬಗೆಯಲ್ಲಿ ಕನ್ನಡನಾಡಿನ ನಾನಾ ಪ್ರಾಂತಗಳಲ್ಲಿಯೂ ಅನೇಕ ಕಲಾವಿದರ ತಂಡ ಕಲೆಯ ಸೇವೆಗೆ ಬದ್ಧಕಂಕಣರಾಗಿ ಮುಂದೆ ಬಂದಿರುವರು. ಅವರ ಪಟ್ಟಿಯನ್ನೀಯುವುದು ಪ್ರಕೃತ ಸಾಧ್ಯವಿಲ್ಲ.

ಇಂದು ರೂಪುಗೊಂಡಿರುವ ಅಖಿಲ ಕನ್ನಡ ಜನತಾ ರಾಜ್ಯದ, ವಿಶಾಲ ಮೈಸೂರು ರಾಜ್ಯದ, ಆಡಳಿತದಲ್ಲಿ ಕಲಾವಿದರಿಗೆ ತಕ್ಕ ಪುರಸ್ಕಾರ ದೊರೆತು, ಅವರು ನಿರಾತಂಕವಾಗಿ ತಮ್ಮ ಕಲಾ ಸೇವೆಯನ್ನು ಮುಂದುವರಿಸಲು ಮಾರ್ಗ ಸುಗಮವಾಗಲೆಂದು ಆಶಿಸುವೆನು.

---

# ವಿಶಾಲ ಮೈಸೂರಿನ ಉದಯ

ಲೇಖಕರು :

ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್‌ರವರು, ಗೊರೂರು.

## ೧. ಮರೆಯದ ದಿನ

ಸಾವಿರದ ಒಂಭೈನೂರ ಐವತ್ತಾರನೆಯ ಇಸವಿ ನವೆಂಬರ್ ಒಂದನೆಯ ತಾರೀಖು ಭಾರತದ ಇತಿಹಾಸದಲ್ಲಿ ಅತ್ಯಂತ ಪ್ರಾಮುಖ್ಯವಾದ ಮತ್ತು ಎಂದೆಂದಿಗೂ ಮರೆಯದ ದಿನ. ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಪ್ರಜಾಪ್ರಭುತ್ವದ ಪ್ರಯೋಗ ನಡೆಯುತ್ತಿರುವ ಈ ಹಿರಿಯ 'ಕಿರಿಯ' ರಾಷ್ಟ್ರದಲ್ಲಿ, ಹಿಂದೆಂದೂ ಇಲ್ಲದಷ್ಟು ಜಾಗ್ರತೆಯಿಂದಲೂ, ದೀರ್ಘವಾದ ಪರಿಣಾಮಕಾರಿಯಾದ ಚರ್ಚೆಗಳಿಂದಲೂ, ಸಾಧ್ಯವಾದಷ್ಟು ಒಮ್ಮತದಿಂದಲೂ, ಪ್ರಜೆಗಳ ಪ್ರತಿನಿಧಿಗಳೇ ಭಾರತದ ನಕ್ಷೆಯನ್ನು ಪುನರ್ನಿರ್ಮಾಣ ಮಾಡಿದ ದಿನ ಇದು. ಭಾರತೀಯರಿಗೆ ಭಾರತದ ಆಳ್ವಿಕೆಯಲ್ಲಿ ಭಾಗವಹಿಸಲು ಇಷ್ಟು ಪೂರ್ಣವಾದ ಅವಕಾಶ ಹಿಂದೆ ಯಾವಾಗಲೂ ದೊರೆತಿರಲಿಲ್ಲ. ಈ ದೇಶದ ಭಾಗ್ಯವನ್ನು ಬರೆಯುವ ಪುಣ್ಯ ತಮ್ಮ ಕೈಗೆ ಬಂದಿರುವುದು ಈಗಿನಷ್ಟು ಜಾಗ್ರತವಾಗಿ ನಮ್ಮವರಿಗೆ ಯಾವಾಗಲೂ ಅನುಭವವಾಗಿರಲಿಲ್ಲ. ಈ ಜವಾಬ್ದಾರಿಯನ್ನು ನಮ್ಮ ನಾಯಕರು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿರುವುದಕ್ಕೆ ಲೋಕಸಭೆ ಬಹುಮಟ್ಟಿನ ಒಮ್ಮತದಿಂದ ಅಂಗೀಕರಿಸಿ ಇಂದಿನಿಂದ ಆಚರಣೆಗೆ ಬರುತ್ತಿರುವ ಪ್ರಾಂತ ಪುನರ್ವಿಂಗಡನಾ ಮಸೂದೆಯೇ ಸಾಕ್ಷಿಯಾಗಿದೆ.

## ೨. ನಮ್ಮ ಒಗ್ಗಟ್ಟು

ಭಾರತ ಜಗತ್ತಿನಲ್ಲಿ ಅತ್ಯಾಶ್ಚರ್ಯಕರವಾದ ಅಹಿಂಸಾಮಾರ್ಗದಿಂದ ಸ್ವಾತಂತ್ರ್ಯವನ್ನು ಸಂಪಾದಿಸಿತು. ಧೈರ್ಯವಾಗಿ ವಯಸ್ಕರ ಮತದಾನ ಪದ್ಧತಿಯ ಸರ್ವಪ್ರಿಯವಾದ ಸರ್ವಸಮಾನವಾದ ಸಂವಿಧಾನವನ್ನು ತನಗೆ ಕೊಟ್ಟುಕೊಂಡಿತು. ಭಾರತದಲ್ಲಿ ಈಗ ಇರುವಂತಹ ಒಗ್ಗಟ್ಟು ಯಾವಾಗಲೂ ಇರಲಿಲ್ಲ. ಬ್ರಿಟಿಷರ ಕಾಲದಲ್ಲಿ ದೇಶ ಒಂದು ಎಂಬ ಭಾವನೆ ಇಲ್ಲಿಯ ಜನತೆಗೆ ಬಂದಿತ್ತು. ಆದರೆ ಆಗಿನ ಆ ಒಗ್ಗಟ್ಟು ಬರಿಯ, ಸರ್ಕಾರದ ಆಡಳಿತ ಸೌಕರ್ಯದ, ಕಾನೂನು ಒಗ್ಗಟ್ಟು ಮಾತ್ರ ಆಗಿತ್ತು. ಭಾರತದ ಪ್ರತಿ ಪ್ರಜೆಯು ಭಾರತದ ಭಾಗ. ಈ ದೇಶವನ್ನು ಸೇವಿಸುವ ಪುಣ್ಯ, ರಕ್ಷಿಸುವ ಹೊಣೆ, ಆವಶ್ಯಕವಾದರೆ ಇದಕ್ಕಾಗಿ ಸಾಯುವ ತ್ಯಾಗ, ಈಗಿನಂತೆ ಎಂದೂ ನಮ್ಮ ರಕ್ತಗತವಾಗಿರಲಿಲ್ಲ. ಭಾರತೀಯ ನಾಗಿರುವುದೇ ಭಾಗ್ಯ; ಈ ದೇಶದಲ್ಲಿ ಹುಟ್ಟಿದುದೇ ಹಬ್ಬ; ಈಗ ಇಲ್ಲಿ

ಇರುವುದೇ ಆನಂದ ಸಂಭ್ರಮ ಎಂಬ ತಾಯ್ನಾಡಿನ ಹೆಮ್ಮೆಯ ನಿಲುವು ನಮಗೆ ಉಂಟಾಗಿರುವುದು ಭಾರತದ ಆಗು ಹೋಗು ನಮ್ಮ ಕೈಗೆ ಬಂದಿರುವುದರಿಂದ, ನಮ್ಮ ಒಗ್ಗಟ್ಟಿನಿಂದ. ಈ ಒಗ್ಗಟ್ಟು ನಮಗೆ ಉಂಟಾಗಿರುವುದು ಎಲ್ಲಕ್ಕಿಂತ ಹೆಚ್ಚಾಗಿ ನಮ್ಮ ರಾಷ್ಟ್ರಕ್ಕೆ ನಾವೇ ಕೊಟ್ಟುಕೊಂಡ ಸಂವಿಧಾನದಿಂದ. ಹೀಗೆ ಬಹಳ ಕಾಲದನಂತರ ತುಂಬ ಕಷ್ಟ ನಷ್ಟ ತ್ಯಾಗದಿಂದ ಸಂಪಾದಿಸಿಕೊಂಡ ಈ ಅಮೌಲ್ಯವಾದ ಸ್ವಾತಂತ್ರ್ಯವನ್ನು ನಮ್ಮ ಜನತೆಯ ಸರ್ವತೋಮುಖವಾದ ಅಭಿವೃದ್ಧಿಗೆ ವಿನಿಯೋಗಿಸಲು, ನಮ್ಮ ದೇಶವನ್ನು ಪ್ರಾಂತಗಳಾಗಿ ಹಿಂದೆ ವಿಭಾಗ ಮಾಡಿದ್ದ ಕ್ರಮ, ಆಂಗ್ಲೇಯರ ಇತರ ವಿಧಾನಗಳು ನಮಗೆ ಹಿತವಾಗದಂತೆ ಹಿತವಾಗಲಿಲ್ಲ. ಆದುದರಿಂದ ಪ್ರಾಂತಗಳನ್ನು ಪುನರ್ವಿಂಗಡಿಸುವುದು ನಮ್ಮ ಸರ್ಕಾರಕ್ಕೆ ಆವಶ್ಯಕವಾಯಿತು. ದೇಶ ಸ್ವಾತಂತ್ರ್ಯವಾದಂದಿನಿಂದ ಈ ಪ್ರಾಂತ ಪುನರ್ವಿಂಗಡನೆಯ ಕೇಳಿಕೆ ಇದ್ದೇ ಇತ್ತು. ಸಂವಿಧಾನದಲ್ಲಿ ಸಹ ಇದನ್ನು ಸೇರಿಸಿ ಆಗಲೇ ಪ್ರಾಂತಗಳನ್ನು ಮಾಡಬೇಕೆಂದು ಹಲವು ಸದಸ್ಯರು ವಾದಿಸಿದರು. ೧೯೫೨ನೇ ಸಂವತ್ಸರದ ಚುನಾವಣಾ ಪ್ರಣಾಳಿಕೆಯಲ್ಲಿ ಸಹ ಇದರ ಪ್ರಸ್ತಾಪ ಬಂದಿತ್ತು.

## ೩. ನಮ್ಮ ರಾಜ್ಯಾಂಗ

ನಮ್ಮದು ಬಹುಮಟ್ಟಿಗೆ ಫೆಡರಲ್ ರಾಜ್ಯಾಂಗ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಸಂಯುಕ್ತ ರಾಷ್ಟ್ರಕ್ಕೆ ಸೇರಿದ ಪ್ರತಿಪ್ರಾಂತವೂ ನಿಯಮಬದ್ಧವಾದ ಸ್ವಯಮಧಿಕಾರವನ್ನು ಹೊಂದಿ ತನ್ನ ಸರ್ಕಾರವನ್ನು ರಚಿಸಿದ ಜನತೆಗೆ ಪೂರ್ಣ ಜವಾಬ್ದಾರವಾಗಿರಬೇಕು. ಸುಖೀ ರಾಜ್ಯ ನಿರ್ಮಾಣದ ಈ ಕ್ರಮದಲ್ಲಿ, ಜನತೆ ಆಡಳಿತ ವಿಷಯವನ್ನು ಪೂರ್ಣವಾಗಿ ತಿಳಿದುಕೊಂಡು ಅದರಲ್ಲಿ ಭಾಗಿಯಾಗಬೇಕು. ಸರ್ಕಾರ ಜನತೆಯ ಎಲ್ಲ ಸೌಲಭ್ಯಗಳ ಹೊಣೆಯನ್ನೂ ಹೊರಬೇಕು. ಹೀಗಾಗ ಬೇಕಾದರೆ ಸರ್ಕಾರಕ್ಕೂ ಪ್ರಜೆಗಳಿಗೂ ಅತ್ಯಂತ ನಿಕಟವಾದ ಬಾಂಧವ್ಯವಿರಬೇಕು. ಇಂತಹ ಪ್ರಾಂತಗಳು ಅತಿ ಚಿಕ್ಕದಾಗಿಯೂ ಇರಬಾರದು; ಅತಿ ದೊಡ್ಡದಾಗಿಯೂ ಇರಬಾರದು; ಆಡಳಿತ ಅನುಕೂಲಕ್ಕೂ ಆರ್ಥಿಕಾಭಿವೃದ್ಧಿಗೂ ಸಹಾಯಕವಾಗಬೇಕು. ಭಾಷೆಯ ದೃಷ್ಟಿ ಒಂದೇ ಅಲ್ಲ ಎಂದು ಪ್ರಾಂತಪುನರ್ವಿಂಗಡನಾ ಸಮಿತಿ ಮಾಡಿದ ಶಿಫಾರಸುಗಳ ಆಧಾರದ ಮೇಲೆ, ಇಂದು ಭಾರತದ ಪೂನರ್ವಿಂಗಡನೆ ಕಾರ್ಯಗತವಾಗಿದೆ. ಪ್ರತಿಯೊಂದು ಪ್ರಾಂತವೂ ಪುಷ್ಟವಾಗಿ ಪ್ರಜಾಭಿಪ್ರಾಯದ ಬಿಗಿಯಾದ ಆಡಳಿತವನ್ನು ಹೊಂದಿ, ಕೇಂದ್ರದ ಬಲವನ್ನೂ ಭಾರತದ ಒಗ್ಗಟ್ಟನ್ನೂ ಹೆಚ್ಚಿಸಿ, ಭಾರತದಲ್ಲಿ ಸರ್ವಸೌಖ್ಯ ಸರ್ವ ಸಮಾನ ಸುಖೀರಾಜ್ಯ ಸ್ಥಾಪನೆಗೆ ಇದು ಮಾರ್ಗ ಎಂಬುದಾಗಿ ಗೃಹಮಂತ್ರಿ ಪಂತ್‌ರು ಹೇಳಿದ ಮಾತು ಅಕ್ಷರಶಃ ಸತ್ಯ. ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಅಸಮಾಧಾನಗಳು ಕಂಡರೂ ಪ್ರಾಂತ ಪುನರ್ವಿಂಗಡನೆ ಅತ್ಯಂತ ಹೆಚ್ಚಾದ ಬಹುಮತದೊಡನೆ ನಡೆದಿದೆ. ಯಾವ ಹೊಸ ಹುಟ್ಟಿಗೂ ಪ್ರಸವವೇದನೆ ಇದ್ದೇ ಇದೆ. ಅದು ಸ್ವಲ್ಪ ಕಾಲದಲ್ಲಿ ಮಾದು ಎಲ್ಲವೂ ಮಂಗಳವಾಗುವುದರಲ್ಲಿ ಸಂದೇಹವಿಲ್ಲ.

## ೪. ಹೊಸಹುಟ್ಟು

ಮೈಸೂರಿನ ಮಟ್ಟಿಗೆ ಹೇಳುವುದಾದರೆ ನಮಗೆ ಸ್ವಾತಂತ್ರ್ಯ ಬಂದ ಅನಂತರ ಇಂತಹ ಮತ್ತೊಂದು ಶುಭ ಸಂಭವಿಸಿಲ್ಲ. ಸುಮಾರು ಎರಡು ಕೋಟಿ ಕನ್ನಡಿಗರು ಒಟ್ಟಿಗೆ—ಅನೇಕ ಕಾಲ ಅಗಲಿದ್ದನಂತರ—ಸೇರುತ್ತೇವೆನ್ನುವ ಯೋಚನೆಯೇ ರೋಮಾಂಚಕಾರಿಯಾಗಿದೆ. ನಮ್ಮ ಬಾಳಿನಲ್ಲಿ ಇದಕ್ಕಿಂತ ಚರಿತ್ರಾರ್ಹ ಸಂಗತಿಯೇ ಇರಲಾರದು. ನೂರು ಇನ್ನೂರು ಮುನ್ನೂರು ವರ್ಷಗಳ ಕೆಳಗೆ ಬೇರೆ ಬೇರೆ ಹದಿನೆಂಟು ಇಪ್ಪತ್ತು ಸರ್ಕಾರಗಳಿಗೆ ಹಂಚಿಹೋಗಿ ಅಣ್ಣತಮ್ಮಂದಿರನ್ನೇ ಗುರುತಿಸಲಾರದೆ ಕಂಗಾಲಾಗಿ ಕಂಗೆಟ್ಟಿದ್ದ ನಮ್ಮನ್ನು ಮತ್ತೆ ನಮ್ಮ ಪ್ರಿಯ ಬಂಧುಗಳೊಡನೆ ಸೇರಿಸಿದ ನಮ್ಮ ಸಂವಿಧಾನಕ್ಕೆ ನಾವು ಎಷ್ಟು ಕೃತಜ್ಞರಾಗಿದ್ದರೂ ಅಲ್ಪವೇ. ಯಾವುದು ನಮ್ಮ ಜೀವಿತ ಕಾಲದಲ್ಲಿ ಸಾಧ್ಯವಾಗುವುದೇ ಇಲ್ಲವೆಂದು ಭಾವಿಸಿ, ಕನಸಿನಲ್ಲಿ ಸಾಧ್ಯವಾದಂತೆ ತೋರಿದರೂ ಆನಂದದಿಂದ ಅಲ್ಲಿ ಸಹ ಸಂಶಯ ಪ್ರಕೃತಿಯುಳ್ಳವರಾಗಿ ನಂಬುತ್ತಿರಲಿಲ್ಲವೋ, ಅಂತಹುದು ಇಂದು ನಡೆದಿದೆ. ಇದು ಕನ್ನಡಿಗರಲ್ಲಿ ಭಗವಂತನ ಕರುಣೆಯೇ ಹೊರತು ಬೇರೆ ಅಲ್ಲ. ಆದರೆ ಇಲ್ಲಿಯೂ ಸ್ವಲ್ಪ ಪ್ರಸವವೇದನೆ ಆಗದೆ ಇರಲಿಲ್ಲ. ನಮ್ಮ ಶಾಸನಸಭೆಗಳ ಚರ್ಚೆಗಳಲ್ಲಿ ಇದರ ವಿವರ ಸಿಕ್ಕುತ್ತದೆ. ಈ ಮಹತ್ಸಾಧನೆಗೆ ಅಡ್ಡಿಬರದಂತೆ ಚಾತುರ್ಯದಿಂದ ವರ್ತಿಸಿದ ಕೀರ್ತಿ ಶ್ರೀಮಾನ್ ಕೆ. ಹನುಮಂತಯ್ಯನವರಿಗೆ ಸಲ್ಲಬೇಕಾಗಿದೆ. ಕನ್ನಡನಾಡು ಒಂದಾಗಿರುವ ಈ ಸುವರ್ಣ ಮುಹೂರ್ತದಲ್ಲಿ, ಈ ಕನಸನ್ನು ನನಸು ಮಾಡಲು ಶ್ರಮಿಸಿದ ಎಲ್ಲ ಮಹನೀಯರನ್ನೂ ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ. ಇನ್ನು ಅಣ್ಣ ತಮ್ಮಂದಿರು ಅಣ್ಣತಮ್ಮಂದಿರೇ ಆದೆವು. ನಮ್ಮ ನಡುವೆ ಇದ್ದ ಜವನಿಕೆ ಕಳಚಿಬಿತ್ತು.

ಈ ಸಾಧನೆಯ ಆನಂದ ಅದ್ಭುತವಾಗಿರುವಂತೆಯೇ ಇದು ನಮ್ಮ ಮೇಲೆ ಹೊರಿಸುವ ಜವಾಬ್ದಾರಿ ಸಹ ಬಹು ಗುರುತರವಾಗಿದೆ. ಭಾರತದಲ್ಲಿ ವಿಶಾಲ ಮೈಸೂರು ವಿಸ್ತೀರ್ಣದಲ್ಲಿ ಆರನೆಯದೋ ಏಳನೆಯದೋ ಆಗಿ, ಜನಸಂಖ್ಯೆಯಲ್ಲಿ ಎಂಟನೆಯದೋ ಒಂಭತ್ತನೆಯದೋ ಆಗುತ್ತದೆ. ಇದುವರೆಗೆ ನಾವು ಭಾರತಕ್ಕೆ ನಮ್ಮ ಪಾಲಿನ ಕಾಣಿಕೆ ಸಲ್ಲಿಸಲು ನಮ್ಮ ಜನ ಅನೇಕ ಸರ್ಕಾರಗಳಲ್ಲಿ ಹಂಚಿಹೋಗಿದ್ದುದೂ, ನಮಗೆ ಆತ್ಮಪ್ರತ್ಯಯವಿಲ್ಲದುದೂ, ಕಾರಣವಾಗಿದ್ದಿರಬಹುದು. ಹೇಗೂ ಇಲ್ಲಿಯವರೆಗೆ ತಮಿಳರು, ತೆಲುಗರು, ಮಲೆಯಾಳಿಗಳು, ಮಹಾರಾಷ್ಟ್ರರು, ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಸಿದ್ಧರಾಗಿರುವಂತೆ ನಾವು ಆಗಲಿಲ್ಲ. ವಿಜ್ಞಾನ, ಅರ್ಥಶಾಸ್ತ್ರ, ಕೈಗಾರಿಕೆ, ಬ್ಯಾಂಕಿಂಗ್, ವ್ಯಾಪಾರೋದ್ಯಮ ಎಲ್ಲವುಗಳಲ್ಲಿಯೂ ಕರ್ಣಾಟಕದ ಜನತೆ ಇತರ ಪ್ರಾಂತಗಳನ್ನು ಮೀರಿಸುವ ಯೋಗ್ಯತೆಯನ್ನು ಪಡೆದಿದೆ. ಆದರೆ ನಮ್ಮ ಶಕ್ತಿಗಳನ್ನೆಲ್ಲ ಒಮ್ಮುಖಗೊಳಿಸಲು ನಮಗೆ ಇದುವರೆಗೆ ಅವಕಾಶವಾಗಿರಲಿಲ್ಲ. ಭಾರತ ಜನಜೀವನದ ಸಮಸ್ತ ಕ್ಷೇತ್ರಗಳಲ್ಲಿಯೂ ನಮ್ಮ ಕೀರ್ತಿಯನ್ನು ನಾವು ಸ್ಥಾಪಿಸಬೇಕಾಗಿದೆ.

## ೫. ಎಚ್ಚರಿಕೆಯ ಮಾತು

ನಾವು ಅತ್ಯಂತ ಆನಂದದಿಂದ ದೀರ್ಘಕಾಲ ನಮ್ಮನ್ನು ಅಗಲಿದ್ದ ನಮ್ಮ ಬಂಧುಗಳೊಡನೆ ಸೇರುವ ಈ ಕಾಲದಲ್ಲಿ ಒಂದೆರಡು ಎಚ್ಚರಿಕೆಯ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಅವಶ್ಯಕ. ವಿಶಾಲ ಮೈಸೂರು ಕನ್ನಡಿಗರ ಪ್ರಾಂತ ವಾದರೂ ಈ ಪ್ರಾಂತರಚನೆ ಬರಿಯ ಭಾಷಾದೃಷ್ಟಿಯಿಂದ ಆದುದಲ್ಲ. ತನ್ನ ಭಾಷೆ, ತನ್ನ ಪ್ರಾಂತ ಎಂದುಕೊಂಡು ಅಖಿಲ ಭಾರತದ ಹಿತವನ್ನು ಮರೆಯುವುದು ನಮ್ಮ ದೇಶದ ಇತಿಹಾಸದಲ್ಲಿ ಹೊಸ ವಿಷಯವಲ್ಲ. ಹಿಂದೆ ಮಹಾರಾಷ್ಟ್ರರಿಗೆ ಒಂದು ಪ್ರಾಂತವಿತ್ತು. ಪಂಜಾಬಿನವರಿಗೆ ಒಂದು ಪ್ರಾಂತವಿತ್ತು. ಕರ್ಣಾಟಕಕ್ಕೆ ಒಂದು ಸಾಮ್ರಾಜ್ಯವಿತ್ತು. ಆದರೆ, ಅಂತರ್ ಕಲಹದಿಂದ ಅವೆಲ್ಲವೂ ನಾಶ ವಾದವು. ಬಂಧುಗಳನ್ನು ನಾಶಮಾಡಲು ಬಂಧುಗಳೇ ಆಂಗ್ಲೇಯರಿಗೆ ಸಹಾಯಕ ರಾದರು. ಒಂದು ಭಾಗದ ಮರಾಠರು ಮತ್ತೊಂದು ಭಾಗದ ಮರಾಠರನ್ನು ಧ್ವಂಸಗೊಳಿಸಲು ನೆರವು ನೀಡಿದರು. ಮೈಸೂರಿನ ಟೀಪುವನ್ನು ಧ್ವಂಸಮಾಡಲು ಹೈದರಾಬಾದ್ ನಿಜಾಮರೂ ಮರಾಠರೂ ಆಂಗ್ಲೇಯರೊಂದಿಗೆ ಬೆರೆತರು. ನಮ್ಮ ದೇಶದ ಹಿಂದಲ ರಾಜಕೀಯ ಇತಿಹಾಸವೆಲ್ಲ ಹೀಗೆ ಬಂಧು, ಬಂಧುವನ್ನು ನಿರ್ನಾಮಗೊಳಿಸಲು ಆಂಗ್ಲೇಯರೊಂದಿಗೆ ಸಂಚುಮಾಡಿದುದೇ ಆಗಿದೆ. ಈ ಅನೈಕ್ಯತೆ ನಮ್ಮ ರಕ್ತದಲ್ಲಿಯೇ ಇದೆಯೋ ಏನೋ! ವ್ಯಕ್ತಿಗಳಾಗಿ ನಾವು ಎಷ್ಟೇ ದಕ್ಷರೂ ತ್ಯಾಗಿಗಳೂ ಆದರೂ ಅಖಿಲ ಭಾರತ ಹಿತದೃಷ್ಟಿಯಿಂದ ಸಾಮೂಹಿಕವಾಗಿ ಕೆಲಸಮಾಡುವಾಗ ನಮ್ಮ ಸ್ವಂತ ಅಭಿಪ್ರಾಯಗಳೇ ಮುಂದಾಗಿ, ಬಾಲವೇ ಪ್ರಾಣಿಯನ್ನು ಅಲುಗಾಡಿಸುವಂತೆ ನಮ್ಮ ವ್ಯಕ್ತಿಭಾವನೆಗಳಿಂದಲೇ ನಾವು ಭಾರತದ ಪ್ರಶ್ನೆ ಅಳಿಯುತ್ತೇವೆ. ಜಯಚಂದ್ರ ಪೃಥ್ವಿರಾಜರ ಅನೈಕ್ಯತೆಯಿಂದಲೇ ಭಾರತಕ್ಕೆ ಪರದೇಶದ ಮುಸಲ್ಮಾನರ ಪ್ರವೇಶವಾಗಿ ಇಲ್ಲಿ ಅವರ ರಾಜ್ಯಸ್ಥಾಪನೆ ಯಾದುದು ನಮ್ಮ ಜ್ಞಾಪಕದಲ್ಲಿರಬೇಕು. ಈ ದೇಶದ ಪ್ರಜೆಯ ಮೊದಲನೆಯ ನಿಷ್ಠೆ, ಭಕ್ತಿ, ಕರ್ತವ್ಯ, ಭಾರತಮಾತೆಗೆ ಮಾತ್ರ; ಕೊನೆಯ ನಿಷ್ಠೆ, ಭಕ್ತಿ, ಕರ್ತವ್ಯವೂ ಭಾರತಮಾತೆಗೆ ಮಾತ್ರ. ಉಳಿದುವೆಲ್ಲ ಅವಕ್ಕೆ ಪೋಷಕ ಮಾತ್ರ. ಭಾರತದ ಮಾತೆಗೆ ಮಾತ್ರವೇ ಸಲ್ಲಬೇಕಾದ ಏಕಮಾತ್ರ ನಿಷ್ಠೆಯ ದಾರಿಯಲ್ಲಿ ಮತ್ತಾವ ಭಾವನೆ ಬಂದರೂ ಅದನ್ನು ನಿಷ್ಕರುಣೆಯಿಂದ ನಿರ್ದಾಕ್ಷಿಣ್ಯವಾಗಿ ನಾಶಮಾಡಬೇಕು. ಅಖಿಲ ಜಗತ್ತಿನ ಪ್ರತೀಕದಂತೆಯೇ ಇರುವ ಈ ವಿಶಾಲವಾದ ಮಹಾರಾಷ್ಟ್ರದಲ್ಲಿ ಅನೈಕ್ಯತೆಯ ಮೂಲಗಳು ಅನೇಕವಾಗಿವೆ. ಹಿಂದೆ ಏನೇ ಆಗಿದ್ದರೂ ಮುಂದೆ ಈ ಅನೈಕ್ಯತೆಗಳು ಭಾರತವನ್ನು ಒಡೆಯಲಾರವು. ಆದರೂ ಎಚ್ಚರಿಕೆಯಿಂದಿರುವುದು ಅತ್ಯಂತ ಅವಶ್ಯಕವಾದದ್ದು.

## ೬. ಪ್ರಜಾಪ್ರಭುತ್ವ

ಭಾರತಕ್ಕೆ ಉಂಟಾಗಿರುವ ಅತಿದೊಡ್ಡ ಶುಭ ಈ ಪ್ರಜಾಪ್ರಭುತ್ವವೇ. ಆದರೆ ಇದು ಎರಡು ಅಲಗುಗಳುಳ್ಳ ಕತ್ತಿ. ಪ್ರಜೆ ಎಷ್ಟರಮಟ್ಟಿಗೆ ಜ್ಞಾನಿಯೂ ದೇಶ

ಸೇವಾನಿಷ್ಠನೂ ಕರ್ತವ್ಯಜ್ಞನೂ ಆಗಿರುವನೋ ಅಷ್ಟು ಅಷ್ಟರಮಟ್ಟಿಗೆ ಮಾತ್ರ ಪ್ರಜಾಪ್ರಭುತ್ವದ ಉಪಯೋಗವನ್ನು ಅವನು ಮಾಡಿಕೊಳ್ಳಬಲ್ಲನು. ಮತದ ಅಧಿಕಾರ ಪಡೆದ ಸಾಮಾನ್ಯ ಪ್ರಜೆಗೆ ಈ ಮತಾಧಿಕಾರ ಎಂತಹ ಅಮೌಲ್ಯ ಶಕ್ತಿ, ಇದನ್ನು ತಾನು ಹೇಗೆ ವಿನಿಯೋಗಿಸಬೇಕು, ಇದನ್ನು ವಿನಿಯೋಗಿಸಲು ತಾನು ಹೊಂದಬೇಕಾದ ಅರ್ಹತೆಯೇನು, ಈ ಮತವನ್ನು ತಾನು ಕೊಟ್ಟು ಅಧಿಕಾರಕ್ಕೆ ತರುವ ಜನಕ್ಕೆ ಇರಬೇಕಾದ ಯೋಗ್ಯತೆ, ಕರ್ತವ್ಯನಿಷ್ಠೆ, ದಕ್ಷತೆ ಇವು ಏನು— ಎಂಬ ವಿಷಯದಲ್ಲಿ ಸ್ಪಷ್ಟವಾದ ತಿಳಿವಳಿಕೆ ಇರಬೇಕು. ಅರ್ಹರನ್ನು ಆರಿಸಿದನಂತರ ಅವರು ತಾವು ಕೊಟ್ಟ ವಾಗ್ದಾನದಂತೆ ಕೆಲಸಮಾಡುತ್ತಿದ್ದಾರೆಯೆ ಎಂಬುದನ್ನು ಆಗಿಂದಾಗ್ಗೆ ಪರೀಕ್ಷಿಸುತ್ತಾ ಇರಬೇಕು. ದೇಶದ ಸಮಸ್ತ ಆಗುಹೋಗುಗಳೂ ಪ್ರಜಾಪ್ರಭುತ್ವದಲ್ಲಿ ಮತದಾರರ ಮೇಲೆಯೇ ಅವಲಂಬಿಸುತ್ತಿವೆ. ಪ್ರಜಾಪ್ರಭುತ್ವವೆಂಬ ಕುದುರೆಗಾಡಿಗೆ ಮತದಾರರ ಬುದ್ಧಿಶಕ್ತಿಯೇ ಅಡ್ಡಗಾಲು. ಅದು ಗಾಡಿಯ ವೇಗವನ್ನೂ ಕಡಿಮೆ ಮಾಡಬಹುದು ; ಕೊನೆಗೆ ಉರುಳಿಸಿದರೂ ಉರುಳಿಸಬಹುದು. ಪ್ರಜಾಪ್ರಭುತ್ವಕ್ಕೆ (ಅದರ ಪೂರ್ಣಲಾಭ ಪಡೆಯಲು) ಪ್ರಾಂತಗಳನ್ನು ಅರ್ಹವಾಗಿ ಮಾಡುವುದರಲ್ಲಿಯೇ ಭಾರತದ ಮತ್ತು ಪ್ರಾಂತಗಳ ಕ್ಷೇಮವೂ, ಶಕ್ತಿಯೂ ಅಡಗಿದೆ.

ಮತದಾರರು ವಿವೇಕಿಗಳಾಗದೆ ಹೋದರೆ ಪ್ರಜಾಪ್ರಭುತ್ವ ಹಾಸ್ಯಾಸ್ಪದವಾಗುವುದು. ಆಗ ಅದು ಬರಿಯ ತಲೆಗಳನ್ನು ಎಣಿಸುವುದರಿಂದ ಮಾತ್ರ ನಿರ್ಣಯಗಳನ್ನು ತೆಗೆದುಕೊಳ್ಳುವ ಸಂಸ್ಥೆಯಾಗುವುದು. ಆದರೂ ತಲೆಗಳನ್ನು ಎಣಿಸಿ ನಿರ್ಣಯ ತೆಗೆದುಕೊಳ್ಳುವುದು, ತಲೆಗಳನ್ನು ಒಡೆದು ನಿರ್ಣಯ ತೆಗೆದುಕೊಳ್ಳುವುದಕ್ಕಿಂತ ಉತ್ತಮ. ಕೊನೆಯಲ್ಲಿ ಪ್ರಜಾಪ್ರತಿನಿಧಿಗಳು ವಿವೇಕಿಗಳಾಗಿ ಬಹುಮಟ್ಟಿಗೆ ಸರ್ವಜನ ಸಮ್ಮತವಾದ ನಿರ್ಣಯಗಳನ್ನೇ ಅಂಗೀಕರಿಸುವುದು ಈ ಎಂಟು ವರುಷದಲ್ಲಿ ಭಾರತದಲ್ಲಿ ಅನುಭವಕ್ಕೆ ಬಂದಿದೆ.

## ೭. ರಾಷ್ಟ್ರಾಭಿಮಾನ

ನಮ್ಮ ಈ ಪ್ರಾಂತಕ್ಕೂ ಭಾರತದ ಭದ್ರತೆಗೂ ಧಕ್ಕೆ ಒದಗಬಹುದಾದ ಯಾವ ಕಾರ್ಯವನ್ನೂ ನಾವು ಮಾಡುವಂತೆ ಇಲ್ಲ. ಹೀಗಾಗಬೇಕಾದರೆ ನಮ್ಮ ಜನರಿಗೆ ನಮ್ಮ ನಾಡು ಮತ್ತು ರಾಷ್ಟ್ರದ ವಿಷಯದಲ್ಲಿ ಬಹಳ ಅಭಿಮಾನ ಇರಬೇಕು. ಸರ್ಕಾರಗಳು ಸರ್ವ ಸಮದೃಷ್ಟಿಯಿಂದ ನಡೆದರೆ ಮಾತ್ರ ಜನ ಆ ಸರ್ಕಾರದ ವಿಷಯದಲ್ಲಿ ಅಭಿಮಾನಪಡುವರು, ಹೆಮ್ಮೆಪಡುವರು. ಯಾವ ಕಾರಣದಿಂದಲೂ ಜನತೆಯಲ್ಲಿರುವ ಸೌಹಾರ್ದಭಾವ ಕಡಮೆಯಾಗಬಾರದು. ಸಮಾಜವಾದೀ ಸರ್ಕಾರದ ಸ್ಥಾಪನೆಯ ಹೆಸರಿನಲ್ಲಿ ಸಹ ವರ್ಗಕಲಹವನ್ನುಂಟು ಮಾಡಬಾರದು.

ಹೀಗಾಗಬೇಕಾದರೆ ಜನ ತೃಪ್ತರಾಗಿರಬೇಕು. ಜನತೆಯಲ್ಲಿ ಸಮಾನತೆ ಇರಬೇಕು. ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಪ್ರತಿಯೊಬ್ಬರಿಗೂ ಉದ್ಯೋಗದ ಸಮಾನಾವಕಾಶಗಳು ಇರಬೇಕು. ಎಲ್ಲ ಉದ್ಯೋಗಗಳಿಗೂ

ಸಮಾನ ಗೌರವ, ಸಮಾನ ಪ್ರತಿಫಲ, ಇರಬೇಕು. ಈಗ, ಕೆಲವು ಉದ್ಯೋಗಗಳು ಮೇಲು, ಕೆಲವನ್ನು ಕೆಲವರು ಮಾಡಬಾರದು ಎಂಬ ಭಾವನೆಗಳಿವೆ. ವಕೀಲಿ, ವೈದ್ಯ, ಪ್ರೊಫೆಸರುತನ, ಸರ್ಕಾರಿ ಅಧಿಕಾರ—ಇವುಗಳು ಉಚ್ಚ ಉದ್ಯೋಗಗ ಳೆಂದು ಪರಿಗಣಿತವಾಗಿವೆ. ಕೂಲಿ, ಮೂಟೆ ಹೊರುವುದು, ಕಾರಖಾನೆ ಕೆಲಸ, ಬೆವ ರಿನ ಕೆಲಸ, ಭೂಮಿ ಉಳುವುದು—ಇವೆಲ್ಲ ಸ್ವಲ್ಪ ಕಡಿಮೆ ದರ್ಜೆಯ ಉದ್ಯೋಗ ಗಳೆಂದು ವಿದ್ಯಾವಂತರು ಭಾವಿಸುತ್ತಾರೆ. ಈ ಭಾವನೆಗಳು ಬದಲಾಗಬೇಕು. ಪ್ರತಿಯೊಂದು ಪ್ರಾಂತವೂ ಅಲ್ಪಸಂಖ್ಯಾತರ ರಕ್ಷಣೆಯನ್ನು ಸಮರ್ಪಕವಾಗಿ ಮಾಡಬೇಕು. ಬಹುಸಂಖ್ಯಾತರ ರಕ್ಷಣೆಯಲ್ಲಿ ಅಲ್ಪಸಂಖ್ಯಾತರು ನಿಶ್ಚಿಂತೆಯಿಂದ ಇರಬೇಕು. ಆಗ ಸಮಾಜವಿಘಾತಕ ಮತ್ತು ದೇಶವಿಘಾತಕ ಶಕ್ತಿಗಳು ತಲೆ ಎತ್ತಿ ರಾಷ್ಟ್ರದ ಒಗ್ಗಟ್ಟನ್ನು ಒಡೆಯಲು ಸಾಧ್ಯವಾಗುವುದಿಲ್ಲ.

ಈ ಸಮಸ್ಯೆಗಳನ್ನೆಲ್ಲ ಸಮರ್ಪಕವಾಗಿ ಬಗೆಹರಿಸುವ ಗುರುತರ ಜವಾಬ್ದಾರಿ ನಮ್ಮ ನೂತನ ವಿಶಾಲ ಮೈಸೂರಿಗೆ ಸೇರಿದೆ. ನಾವು ಅತ್ಯಂತ ಹೆಮ್ಮೆಯಿಂದಲೂ ಆನಂದದಿಂದಲೂ ವಹಿಸಿಕೊಳ್ಳಬೇಕಾದ ಭಾರ ಇದು. ಈ ಹೊಸ ರಾಷ್ಟ್ರವನ್ನು ಕಟ್ಟಿ ಸರ್ವ ಸಮೃದ್ಧವಾಗಿ ಮಾಡುವುದಕ್ಕಿಂತ ಹೆಚ್ಚು ರೋಮಾಂಚಕಾರಿಯಾದ ಸಂಗತಿ ನಮ್ಮ ಬಾಳಿನಲ್ಲಿ ಬೇರೆ ಯಾವುದೂ ಇಲ್ಲ.

## ೮. ರಾಷ್ಟ್ರಸಂಪತ್ತು

ಇಲ್ಲಿ ನಮಗೆ ಯಾತರ ಕೊರತೆಯೂ ಇಲ್ಲ. ಬಹಳ ಕಾಲದಿಂದ ನಾವು ಬಯಸುತ್ತಿರುವ ರೇವುಪಟ್ಟಣ, ಸುಮಾರು ಮುನ್ನೂರು ಮೈಲಿ ಸಮುದ್ರ ತೀರ; ಆಹಾರ ಧಾನ್ಯಗಳಲ್ಲಿ ಅಕ್ಕಿ, ರಾಗಿ, ಜೋಳ, ಗೋಧಿ, ಕಬ್ಬು, ಕಾಫಿ, ತೆಂಗಿನ ಕಾಯಿ, ಮೆಣಸಿನಕಾಯಿ, ಮಸಾಲೆಗಳಲ್ಲಿ, ಹಣ್ಣುಗಳಲ್ಲಿ, ಸರ್ವ ಸಮೃದ್ಧಿ, ದ್ವಿದಳ ಧಾನ್ಯಗಳೇ ಸುಮಾರು ಹತ್ತು ಲಕ್ಷ ಎಕರೆಗಳಲ್ಲಿ ಬೆಳೆಯುತ್ತದೆ. ಹತ್ತಿ ಸುಮಾರು ಇಪ್ಪತ್ತೈದು ಲಕ್ಷ ಎಕರೆಗಳಲ್ಲಿ ಬೆಳೆಯುತ್ತದೆ. ಎಣ್ಣೆ ಬೀಜಗಳು ಸುಮಾರು ಹನ್ನೊಂದು ಲಕ್ಷ ಎಕರೆಗಳಲ್ಲಿ ಬೆಳೆಯುತ್ತವೆ. ಹೊಗೆಯಸೊಪ್ಪು ಸುಮಾರು ಒಂದು ಲಕ್ಷ ಎಕರೆಗಳಲ್ಲಿ ಬೆಳೆಯುತ್ತದೆ. ಅಡಿಕೆ ಸುಮಾರು ಐವತ್ತು ಸಾವಿರ ಎಕರೆ. ಆಲೂಗಡ್ಡೆ ಮುಂತಾದುವು ಎರಡು ಲಕ್ಷ ಎಕರೆ. ತೆಂಗಿನ ಕಾಯಿ ಸುಮಾರು ಎರಡೂವರೆ ಲಕ್ಷ ಎಕರೆ. ಈ ಪ್ರಾಂತದಲ್ಲಿ ಯಾವುದಕ್ಕೂ ಕೊರತೆ ಇಲ್ಲ. ಮುಂದೆ ಅಭಿವೃದ್ಧಿಪಡಿಸಿಕೊಳ್ಳಲು ಬಹಳ ಸೌಲಭ್ಯಗಳಿವೆ. ತುಂಗಭದ್ರ, ಕೃಷ್ಣ ಇವುಗಳಿಂದ ನೀರಾವರಿ ಮತ್ತು ಹೈಡ್ರೋ ಎಲೆಕ್ಟ್ರಿಕ್ ಅಭಿವೃದ್ಧಿ; ಮೇಲು ಕೃಷ್ಣ, ಭೀಮಾನದಿ, ಘಟಪ್ರಭಾ, ಮಲಪ್ರಭಾ ಇವುಗಳ ಯೋಜನೆಗಳಿಂದ ಒದಗುವ ನೀರಾವರಿ—ಇವನ್ನೆಲ್ಲ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಿದ್ದಾರೆ. ಜತೆಗೆ ಕರ್ಣಾಟಕದ ನಾನಾ ಭಾಗದಲ್ಲಿರುವ ಕಬ್ಬಿಣ, ತಾಮ್ರ, ಸೀಸ ಮುಂತಾದ ಖನಿಜ ಸಂಪತ್ತು; ಚೈನಾಕ್ಲೇ, ಅಭ್ರಕ, ಗಂಧಕ, ಬಣ್ಣ ತಯಾರಿಕೆಗೆ ಬೇಕಾಗುವ ಮಣ್ಣು, ನೀಲಿ, ಬಳಪದ ಕಲ್ಲು, ಸಿಲಿಕ—ಇವೆಲ್ಲ ಯಥೇಚ್ಛವಾಗಿ ದೊರೆಯುತ್ತವೆ. ಅಲ್ಲದೆ, ಮೈಸೂರು,

ಕೊಡಗು, ಉತ್ತರ ಮತ್ತು ದಕ್ಷಿಣ ಕನ್ನಡಗಳ ವಿಶಾಲವಾದ ಅರಣ್ಯ ಸಂಪತ್ತು, ಗಂಧದ ಮರ, ಸಾಗುವಾನಿ, ಏಲಕ್ಕಿ, ವನೌಷಧಿಗಳು, ಹಸ್ತಿದಂತ, ಕಾಗದಕ್ಕೆ ಬೇಕಾದ ಬಿದಿರು; ಕಾಳೀನದಿ ಯೋಜನೆ, ದಡ್ಡಿನದಿ ಯೋಜನೆ, ಬನ್ನಿಹಳ್ಳ ಯೋಜನೆ, ಹಿರಣ್ಯಾಕ್ಷಿ ಮಹಾನದಿ ಯೋಜನೆ, ಇವುಗಳಿಂದ ವಿದ್ಯುಚ್ಛಕ್ತಿ, ಸಮಗ್ರ ಮಲೆನಾಡಿನ ಅಭಿವೃದ್ಧಿ—ಇಂತಹ ಪ್ರಕೃತಿ ಸೌಕರ್ಯಗಳುಳ್ಳ ರಾಷ್ಟ್ರದಲ್ಲಿ ಏನನ್ನು ಮಾಡುವುದಕ್ಕಾಗುವುದಿಲ್ಲ? ಎಷ್ಟು ಜನರನ್ನು ಸುಖವಾಗಿ ಸಾಕುವುದಕ್ಕಾಗುವುದಿಲ್ಲ? ಆದರೆ ಸರಿಯಾದ ವ್ಯವಸ್ಥೆ ಬೇಕು.

> ಅಮಂತ್ರ ಮಕ್ಷರಂ ನಾಸ್ತಿ ಮೂಲ ಮನೌಷಧಂ ।
> ಅಯೋಗ್ಯಃ ಪುರುಷೋನಾಸ್ತಿ ಯೋಜಕಃ ತತ್ರ ದುರ್ಲಭಃ ॥

[ಮಂತ್ರವಾಗದ ಅಕ್ಷರವಿಲ್ಲ. ಔಷಧಿಗೆ ಬರದ ಮೂಲಿಕೆಯಿಲ್ಲ. ಅಯೋಗ್ಯನಾದ ಪುರುಷನಿಲ್ಲ. ಆದರೆ ಇವನ್ನೆಲ್ಲ ಸರಿಯಾಗಿ ಜೋಡಿಸಿ ಕೆಲಸಕ್ಕೆ ಹಚ್ಚುವವನು ಬೇಕಲ್ಲ; ಅವನಿಲ್ಲ.] ಪ್ರಜಾಪ್ರಭುತ್ವ ನಮಗೆ ಈ ಯೋಜನೆಯನ್ನೂ ಯೋಜಕರನ್ನೂ ಒದಗಿಸಬೇಕು. ಪರಿಸ್ಥಿತಿ ನಮ್ಮ ಮುಂದೆ ಒಡ್ಡಿರುವ ಈ ಪ್ರಶ್ನೆಯನ್ನು ನಾವು ಸಮರ್ಪಕವಾಗಿ ಬಗೆಹರಿಸುವೆವೆ?

## ೯. ನಮ್ಮ ನಿಲುವು

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಅರ್ಜುನನಿಗೆ ಬೇರೆ ಒಂದು ಸಂದರ್ಭದಲ್ಲಿ ಹೇಳಿದ "ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಂ। ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೆ ಯುದ್ಧ ಮೀದೃಶಂ॥" ಎಂಬುದು ನಮಗೂ ಈಗ ಅನ್ವಯಿಸುತ್ತದೆ. ಇದೇ ಸ್ವರ್ಗ. ಇಲ್ಲಿ ಕೆಲಸಮಾಡುವ ಪುಣ್ಯ ದೊರೆತವನೇ ಸುಖಿ.

ನಾವು ಬೇರೆ ಬೇರೆ ಹತ್ತೊಂಬತ್ತು ಸರ್ಕಾರಗಳಲ್ಲಿ ಹಂಚಿ ಹೋಗಿದ್ದಕಾಲ ಆಗಲೇ ಒಂದು ಕೆಟ್ಟ ಕನಸಿನಂತೆ ಕಣ್ಮರೆಯಾಗುತ್ತಿದೆ.

ಹಿಂದಲ ಮೈಸೂರಿನ ಬುದ್ಧಿ---ವೈದ್ಯ ಮತ್ತು ಎಂಜನೀಯರಿಂಗ್ ಶಕ್ತಿ; ಧಾರವಾಡ, ಬಿಜಾಪುರ, ಹಾವೇರಿಗಳ ಗಂಡು ಕನ್ನಡ- -ಕನ್ನಡ ತಿರುಳು ಕೆಚ್ಚೆದೆಯ ಪಂಪ, ರನ್ನ, ಕುಮಾರವ್ಯಾಸರ ಕಂಪು, ಗುಂಗು; ಸಮೃದ್ಧವಾದ ಆಹಾರ ಕಣಜ; ದಕ್ಷಿಣ ಕನ್ನಡ ಜಿಲ್ಲೆಗಳ ಚಾಕಚಕ್ಯತೆ-ಕೈಗಾರಿಕೆ, ವ್ಯಾಪಾರ, ಬ್ಯಾಂಕಿಂಗ್ ನೈಪುಣ್ಯ; ಸಂಸ್ಕಾರ ಹೊಂದಿದ ಸೊಗಸು, ಕಡಲು ನೆರೆಯ ಬಾಳ್ವೆ; ಕೊಡಗರ ವೈಶಿಷ್ಟ್ಯ—ಕಾಫಿ, ಏಲಕ್ಕಿ, ಮೆಣಸು, ಸುಗಂಧ, ಕಲಾತ್ಮಕ ವೀರಜೀವನ; ಹೈದರಾಬಾದಿನ ಕನ್ನಡಿಗರ ಸಹನೆ, ಕಾರ್ಯಶಕ್ತಿ-ದ್ವಿದಳ ಧಾನ್ಯರಾಶಿಗಳು—ಈ ಸೌಭಾಗ್ಯಗಳಿಂದ ಚತುರ್ಭುಜಪೂರ್ಣವಾದ ಕರ್ಣಾಟಕದ ನೂತನ ರೂಪ, ವಿಶಾಲ ಮೈಸೂರು, ಭಾರತದ ಮುಕುಟಮಣಿಯಾಗುವುದರಲ್ಲಿ ಸಂದೇಹವಿಲ್ಲ. ಈ ಜವಾಬ್ದಾರಿಗೆ ಅರ್ಹರಾಗಿ ನಾವು ಬಾಳುವೆವೆ?

---

# ಕನ್ನಡ ನಾಡಿನಲ್ಲಿ ಮಹಿಳೆಯರ ಪಾತ್ರ

ಲೇಖಕಿ :

ಶ್ರೀಮತಿ ಜಯದೇವಿತಾಯಿ ಲಿಗಾಡೆ ಅವರು, ಸೊಲ್ಲಾಪುರ.

## ೧. ಕನ್ನಡಿಗರಲ್ಲಿ ಹೆಂಣು

" ಹೆಂಣು ಹೆಂಣಲ್ಲ, ಹೆಂಣು ರಕ್ಕಸಿಯಲ್ಲ
ಹೆಂಣು ಸಾಕ್ಷಾತ ಕಪಿಲ ಸಿದ್ಧಮಲ್ಲಿಕಾರ್ಜುನ ನೋಡಾ "
—ಶ್ರೀ ಸಿದ್ಧರಾಮ

ಕನ್ನಡಿಗರು ಹೆಂಣನ್ನು ಕಂಡ ಪರಿ ಇದು. ಇದು ಕರ್ನಾಟಕದ ಹಿರಿಯ ಸಂಸ್ಕಾರ. ಶರಣಶ್ರೇಷ್ಠರಾದ ಸೊನ್ನಲಾಪುರದ (ಸೊಲ್ಲಾಪುರ) ಶ್ರೀ ಸಿದ್ಧರಾಮರು ನುಡಿದ ಈ ವಚನದಲ್ಲಿ ಎರಡು ಮಾತುಗಳು ಎದ್ದು ಕಾಣುತ್ತವೆ. ಹೆಂಣಿನಲ್ಲಿಯ ದೇವತ್ವವನ್ನು ಕರ್ನಾಟಕವು ಅನೇಕ ಶತಮಾನಗಳ ಹಿಂದೆಯೇ ಗ್ರಹಿಸಿಕೊಂಡಿದೆ, ಆ ಪರಂಪರೆಯು ನಮ್ಮವರ ನಡೆನುಡಿಗಳಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡಿದೆ, ಎಂಬುದು ಮೊದಲನೆಯದು. ಹೆಂಣು ಶೂದ್ರಳಲ್ಲ, ಹೆಂಣು ರಕ್ಕಸಿಯಲ್ಲ; ಆದರೆ ಅವಳು ಸತ್ಯ, ಸೇವೆ, ಪ್ರೇಮ, ತ್ಯಾಗ, ಅಹಿಂಸೆಗಳ ಮೂರ್ತಿಸ್ವರೂಪಳೆಂಬುದನ್ನು ತನ್ನ ಕ್ರಿಯಾಚರಣೆಗಳಿಂದಲೂ, ಸತ್ವ ಸಾಮರ್ಥ್ಯಗಳಿಂದಲೂ, ಕನ್ನಡ ನಾಡಿನಲ್ಲಿ ಪ್ರಸ್ಥಾಪಿಸಿದ್ದಾಳೆಂಬುದು, ಎರಡನೆಯದು. ಈ ಪರಂಪರೆಯ ಅರಿವು ಜಾಜ್ವಲ್ಯವಾಗಿ ಜಾಗ್ರತಗೊಳ್ಳಬೇಕು. ಆ ತೇಜ, ಬಲ, ಕನ್ನಡ ಮಹಿಳೆಯರ ಮೈಮನದಲ್ಲಿ ಬೆರೆಯಬೇಕು. ಕರ್ನಾಟಕದ ಈ ಹಿರಿಯ ಸಂಸ್ಕೃತಿಯು ಬೆಳವಣಿಗೆಗೆ ಅವಕಾಶವನ್ನೀಯುವ ಮನೋಭೂಮಿಕೆಯನ್ನು ರಚಿಸಿಕೊಳ್ಳುವ ಕಾರ್ಯ ಬಹುದೊಡ್ಡದು. ಏಕೆಂದರೆ, ಭಾಷೆ, ಸಂಸ್ಕೃತಿ ಇವುಗಳ ಬೆಳವಣಿಗೆಗೆ ವಿಶೇಷ ಅವಕಾಶ ದೊರೆಯುವುದೆಂಬ ಉದ್ದೇಶ ಈ ಪ್ರಾಂತಗಳ ಪುನರ್ರಚನೆಯಲ್ಲಿ ಇದೆ.

## ೨. ಮಹಿಳೆಯರ ಮಹತ್ವ

ಪ್ರತಿಯೊಂದು ಪ್ರಾಂತದವರೂ ತಮ್ಮ ತಮ್ಮ ಪ್ರಾಂತೀಯ ವೈಶಿಷ್ಟ್ಯತೆಯ ಬಗ್ಗೆ ಅಭಿಮಾನ ತಾಳುತ್ತಾರೆ. ಆ ವೈಶಿಷ್ಟ್ಯ ಅವರವರ ಸಂಸ್ಕೃತಿಗಳಲ್ಲಿ ಅಡಕವಾಗಿದೆಯೆಂದು ಹೇಳುತ್ತಾರೆ. ಆದರೆ ಭಾರತದ ಸಂಸ್ಕೃತಿ ಬಿಡಿ ಬಿಡಿಯಾಗಿಲ್ಲ; ಅದು ಇಡಿಯಾಗಿದೆ ಎಂಬುದನ್ನು ತೋರಿಸಿಕೊಡುವ ಮಹತ್ ಕಾರ್ಯದಲ್ಲಿ ಮಹಿಳೆಯರದು ಮಹತ್ವದ ಪಾತ್ರವಿದೆ. " ಪ್ರಾಂತಗಳ ಪುನರ್ರಚನೆಯು ಬೇಡ, ಅದು ಭಾರತದ ಐಕ್ಯತೆಗೆ ಭಂಗ ತರುತ್ತದೆ " ಎಂಬುದು ಪ್ರಾಂತಗಳ ರಚನೆಯನ್ನು ವಿರೋಧಿಸುವವರ ವಾದವಾಗಿತ್ತು. ಪ್ರತಿಯೊಂದು

ಪ್ರಾಂತದವರೂ ಪ್ರತ್ಯೇಕತೆಯ ಮನೋಭಾವನೆಯನ್ನು ಬೆಳೆಸುತ್ತ ಹೋದರೆ ಮೇಲಿನ ಮಾತು ಸತ್ಯವಾಗಿ ಪರಿಣಮಿಸಬಹುದು. ಆ ಪ್ರತ್ಯೇಕತೆಯ ಮನೋಭಾವನೆಯನ್ನು ಬೆಳೆಯಗೊಡಬಾರದೆಂಬುದನ್ನು ನೋಡಿಕೊಳ್ಳುವುದು ಪ್ರಾಂತ ರಚನೆಯ ಪುರಸ್ಕರ್ತರ ಆದ್ಯಕರ್ತವ್ಯವಾಗಿದೆ. ಕರ್ನಾಟಕವು ಭಾರತದೊಂದಿಗೆ ಸಮಷ್ಟಿಯಾಗಿ ಸರ್ವತೋಮುಖವಾಗಿ ಸಮೃದ್ಧಗೊಳ್ಳಬೇಕು. ನೆರೆಹೊರೆಯ ಪ್ರಾಂತಗಳಲ್ಲಿ ಪರಸ್ಪರ ತಿಳುವಳಿಕೆ ಸಹಾಯ ಸಹಾನುಭೂತಿಗಳು ಬೆಳೆದು ಬರಬೇಕು. ಒಡನಾಟ ಹೆಚ್ಚಬೇಕು. ಈ ಕಾರ್ಯವನ್ನು ಮಹಿಳೆಯರು ಸುಲಭಸಾಧ್ಯವಾಗಿ ಸಾಧಿಸಬಲ್ಲರು. ಹೇಗೆಂದರೆ, ಕನ್ನೆಯರು ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಮನೆಯ ಒಡತಿಯರಾಗಿ ಹೋಗುತ್ತಾರೆ. ಶರೀರ ಸಂಬಂಧ ಬೆಳೆಯುತ್ತದೆ. ಸದಿಚ್ಛೆ ಸದ್‌ಭಾವನೆಗಳು ಮೂಡಿಬರುತ್ತವೆ. ಕನ್ನೆಯರು ತಮ್ಮ ತಮ್ಮ ಪ್ರಾಂತಗಳ ಶೀಲ, ಸಂಸ್ಕಾರ, ಆಚರಣೆ, ಭಾಷೆಗಳ 'ರಾಯಭಾರಿ' ಗಳಾಗಿ ನೆರೆಪ್ರಾಂತಗಳಲ್ಲಿ ನೆಲೆಸುತ್ತಾರೆಂದು ಹೇಳಬಹುದು. ಸದಿಚ್ಛೆಯನ್ನು ನಿರ್ಮಾಣಮಾಡಿ ಪ್ರಾಂತಗಳ ಪ್ರತ್ಯೇಕತೆಯ ಭಾವನೆಯನ್ನು ದೂರಮಾಡಿ, ಭಾರತದ ಐಕ್ಯತೆಗೆ ಭದ್ರ ತಳಹದಿಯನ್ನು ಹಾಕುವ ಹೊಣೆಯನ್ನು ಮಹಿಳೆಯರು ಯಶಸ್ವಿಯಾಗಿ ನಿರ್ವಹಿಸಬಲ್ಲರು. ಭಾರತದ ಸಂಸ್ಕೃತಿ ಒಂದು ಎಂಬುದನ್ನು ಅಳವಡಿಸಿಕೊಳ್ಳದೆ ದೇಶದ ಐಕ್ಯತೆ ಸಾಧಿಸದು. ಹಿಂದಿನಿಂದಲೂ ಇಂದಿನವರೆಗೆ, ನಮ್ಮ ಭಾರತದಲ್ಲಿ ನಡೆದು, ನುಡಿದು, ಹೋದ ಉಚ್ಚ ಆಚಾರ ವಿಚಾರ ಉಚ್ಚಾರಗಳನ್ನು ಆತ್ಮಗತ ಮಾಡಿಕೊಂಡು, ಅದರಂತೆ ಜೀವನವನ್ನು ರೂಪಿಸಿಕೊಂಡು, ಬದುಕನ್ನು ದೊಡ್ಡದನ್ನಾಗಿ ಮಾಡುವ ಮಹೋದ್ದೇಶದ ಅರಿವನ್ನು ಅರಗಿಸಿಕೊಂಡು, ಅಂಥ ಇರುವಿಗೆ ಇಂಬುಗೊಡುವ ಕುರುಹಾಗಿ ನಿಲ್ಲಬಲ್ಲರು ಮಹಿಳೆಯರು.

## ೩. ಕರ್ನಾಟಕದ ಏಕೀಕರಣ

ಭಾಷೆ, ಸಂಸ್ಕೃತಿ, ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಕನ್ನಡ ನಾಡು ಒಂದುಗೂಡಿದೆ. ಈ ದಿಶೆಯಲ್ಲಿ ಕರ್ನಾಟಕ ಏಕೀಕರಣದ ಒಂದು ಧ್ಯೇಯ ಸಾಧಿಸಿದೆ. ಏಕೀಕರಣದ ಬೇಡಿಕೆಯ ಹಿಂದೆ, ಇನ್ನೊಂದು ಧ್ಯೇಯ ಇದೆ. ಅದು, ಕನ್ನಡನೆಲ ಒಂದಾದರೆ ಸಾಲದು; ಕನ್ನಡ ಕುಲ, ಬಲ, ಕನ್ನಡ ಮನ ಒಂದಾಗಬೇಕು ಎಂಬುದು. ಈ ಎರಡನೆಯ ಉದ್ದೇಶ ಸಾಧಿಸದೆ ಹೋದರೆ ನಮ್ಮ ಪರಿಶ್ರಮ ನಿರರ್ಥಕವೆಂದು ಹೇಳಬಹುದು. ಬೇರೆ ಬೇರೆ ಆಡಳಿತ, ಕಾಯದೆ, ಕಾನೂನುಗಳಿಗೆ ಶತಮಾನಗಳಿಂದಲೂ ಒಳಗಾಗಿ ನಡೆದ ವಿವಿಧ ಭಾಗದ ಕನ್ನಡಿಗರು ಹೊಂದಿಕೊಂಡು ಹೋಗಲು ಕೆಲಕಾಲ ದುಸ್ತರವಾಗಬಹುದು. ಅವರಿಗೆ ಎಲ್ಲವೂ ಹೊಸದು. ಆದರೆ ಮಹಿಳೆಯರಿಗೆ ಇದು ಹೊಸದಲ್ಲ. ಮೈಸೂರಿನ ಕನ್ನೆ ಧಾರವಾಡಕ್ಕೂ, ಹುಬ್ಬಳ್ಳಿಯ ಕನ್ನೆ ಹೈದ್ರಾಬಾದಕ್ಕೂ ಹೀಗೆ ಶರೀರಸಂಬಂಧಗಳು ಬೆಳೆದು, ಆಯಾ ಜನಜೀವನದೊಡನೆ ಬೇರೆಬೇರೆ ಭಾಗದ ಕನ್ನಡಿತಿಯರು ಬೆರೆತುಕೊಂಡಿದ್ದಾರೆ. ಮನೆ ಕಟ್ಟಿ ಮನ

ಗೂಡಿಸಿಕೊಂಡಿದ್ದಾರೆ. ಕನ್ನಡ ಜನಮನವನ್ನು ಒಂದುಗೂಡಿಸುವ ದಿಶೆಯಲ್ಲಿಯೂ ಮಹಿಳೆಯರದೊಂದು ಹೆಜ್ಜೆ ಮುಂದಿದೆ. ಇನ್ನಾದರೂ ಅವರ ಪಾತ್ರ ಗುರುತರವಾದದ್ದು. ಅದನ್ನು ಅವರು ಗುರುತಿಸಕೊಳ್ಳಬೇಕು. ಕರ್ನಾಟಕದ ಭದ್ರತೆಗೆ, ತನ್ಮೂಲಕ ಭಾರತದ ಐಕ್ಯತೆಗೆ, ಮಹಿಳೆಯರು ಸಲ್ಲಿಸಬಹುದಾದ ಸೇವೆಯ ಅರಿವು ಹೆಚ್ಚುಹೆಚ್ಚಾಗಿ ಮೂಡಿ ಬರಬೇಕು.

ಕರ್ನಾಟಕ ಪ್ರಾಂತವು ಜನ್ಮ ತಳೆದಿದೆ. ಇದರ ಪೂರ್ವದಲ್ಲಿ ಕನ್ನಡಿಗರು, ಕನ್ನಡಿತಿಯರು ಬೆಂದ ವೇದನೆ, ತಿಂದ ಬೇನೆ, ಅನಂತ. "ನೊಂದ ನೋವು ನೋಯದವರೆತ್ತ ಬಲ್ಲರು"? ಹೊಸದಾಗಿ ಹುಟ್ಟಿದ ಈ ಪ್ರಾಂತದ ಪಾಲನೆ, ಪೋಷಣೆ ಬಹು ದೊಡ್ಡ ಹೊಣೆ. ತಾಯಿಗರುಳಿನ ಕಕ್ಕುಲಾತಿಯ ಕಾರುಣ್ಯದಲ್ಲಿ, ತಾಯ್ ಉಡಿಯ ಪಾಲನೆಯಲ್ಲಿ, ನಾಡು ಇಂದು ಬೆಳೆದು ಬಾಳಬೇಕಾಗಿದೆ. ತಾಯಿ ಕೂಸನ್ನು ಬೆಳೆಸುವ ರೀತಿಯನ್ನು ಯಾರು ಅರಿಯರು? ಕಂಣು ದೀವಿಗೆ ಮಾಡಿ, ಕೈ ತೊಟ್ಟಿಲಮಾಡಿ, ತನ್ನ ರಕುತವನೆ ಪಾಲುಮಾಡಿ, ಮುತ್ತು ಜೇನುಮಾಡಿ, ನಿದ್ದೆ ನೀರಡಿಕೆಗಳನ್ನು ತೊರೆದು, ತನ್ನನ್ನೇ ತಾನು ಮರೆತು ಬೆಳೆಸುವಳು; ಕೂಸು ತಾ ಬೆಳೆಯಲಿ, ಬೆಳೆದು ದೊಡ್ಡದಾಗಲಿ, ಧೃಢಕಾಯವಾಗಲಿ ಎಂದು ತಾಯಿ. 'ಭಾವನೆಯೇ ಎನಗೆ ಇದು ಜೀವನ' ಎಂದು ಕನ್ನಡಿತಿಯು ನುಡಿದಿದ್ದಾಳೆ. ಪವಿತ್ರ ಭಾವನೆಯೇ ಪರಮ ಧ್ಯೇಯ ಸಾಧನೆಗೆ ಸ್ಫೂರ್ತಿಯ ನೆಲೆಯಾಗಿದೆ.

ನಾಡು ಹುಟ್ಟಿಬರುವ ಇಂದಿನ 'ಲೇಸು' ದಿನದಲ್ಲಿ ಮೇಲಿನ ಮಾತನ್ನು ವಿವರಿಸಿ ಹೀಗೆ ಹೇಳಬಹುದು. ಕನ್ನಡಿತಿಯರು ತಿಳಿನೋಟವನ್ನು ತಳೆದು (ಕಂಣು ದೀವಿಗೆ ಮಾಡಿ), ಕ್ರಿಯಾಶೀಲರಾಗಿ (ಕೈ ತೊಟ್ಟಿಲ ಮಾಡಿ) ತಮ್ಮ ಸರ್ವಶಕ್ತಿಯನ್ನು ಧಾರೆಯೆರೆದು, ಪ್ರೇಮ ಮೂರುತಿಗಳಾಗಿ, ಕಷ್ಟಸಹಿಷ್ಣುಗಳಾಗಿ, ಸರ್ವಾರ್ಪಣ ಭಾವದಿಂದ ಪ್ರೇರಿತರಾಗಿ ನಾಡುನುಡಿಗಳ ಸೇವೆಗೆ ಅಣಿಯಾದರೆ ನಮ್ಮ ನಾಡು ಸಮೃದ್ಧ ಶಾಂತಿಯ ಬೀಡಾಗಬಲ್ಲುದು. ನಾಡು ಉದಯವಾದರೂ ಕೆಲವು ಕನ್ನಡ ಗಡಿಭಾಗ ಇನ್ನೂ ಕನ್ನಡಕ್ಕೆ ಸೇರಬೇಕಾಗಿದೆ. ಅಲ್ಲಿ ಕನ್ನಡತನ ಬದುಕಬೇಕಾಗಿದೆ. ಆ ದಿಶೆಯಲ್ಲಿಯೂ ಕನ್ನಡಿತಿಯರು ತಮ್ಮ ಪಾತ್ರ ಅರಿತಿರಬೇಕು. ಮಹಿಳೆಯರು ನಿಸರ್ಗದತ್ತವಾದ ತಮ್ಮ ಈ ಗುಣಗಳನ್ನು, ತಮ್ಮ ಕೂಸಿನಲ್ಲಿ ಇಡಬಹುದಾದ ಮಮತೆ, ಪ್ರೀತಿಗಳನ್ನು, ನಾಡಿನ ಬಗ್ಗೆ ತಳೆದರೆ ಕನ್ನಡನಾಡು ಚಲುವಾಗಿ, ಬಲವಾಗಿ, ಗೆಲುವಾಗಬಲ್ಲುದು.

## ೪. ಸ್ತ್ರೀಬಲದ ಸದುಪಯೋಗ

ಕರ್ನಾಟಕದಲ್ಲಿ ಜನಸಂಖ್ಯೆಯ ಸುಮಾರು ಅರ್ಧದಷ್ಟು ಸ್ತ್ರೀಯರಿದ್ದಾರೆ. ಈ ಸ್ತ್ರೀಬಲದ ಸದುಪಯೋಗವು ನಾಡಿಗೆ ಹೇಗಾದೀತು, ಯಾವ ಯಾವ ರೀತಿಯಿಂದ ಯಾವ ಯಾವ ಕ್ಷೇತ್ರದಲ್ಲಿ ಮಹಿಳೆಯರು ತಮ್ಮ ಸೇವೆ ಸಲ್ಲಿಸಬಲ್ಲರು, ಅವರ ಇತಿಮಿತಿಗಳೇನು, ಗತಿಮತಿಗಳೇನು ಎಂಬುದರ ಪೂರ್ಣ ಕಲ್ಪನೆ ಇರಬೇಕು. ಕನ್ನಡ ಮಹಿಳೆಯರು ಭಾರತೀಯ ಮಹಿಳೆಯರ ಒಂದಂಗ

ವೆಂಬುದನ್ನು ಯಾವಾಗಲೂ ಮರೆಯಕೂಡದು. ಕನ್ನಡ ಮಹಿಳೆಯರ ಅನೇಕ ಸಮಸ್ಯೆಗಳು ಭಾರತದ ಇತರ ಸ್ತ್ರೀಸಮಸ್ಯೆಗಳೊಡನೆ ಬಹುಮಟ್ಟಿಗೆ ಬೆರೆತು ಕೊಂಡಿವೆ. ಈ ಸಂದರ್ಭದಲ್ಲಿ ಸಮಸ್ತ ಕನ್ನಡ ಮಹಿಳೆಯರು ಭಾರತದ ಪ್ರಗತಿಗೆ ಹೇಗೆ ಅನುಕೂಲರಾಗಿ ವರ್ತಿಸಬಹುದು ಎಂಬುದನ್ನು ಅರಿಯಬೇಕು. ಆ ದೃಷ್ಟಿಯನ್ನು ಇಟ್ಟುಕೊಂಡು ಪ್ರಾಂತಪ್ರಾಂತಗಳು ಸಮೃದ್ಧವಾಗಬೇಕು. ಕರ್ನಾಟಕವು ಸರ್ವತೋಮುಖವಾಗಿ ಪ್ರಗತಿಹೊಂದಿದರೆ ಅದು ಭಾರತದ ಒಟ್ಟು ಏಳ್ಗೆಯ ಒಂದು ಭಾಗ.

ಕನ್ನಡ ತಾಯಿಗರಳು, ಕನ್ನಡ ಸ್ತ್ರೀಬಲವು, ಪೂರ್ವಕಾಲದಿಂದಲೂ ಕರ್ನಾಟಕಕ್ಕೆ ಒಂದು ದೊಡ್ಡ ಸಂಪತ್ತಾಗಿ ಪರಿಣಮಿಸಿದೆ. ಕರ್ನಾಟಕದ ಇತಿಹಾಸವು ಈ ಮಾತಿನ ಸತ್ಯತೆಯನ್ನು ಸಾರಿ ಹೇಳುತ್ತದೆ. ಅಧ್ಯಾತ್ಮಿಕ, ಸಾಹಿತ್ಯಿಕ, ಸಾಮಾಜಿಕ, ರಾಜಕೀಯ ವಿವಿಧ ಕ್ಷೇತ್ರಗಳಲ್ಲಿ ಜಗತ್ತಿಗೆ ಆದರ್ಶನೀಡಬಲ್ಲ ಮಹಾ ಸತಿಯರು ಬೆಳೆದು ಬಾಳಿ, ಕನ್ನಡ ಮಹಿಳೆಯರ ಅಂಗಾಂಗಗಳಲ್ಲಿ ಬೆರೆತು ಹೋಗಿದ್ದಾರೆ. ಭಾರತದ ಶ್ರೇಷ್ಠ ಮತಸ್ಥಾಪಕರಿಗೆ, ಯೋಧರಿಗೆ, ಕವಿಚಕ್ರವರ್ತಿಗಳಿಗೆ, ಜನ್ಮ ಕೊಟ್ಟ ಮಾತೆಯರು ಕನ್ನಡಿತಿಯರು. ಕರ್ನಾಟಕದ ಮಹಾಸತಿಯರ, ಯೋಗಿನಿಯರ, ಕವಯಿತ್ರಿಯರ, ರಾಣಿಯರ, ಇನ್ನೂ ಹಲವಾರು ಕ್ಷೇತ್ರಗಳಲ್ಲಿ ಪರಿಪರಿಯಾಗಿ ದುಡಿದ ನಾರೀಮಣಿಗಳ ಹೆಸರಿನ ಪಟ್ಟಿಯೊಂದನ್ನು ತಯಾರಿಸಿದರೆ ಅಷ್ಟೊಂದು ಸಂಖ್ಯೆ ಜಗತ್ತಿನ ಇನ್ನಾವ ಮೂಲೆಯಲ್ಲಿಯೂ ದೊರಕಲಾರದು. ಇದು ಕನ್ನಡಿತಿಯರಿಗೆ ಅಭಿಮಾನದ ಸಂಗತಿ.

ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ಕನ್ನಡ ಮಹಾಯೋಧರ, ಮಹಾರಾಜರ ಪರಂಪರೆಯನ್ನು ಹೊತ್ತು ಬಂದಾಗ ಅದನ್ನು ಕನ್ನಡಿತಿಯರು ನಡಿಸಿಕೊಂಡು ಬಂದಿದ್ದಾರೆ. ವೈರಿಗಳನ್ನು ಹಿಮ್ಮೆಟ್ಟಿದ್ದಾರೆ. ಅಂಥ ' ಅಜಿತೆ ' ನಮ್ಮಲ್ಲಿ ಇದ್ದಾಳೆ. ಇಂದಿನ ಪನಾಹಳಗಡದ (ಪನ್ನವಳೆ) ವರೆಗೂ ರಾಜ್ಯವನ್ನು ವಿಸ್ತರಿಸಿ ಸತತ ನಾಲ್ವತ್ತೈದು ವರ್ಷರಾಜ್ಯ ಕಾರಭಾರವನ್ನು ನಡೆಯಿಸಿದ ಪಶ್ಚಿಮ ಚಾಲುಕ್ಯ ರಾಜಾವಿಕ್ರಮಾದಿತ್ಯನ ತಂಗಿ ಅಕ್ಕಾದೇವಿ ಇದ್ದಾಳೆ. ವಿದ್ಯಾ ಪ್ರಸಾರದ ಹಿರಿಯ ಅರಸುತನದ ಹೊಣೆಯನ್ನು ಹೊತ್ತು ನಡೆಯಿಸಿದ ಮಾಳಲ ದೇವಿ ಇದ್ದಾಳೆ. ರಾಜ್ಯದಲ್ಲಿ ಪುಂಡರ ಹಾವಳಿಯನ್ನು ಅಡಗಿಸಲು ಪರಿಪರಿಯಾಗಿ ಹೋರಾಡಿದ ಕಾರ್ನಾಡ ರಾಣಿ ಇದ್ದಾಳೆ. ಔರಂಗಜೇಬನಂಥ ಮೊಗಲ ಸಮ್ರಾಟನ ವೈರವನ್ನು ಲೆಕ್ಕಿಸದೆ ಹಿಂದೂ ರಾಜ್ಯಸ್ಥಾಪಕ ಶಿವಛತ್ರಪತಿ ಶಿವಾಜಿ ಮಹಾರಾಜನ ಮಗನಾದ ರಾಜಾರಾಮನಿಗೆ ಆಶ್ರಯವನ್ನು ಕೊಟ್ಟು, ಮೊಗಲರನ್ನು ಮಣಿಸಿ, ಹಿಂದೂ ರಾಜಕುವರನನ್ನು ತನ್ನ ಸೈನ್ಯವನ್ನು ಕೊಟ್ಟು ಚಂದಿಯ ಗಡಕ್ಕೆ ತಲುಪಿಸಿ, ಇಂದಿನ ಇಡಿ ಮಹಾರಾಷ್ಟ್ರದ ಪುಣ್ಯ ಕಟ್ಟಿಕೊಂಡ ಕೆಳದಿಯ ಚನ್ನಮ್ಮಾಜಿ ಇದ್ದಾಳೆ. ಅಷ್ಟೇ ಏಕೆ, ಶಿವಾಜಿ ಮಹಾರಾಜನನ್ನೇ ಎದುರಿಸಿ ಹೋರಾಡಿದ ವೀರೆ ಬೆಳವಡಿ ಮಲ್ಲಮ್ಮಾಜಿ ಇದ್ದಾಳೆ.

ಚಂಡಿಯೋ ಬೇಡಿಯೋ ಮಾರಿಯೋ ಮಸಣಿಯೋ
ಖಂಡಿತ ಮಾನಿನಿ ಇವಳಲ್ಲ !

ಗೆಂಡುಗಲಿಗಳ ಮಾರಿ ರುಂಡವ ತರಿವಳು
ಮಹಂಮಾಯೆಯಲ್ಲದೆ ಬೇರೆಯಲ್ಲ ||
ಪುಂಡ ರಕ್ಕಸರ ಹಿಂಡು ಮುರಿದ ಚಾಮುಂಡಿಯೇ
ಈಕೆಯು ಸುಳ್ಳಲ್ಲ ||
ಚಂಡ ಪ್ರಚಂಡರ ತಂಡವೇ ಕುಂದೀತು ಎಂಬುವ
ಶಬುದವೇ ರಣವೆಲ್ಲ ||

ಕನ್ನಡ ನಾಡಿನ ಸ್ವಾತಂತ್ರ್ಯಕ್ಕಾಗಿ ಬ್ರಿಟೀಷರೊಡನೆ ಹೋರಾಡಿ "ಭಾರತ ದಿಂದ ತೊಲಗಿರಿ" ಎಂಬ ಮಹಾ ಘೋಷಣೆಯನ್ನು 1824ರಲ್ಲಿಯೇ ಸಾರಿ, ಬ್ರಿಟೀಷ್ ಕಲೆಕ್ಟರ್ ಥ್ಯಾಕರೆಯನ್ನು ಚಂಡಾಡಿದ ಶೂರ ಕಿತ್ತೂರ ಚನ್ನಮ್ಮ ರಾಣಿ ಇದ್ದಾಳೆ. ಹತಾಶಳಾಗಿ ಬಿದ್ದಾಗ ಕನ್ನಡನಾಡಿನ ದುರ್ದಿನಗಳನ್ನು ಕಂಡು, ಕನ್ನಡದ ಕೆಚ್ಚೆದೆ ಹರಿಯಿತೆಲ್ಲಿಗೆ ಎಂದು ಕಳವಳಗೊಂಡು ಪ್ರಾಣಬಿಟ್ಟ ಆ ವೀರರಾಣಿಯನ್ನು ನೆನೆಯಬೇಕು. ಹೈದರನ ಹಿಡಿತದಿಂದ ಚಿತ್ರದುರ್ಗದ ಕೋಟೆ ಯನ್ನು ರಕ್ಷಿಸಿದ ಓಬಿಯನ್ನೂ ನಾವು ನೆನೆಯಬೇಕು.

ರತಿಯನ್ನಳ್ ರೂಪಿಂ ಭಾ
ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ
ಕ್ಷಿತಿಯನ್ನಳ್ ಪೆರ್ಮೆಗರುಂ
ಧೃತಿಯನ್ನಳ್ ಜಕ್ಕಿಯಬ್ಬೆ ಕಾಂತಾರತ್ನಂ ||

ರೂಪಿನಲ್ಲಿ ರತಿ, ವಾಗ್‌ವಿಲಾಸದಲ್ಲಿ ಸರಸತಿ, ವೈಭವದಲ್ಲಿ ವಸುಂಧರೆ, ಪತಿವ್ರತಹಿರಿಮೆಯಲ್ಲಿ ಕಾಂತಾರತ್ನವೆನಿಸಿಕೊಂಡ ಜಕ್ಕವ್ವೆ, ಆದರಂತೆ ಜಗ ನ್ಮೋಹಿನಿ, ಚಂಚಲೆ, ಮೊದಲಾದವರು ಕನ್ನಡತಿಯರು. ಕಲೆಯನ್ನು ಹೊತ್ತು ಬೆಳೆಯಿಸಿ ನಾಡಿನ ತುಂಬೆಲ್ಲ ಕಲೆಯನ್ನೇ ಹರಡಿದ ಲೋಕಮಹದೇವಿ ಸಾವಲದೇವಿ, ಆಚಿಯಕ್ಕರು ಕನ್ನಡತಿಯರು. ಜ್ಞಾನ ಸಂಸ್ಕೃತಿ ಪ್ರಸಾರದ ಕಾರ್ಯವನ್ನು ಅರಿತು ಜ್ಞಾನಜ್ಯೋತಿಯಿಂದ ಕನ್ನಡದ ಕತ್ತಲೆಯನ್ನು ಕಳೆದ ವಿಜಯಕ್ಕ, ಉಭಯ ಭಾರತಿ, ಕಂತಿ, ಲೀಲಾವತಿ, ಗಂಗಾದೇವಿ ಮೊದಲಾದ ವರು ಕನ್ನಡತಿಯರು.

ಪೆಣ್ಣಲ್ಲವೆ ನಮ್ಮನೆಲ್ಲ ಪಡೆದ ತಾಯಿ ?
ಪೆಣ್ಣಲ್ಲವೆ ಪೊರೆದವಳು ?
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು !

—ಎಂದು ಹೆಂಣಿನ ಹಿರಿಮೆಯನ್ನು, ಹದಿಬದೆಯ ಧರ್ಮವನ್ನು, ತೋರಿಸಿ ಕೊಟ್ಟ ಹೊನ್ನಮ್ಮ, ಕಂತಿ ರನ್ನನನ್ನು ಕನ್ನಡಕ್ಕೆ ಕೊಟ್ಟ ಅತ್ತಿಮಬ್ಬೆ ಎಲ್ಲರೂ ಕನ್ನಡತಿಯರೇ. ಹದಿಬದೆಯ ಧರ್ಮದ ಹಿರಿಮೆಯನ್ನು ತಮ್ಮ ಜೀವನದಲ್ಲಿ ತೋರಿಸಿಕೊಟ್ಟ ದೇಕಬ್ಬೆ, ಸುಗ್ಗಲದೇವಿ, ಸುಗ್ಗತಿ, ನೀಲಲೋಚನೆ, ಗಂಗಾಂಬಿಕೆ, ಇನ್ನೂ ಅಸಂಖ್ಯಾತ ನಾರಿರತ್ನಗಳೆಲ್ಲ ಕನ್ನಡತಿಯರೆ.

ಜಗತ್ತಿನ ಇತಿಹಾಸದಲ್ಲಿಯೇ ವೈರಾಗ್ಯದಲ್ಲಿ, ಜ್ಞಾನದಲ್ಲಿ, ಸ್ತ್ರೀತೇಜ ಬಲದಲ್ಲಿ, ಗೂಢತತ್ವಜ್ಞಾನದ ನಿರೂಪಣೆಯಲ್ಲಿ, ಸಾಹಿತ್ಯ ನಿರ್ಮಾಣದಲ್ಲಿ, ಅಲ್ಲಮ ಪ್ರಭುವಿನಂಥ ಮಹಾಜ್ಞಾನಿಗೆ ತನ್ನ ಹಿರಿಮೆಯನ್ನು ತೋರಿಸಿಕೊಟ್ಟ ಅಕ್ಕ, ಮಹಾದೇವಿ ಅಕ್ಕ. ಅವಳು ಕನ್ನಡದ ಹಿರಿಯಕ್ಕ. ಅದರಂತೆ ಮುಕ್ತಾಯಕ್ಕ, ನೀಲಲೋಚನೆ, ನೀಲಾಂಬಿಕೆ, ಮೊದಲಾದವರ ಜೀವನದ ಒಂದೊಂದು ಘಟನೆಯನ್ನು ಅಭ್ಯಸಿಸಿದರೆ ಹೆಂಣು ಜನುಮ ಪಾವನವಾದೀತು. ಅಂಥ ಕನ್ನಡತಿಯರವರು. ಕಾಶ್ಮೀರದ ಅರಸಿ ಪಟ್ಟವನ್ನು ಬಿಟ್ಟುಬಂದ ಮೋಳಗೆಯ ಮಹಾದೇವಿ ಬೊಂತಾದೇವಿ ಕನ್ನಡ ನೆಲಕ್ಕೆ ಬಂದರು, ಕನ್ನಡತಿಯರಾಗಿ ಬಾಳಿದರು.

ಶಿವನಿಗೆ ತಾಯಿಯಾಗಲು ಬಯಸಿ ಶಿವನನ್ನು ಮಗನನ್ನಾಗಿ ಪಡೆದಳು ಮುಗ್ಧ ಅಮ್ಮವ್ವೆ. ಶಿವನನ್ನು ಮಗನನ್ನಾಗಿ ಪಡೆದ ಕನ್ನಡತಿಯರು ಇನ್ನಾರಿಗೆ ತಾಯಂದಿರಾಗಲಿಕ್ಕಿಲ್ಲ? ಶಿವನಿಗೆ ತಾಯಿಯಾದರೂ ತನ್ನ ರಾಟೆ ಕಾಯಕ ಬಿಡಲಿಲ್ಲ ಆ ಕನ್ನಡತಿ. ಒಂದೊಂದು ಕ್ಷೇತ್ರದಲ್ಲಿ ತಮ್ಮ ತಮ್ಮ ಶೀಲ ಗುಣಗಳನ್ನೂ ತೋರಿಸಿದ ಸೋಮವ್ವೆ, ಸತ್ಯಕ್ಕ, ವಿಮಳಾದೇವಿ, ವೀರದೇವಿ, ಶಿವದೇವಿ, ನಾಗಲಾಂಬಿಕೆ, ಲಿಂಗಮ್ಮ, ರಾಯಮ್ಮ, ಮಸಣಮ್ಮ, ತಾಳಮ್ಮ, ತಿಮ್ಮವ್ವೆ—ಒಬ್ಬರೇ, ಇಬ್ಬರೇ ಎಲ್ಲರೂ ಕನ್ನಡತಿಯರೆ.

'ಸಮತಾವಾದ ಪದ್ಧತಿಯ ಸಮಾಜ ರಚನೆಯನ್ನು' ತನ್ನ ಧ್ಯೇಯವನ್ನಾಗಿ ಇಟ್ಟುಕೊಂಡ ಇಂದಿನ ನಮ್ಮ ರಾಷ್ಟ್ರಕ್ಕೆ ಸ್ಫೂರ್ತಿಯ ನೆಲೆಯಾಗಿದೆ ನಮ್ಮ ಕರ್ನಾಟಕ. ಅಂಥ ಪಾಠವನ್ನು ಓರ್ವ ಕನ್ನಡತಿ ಕಲಿಸಿದ್ದಾಳೆ. ದಿನಕ್ಕೆ ಬೇಕಾಗುವ ದರಕ್ಕಿಂತಲೂ ಹೆಚ್ಚಿನ ಅಕ್ಕಿಯನ್ನು ತಂದು ಸಂಗ್ರಹಿಸಿದ ಆಯದಕ್ಕಿ ಮಾರಯ್ಯನಿಗೆ ಲಕ್ಕಮ್ಮನು ಬುದ್ಧಿ ಹೇಳಿ ಹೆಚ್ಚಾದ ಅಕ್ಕಿಯನ್ನು ಬಡವರಲ್ಲಿ ಹಂಚುತ್ತಾಳೆ. ಆ ಆಯದಕ್ಕಿ ಲಕ್ಕಮ್ಮ ಭಾರತಕ್ಕೆ ಆದರ್ಶಪ್ರಾಯಳಾದ ಕನ್ನಡತಿ. ನಾವರಿಯದ ಅದೆಷ್ಟೋ ಕನ್ನಡತಿಯರಿಗೆ ನಮ್ಮ ಪ್ರಣಾಮಗಳು. ಈ ಹಿರಿಸತಿಯರ ಜೀವನದ ಬೆಳಕು ನಮ್ಮ ಮಹಿಳೆಯರಲ್ಲಿ ಮೂಡಿ ಬರಬೇಕಾದರೆ ಒಬ್ಬೊಬ್ಬರ ಜೀವನವನ್ನು ಕುರಿತು ಇನ್ನೂ ವಿವರವಾದ ಸಂಶೋಧನೆಯಲ್ಲಿ ತೊಡಗಿ ಸಾಹಿತ್ಯ ನಿರ್ಮಾಣಕ್ಕೆ ತೊಡಗಬೇಕು. ಒಂದು ಜನಾಂಗವು ಮುಂದುವರೆಯಬೇಕಾದರೆ ಅವರ ಪೂರ್ವಜರು ಸಾಧಿಸಿದ ಮಹತ್‌ಕಾರ್ಯಗಳ ಸಜೀವ ಶಕ್ತಿಯು ನರನಾಡಿಗಳಲ್ಲಿ ಹರಿಯಬೇಕು.

## ೫. ಸ್ತ್ರೀ ಶಿಕ್ಷಣ

ಇಂದಿನ ಕರ್ನಾಟಕದಲ್ಲಿ ಸ್ತ್ರೀ ಶಿಕ್ಷಣವು ಬಹಳ ಹಿಂದುಳಿದಿದೆ. ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರು ಕೇವಲ ಬೆರಳುಮೇಲೆ ಎಣಿಸುವಷ್ಟು ಮಾತ್ರ ಇದ್ದಾರೆ. ನಿರಕ್ಷರತೆಯ ನಿರ್ಮೂಲನ ಮಾಡದೆ ಮಹಿಳೆಯರಿಗೆ ಅಂಟಿಕೊಂಡ ಶಾಪ ದೂರಾಗಲಾರದು. "ಸ್ತ್ರೀಯರು, ಶೂದ್ರರು, ಶಿಕ್ಷಕರು, ಇವರೆಲ್ಲರನ್ನೂ ಒಂದೇ ರೀತಿಯಲ್ಲಿ ಕಾಣುತ್ತಾರೆ ಭಾರತದಲ್ಲಿ" ಎಂದು ಓರ್ವ ಬ್ರಿಟೀಷ ಶಿಕ್ಷಣ ತಜ್ಞರು ಹೇಳಿದ್ದಾರೆ. ಅಂದರೆ ಈ ಮೂವರ ಸಮಸ್ಯೆಗಳೂ ಕೆಲವೊಂದರಲ್ಲಿ ಸಾಮ್ಯವಿವೆ.

ಶಿಕ್ಷಣದ ಮಾನ ಮಟ್ಟಗಳನ್ನು ಎತ್ತರಿಸುವದರಲ್ಲಿ, ಅಸ್ಪೃಶ್ಯತೆಯ ನಿವಾರಣೆ ಯಲ್ಲಿ, ಸ್ತ್ರೀಯರ ಬಂಧವಿಮೋಚನೆಯಲ್ಲಿ ಸರಕಾರವು ಅನೇಕ ಕಾಯದೆ ಕಾನೂನು ಗಳನ್ನು ರಚಿಸುತ್ತಲಿದೆ. ಅವೆಲ್ಲವೂ ಯಶಸ್ವಿಯಾಗಬೇಕಾದರೆ ಮಹಿಳೆಯರು ಸರಕಾರದೊಡನೆ ಸಹಕರಿಸಿ ಸೇವೆ ಸಲ್ಲಿಸಬೇಕು. ಸುಶಿಕ್ಷಿತ ಮಹಿಳೆಯರು ಅಶಿಕ್ಷಿತ ಮತ್ತು ಹಳ್ಳಿಯ ಮಹಿಳೆಯರ ಉದ್ಧಾರಕ್ಕಾಗಿ ಸರಕಾರವು ಯೋಜಿ ಸಿದ ಯೋಜನೆಗಳಲ್ಲಿ ಆಸಕ್ತಿಯಿಂದ ಭಾಗವಹಿಸಬೇಕು.

ಪ್ರತ್ಯೇಕವಾಗಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರ ಗಳಲ್ಲಿಯೂ ಮಹಿಳೆಯರು ಕಾರ್ಯಕ್ಷೇತ್ರವನ್ನು ವಿಸ್ತರಿಸುತ್ತ ಹೋಗಬೇಕು. ಇಲ್ಲಿ ಒಂದು ಮಾತನ್ನು ಕನ್ನಡ ಮಹಿಳೆಯರು ಲಕ್ಷದಲ್ಲಿಡಬೇಕು. ಸ್ತ್ರೀಯು ಪುರುಷನ ಪ್ರತಿಸ್ಪರ್ಧಿ ಅಲ್ಲ. ಆದರೆ ಸ್ತ್ರೀಯು ಪುರುಷನಿಗೆ ಪೋಷಕಳಾಗಿದ್ದಾಳೆ. ಉಭಯ ದೃಷ್ಟಿಯಿಂದ ದೃಷ್ಟವು ಕಾಣುವಂತೆ ಸ್ತ್ರೀ ಪುರುಷರು ಪರಸ್ಪರ ಪೋಷಕರಾಗಿ ಮಾಡುವ ಸೇವೆಯು ಜನಾಂಗಕ್ಕೆ ಹಿತವಪ್ಪುದು. ಗಾಂಧೀಜಿ ಯವರ ಮಾತಿನಲ್ಲಿ ಹೇಳಬೇಕಾದರೆ ಸ್ತ್ರೀ ಪುರುಷರಿಬ್ಬರು ' ಪರಸ್ಪರ ಪಾಲಕರು, ಚಾಲಕರು, ಮಾಲಕರು '' ಎಂದು ಹೇಳಬಹುದು.

## ೬. ಬಾಪೂಜಿ ದಾರಿ

ಕರ್ನಾಟಕವು ' ಗಾಂಧೀ ಪ್ರಾಂತ ' ವೆಂದು ಕರೆಯಿಸಿಕೊಂಡಿದೆ. ಕನ್ನಡ ಮಹಿಳೆಯರು ಸ್ತ್ರೀಯರ ಬಗ್ಗೆ ಬಾಪೂಜಿಯವರ ವಿಚಾರಗಳನ್ನು ಲಕ್ಷಕ್ಕೆ ತಂದು ಕೊಳ್ಳಬೇಕು. ಏಕೆಂದರೆ ಕನ್ನಡ ಮಹಿಳೆಯರಿಂದು ಆದರ್ಶವಾದದ ದುರ್ಗಮ ದಾರಿಯಲ್ಲಿ ನಡೆಯಬೇಕಾಗಿದೆ. '' ಮಹಿಳೆ ಮನೆ ಕಟ್ಟಿದಳು ; ಪುರುಷ ಅಲ್ಲಿ ವಾಸಿ ಸಿದನು '' ಎಂದು ಹೇಳುತ್ತಾರೆ. ಹೀಗೆ ಕನ್ನಡ ಮಹಿಳೆಯರು ಉಚ್ಚ ಆದರ್ಶದ ಭವ್ಯ ಮಂದಿರವನ್ನು ನಿರ್ಮಿಸಬೇಕಾಗಿದೆ. ತಮ್ಮ ಕಾರ್ಯಕ್ಷೇತ್ರವನ್ನು ಭಾರತಕ್ಕೂ, ಭಾರತದಿಂದ ವಿಶ್ವಕ್ಕೂ ವಿಸ್ತೃತಗೊಳಿಸಬೇಕು. ಅಂಥ ಶಕ್ತಿಯು ಕನ್ನಡ ಮಹಿಳೆಯರಲ್ಲಿ ಪರಂಪರಾನುಗತವಾಗಿ ಬೆಳೆದು ಬಂದಿದೆ. ಆದ್ದರಿಂದ ಬಾಪೂಜಿಯವರ ಆದರ್ಶ ವಿಚಾರಗಳನ್ನೂ, ಸತ್ಯ ನುಡಿಗಳನ್ನೂ ಇಲ್ಲಿ ಉಲ್ಲೇಖಿ ಸಲಾಗಿದೆ.

> '' ಜಗತ್ತಿನ ಹಿಂಸಾಮಯ ಅನಂತ ಅತ್ಯಾಚಾರದ ಅಪರಂಪಾರ ವಾದ ಭಾವನೆಯು ಸ್ತ್ರೀಯರಿಗೆ ತಿಳಿದುಬಂದರೆ, ಜಗತ್ತಿನ ಮೇಲೆ ಶಾಂತಿಪರ್ವವು ಪ್ರಾರಂಭವಾಗಲು ಕ್ಷಣಮಾತ್ರ ಅವಧಿಯು ಹತ್ತ ಲಿಕ್ಕಿಲ್ಲ ''.

> '' ಮಾನವೀ ಜೀವನದ ಶಿಖರದ ಮೇಲೆ ಅಹಿಂಸಾಮಯ ಪವಿತ್ರ ಪತಾಕೆಯನ್ನು ಹಾರಾಡಿಸುವ ನಿಜವಾದ ಶ್ರೇಯಸ್ಸನ್ನೂ ಸ್ತ್ರೀಯು ಕೈ ವಶಮಾಡಿಕೊಳ್ಳಬೇಕು ''.

> '' ಯುದ್ಧದ ಖಡ್ಗವು ಸದೈವ ಜಗತ್ತಿನ ಕಲೆಯ ಮೇಲೆ ತೂಗಾಡು ತ್ತಿರುತ್ತದೆ. ವಿಶ್ವಶಾಂತಿಯ ನಿಜವಾದ ವಿಧಾನವು ಸ್ತ್ರೀಯರಲ್ಲಿದೆ.

ಹೀಗಿದ್ದರೂ ವಿಶ್ವಶಾಂತಿಗಾಗಿ ಸ್ತ್ರೀಯರು ಏನೂ ಪ್ರಯತ್ನ ಮಾಡಲಿಲ್ಲ. ಇದರ ಬಗ್ಗೆ ನನಗೆ ನಾಚಿಕೆಯಾಗಿದೆ.''

''ಅಹಿಂಸೆಯ ಕ್ಷೇತ್ರದಲ್ಲಿ ಆದರ್ಶಪ್ರೇರಿತರಾಗಿ ಧೀರತನದಿಂದ ಮುನ್ನುಗ್ಗುವ ಶಕ್ತಿಯಲ್ಲಿ ಪುರುಷರಿಗಿಂತಲೂ ಸ್ತ್ರೀಯು ಅಧಿಕಗುಣ ಸಂಪನ್ನಳಾಗಿದ್ದಾಳೆ.''

ನಿಸರ್ಗದತ್ತವಾದ ಈ ಸ್ತ್ರೀ ಗುಣಗಳನ್ನು ಬಾಪೂಜಿ ತೋರಿಸಿಕೊಟ್ಟಿದ್ದಾರೆ. ಸ್ವಭಾವತಃ ರಚನಾತ್ಮಕ ಪ್ರವೃತ್ತಿವುಳ್ಳ ಸ್ತ್ರೀಯು ವಿಧಾಯಕ ಕಾರ್ಯಗಳಲ್ಲಿ ಮನ ತೊಡಗಿಸಬೇಕು. ಈ ಆದರ್ಶಗಳನ್ನು ಕನ್ನಡ ಮಹಿಳೆಯರು ಇಟ್ಟುಕೊಂಡು ಕನ್ನಡದ ಕೀರ್ತಿಯನ್ನು ಹೆಚ್ಚಿಸಿದರೆ ಅದಕ್ಕಿಂತಲೂ ಹೆಚ್ಚಿನ ಪಾತ್ರ ಬೇರೆ ಇಲ್ಲವೆಂದು ಹೇಳಬಹುದು.

ಕನ್ನಡ ತಾಯಿಯ ತೇಜವನ್ನು, ಬಲವನ್ನು, ಸತ್ವವನ್ನು ಅಳವಡಿಸಿಕೊಂಡು ಕನ್ನಡ ಮಹಿಳೆಯರು ಭಾರತಾಂಬೆಯ ಪ್ರೇಮಪುತ್ರಿಗಳಾಗಿ ಮಾನವೀ ಜೀವನವನ್ನು ಸುಖ ಸಮೃದ್ಧಿ ಶಾಂತಿಯೆಡೆಗೆ ಕರೆದೊಯ್ಯಲು ದಾರಿತೋರುವ ಧ್ರುವತಾರೆಗಳಾಗಲಿ, ಶಕ್ತಿ ಶುಭದಾಯಿನಿಯರಾಗಲಿ. ಅಂಥ ಶಕ್ತಿಯನ್ನು ಕನ್ನಡ ಭುವನೇಶ್ವರಿ ನಮಗೆ ಕರುಣಿಸಲಿ.

ಜಯ ಕನ್ನಡ

---

# ಕನ್ನಡ ಜನಪದ ಕಾವ್ಯ

ಲೇಖಕರು :
ಶ್ರೀಮಾನ್ ಎಸ್. ಎಮ್. ದೇಸಾಯಿಯವರು, ಬೆಳಗಾವಿ.

## ೧. ಹೊಸ ಜೀವಶಕ್ತಿ

ಹಪ್ಪತ್ತನೆಯ ಶತಕದ ಮೊದಲನೆಯ ದಶಕದಲ್ಲೂ, ಎರಡನೆಯ ದಶಕದಲ್ಲೂ, ಭಾರತದ ದೇಶೀಯ ಭಾಷಾ ಸಾಹಿತ್ಯಗಳು ಅದೆ ತಾನೆ ಕಣ್ಣು ಬಿಡ ಹತ್ತಿದವು. ಗುರುದೇವ ಠಾಕೂರರು ಇದೇ ಕಾಲಕ್ಕೆ ಹೊಸ ಕಾವ್ಯಕ್ಕೆ ಜಾನಪದ ಸಾಹಿತ್ಯದಿಂದ ತೇಜೋಶಕ್ತಿಯನ್ನು ತಂದುಕೊಳ್ಳಬಹುದೆಂದು ಸಾರಿದರು; ತಾವು ಸಾರಿದಂತೆ ನಡೆದು ತೋರಿಸಿದರು. ಅಲ್ಲಿಂದೀಚೆಗೆ ಪ್ರತಿಯೊಂದು ಭಾಷಿಕರು ಜನಪದ ಸಾಹಿತ್ಯದಿಂದ ಹೊಸ ಜೀವಶಕ್ತಿಯನ್ನು ಪಡೆದುಕೊಳ್ಳುತ್ತ ಬಂದರು.

ನಮ್ಮವರಾದ ದಿ. ಹಲಸಂಗಿಯ ಚನ್ನಮಲ್ಲಪ್ಪನವರೂ, ಹೊಸಪೇಟೆಯ ಹಣಮಂತರಾಯರೂ, ಮೊಟ್ಟಮೊದಲಿಗೆ ನಮ್ಮ ಸಾಹಿತಿಗಳ ದೃಷ್ಟಿಯನ್ನು ಜನಪದ ಕಾವ್ಯರಾಶಿಯ ಕಡೆಗೆ ಎಳೆದರು; ಸೆಳೆದರು. ಸುಮಾರು 1930 ರಿಂದ ಈವರೆಗೆ ಜನಪದ ಗಾಥಾಸಂಹಿತೆಯು ತುಣುಕು ತುಣುಕು ಪದಗಳಲ್ಲಿ, ಹಾಡು ಗಳಲ್ಲಿ, ಚುಟಿಕೆಗಳಲ್ಲಿ ಹರಿಯುತ್ತ ಬಂದಿದೆ. ಈ ಕಾವ್ಯರಾಶಿಯು ವಿಪುಲ ವಾಗಿದ್ದರೂ, ಹೊರಬಂದದ್ದು ಕೆಲವು ಬಿಡಿ ತೆನೆಗಳಲ್ಲಿಯೆ ಕಾಣಿಸಿಕೊಂಡಿದೆ. ಉತ್ತರದ ಕಡೆಗೆ, ಅಂದರೆ ಬಾದಾಮಿ ನಾಡಿನ ಸುತ್ತಮುತ್ತ, ಮುಖ್ಯ ಮೊದಲಿನ ಸಂಗ್ರಹ ಹಲಸಂಗಿಯ ಗೆಳೆಯರಿಂದ ಬಂತು. ಇದನ್ನು ಓದಿ ಇದರ ತನಿಗುಣ ಗಳನ್ನು ಮೆಚ್ಚಿಕೊಂಡು, ಶ್ರೀ ಮಾಸ್ತಿ—ಬೇಂದ್ರೆಯವರು ಹರಸಿದರು; ಬೆರಳು ಮಾಡಿ, ಇಂಥ ಸಜೀವ ಸಾಹಿತ್ಯವನ್ನು ದುರ್ಲಕ್ಷ ಮಾಡಬೇಡಿರಿ; ಇದರಲ್ಲಿ ಹುದು ಗಿರುವ ಗಾಥಾ ಶಕ್ತಿಯಿಂದ ಹೊಸ ಹುಮ್ಮಸ್ಸು ಪಡೆಯಿರಿ; ಹೊಸ ಬೆಳಕು ಕಾಣಿರಿ—ಎಂದು ಜಯಘೋಷ ಮಾಡುತ್ತ ಬಂದರು. ಕವಿವರ್ಯ ಬೇಂದ್ರೆಯವರು ತಮ್ಮ ಕಾವ್ಯಗರ್ಭಕ್ಕೆ ಜನವಾಣಿಯ ತಿರುಳನ್ನು ಸೇರಿಸಿಕೊಂಡರು; ಇವರ ಕವಿವಾಣಿಯು ನೂತನ ವಾಣಿಯಾಯ್ತು. ಶ್ರೀ ರಾಜರತ್ನಂರೂ ತಮ್ಮ ರತ್ನನ ಪದಗಳಲ್ಲಿ ಇಂಥ ಪದಶಕ್ತಿಯ ಸುಪ್ರೇರಣೆಯ ಹೊಸಕಾಂತಿಯನ್ನು ಬೀರಿದರು. ಕನ್ನಡನಾಡಿನ ಪ್ರಮುಖ ಪತ್ರಿಕೆಗಳು ಹಳ್ಳಿಗರ ಹಾಡುಗಳನ್ನು ಪ್ರಕಟಿಸುತ್ತ ಬಂದಿವೆ. ಸಮಸ್ತ ಹೊಸ ಸಾಹಿತಿಗಳೂ ಜನಪದ ಕಾವ್ಯವನ್ನು ತೆರೆದ ಕಣ್ಣುಗಳಿಂದ, ಹೃದಯಗಳಿಂದ ನೋಡುತ್ತಲಿದ್ದಾರೆ.

ಜಾನಪದ ಗೀತೆಗಳ ಸಂಸಾರ ಅಚ್ಚುಮೆಚ್ಚಿನ ಅಚ್ಚಗನ್ನಡ ತ್ರಿಪದಿ ಸಮುದ್ರದಂತಿದೆ; ತಿರುಳ್ಗನ್ನಡದ ನೆಲೆಯಾದ ಈ ಸಾಹಿತ್ಯವು ಕನ್ನಡ

ನರನಾರಿಯರ ಮಾನಸ ಸರೋವರದಂತಿದೆ. ಹಾಡಿದವರೆಲ್ಲಾ ನಾಡಿನ ಹೆಮ್ಮಕ್ಕಳೇ. ಒಕ್ಕಡೆ ಹೆಣ್ಣುಮಕ್ಕಳಿಂದೂ, ಇನ್ನೊಂದು ಕಡೆ ಗಂಡುಸರಿಂದೂ ಬೇರ್ಪಡಿಸುವದು ಉಚಿತವೆಂದು ಕೆಲ ವಿಮರ್ಶಕರ ಅಭಿಪ್ರಾಯವಿರುವುದು. ಈ ಹಳ್ಳಿಯ ಹಾಡುಗಳು, ಹಳ್ಳಿಗರ ತುದಿನಾಲಿಗೆಯ ಮೇಲಿಂದ ಸಹಜವಾಗಿ ನುಣುಚಿ ಬಂದವು. ಇವುಗಳ ಹುಟ್ಟನ್ನು ನಾವು ಗುರುತಿಸಿಕೊಂಡರೂ, ಹುಟ್ಟಿದ ಕಾಲವನ್ನು ಖಚಿತಪಡಿಸಲಾರೆವು. ಯಾಕೆಂದರೆ ಹಾಡಿದವರೆಲ್ಲಾ ಅನಾಮಧೇಯರು. ಸ್ಥಳಿತನಾಡಿನ ಊರ ಹೆಸರುಗಳನ್ನು ತುಸು ಗಮನಿಸಿಕೊಳ್ಳಬಹುದು. ಬಾದಾಮಿ, ರಬಕವಿ, ಹಲಸಂಗಿ, ಸಿರಸಂಗಿ, ಸೊಗಲ, ಸೊಲ್ಲಾಪುರ, ಸಾಲುಟಗಿ, ಸೂರಪುರ, ಬಬಲಾದಿ, ನಿಂಬರಗಿ, ಕಲಬುರಗಿ, ಕಲ್ಯಾಣ, ತಿರುಪತಿ, ರಾಮೇಶ್ವರ, ಹುಬ್ಬಳ್ಳಿ, ಮದ್ದೂರು, ಮೈಸೂರು, ಬೆಂಗಳೂರು, ಬೇಲೂರು, ಮಾಲೂರು, ಮೇಲುಕೋಟೆ, ಶ್ರೀರಂಗಪಟ್ಟಣ—ಮುಂತಾದ ನಗರ ಹೆಸರುಗಳು ಪದಗಳಲ್ಲಿ ಕಾರಣೀಭೂತವಾಗಿವೆ. ಈ ನಾಡಪದಗಳನ್ನು ಹೊಸಗನ್ನಡದ ಜಾಳಿಗೆಯ ಆರಂಭದ ನಲ್ನುಡಿಗಳೆಂದೇ ನಾವು ನಿರ್ಭಯವಾಗಿ ಇಟ್ಟುಕೊಳ್ಳಬಹುದು.

> " ಹಾದೀಯ ಮನೆಯೋಳೆ ಪಾದದುಂಗುರದೋಳೆ
> ಗೋದೀವೆ ಸೀರೆ ನೆರಿಯೋಳೆ ಸರಸೋತಿ
> ಬೋದಿಸಮ್ಮಯ್ಯ ನಲ್ನುಡಿಯ—

ಇಲ್ಲಿ ಹಾಡಿನ ಋಷಿ ಸರಸೋತಿಯ ನಮಿಸಿ, ತನಗೆ ನಲ್ನುಡಿಯನ್ನು ಬೋಧಿಸಲಿಕ್ಕೆ ಆಹ್ವಾನಿಸುತ್ತಾನೆ. ನಲ್ನುಡಿಯ ಜಾಯಮಾನ ಹಾಡುಗಳ ತುಂಬೆಲ್ಲ ಹರಿದು ಬಂದಿದೆ; ಬಳಕೆಯ ಮಾತುಗಳು ಮುತ್ತುಗಳಾಗಿ, ಹೃದಯದ ಹವಳಗಳಾಗಿ ಕಾಣಿಸಿಕೊಂಡಿವೆ. ಎಂತಲೇ ಕವಿ ಬೇಂದ್ರೆಯವರು ಇಪ್ಪತ್ತು ವರುಷಗಳ ಹಿಂದೆ ಬರೆದ ಈ ಪ್ರಸ್ತಾವನಾವಾಕ್ಯವು ಮನವರಿಕೆಯಾಗಿ ಬಿಡುವದು. " ಜೀವನವೇ ದೇವತೆಯಾದ ತ್ರಿಪದಿ ಛಂದದಲ್ಲಿ ಹೊರಹೊಮ್ಮಿದ ' ಗರತಿ ಹಾಡಿ ' ನ ಋಷಿಗಳು ಹೆಣ್ಣುಮಕ್ಕಳು—ನಮ್ಮ ತಾಯಿ ತಂಗಿಯರು, ಅಮ್ಮ ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ವಿಚಾರಿಸಿ ನೋಡಿದರೆ ಅವರದೇ ನಿಜವಾದ ಕಾವ್ಯ, ಉಳಿದುದು ಕಾವ್ಯದ ಛಾಯೆ. ಕಾವ್ಯವು ಕಾಂತಾ ಸಮ್ಮಿತಿಯೆಂದು ಹೇಳುವರಷ್ಟೆ. ಕಾಂತೆಯರ ಮಾತಿನಂತಿರುವದೆ ಕಾವ್ಯವಾದರೆ ಕಾಂತೆಯರ ಮಾತೆ ಕಾವ್ಯದ ಮಾತೆಯಲ್ಲವೆ? " ಇದಿಷ್ಟು ಅಗ್ಗಳಿಕೆಯ ಮಾತು. ಕನ್ನಡ ನುಡಿಯ ತಾಯ ಮೊಲೆ ಹಾಲು ನಿರರ್ಗಳವಾಗಿ, ನಾಡಿನ ಕಂದಯ್ಯಗಳನ್ನು ಊಡಲು, ಪೋಷಿಸಲು ಸಜ್ಜಾಗಿ ನಿಂತಿದೆ. ಕನ್ನಡದ ಹೊಸ ಕವಿತೆಗೆ—ಹೊಸ ಪಯಿರಿಗೆ, ಜನಪದ ಕಾವ್ಯ ತನ್ನ ಸಸಿಯನ್ನು ಚಾಚಿದೆ; ರಸದ ಕಾಣಿಕೆಯನ್ನು ನೀಡಿದೆ. ಈಗ ಬಂದಿರುವ ಬೆಳೆಯೆಲ್ಲಾ ನಾಡಿನ ಹತ್ತೂ ಮೂಲೆಗಳಿಂದ ಬಂದಿರತಕ್ಕುದೇ. ಪದರಾಶಿಯ ಹೊರಗರ್ಭದ ಕಡೆಗೆ ನಾವು ಅನುಲಕ್ಷಿಸಿದ್ದಾದರೆ, ಧಾರವಾಡ ಪ್ರಾಂತದ, ಮೈಸೂರ ಪ್ರಾಂತದ ಹಿಡಿನುಡಿಗಳು, ಪಡಿನುಡಿಗಳು ದೊರೆಯುವವು. ಆದರೆ ಮಂಗಳೂರ ಪ್ರಾಂತದ ಪದರಾಶಿ ದೊರೆಯಲಾರದು. ಪ್ರಾಯಶಃ ಆ ದಿಕ್ಕಿನ ತಿಳಿಕಾವ್ಯ ಯಕ್ಷಗಾನದ ಹೆಮ್ಮರದ ಬುಡದಲ್ಲಿ ಕೆಲಕಾಲ

ಮರೆಯಾಗಿರಬೇಕೆಂದು ಊಹಿಸಬಹುದಾಗಿದೆ. ರತ್ನಾಕರನನ್ನು ಕೊಟ್ಟ ತುಳು ನಾಡಿನಲ್ಲಿ "ಪಳಮೆ"ಗಳು ದೊರೆಯಲಾರವೇ? ಕೊಡಗರ ಮರಿ "ಪಳಮೆ" ಗಳು ಶ್ರೀ. ನ. ಚಿಣ್ಣಪ್ಪ ಇವರ "ಪಟ್ಟೋಲೆ ಪಳಮೆ" (೧೯೨೪) ಎಂಬ ಪುಸ್ತಕದಲ್ಲಿ ಸಿಕ್ಕುವವು.

"ಬತ್ತೀನಿ, ಹೋಯ್ತೀನಿ, ಬರ್‍ತವನೆ, ಕೂತವನೆ, ಹೋಗ್ಯವನೆ, ನಿಂತವನೆ, ಬರತಾನೆ, ಹೋಗಾದು, ಬಿಡುತಾರೆ, ಬರದವ್ರೆ, ಹಾಕ್ಕೊಂಡು, ಹೊಡೆಯೋಕೆ, ತಪ್ಪೋಂತ, ನುಡಿಸೋನ್, ಎತ್ತೋಳ್, ಏರೋಕೆ ರಾಗಿಕಲ್ಲು"

—ಇಂಥವು ಬಂದಾಗ ಮೈಸೂರಿನ ಪದಗಳೆಂದು ತಿಳಿಯಬೇಕಾಗುವದು.

"ಬಂದಾಂಗ, ಹೋದಾಂಗ, ಹೇಳ್ಯಾನ, ಮಾಡ್ಯಾನ, ಸಡಿಲ್ಯಾದ, ಹ್ಯಾಂಗಾರೆ, ಇಚ್ಚಾಂಗ, ತೊಚ್ಚಾಂಗ, ಆಗಾಗ, ಹೋಗಾಗ, ಮಾಡಾಗ, ಬ್ಯಾಡ, ನೂತೇನ, ಓಣ್ಯಾಗ, ಬೆದರ್‍ಯಾದ, ಭೋರಾಡತಾವ, ಮ್ಯಾಲ, ಹಿಗ್ಗೀಲಿ, ಮುಗ್ಗೀಲಿ, ಬೆಣ್ಣ್ಯಾಗ, ಹುಡುಕ್ಯಾಳ, ತಿರುದೇನ, ಮಾಡೇನ, ಬಂದೇನ, ಹೋಗೇನ, ನಗೆತಾವ, ಅರಗಿಣಿ, ಮರಗಿಣಿ, ಚೆನ್ನಿ, ಪದಗೋಳ, ತಿಳಿಯಾದ, ಅನುಗಾಲ, ಹರವೀಯ, ನಾತಾವ"

—ಇಂಥವು ಬಂದಾಗ ಧಾರವಾಡ ನಾಡಿನವರ ಮಾತೆಂದು ತಿಳಿಯಬೇಕು.

"ಅತ್ತೆಯ ಮಗಳೆ, ಮಾವನ ಮಗಳೆ, ಮಾವನ ಮಗನೆ, ಹೊಂಬಾಳೆ, ಕಂದಯ್ಯ, ಚೆಲುವಯ್ಯ, ಚೆಲುವೇಯ, ಚೆನ್ನ ಜವರಾಯ; ಮಳೆರಾಯ, ಮಳೆದೇವ, ಸೂಳೇರ ಅರಮನೆ; ಸೀಮೆ; ಭೂಮಿ ತಾಯ; ಗೆಣೆಕಾತಿ, ಕೆಳದೀ; ಗೆಣೆಕಾರ"

—ಇಂಥವೆಲ್ಲ ಸರ್ವಮಾನ್ಯ ಕಾವ್ಯದ ಪದಗಳು. ಇವುಗಳಿಂದಲೆ ಕವಿಗಳು ತಮ್ಮ ಅನ್ನ, ನೀರು, ಮಣ್ಣು ರಚಿಸಿಕೊಂಡಿರುವರು. ಇಂಥ ಪದರಾಶಿಗೆ ಸ್ಥಾನ ಭೇದವಿಲ್ಲ; ಇವೆಲ್ಲ ಸಾರ್ವತ್ರಿಕ ಪ್ರಚಾರದಲ್ಲಿವೆ.

## ೨. ಜನಗೀತೆಗಳ ಸ್ವರೂಪ

ಹೆಂಗಸರ ಹಾಡುಗಳು ಮುಖ್ಯವಾಗಿ ಬೀಸುವ ಕಲ್ಲಿನ ಪದಗಳು, ಸುವ್ವಿಯ ಹಾಡುಗಳು, ಒಸಗೆಯ ಮತ್ತು ಸೋಬಾನೆಯ ಪದಗಳು, ಜೋಗುಳ ಹಾಡುಗಳು ಮುಂತಾದ ಪ್ರಕಾರಗಳಲ್ಲಿ ಉಂಟು. ಗಂಡಸರ ಹಾಡುಗಳು ಮುಖ್ಯವಾಗಿ ಬಿತ್ತನೆ ಹಾಡು, ಸುಗ್ಗಿಯ ಹಾಡುಗಳು, ಬಂಡಿಯ ಪದ, ಕೋಲಾಟದ ಪದಗಳು, ತೇರಿನ ಹಾಡು, ಜಾತ್ರೆಯ ಹಾಡುಗಳು ಮೊದಲಾದ ಜಾತಿಯಲ್ಲಿವೆ. ಗಂಡಸರ ಹಾಡುಗಳನ್ನು ತ್ರಿಪದಿ ರೀತಿ ಬಿಟ್ಟಾಗ, ಚೌಪದಿಯಾದಾಗ, ಗಂಡು ದನಿ, ಧಾಟಿ ಏರಿ ಬರುವಾಗ, ಲಾವಣಿಗಳೆಂದು ಕರೆದುಕೊಳ್ಳುವದು ಹೆಚ್ಚು ಯುಕ್ತವೆನಿಸುವುದು. ನಾವು ಯಾವ ಚರಣವನ್ನು ಹಿಡಿದೆಳೆದು ನೋಡಿದರೂ, ಹಾಡಿಕೊಂಡು ಅನು

ಭವಿಸಿದರೂ, ಒಂದು ಮಾತು ದೃಗ್ಗೋಚರವಾಗುವದು. ಒಂದು ಬಿಡಿ ಪದ್ಯದಲ್ಲಿ ಕೂಡ, ಒಂದು ಪರ್ಯಾಯ ಸಂಕೀರ್ಣ ಕವನದಲ್ಲಿ ಕೂಡ, **ನೆಲದ ಮಗನ** ತುಂಬು ಬಾಳು ಹೃದ್ಯವಾಗುವುದು. ಒಕ್ಕಲು ಮಕ್ಕಳು—ತಾಯನಾಡಿನ ಒಕ್ಕಲಿಗರು ತುಂಬು ಜೀವನವನ್ನು ಸಾಗಿಸಿದರು. ಒಡಕುತನ, ಹರಕುತನ, ಕೊಲೆಗಡುಕತನ, ಹೊಲೆಹಾದರ, ಕೊಲೆ, ಸುಲಿಗೆ, ಸುಳ್ಳು, ಚಾಡಿ ಮೊದಲಾದ ಹೇಯ ಅಂಶಗಳು ಕುರಿತು ಅಲ್ಲಲ್ಲಿ ಇಲ್ಲೊಂದು, ಅಲ್ಲೊಂದು ಲೋಕಾನುಭವದ ಮಾತುಗಳು ನುಣುಚಿ ಬರುವವು. ಕೊಲೆ ಸುಲಿಗೆಯು ಬಗ್ಗೆ ಪದ ದೊರೆಯದು. ಕಿತ್ತೂರು—ಶ್ರೀರಂಗಪಟ್ಟಣಗಳ ಯುದ್ಧ ವಿಚಾರ ಹಾಡು ದೊರೆತರೂ, ಒಂದು ಹಳ್ಳಿಯಲ್ಲಿನ ಕೊಲೆ-ಸುಲಿಗೆ ಕುರಿತು ಹಾಡಿರುವದಿಲ್ಲ. ಇದರಿಂದ ಅಂದಿನವರಲ್ಲಿ ಇದು ಇದ್ದಿರ ಲಾರದೆಂದು ಭಾವಿಸೋಣವೇ? ಒಳ್ಳೆಯ ಸಂಸ್ಕೃತಿಯು ಹಳ್ಳಿಗರಲ್ಲಿ ಹರಡಿತ್ತೆಂದು ಅರ್ಥ ಮಾಡಿಕೊಳ್ಳೋಣವೇ? ಇಂದಿನ ನಾಗರಿಕರಾದ ನಮಗೆ ಇದೊಂದು ಸವಾಲದಂತಿದೆ. ರೈತನ ಸಂಸಾರದಲ್ಲಿ ವಿರಸ ಬರಲಾರದೆಂತಲ್ಲ; ಒಂದು ಮನೆಯ ಬಾಳ್ವೆಯಲ್ಲಿ ಒಡಕು ಕಿಟಕಿ ಕಾಣಬಾರದೆಂತಲ್ಲ. ಇದೆಲ್ಲ ಅನಿವಾರ್ಯವೆನ್ನಿ. ಆದರೆ ನೆಮ್ಮದಿಯ ಸರಸ ಜೀವನವು ಜನಪದ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಚಿತ್ರಿತ ವಾಗಿದೆ; ಪ್ರಾಮಾಣಿಕತೆಯೂ ಒಡೆದು ತೋರುವದು. ಜನಪದ ಕವಿಯು ಹದಿನಾರಾಣೆ ವಾಸ್ತವ ವಾದಿಯು; ಸತ್ಯವನ್ನು ಬಚ್ಚಿಡುವವನಲ್ಲ. ಮಹಾಕವಿ ಈಟ್ಸನು ಉಗ್ಗಡಿಸುವ "Cult of Sincerity" ಎಂಬ ಪ್ರಾಮಾಣಿಕ ಮತ ಧರ್ಮವು ಹಳ್ಳಿಗರ ನಡೆನುಡಿಗಳಲ್ಲಿ ಕಾಣುವಂತೆ, ಅವರ ಚಿರಾಸ್ತಿಯಾದ ಸಾಹಿತ್ಯ ದಲ್ಲೂ ಚಾಚೂ ತಪ್ಪದೆ ಜೀವಿಸಿರುವದು. ತ್ರಿಪದಿಕಾರನಾಗಲಿ, ಲಾವಣಿಕಾರ ನಾಗಲಿ ತನ್ನ ಪ್ರಾಸಾದಿತ ಕಂಠದಿಂದ ಹಾಡುತ್ತ ನಿಸರ್ಗದೇವತೆಯನ್ನು ಸ್ಮರಿಸಿ, ಧ್ಯಾನಿಸಿಕೊಳ್ಳುವನು.

## ಹರಕೆ

"ಏಳುತಾಲೇ ಎದ್ದು ಯಾರಾರ ನೆನೆಯಾಲಿ
ಎಳ್ಳು ಜೀರಿಗೆ ಬೆಳಿಯೋಳಾ? ಭೂಮಿ ತಾಯ
ಎದ್ದೊಂದು ಗಳಿಗೆ ನೆನದೇನು—

"ಮೂಡಲ ಮುತ್ತಯ್ಯ ನೋಡಯ್ಯ ಬಡತಾನ
ಮೂಡ್ಲಲ್ಲಿ ರಾಗಿ ಮೆಳೆಯುದ್ದ ಬೆಳೆದರೆ
ಮಾಡೂವೆ ನಿನಗೆ ಹರಿಸೇವೆ—

ಬೆಳಗು ಮುಂಜಾನೆ ಎದ್ದೊಡನೆ ನಮ್ಮ ಭೂಮಿ ಮಗನು ತನ್ನ ಹಿರಿತಾಯಿ ಯನ್ನು—' ಭೂಮಿ ತಾಯನ್ನು ನೆನೆದು ಬೇಡುತ್ತಾನೆ. ಇದಕ್ಕಿಂತ ಘನಕೆಲಸ ಅವನಿದಿರು ಏನು ಕಾದಿರುವುದು? ಎರಡನೆಯ ನುಡಿಯಲ್ಲ ನಮ್ಮಾ ಒಕ್ಕಲು ಮಗನೇ, ತನ್ನ ಮೂಡ್ಲಲ್ಲಿ ರಾಗಿ ಮೆಳೆಯು ಬೆಳೆಯುವೆಂದೂ ತನ್ನ ಇಷ್ಟ ದೇವತೆಯಾದ ಮೂಡಲ ಮುತ್ತಯ್ಯನ ಕುರಿತು ಹರಕೆ ಇಡುತ್ತಾನೆ,

ತನ್ನ ಇಷ್ಟಾರ್ಥವನ್ನು ಮನವಾರೆ ತೋಡಿಕೊಳ್ಳುತ್ತಾನೆ. ಈ ಆರಂಭ ಪದ್ಯಗಳನ್ನು ರೈತನ ಆರಂಭದ ಬೇಸಾಯ ಕುರಿತು ಬರುವ ನಿದರ್ಶನಗಳಲ್ಲದೆ ಮತ್ತೇನು ?

ಇದೇ ಸಂದರ್ಭದಲ್ಲಿ ಇನ್ನೊಂದು ಚರಣವನ್ನು ಗಮನಿಸಬಹುದು. ಕೃಷೀವಲನ ಮೊದಲ ಮಾತು ಬಿತ್ತನೆ ಕುರಿತು ಬರುವದು ; ಹಾಡಾಗಿ ಆತನಿಂದ ಹೀಗೆ ಹರಿಯುವದು :

" ಕಾಳ್ಹೊರಿ ಕಪ್ಹೋರಿ ನವಿಲು ಬಣ್ಣದ ಚೆಂಚ್ಹೋರಿ
ಹಲ್ಲರಗವೆರಡು ನವರತ್ನ ? ಕಟ್ಕೊಂಡು
ಜಾಣ ಹರಗಿದನು ಜವನಾವ—

" ಏರಿ ಮೇಲ್ಹೋಗೋಳ ಯಾಲಕ್ಕಿ ನೆರೆಯೋಳ
ಜಾಲಿದ್ಹಾವೀನ ಜಡೆಯೋಳ ? ನಾ ಕಂಡು
ಉತ್ತು ಬಿತ್ತೋಕೆ ಮನಸಿಲ್ಲ—

ತನಗೆ ಬೇಕಾದ ಚೆಂಚು ಹೋರಿಯು ಹೂಡಿ ಹರಗಲು ಇದ್ದರೂ ಒಬ್ಬ ಒಕ್ಕಲು ಮಗನು ತನ್ನ ಗೆಣಿಕಾತಿಯೊಬ್ಬಳನ್ನು ನೆನೆದು ' ಉತ್ತು ಬಿತ್ತೋಕೆ ಮನಸಿಲ್ಲ' ದವನಾಗುತ್ತಾನೆ. ಇದೊಂದು ಸಹಜ ಮನೋವ್ಯಾಪಾರ. ಹೂಡಿ ಹರಗಿದ ಮೇಲೆ ಬಿತ್ತನೆ ಕೆಲಸವೆ ಅವನು ಮಾಡಬೇಕಾದದ್ದು ; ಇದೆಲ್ಲ ಗೊತ್ತಿದ್ದರೂ ಆತನನ್ನು ನಲ್ಲೆಯ ಅಥವ ಕೆಳದಿಯ ಬಿತ್ತನೆಯು ಮುಗ್ಗಡಿಸಿ ಬಿಡುವದು ಕ್ಷಣಕಾಲ. ಇದೊಂದು ರಸಗವಳ.

## ಹಬ್ಬ

" ನಾಳೆ ಬೆಳಗಾಗ ನಮುಗ್ ಹಬ್ಬ ಬಂತಲ್ಲ
ನಮುಗ್ ಹಬ್ಬ ಬಂತಲ್ಲ ‖ ಪ ‖

ಗೋಧಿ ಬೆಲ್ಲಗಳಿಲ್ಲ ಕಾಯಿ ಮೊದಲಿಲ್ಲ
ಹಬ್ಬವೆಂಬುದು ಹಾಗಲ್ಲ ಜಾಣೇ
ಅದು ಹಾಗಲ್ಲ ಜಾಣೇ—

ಉರ್ವಿಗೀಶ್ವರನ ಪೂಜೆ ಮಾಡೋದೆ ಹಬ್ಬ
ಕಣ್ಣೂ ಕೈಕಾಲುಗಳೂ ಇರುವೋದೆ ಹಬ್ಬ
ನಮಗಿರುವೋದೆ ಹಬ್ಬ—

ಪುಣ್ಯವಂತರ ನೋಡಿ ನಲಿವೋದೆ ಹಬ್ಬ
ಸಾಲವಿಲ್ಲದ ಸಂಸಾರವೆ ಹಬ್ಬ
ಸಂಸಾರವೆ ಹಬ್ಬ—

ಜೀವಕ್ಕೆ ವ್ಯಾಧಿ ಇಲ್ಲದಿರುವೋದೆ ಹಬ್ಬ
ಹಂಗು ಇಲ್ಲದೆ ಉಂಬೋದೆ ಹಬ್ಬ
ತಿರಿದುಂಬೋದೆ ಹಬ್ಬ—

ಮಣಿಕರ್ಣಿಕೆಯಲ್ಲಿ ಸ್ನಾನವೆ ಹಬ್ಬ
ಕಾಶಿಯ ಒಳಗೆ ವಾಸವೆ ಹಬ್ಬ
ನಮಗ್ ವಾಸವೆ ಹಬ್ಬ—

(ನಾಡ ಪದಗಳು)

ಒಟ್ಟು ಜೀವನ ಸಂಸಾರದ ಉತ್ತಮ ಧರ್ಮವು ಒಂದು ಹಬ್ಬವಾಗಬಲ್ಲದೆಂದು ಈ ಮೇಲಣ ಉತ್ಕೃಷ್ಟ ಪದ್ಯ ಸಾರಿ ಹೇಳುತ್ತದೆ. ಇದೆ ಹಳ್ಳಿಗರ ಜೀವನ ಧರ್ಮ. ಇಲ್ಲಿ ಕವಯಿತ್ರಿಯ ಮನಸ್ಸು ಎರಡಾಗಿಲ್ಲ; ಕೆಳಗಿನ ತ್ರಿಪದಿ ಹೇಳುವಂತೆ ' ಹೆಣ್ಣೀನ ಮನಸು ಎರಡಾಗಿಲ್ಲ ; ಹನ್ನೆರಡು ಚೂರಾಗಿಲ್ಲ ''

" ಕನ್ನಡೀ ಕೈತಪ್ಪಿ ಹನ್ನೆರಡು ಚೂರಾಗಿ
ಹೆಣ್ಣೀನ ಮನಸು ಎರಡಾಗಿ ? ದಾಳಿಂಬೆ
ಹಣ್ಣಾದರೇನು ಫಲವಿಲ್ಲ—

ಬಾಳೊಂದು ಹಣ್ಣಾಗಿ ನಿಂತಾಗ ಉಸುರಿದ ಮಾತುಗಳಿವು. ಇಂದಿನವರಿಗೆ ಬಾಳೊಂದು ಹನ್ನೆರಡು ಚೂರಾದ ಕನ್ನಡಿಯಂತೆ ಕಂಡರೆ, ಅಂದಿನ ತಲಮಾರಿನ ವರಿಗೆ ದಾಳಿಂಬೆಯಾಗಿತ್ತು.

" ಒನ್ನೇರು ಬಂದೋ ಹೊಲಕೆ ಬಿತ್ತನೆ ಬಂದೋ
ಚೆನ್ನ ಮಾದಿಗನ ಮಿಣಿ ಬಂದೋ ? ಅಣ್ಣಯ್ಯ
ಹೊನ್ನು ಚೆಲ್ಲೀವೆ ಹೊಲಕೆಲ್ಲ—

" ಹನ್ನೆರಡೆತ್ತಿನ ಬಾರಿ ಹೊನ್ನ ಮೇಟೀ ಕಂಬ
ಬಾಸಿಂಗ್ದ ಕೊಳಗ ಬಲಗೈಯ ? ಕಂದಯ್ಯ
ರಾಶಿ ಅಳೆಯೋದೆ ಬೆಳಗಾಯ್ತು—

" ಮೂಡ ಸೀಮೆ ಹೆಣ್ಣೆ ಬೇಗ ರಾಗೀ ಮಾಡೆ
ಕೂರ್ಗೆ ನಿತ್ತ್ಯೈತೆ ಹೊಲದಲ್ಲಿ ? ಎಲೆ ಹೆಣ್ಣೆ
ಗಂಡ ನಿಂತವ್ನೆ ಬಿಸಲಲ್ಲಿ—

" ಜೋಳದಾ ಹೊಲದಲ್ಲಿ ಜೋಡಟ್ಲೆ ಹಾಕ್ಕೊಂಡು
ಕಾಯುವನ ಕೈಲಿ ಕವಣೀಯ ? ಕಂಚಿನ್ಗುಂಡು
ಸಾರಿ ಹೊಡೆದನು ನವಿಲ್ಹಿಂಡು—

ಮೇಲಿನ ನಾಲ್ಕು ತ್ರಿಪದಿ ಹಾಡುಗಳು ಒಕ್ಕಲು ಮಗನ ನಾಲ್ಕು ಒಳ್ಳೆ ಮುಖಗಳನ್ನು ಎತ್ತಿ ತೋರಿಸುತ್ತಿವೆ.



ಪಾಂಚ್ ಬೀಬಿ ಪಹಡ್, ರಾಯಚೂರು



ಕೋಟೆ ಬಾಗಿಲು, ರಾಯಚೂರು



ಝರಣಿ ನರಸಿಂಹ ಕ್ಷೇತ್ರ, ಬಿದರೆ



ಮಹಮದ್ ಗವಾನರ ಮದ್ರಾಸ, ಬಿದರೆ

ಬಿತ್ತಿಗೆಯ ಕಾಲಕ್ಕೆ ಮಿಣಿ ಮುಂತಾದ ಸಲಕರಣೆ ಸಜ್ಜುಗೊಳಿಸಬೇಕು. ಎಲ್ಲವೂ ಸಜ್ಜಾದ್ದರೆ 'ಹೊಲಕೆಲ್ಲ ಹೊನ್ನು ಚೆಲ್ಲೀವೆ' ಎಂಬ ಹುರುಡು ಭಾವನೆಯಲ್ಲಿ ತೇಲುತ್ತಿದೆ; ಆವನಿಗಿದು ಬರಿ ಕಲ್ಪನೆಯಲ್ಲ. ಹನ್ನೆರಡು ಎತ್ತು ಕಟ್ಟಿದ ಆರಂಬಗಾರನಿಗೆ, ಮೇಟಿಕಂಬದ ರಾಶಿಯ ಸುತ್ತಮುತ್ತ ಕೊಳಗಗಟ್ಟಲೆ ಧಾನ್ಯ ಬಂದು ಬೀಳುತ್ತದೆ. ಆಗ ಬಲಗೈಯಿಂದ ಅಳೆದರೂ ಒಂದು ಬೆಳಗು ಕಳೆಯ ಬೇಕಾಗುವದು. ಈ ಸೂಚಕ ಪದ್ಯವು 'ಬಿತ್ತಿದ್ದನ್ನು ಬೆಳಕೊಂಡ' ಹುಲುಸಾದ ತೆನೆ ರಾಶಿಯು ಹೊನ್ನಿಗೆ ಸಮವೆಂದು ಸೂಚಿಸುತ್ತದೆ. ಒಕ್ಕಲಿಗನು ಕಾರ ಹುಣ್ಣಿಮೆಯ ಕಾಲಕ್ಕೆ ಮನೆಯಲ್ಲಿ ಕೂರಿಗೆ ಪೂಜೆಗೈದು ಹೊಲಕ್ಕೆ ಕೂರಿಗೆ ಒಯ್ಯುತ್ತಾನೆ. ಕೂರಿಗೆ ಬಿತ್ತಲಿಕ್ಕೆ ಹೊರಟಮೇಲೆ ನಡುವಿನ ದಾರಿಯಲ್ಲಿ ನಿಲ್ಲಬಾರದು. ತಡ ಮಾಡುವ ಮನೆಹೆಣ್ಣು ಗಂಡನನ್ನು ಬಿಸಲಲ್ಲಿ ಕಾಯಿಸಬಾರದು. ರಾಗೀ ಮಾಡಲು ತಡಮಾಡಿದ ಮೂಡ ಸೀಮೆ ಹೆಣ್ಣನ್ನು ಜರಿಯುತ್ತಾನೆ. ಇದರಿಂದ ಬಿತ್ತನೆಯ ಕಾಲದ ಮಹತ್ವವು ಮನದಟ್ಟಾಗುವದು. ಇದಲ್ಲದೆ ಒಕ್ಕಲಿಗನ ಒಟ್ಟು ಬಾಳ್ವೆಯ ಮುಖ ಒಂದು ಬೆಳಗಿನ ಕಡೆ, ಒಂದು ಹೊನ್ನಿನ ಕಡೆ, ಜೋಳದಾ ಹೊಲದಲ್ಲಿನ ನವಿಲ್ದಿಂಡಿನ ಕಡೆ ತಿರುಗಿ ನಡೆಯುವದು ನಮಗೆ ವಿಶದವಾಗುವದು. ನಮ್ಮ ನೆಲದ ಮಗ ಮಣ್ಣಿನ ಜೀವಿಯೇನೋ ಸರಿ, ಅದನ್ನು ಹೊನ್ನಕ್ಕೆ ತಿರುಗಿಸುವ ಶಕ್ತಿಯುಳ್ಳವನು.

"ಕಲ್ಲೆ ಬೀಸೋ ಕಲ್ಲೆ ಸಕ್ಕರೆ ಒಡೆಗಲ್ಲೆ
ಅಪ್ಪಾನ ಮನೆಯ ರಜಗಲ್ಲೆ ? ಪಚ್ಚೇಕಲ್ಲೆ
ಬಿತ್ತರದ ಕಲ್ಲೆ ಬೀಳ್ಬೇಗ—

"ರಾಗಿ ಬೀಸೋ ಕಲ್ಲೆ ರನ್ನ ಮುತ್ತಿನ ಕಲ್ಲೆ
ಅಣ್ಣನಾ ಮನೆಯ ಸಿರಿಗಲ್ಲೆ ? ಸಾಮ್ರಾಜ್ಯ
ಶೋಬನದ ಕಲ್ಲೆ ಕೊಡು ದನಿಯ—

"ಅಕ್ಕಿ ಬೀಸೋ ಕಲ್ಲೆ ಸಕ್ಕರೆ ಪುಡಿಗಲ್ಲೆ
ಅಪ್ಪಾಜಿ ಮನೆಯ ಪದಗಲ್ಲೆ ? ಪಚ್ಚೇಕಲ್ಲೆ
ಮುತ್ತೀನ ಕಲ್ಲೆ ಕೊಡು ದನಿಯ—

"ಕಲ್ಲು ಕೊಟ್ಟಮ್ಮೆ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ ? ಆ ಮನೆಗೆ
ಮಲ್ಲೀಗೆ ಮುಡಿಯೊ ಸೊಸೆ ಬರಲಿ—

"ಕಲ್ಲ ಕೊಟ್ಟವ್ವಗ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಇರಲಿ ಪದವಿರಲಿ ? ಹಡೆದವ್ವ
ನೆಲ್ಲ ಬಾನಿರುವ ಮನಿಯಿರಲಿ—

"ಸುಮ್ಮನೆ ಬೀಸಿದರೆ ಬೀಳಾದೊ ಈ ಕಲ್ಲು
ನಾಗಸೂರದಂತೆ ದನಿ ಎತ್ತಿ ? ಹಾಡಿದರೆ
ಘಮ್ಯಾನೆ ಬೀಳ್ವಾದ ಈ ಕಲ್ಲು—

ಮೇಲಣ ಪದ್ಯಗಳು ರತ್ನಗಳಂತಿವೆ. ರಾಗಿ ಬೀಸೋ ಕಲ್ಲನ್ನ, ಅಕ್ಕಿ ಬೀಸೋ ಕಲ್ಲನ್ನ ಕೇಂದ್ರ ಬಿಂದುವಾಗಿ ಇಟ್ಟುಕೊಂಡು, ಜಾನಪದ ಕವಿ ಹಾಡಿ ಹಾಡಿ ಕಲ್ಲನ್ನು ನುಡಿಸುತ್ತಾಳೆ, 'ಕೊಡು ದನಿಯ'—ಎಂದು ಉದ್ಘೋಷಿಸುತ್ತಾಳೆ. ಕಲ್ಲಿಗೆ ಜೀವತುಂಬಿ, ತನ್ನೊಳಗೆ ನಾದತುಂಬಿಕೊಂಡು ಪರವಶತೆಯಲ್ಲಿ ಮೈಮರೆಯುತ್ತಾಳೆ. ಇಂಥ ಹಾಡುಸುರುವಾಗ, ಬೀಸುವ ಕಲ್ಲು ಪಚ್ಚೆ ಕಲ್ಲಾಗಿ ಬಿಡುವದು. ಆ ಕಲ್ಲು ತಾನು ಕೇಳುವ ನುಣ್ದನಿ ಕೊಟ್ಟಮೇಲೆ, ಅಷ್ಟಕ್ಕೆ ಆತ್ಮ ತೃಪ್ತಿ ಹೊಂದುವದಿಲ್ಲ; ಇನ್ನು ಮುಂದಕ್ಕೆ ಹೋಗಿ, ಭಾಗ್ಯತೋರಿ 'ಸಾಮ್ರಾಜ್ಯ ಶೋಬನದ ಕಲ್ಲೆ' ಏಂದು ಹರಸುತ್ತಾಳೆ. ತನ್ನ ಹಡೆದವ್ವನ ಮನೆಗೆ ಪಲ್ಲಕ್ಕಿ ಇರಲಿ, ಬಾನಿರುವ ನೆಲ್ಲಿರಲಿ, ಮಲ್ಲೀಗೆ ಮುಡಿಯೊ ಸೊಸೆ ಬರಲಿ ಎಂದೂ ಒಸಗೆಯ ನುಡಿಯನ್ನು ಉಲಿಯುತ್ತಾಳೆ. ಇನ್ನೇನು ಬೇಕು? ಕವಿ ಬೇಂದ್ರೆಯವರು ಹೇಳಿದಂತೆ—'ಮಗಳು—ಸೊಸೆ—ಹೆಂಡತಿ—ತಾಯಿ—ಹೀಗೆ ಹೆಣ್ಣಿನ ನಾಲ್ಕು ಜನ್ಮ ನಾಲ್ಕು ಅವತಾರಗಳಲ್ಲಿ' ಬಣ್ಣಿಸುವ ನೂರಾರು, ಅಲ್ಲ ಸಾವಿರಾರು, ತ್ರಿಪದಿಗಳು ದೊರೆಯುವವು. ಈಗಾಗಲೆ ಹಲಸಂಗಿ ಗೆಳೆಯರು—ಚನ್ನಮಲ್ಲಪ್ಪ, ರೇವಪ್ಪ ಮೊದಲಾದವರು, ಶ್ರೀ ಬಿ. ಎಸ್. ರಂಗಸ್ವಾಮಿ ಮತ್ತು ಗೊರೂರರು, ಮತಿಘಟ್ಟ ಸೋದರರು ಇಂಥ ಸಾವಿರಾರು ಪದಸಂಗ್ರಹಗಳನ್ನು ಬೆಳಕಿಗೆ ತಂದಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಮಾಲೆಯ ಒಂದೆರಡು ಸಂಪುಟಗಳಲ್ಲಿ ಒಂದು ಹೆಬ್ಬೊತ್ತಿಗೆ ಈಗಾಗಲೇ ಬರಬೇಕಿತ್ತು. ಒಟ್ಟು ಸಮನ್ವಯ ದೃಷ್ಟಿಯಲ್ಲಿ ನಾಡ ಪದಗಳ ವಸ್ತು, ಪರಿವಿಡಿ ನಿರೀಕ್ಷಿಸುತ್ತ ಹೋದಲ್ಲಿ, ಪರಂಪರೆ, ನೀತಿ, ದೇವರು ಮುಂತಾದ ವಿಶಿಷ್ಟ ಜಾತಿಯ ರೀತಿಗಳೂ ಸಿಕ್ಕುವವು; ಗಂಗೆ ಗೌರಿಯರ ಜಗಳದ ಸಂವಾದಗಳೂ ಸಿಗುವವು. ತವರುಮನೆ ಕುರಿತು, ತಾಯ್ತಂದೆ ಕುರಿತು, ಹೆಚ್ಚಳದ ಹಾಡುಗಳು ಮನೋಜ್ಞವಾದ ರೀತಿಯಲ್ಲಿರುವವು.

## ೩. ಕೆಲವು ಆರಿಸಿದ ಪದ್ಯಗಳು

ಅತ್ತೆಮನೆ, ಸತಿಪತಿಭಾವ, ಗೆಣೆಗೆಣತಿ, ಲಾಲಿ, ಜೋಗುಳ, ಹೆಂಡ, ಹಸುಳೆ, ಮಳೆ, ನಗೆ, ಮದುವೆ, ಶೋಭನ, ಸೂಳೆ, ಬಂಜೆ, ಬಸುರಿ, ವಿಧವೆ ಇತ್ಯಾದಿ ವಿಷಯಗಳು ತಾಕಲಾಡುವವು. ಮಾನವ ಕುಟುಂಬಕ್ಕೆ ಸಂಬಂಧಿಸುವ ಶಾಶ್ವತ ವಿಷಯ ಪಟ್ಟಿಯು ಯಾವ ಕಾಲದ ಸಾಹಿತ್ಯದಲ್ಲೂ ಚಿರಸ್ವರೂಪ ತಾಳಿ ಉಳಿಯತಕ್ಕುದೇ. ಮಳೆ, ನಗೆ ಬಗ್ಗೆ ಬರುವ ಹಾಡಿಗೆ ಹೇಗೆ ವಿವರಣೆ ಅಗತ್ಯ ವಿಲ್ಲವೊ ಹಾಗೆಯೇ ಬಂಜೆ, ಬಸುರಿ, ಸೂಳೆ, ವಿಧವೆ ಮೊದಲಾದ ಚಿರಘಟ್ಟಗಳಿಗೆ ಅರ್ಥಸಂದರ್ಭ ಹೇಳುವ ಆವಶ್ಯಕತೆ ಇರುವದಿಲ್ಲ. ಹೆಸರಾದ ತ್ರಿಪದಿಕಾರ ಸರ್ವಜ್ಞನ ಮೇಲೂ ಅಂದಿನ ನಾಡವರ ಪಡಿನುಡಿಗಳೂ, ಮೂಲ ಮಾತು ಗಳೂ, ರೂಢಿಯ ತಳಹದಿಗಳೂ, ಭಾವ ಸಂಸ್ಕಾರಗಳೂ ತಮ್ಮ ಪುಣ್ಯ ಪ್ರಭಾವ ಬೀರಿರಲಿಕ್ಕೆ ಸಾಕು. ಇದರ ಸಂಶೋಧನೆಯೂ, ತುಲನಾತ್ಮಕ ತಾರತಮ್ಯ ದೃಷ್ಟಿಯೂ ಮುಂದಿನ ಸಾರಸ್ವತ ಸಂತಾನಕ್ಕೆ ಹೆಚ್ಚು ಲಾಭ ದಾಯಕ.

ಸುವ್ವಿ ಸುವ್ವಾಲೆ! ಎಂಬ ಪಲ್ಲವಿಯಲ್ಲಿ ಬರುವ ಹಾಡುಗಳೂ ಶುಭ ಕೋರುವ ಒಸಗೆಯ ಹಾಡುಗಳೇ ಸರಿ. ಶುಭದ ತದ್ಭವ ಸುವ್ವಿಯಾಗಿರದೇ ಎಂಬುದನ್ನು ಸಂಶೋಧಕರು ಒರೆ ಹಚ್ಚಬೇಕು. "ಮಲ್ಲಿಗೆ ದಂಡೆ" ಯಲ್ಲಿ ಹಲವಾರು ಉತ್ತಮ ತರಗತಿಯ ಮದುವೆಯ, ಬಯಕೆಯ, ಸೋಬಾನದ ಹಾಡುಗಳು ಸಂಗ್ರಹಿತವಾಗಿರುವವು. "ನೂಲ್ಯಾವ್ವಲ್ಲಾ ಕ ಚನ್ನೀ" ಯಂಥ ಸಂವಾದಗಳು ಹಾಸ್ಯದ ಜಾಡಿಗೆ ಸೇರುವವು ; ನಗೆಯ ಹಾಡುಗಳೂ ಸಾಕಷ್ಟು ದೊರಕುವವು.

## ಪರಂಪರೆ

"ಕುಟ್ಟು ಬೀಸುವ ಹಾಡು ಯಾವಾಕಿ ಕಲಿಸ್ಯಾಳ
ಕೃಷ್ಣನ ತಂಗಿ ಸುಭದ್ರಿ ? ಕಲಿಸ್ಯಾಳ
ಕೃಷ್ಣನ ವ್ಯಾಲ ಪದಗೋಳ—

"ಶರಣರ ನೆನೆದರ ಸರಗೀಯ ಇಟ್ಟಂಗ
ಹವಳ ಮಲ್ಲಿಗಿ ಮುಡಿದಂಗ ? ಕಲ್ಯಾಣ
ಶರಣರ ನೆನೆಯೊ ನನ ಮನವೆ—

"ಕರುಣ ಬಂದರ ಕಾಯೋ ಮರಣ ಬಂದರ ಒಯ್ಯೋ
ಕರುಣಿ ಕಲ್ಯಾಣ ಬಸವಣ್ಣ ? ಕಾಶಿಲಿಂಗ
ಕಡೆತನ ಕಾಯೊ ಅಭಿಮಾನ—

"ಕಸುವು ಹೊಡೆದ ಕೈಯು ಕಸ್ತೂರಿ ನಾತಾದ
ಬಸವಣ್ಣ ನಿನ್ನ ಸೆಗಣೀಯ ? ಬಳಿದ ಕೈ
ಎಸಳ ಯಾಲಕ್ಕಿ ಗೊನಿ ನಾತ—

"ತಿರುಪತೀ ಹಾದೀಲಿ ತಿರು ತುಳಸಿಮರ ಹುಟ್ಟಿ
ಬೇಲೂರ್ಗೆ ಬೇರು ಹರಿದಾವೊ ? ತಿಮ್ಮಪ್ನ
ಕಲ್ಯಾಣ್ಗೆ ಮಗ್ಗು ಸುರಿದಾವೊ—

"ತೇರು ಹರಿದಾವು ತಾನಕ್ಕೆ ನಿಂತಾವು
ತಾರೊ ಚನ್ನಯ್ಯ ಜವನಾವ ? ಬಾಳೆಹಣ್ಣು
ಬೇಡಿಕೊಳೆ ಮಗಳೆ ಸೆರಗೊಡ್ಡಿ—

"ಜನಕರಾಯನ ಮಗಳು ಬನಕ ತೊಟ್ಟಲ ಕಟ್ಟಿ
ಲವಕುಶರನ್ನು ತೂಗ್ಯಾಳೊ ? ಸೀತಾದೇವಿ
ನಗುತ ವನವಾಸ ಕಳದಾಳ—

" ಹೆಣಿಯು ಬರಹದ ಗೆರೆಯು ಹರೆದರು ತಪ್ಪದು
ಹರಿಚಂದ ರಾಯ ಸುಡುಗಾಡ? ಸೇರಿದರ
ಇದಿಯುವನ ಬೆನ್ನ ಬಿಡಲಿಲ್ಲ—

" ಸೀತಾದೇವಿಯಷ್ಟು ಸಿರಿಯನುಂಡವರಿಲ್ಲ
ದ್ರೌಪದಿಯಷ್ಟು ಹರವೀಯ? ಹೊತ್ತವರು
ಈ ಲೋಕದಾಗ ಯಾರಿಲ್ಲ—

## ತವರು

" ಹಣ್ಣು ಹಾಲೀಗಿಂತ ಬೆಣ್ಣೆ ತುಪ್ಪಕ್ಕಿಂತ
ಚೆನ್ನಾಗಿ ಕಳಿತ ರಸಬಾಳೆ? ಹಣ್ಣಿಗಿಂತ
ಚೆನ್ನ ಕಾಣೆ ತಾಯಿ ಎದೆಹಾಲು—

" ಕಣ್ಣೀಗೆ ಕಪ್ಪಾಸೆ, ಬಣ್ಣಕ್ಕೆ ಸೆರಗಾಸೆ,
ಹೆಣ್ಣು ಮಕ್ಕಳಿಗೆ ತವರಾಸೆ? ತಾಯವ್ವ
ನಿನ್ನಾಸೆ ನಮಗೆ ಅನುಗಾಲ—

" ತಾಯಿ ಇದ್ದರೆ ಭೋಗ, ತಂದೆ ಇದ್ದರೆ ಭೋಗ,
ನೀರಿದ್ರೆ ಬಾಳೆಗೊನೆ ಭೋಗ? ತಾಯಮ್ಮ
ನೀ ಇದ್ರೆ ನಮಗೆ ಐಭೋಗ—

" ಯಾರು ಆದರೂ ಹೆತ್ತ ತಾಯಂತೆ ಆದಾರೋ
ಸಾವಿರ ಸೌದೆ ಒಲೆಯಲ್ಲಿ? ಉರಿದಾರೂ
ದೀವಿಗೆಯಂತ ಬೆಳಕುಂಟೊ—

" ಅಚ್ಚಕ್ಕಿ ಇದ್ದಾಗ ನುಚ್ಚಕ್ಕಿ ಹಂಗೇನು?
ಇಚ್ಚಾಳಗಾತಿ ತಾಯಮ್ಮ? ಇದ್ದಾಗ
ಲುಚ್ಚವರ ಸಂಗ ನಮಗೇನು?—

" ತವರು ಇಲ್ಲದ ಮೇಲೆ ಇರಬಾರದೀ ಜನ್ಮ
ಹೋಗಬೇಕು ಹೊಳೆಯ ಕರೆಗಾಗಿ? ತಾಯಮ್ಮ
ಮುಳುಗ್ಬೇಕು ಗಂಗೆ ಹೆಸರ್ಹೇಳಿ—

" ತಾಯಮ್ಮ ಎಂಬುವಳು ದೇವಲೋಕದ ಮನುಸ
ಕಾಲು ಸೋಕಿದರೆ ಕರ್ಮಾವು? ತಾಯಮ್ಮ
ಕಾಶಿಗ್ಹೋದಾರು ಕಳೆಯಾದು—

" ತಾವರಿಯ ಗಿಡ ಹುಟ್ಟಿ ದೇವರಿಗೆ ನೆರಳಾದಿ
ನಾ ಹುಟ್ಟಿ ಮನೆಗೆ ಎರವಾದೆ? ಹಡದವ್ವ
ನೀ ಕೊಟ್ಟ ಮನೆಗೆ ಹೆಸರಾದೆ—

" ಅಕ್ಕ ಇದ್ದರೆ ಭಾವ, ರೊಕ್ಕ ಇದ್ದರೆ ಸಂತೆ,
ಮಕ್ಕಳಿದ್ದರೆ ಮನಿಮಾರ ?   ಹಡೆದವ್ವ
ನೀ ಇದ್ದರೆ ನಮಗೆ ಸಂವರಾಜ್ಯ—

## ಸುವ್ವಿ ಹಾಡು

" ಕುದುರೇನೆ ತಂದಿದಿನಿ ಜೀನವ
ಬರಬೇಕೆ ತಂಗಿ ಮದುವೆಗೆ—ಸುವ್ವಿ

ಅಂಗ್ಳ ಗುಡಿಸೋರಿಲ್ಲ ಗಂಗ್ಳ ತೊಳೆಯೋರಿಲ್ಲ
ಹೇಗೆ ಬರಲಣ್ಣಾ ಮದುವೆಗೆ—ಸುವ್ವಿ

ಅಂಗ್ಳಕ್ಕೆ ಆಳಿಡುವೆ ಗಂಗ್ಳಕ್ಕೆ ತೊತ್ತಿಡುವೆ
ಬರಬೇಕೆ ತಂಗಿ ಮದುವೆಗೆ—ಸುವ್ವಿ

ಮಜ್ಗೆ ಕಡೇಯೋರಿಲ್ಲ ಬೆಣ್ಣೆ ತೆಗೆಯೋರಿಲ್ಲ
ಹೇಗೆ ಬರಲಣ್ಣಾ ಮದುವೆಗೆ—ಸುವ್ವಿ

ಮಜ್ಜಿಗ್ಗೆ ಆಳಿಡುವೆ ಬೆಣ್ಣೆಗೆ ತೊತ್ತಿಡುವೆ
ಬರಬೇಕೆ ತಂಗಿ ಮದುವೆಗೆ—ಸುವ್ವಿ

ಬೇಸಗೆ ಬಿಸಿಲಣ್ಣಾ ಕೂಸಿನ ತಾಯಣ್ಣಾ
ಹೇಗೆ ಬರಲಣ್ಣಾ ಮದುವೆಗೆ—ಸುವ್ವಿ

ನಿನಗೆ ಪಲ್ಲಕ್ಕಿ ಕೂಸಿಗೆ ಮರಿತೇಜಿ
ಬರಬೇಕೆ ತಂಗಿ ಮದುವೆಗೆ—ಸುವ್ವಿ

ಮಳೆಯಾರ ಬಂದೀತೋ ಹೊಳೆಯಾರ ತುಂಬೀತೋ
ಹೇಗೆ ಬರಲಣ್ಣಾ ಮದುವೆಗೆ—ಸುವ್ವಿ

ಚಿನ್ನದ ಹರಿಗೋಲ್ಗೆ ರನ್ನದ ಹುಟ್‌ಹಾಕಿ
ಜೋಕೇಲಿ ನಿನ್ನ ಕರೆದೊಯ್ವೆ—ಸುವ್ವಿ

ಅಪ್ಪ ಇದ್ದರೆ ಎನ್ನ ಒಪ್ಪದಿ ಕರೆದೊಯ್ವ
ಅಪ್ಪ ಇಲ್ಲದಾ ಮನೆಯೊಳ್ಗೆ—ಸುವ್ವಿ

ಅಮ್ಮ ಇದ್ದರೆ ಎನ್ನ ಸುಮ್ಮನೆ ಕಳುಹೋಳೆ
ಅಮ್ಮ ಇಲ್ಲದಾ ಮನೆಯೊಳ್ಗೆ—ಸುವ್ವಿ

ಬಂದರೆ ಬಂದೇನೋ ಅಂಗ್ಳದಾಗೆ ನಿಂತೇನೋ
ಕಂದಗೆ ಧಾರೆ ಎರೆದೆನೋ—ಸುವ್ವಿ

(ನಾಡ ಪದಗಳು—೧೯೪೭)

## ಸುಲ್ತಾನನ ದೌಲತ್ತು

(ಲಾವಣಿ)

“ ಏನು ಮೋಸವಾಯಿತೋ—ಸುಲ್ತಾನ ದೌಲತ್
ಯಾರ ಪಾಲಿಗೆ ಸೇರಿತೋ ||ಪಲ್ಲ||

“ ಸುತ್ಮುತ್ ಕಾವೇರಿ ಹೊಳೆ
ನಡುವೆ ಶ್ರೀರಂಗಪಟ್ಣ
ಪಟ್ಟಣದೊಳಗೆಲ್ಲ
ನೀನೆಂಬೊ ರಂಗಸ್ವಾಮಿ—ಏನು ಮೋಸ

“ ಕೋಟೇ ಮೇಲ್ ನಿಂತುಕೊಂಡು
ಹಸ್ರು ಕೊಡೇನ್ ಹಿಡಿದುಕೊಂಡು
ಹೋಗೋ ದಂಡಿಗೆಲ್ಲ
ವಸ್ತ್ರವ ಬೀಸಿದಾ—
ರಾಜನ್ ದೌಲತ್—ಏನು ಮೋಸ

“ ಮಟಮಟ್ ಮಂಗ್ಳಾರದ್ ದಿವ್ಸ
ಮಧ್ಯಾನ್ದ ಹೊತ್ತಿನಲ್ಲಿ
ಹದ್ದು ಹಾರಿದ್ಹಂಗೆ ಹಾರಿತಲ್ಲೋ
ರಾಜನ್ ದೌಲತ್—ಏನು ಮೋಸ

“ ಸುಲ್ತಾನನ್ ದೌಲತ್ ಹೋಯ್ತು
ಕುಂಪ್ಣೀಗ್ ದೌಲತ್ ಬಂತು
ಹೆಂಗ s ಸರಿ s ಗೆಲ್ಲ
ಹೆಚ್ಚಿನ್ ಕಾರ್‌ಬಾರು ಬಂತು — ಏನು ಮೋಸ

## ಕಿತ್ತೂರ ಚನ್ನಮ್ಮ

“ ಕಿತ್ತೂರ ಚನ್ನಮ್ಮ ಕಿತ್ತೂರ ಬಿಡವಳ್ಳ
ಏಳು ನೂರೆಮ್ಮಿ ಎಳೆಗರ s ಹೊಡಕೊಂಡು
ಹಂಗಿಲ್ಲದ್ಹಾದಿ ಹಿಡದಾಳ—

ಮೇಲಿನ ಲಾವಣಿ ಹಾಡು ಟಿಪ್ಪುವಿನ ಬೀಳಿನ ಹಾಡಾಗಿದೆ; ಹಾಡುಗಾರನು ದೌಲತ್ತಿನ ಗತವೈಭವಕ್ಕಾಗಿ ಮರುಗಿ, ನೊಂದು ಹಾಡಿಕೊಳ್ಳುತ್ತಾನೆ. ಎರಡನೆಯದು, ಕಿತ್ತೂರಿನ ಬಂಡಾಯ ಕತೆಯನ್ನು ನೆನಪಿಗೆ ತರುತ್ತದೆ. ಇದೊಂದು ಚುಟಿಕೆ ಬಲವುಳ್ಳದ್ದು ಇದ್ದರೂ ಅಸಮಗ್ರವಾಗಿದೆ; ಒಂದು ಸಣ್ಣ ಸನ್ನಿವೇಶಕ್ಕೆ ನಿದರ್ಶನವಾಗಿದೆ.

# ನಾಡಿನ ಊರುಗಳು

"—ಬಾಳ್ ಬಾಳಿನ್ನಡ, ಜಬ್ಬೂಮಿ ಬಾಳೋ
ಜಬ್ಬೂಮಿ ಮಿಾದಲ್, ಪೂವಂುಂದ್ ಬಾಳೋ
ಪೂವಂುಂದ್ ಮಿಾದಲ್, ದೇವೈಯ್ಯ ಬಾಳೋ
ದೇವಂಗೊತ್ತಾಚಾರ, ಪಾಡಿಚೊ ಎಂಗೋ
ಆಚಾರ ಪಾಡಿಲ್ ಚಿಕ್ಕನ ಎಂಗಾ

(ಹುತ್ತರಿ ಹಾಡು)

"ಹಳ್ಳದಲ್ನಂಜನಗ್ಗೂಡು ತಿಟ್ಟಲ್ಲಿ ಬೆಂಗಳೂರು
ವಜ್ರಮಾಣಿಕದ ಮೈಸೂರು ॥ ಮೂಡ್ಲೋರಿ
ಗುಗ್ಗುರದ ತೇರು ಹರಿದಾವು

"ಸೊಲ್ಲಾಪುರದ ಒಳಗ ಸೆಲ್ಲೆಲ್ಲ ಮಲ್ಲೀಗಿ
ಹಾಸುಮಂಚೆಲ್ಲ ಹವಳವ ॥ ಸಿದರಾಮನ
ದಂಡುಕೋಲೆಲ್ಲ ದವನವ

"ಬಾದಾಮಿ ಸಂತ್ಯಾಗ ಬಂದಾಳೆ ಹಡೆದವ್ವ
ಮಂದೀನ ಕಂಡು ನನ್ನ ಮರತ ॥ ಮಲ್ಲೀಗ
ದಂಡೀಯ ಕಂಡು ಹುಡುಕ್ಯಾಳ

"ಬಾಳೆಹಣ್ಣಿನ ಮಾಟ ಬಾದಾಮಿ ಎಲಿದೋಟ
ಬಾಗಿಲಾಗಾಡು ಮಗನಾಟ ॥ ಕಲಕೇರಿ
ತೇರಿನ ಮಾಟ ಬಲುಮಾಟ

"ಹೆಸರೀಗಿ ರಬಕವಿ ಮೊಸರೀಗಿ ನೀರಿಲ್ಲ
ಕುಸಲದ ಸಿಂಬಿ ಬರಿಗೊಡ ॥ ಬಾಲ್ಯಾರು
ಉಸ್ಸೆಂದು ಭಾವಿ ಇಳಿದಾರ

"ಮುನವಳ್ಳಿ ಮುಂದೀನ ವನವ ಕಂಡೀರಕ್ಕಾ
ತನವೀಗಿ ತಿಳ್ಳ್ಯಾವ ಹೂಮುಗ್ಗಿ ॥ ನನ ಚಲುವ
ತಮ್ಮಗೊಡದಾವ ಮೊಕಮಿಾಸಿ

"ಹಲಸಂಗಿ ಹಳದಾಗ ಕುಂಬಳ ಬೀಜೂರಿ
ಕೂಡಲ ಮ್ಯಾಲ ಕುಡಿ ಏರಿ ॥ ಹತ್ತೂರ
ಹೂಡೇದ ಮ್ಯಾಲ ಹೂಮೊಗ್ಗೆ

"ಒಕ್ಲೊವ್ವ ಹಾಸ್ಯವ್ಲೆ ಒಕ್ಲೊವ್ವ ಹೊದ್ದವ್ಲೆ
ಪುತ್ರಾನ ತೂಗಿ ಮಲಗೀಸಿ ॥ ಮಾರಮ್ಮ
ಕಿತ್ತೂರ್ಗೆ ದಾರಿ ಹೊರಟಾಳು

" ಮಲ್ಲಿಗೆ ಇದ್ದಾಗ ಮುಳ್ಳೇಕೆ ಮುಡಿಯುತಿ
ಕಲ್ಯಾಣಿಯಲ್ಲಿ ಬಸವಯ್ಯ ॥ ಇದ್ದಾಗ
ಕಲ್ಗೇಕೆ ಕೈಯ ಮುಗಿಯುವೆ

" ಸೊಲ್ಲಾಪುರದಣ್ಣಾಗ ನಿಲ್ಲದಲೆ ಬರಹೇಳ
ಸೀರ್‍ಯೊಲ್ಲ ಕುಬಸೊಲ್ಲ ॥ ಅಣ್ಣನ
ಮಾರಿ ನೋಡಂಥ ಮನವಾಗಿ

" ಕೊಂಗ್ಹಳ್ಳಿ ಮಲ್ಲು ಕೊಂಗನಾಡಿಗೆ ಹೋಗಿ
ಕೊಂಗಾರು ಕೊಟ್ಟ ಕುದುರೇಯ ॥ ಏರ್‍ಕೊಂಡು
ಕೊಂಗ್ಹಳ್ಳಿ ಬೀದಿ ಮೆರೆದಾನೆ

" ಬೇಲೂರು ಎಂಬೋದು ಏಳು ಸುತ್ತಿನ ಕೋಟೆ
ಮೇಲೆ ಡೊಂಕ ॥ ಣಿ ಹು ॥ ಲಿ ಮುಖ—ಕೋಲು
ಹೆಂಡರಿರುವೋದೊಂದ ॥ ರಮನೆ—ಕೋಲು

" ಬಿದುರೂರಿಗ್ ಹೋಗ್ವಾಗ ಉದುರಾವೆ ಮಲ್ಲಿಗೆ
ಬಿದುರೂರಿಗ್ ಹೋಗಿ ಬರುವೋ—ಚನ್ನಯ್ಯನ
ಕುದುರೆಗೆ ಧೂಳು ಗ ॥ ವಿದವೆ—ಕೋಲು

" ಹುತ್ತದ ಕೋವೇಲಿ ಹುಟ್ಯಾಳೆ ಕರಿಯವ್ವ
ಮುತ್ತೋಡಿಗ್ ವಾಲೆ ಬರದ ॥ ಳೇ—ಹಾಲಪ್ಪನಾಯ್ಕ
ಮುತ್ತಿನಂದಲವ ಕ ॥ ಳುವ್ಯಾನೆ—ಕೋಗಿಲೇ

" ಚೋಳರಾಯರ ನಾಡು, ಕಾಳೆತ್ತಿ ಊರೊಳಗೆ
ಪೋಳಗೇರಿಯೊಳು ನಾಯಕನು ॥ ಕಳ್ಳಂದ
ಕಾಳಬಣ್ಣದಾ ವೈಕಟ್ಟು

" ಎಳ್ಳೂರು ಬಣಜಿಗ ಎಳ್ಳು ಕೇಳುತ ಬಂದ
ಎಳ್ಳುಂಟೆ ನಾರ್‍ಯೆಂದ್ ಹಣವಿಗೆ—ತಂ
ದನು ತಾನಂದನೋ ತಂದನಾನೋ—ತನುತಾ

## ಸಖಿ ಗೀತ

" ಒಂದೆಂಬೋದು ಚಂದ್ರಮಾಲೇ ಸರ
ಎರಡೆಂಬುದೇನೆ ಸಖಿ ಹೇಳೆ
ಎರಡೆಂಬೋದು ಗರುಡಮಾಲೇ ಸರ
ಮೂರೆಂಬುದೇನೆ ಸಖಿ ಹೇಳೆ

ಮೂರೆಂಬೋದು ಮುತ್ತಿನಸರ ಕಾಣೆ
ನಾಕೆಂಬುದೇನೆ ಸಖಿ ಹೇಳೆ

ನಾಕೆಂಬೋದು ಆಕಳ ಮೊಲೆ ಕಾಣೆ
ಐದೆಂಬುದೇನೆ ಸಖಿ ಹೇಳೆ

ಐದೆಂಬೋದು ಕುಯ್ದ ಮಲ್ಲಿಗೆ ಸರ
ಆರೆಂಬುದೇನೆ ಸಖಿ ಹೇಳೆ

ಆರೆಂಬೋದು ಹಾರುವ ಹಕ್ಕಿ ಕಾಣೆ
ಏಳೆಂಬುದೇನೆ ಸಖಿ ಹೇಳೆ

ಏಳೆಂಬೋದು ಏಳ್ ಹೆಡೆ ಸರ್ಪ ಕಾಣೆ
ಎಂಟೆಂಬುದೇನೆ ಸಖಿ ಹೇಳೆ

ಎಂಟೆಂಬೋದು ಕಂಠಮಾಲೇ ಸರ
ಒಂಬತ್ತೆಂಬುದೇನೆ ಸಖಿ ಹೇಳೆ

ಒಂಬತ್ತೆಂಬುದು ತುಂಬಿದ ಕೊಡ ಕಾಣೆ
ಹತ್ತೆಂಬುದೇನೆ ಸಖಿ ಹೇಳೆ

ಹತ್ತೆಂಬೋದು ಕಿತ್ತಳೆ ಬನ ಕಾಣೆ
ಹನ್ನೊಂದೆಂಬುದೇನೆ ಸಖಿ ಹೇಳೆ

ಹನ್ನೊಂದೆಂಬುದು ಹೊನ್ನಿನುಂಗುರ ಕಾಣೆ
ಇನ್ನೊಂದ್ ಹೇಳೆ ಗಂಡನ್ ಹೆಸರ

ಮತ್ತೊಂದ್ ಹೇಳೆ ಮಾವನ್ ಹೆಸರ
ಮುಚ್ಚಿ ಮುಚ್ಚಿ ಹೇಳೆ ಅತ್ತೆ ಹೆಸರ

(ನಾಡಪದಗಳು)

## ಹೆಣ್ಣು

" ಹರಿಯುವಾ ನದಿಯನ್ನು ಹರೆಯದಾ ಹೆಣ್ಣನ್ನು
ಅರಸಿನಾ ಮನದ ಪರಿಯನ್ನು ॥ ಜಾಣಾರು
ಮನ ಬಂದ ತೆರದಿ ತಿರುಹೋರು

" ಗಂಡನುಳ್ಳ ಗರತಿಯ ಸಂಗವ್ಯಾತಕಣ್ಣಯ್ಯ
ಅವಳಂಗ ಬೇರೆ ಗುಣ ಬೇರೆ ॥ ಅಡಕೇಯ
ಹೊಂಬಾಳೆ ಬೇರೆ ಸುಳಿ ಬೇರೆ

" ಸಂಗಾತಿ ಹೆಣ್ಣು ಜಂಬು ನೇರಿಲೆ ಹಣ್ಣು
ಮುಂಗಯ್ಯ ಹಿಡಿದು ನಗಿಸೋಳು ॥ ಮುಖಭಾವ
ಮುಂಗಾರ ಮಿಂಚು ಹೊಳೆದ್ಹಂಗೆ

" ಹೆಣ್ಣು ಹೆತ್ತೀನಂತ ಹೆಚ್ಚ್ಯಾಳ ನಿನಗೇಕೆ ॥
ಹೆಣ್ಣು ನೆರೆಮನೆಯ ಸಿರಿದೇವಿ ॥ ತಾಯಮ್ಮ
ಗಂಡು ನಿನ್ಮನೆಗೆ ತೊಲೆಗಂಭ

" ಹಸನಾದ ಹೆಣ್ಣೇ ಮೊಸಳೆ ತೋಟಕೆ ಬಾರೆ
ರಸ ಮೆಚ್ಚಿದೆಲೆಯ ಕೊಯಿಸೇನು ॥ ಎಲೆ ಹೆಣ್ಣೆ
ಹಸನಾದ ನಗೆಯ ನಗಿಸೇನು

" ಬದ್ದು ಬೋರೆಯ ಮೇಲೆ ಯ್ಯಾಲಕ್ಕಿ ಕೂರೋಳೆ
ಗಾಳಿ ಬಂದಾರೆ ಬಳುಕೋಳೆ ॥ ಮಾವನ ಮಗಳೆ
ಸೈಕಾಣೆ ನಿನ್ನ ಗೆಳೆತಾನ

" ಆಚೆ ಕೇರಿಯುವಳೆ ಕಾಚಕ್ಕಿ ನೆರಿಯುವಳೆ
ಕಾಕ್ಯಾಕಿ ನನ್ನ ಕರೆಯೋಳೆ ॥ ಮಾವನ ಮಗಳೆ
ಪ್ರೀತಿ ಬಿತ್ತಲ್ಲ ನಿನಮೇಲೆ

" ಕೋಳಿ ಕೂಗೀತು ಕುಂಬಳದ ಹೂವೀಗೆ
ಬೆಟ್ಟ ಕೂಗೀತು ಬಿದಿರೀಗೆ ॥ ಮಾವನ ಮಗಳೆ
ನೀನು ಕೂಗೀದೆ ನನಗಾಗಿ

" ಹೆಣ್ಣೀನ ಹರೆಯು ಹಣ್ಣೀನ ಗೊಂಚಲು
ಕಣ್ಣೀಲಿ ನೋಡಿ ಮನಬಾರ ॥ ಬಡವಂತ
ಕಣ್ಣಿರಿಲ್ಲೀನ ಮನಿಯಾಗ

## ಸತಿಪತಿ

" ಮುತ್ತ್ಯೈದೆತನ ಬೇಡಿ ಮೂರು ತಾಸು ನಾನಿಂತೆ
ಮುತ್ತಿನ ತುರಾಯಿ ಅರಸರ ॥ ಸಂಗಾ ಬೇಡಿ
ಸುತ್ತೀನ ಶಿವನ ಶಿಖರಾವ

" ಹಚ್ಚಡದ ಪದರಾಗ ಅಚ್ಚ ಮಲ್ಲಿಗಿ ಹೂವ
ಬಿಚ್ಚಿ ನನಮ್ಯಾಲ ಒಗೆದಂಥ ॥ ರಾಯರನ
ಬಿಟ್ಟ್ಯಾಂಗ ಬರಲೆ ಹಡೆದವ್ವ

" ಯ್ಯಾಲಕ್ಕಿ ಕಾಯ್ ಸುಲಿದು ಯೂವಡಗಿ ಮಾಡಲಿ
ಊರಿಗೊಹೋಗ್ಯಾರ ರಾಯರು ॥ ಬಾರದೆ
ಯೂವಡಗಿ ಮಾಡಿ ಫಲವೇನ !

" ಆರು ಸೇರಿನ ಸರಗಿ ಅರಗಿಲ್ಲದ ಕಟ್ಟಾಣಿ
ನತ್ತು ಬೇಡಿದರ ನಗುವಂಥ ॥ ರಾಯರನ
ನಿಂತ ಬೇಡೀನ ಶಿವನಲ್ಲಿ

“ ಅತ್ತಿ ಹೂವಿನ ಸೀರಿ ಅಚ್ಚೇರಿನ ವಂಕಿ
ಇಚ್ಛೆಯವರಲ್ಲ ಮುನಿಪುರುಷರ—ಕೂಡ
ಹೆಚ್ಚುಮಾತಾಡಿ ಫಲವೇನ !

“ ಹೇಸಿ ನಿನ ಬದುಕೀಗಿ ಆಶೆ ನಾ ಮಾಡಿಲ್ಲ
ರೇಸೀಮಿ ಉಡುವ ಥೊರಿ ನನ್ನ ಽ ರಾಯರ
ಆಶೆ ಮಾಡೇನ ಅನುಗಾಲ

“ ಗಂಡನಾ ಹಿತವೇನು ಕೆಂಡದಾ ತಂಪೇನು
ಕೊಂಡ ಮಜ್ಜಿಗೆಯ ರುಚಿಯೇನು ಽ ಎಲೆ ಗೆಣೆಯ
ಭಂಡಾಗಿ ಬದುಕಿ ಫಲವೇನು !

“ ಅಣ್ಣ ಬಾಳಿದರೇನು ತಮ್ಮ ಬಾಳಿದರೇನು !
ತನ್ನ ಕೈಹಿಡಿದ ಪುರುಷಾನು ! ಬಾಳಿದರೆ
ಉಣಲಿಕ್ಕು ಭಾಗ್ಯ ತಿನಲಿಕ್ಕು

“ ಯಾಲಕ್ಕಿ ಎಲೆ ಸಣ್ಣ ಜೀರೀಗೆ ಮೊನೆ ಸಣ್ಣ
ಸೋಲಿಗರ ಹೆಣ್ಣ ನಡು ಸಣ್ಣ ಽ ನಡು ಸಣ್ಣ
ಅವಳನ್ನ ನನಗೆ ಕೊಡಿಸಣ್ಣ

## ಜೋಗುಳ

“ ತಾಯಿದ್ರೆ ತವರ್ಹೆಚ್ಚು ತಂದಿದ್ರೆ ಬಳಗ್ಹೆಚ್ಚು
ಸಾವಿರಕೆ ಹೆಚ್ಚು ಪತಿಪುರುಷ ಽ ಹೊಟ್ಟೀಯ
ಮಾಣಿಕದ ಹರಳು ಮಗ ಹೆಚ್ಚು

“ ಚಿಕ್ಕ ನನ ಕಂದಯ್ಯ ಚಿಣಿದಾಂಡು ಆಡ್ಯಾನ
ಚಿಕ್ಕಹೊಳೆ ದಾಟಿ ತೊರೆಗಲ್ಲ ಽ ಬಾಲ್ಯಾರ
ಚಿತ್ರದ ಕೊಡಕ ಚಿಣಿ ಬಡೆದ

“ ಗಂಡಹೆಂಡರ ಜೋಡು ದುಂಡು ಮುತ್ತಿನ ಜೋಡು
ಗಂಡೆರಳಿ ಜೋಡು ಆಡವ್ಯಾಗ ಽ ನನ ಬಾಲಾ
ನೀ ಜೋಡೊ ನನಗೆ ಮುನಿಯಾಗ

“ ಹಾಲ ಕಾವೂ ಚಿಂತಿ ಬಾಲ ಮಲಗೂ ಚಿಂತಿ
ಇನ್ನಾರ ಚಿಂತಿ ನಮುಗವ್ವ ಽ ನನ ಗೆಳದಿ
ಮಗ ಬರುವ ಚಿಂತಿ ಮನದಾಗ

“ ಏಳು ಸುತ್ತಿನ ಕ್ವಾಟಿ ಎಳೆಯ ಬೆಳದಿಂಗಳ
ಏರಿ ಬಂದಾಳ ನಿನಗಾಗಿ ಽ ನನ ಬಾಳ
ಲಾವಂಗದರಸ ಹೊರಹೊಂಡ

" ಆರು ತೇರಿನ ಅರಸೆ ಮೂರು ತೇರಿನ ಮುನಿಯೆ
ಗೊಂಬೆ ತೇರಿನ ದಳಪತಿಯೆ ॥ ನಂಜಯ್ನ
ಪಡೆದಮ್ಮ ನಾರು ಧರೆಯಲ್ಲಿ |

" ಎಲ್ಲಾರ ಮಕ್ಕಳ್ಹಂಗೆ ಅಲ್ಲಕಣೆ ನನ್ನಯ್ಯ
ನಲ್ಲರಳಗಣ್ಣು ನಗೆಮುಖ ॥ ಕಾಮನ
ಬಿಲ್ಲು ಹೋಲ್ತಾವೆ ಕುಡಿಹುಬ್ಬು

" ಯಾರಾಸೆ ನಿನಗೆ ಪಾರಿವಾಳದ ಪಕ್ಷಿ
ನೀರಾಸೆ ಮರದ ನೆರಳಾಸೆ ॥ ಕಂದಯ್ಯ
ನಿನ್ನಾಸೆ ನಮ್ಮ ಮನೆಗೆಲ್ಲ

" ಹಾಲನ್ನು ಕುಡಿವಾಗ ಗಿಳಿಯೊಂದು ಬಂದೀತು
ಗಿಳಿಯು ಕೊಂಡೋದ ಒಳಲೇಯ ॥ ತರುವದಕೆ
ಆಳಿಗೊಂದಾಳು ಹೊರಟಾವು

" ಯಾತ ಯಾತರ ಎಲೆಯೆ ತೋಟದ ಗಾಳಿ
ಸುತ್ತಾಲು ಗಾಳಿ ಸುಳಿಗಾಳಿ ॥ ನನ್ನಯ್ನ
ತೊಟ್ಟೀಲ ಗಾಳಿ ಮನೆತುಂಬ

" ತೊಟ್ಟೀಲ ಒಳಗೊಂದು ತೊಳೆದ ಮುತ್ತನು ಕಂಡೆ
ಹೊಟ್ಟೆ ಅಕ್ಕಳಿಸಿ ನಗುವೋನ ॥ ನನ್ನಯ್ನ
ನೆತ್ತೀಲಿ ಕಂಡೆ ಹರಳೇಲಿ

" ತಮ್ಮನಾ ತೊಟ್ಟಿಲಾ ಬಂದ್ಹೋಗೆ ಅತಿಗ್ಯವ್ವ
ಮುಚ್ಚಿಕೊಳ್ಳಿ ಕೊರಳ ಪದಕಾವ ॥ ನಿನ್ತಮ್ಮ
ಬೆಚ್ಚಾನು ಬೆಳ್ಳಿ ಬೆಳಕೀಗೆ

" ಸೀಗೆ ಮಳೆಯಲ್ಲಿ ಸಿಕ್ಕೀತು ಅರಗೀಣಿ
ಕೊಕ್ಕಿಲ್ಲ ಮುತ್ತು ನವರತ್ನ ॥ ಅರಗೀಣಿ
ಸಿಕ್ಕೀತು ಶಿವನ ದಯದಿಂದ

" ಏರೀಯ ಹತ್ಯಾನೊ ಎಳೆಗೊಂಚಿ ಮುರಿದಾನೊ
ಸಾರ್ಯ್ಯಾನೊ ಸಣ್ಣ ದನಿಯಲ್ಲಿ ॥ ಈರಣ್ಣ
ಹಾರ್ಯ್ಯಾನೊ ಹುಲ್ಲೆಮರಿಹಂಗೆ

" ನನ್ನಯ್ಯ ನೀಬಾಳು ಇನ್ನು ಸಾವಿರ ಕಾಲ
ಹೊನ್ನೇಯ ಬುಡದ ಗರಿಕೇಯ ॥ ಬೇರಂತೆ
ಮೊಮ್ಮಕ್ಕಳೆತ್ತಿ ಸುಖಿಯಾಗು

" ಅಗ್ಗಿಣೀ ಮಿಂದು ಮೊಗ್ಗು ಮಂಡೆಗೆ ತುಂಬಿ
ಬಗ್ಗಿ ಚಾವಡಿಗೆ ಹೊರಟಾರೊ ॥ ಕಂದಯ್ಯ
ಮಗ್ಗು ಬಾಡೀದೊ ಬಿಸಲಲ್ಲಿ

“ ಎಲ್ಲಾ್ಯರೆ ಇರಲೆವ್ವಾ ಹುಲ್ಲಾಗಿ ಬೆಳೆಯಲಿ
ನೆಲ್ಲಿ ಬಡ್ಯಾಗಿ ಚಿಗಿಯಲಿ ॥ ಕಂದಯ್ಯ
ಜಯವಂತನಾಗಿ ಬೆಳೆಯಲಿ

“ ಚೆನ್ನಿಗನ ಹಚ್ಚಡವ ಚೆನ್ನಾಗಿ ತೊಳೆಯಮ್ಮ
ಚೆನ್ನೀಗರಾಯ್ನ ಹಳದೀಯ ॥ ಹಚ್ಚಡವ
ಚಿನ್ನ ನೀರಲ್ಲಿ ತೊಳೆಯಮ್ಮ

(ಹಳ್ಳಿಯ ಹಾಡುಗಳು ೧೯೩೮)

ಸರ್ವಜ್ಞ ಹೆಣ್ಣಿನ ಹೊಗಳಿಕೆ, ತೆಗಳಿಕೆ ಎರಡನ್ನೂ ಮಾಡಿರುತ್ತಾನೆ, ಜನಪದ ಕವಿಯು ಅಸರಂತವಾಗಿ ಅಚ್ಚಳಿಯದ ಹೆಣ್ಣಿನ ಬಗ್ಗೆ ಸತಿಪತಿ ಪ್ರೇಮಭಾವ ಕುರಿತು ಹಾಡಿಯೇ ಹಾಡಿದ್ದಾನೆ. ಇಬ್ಬರದೂ ತುಸು ಹೆಚ್ಚು ಕಡಿಮೆ ದ್ವಂದ್ವ ದೃಷ್ಟಿಯೇ ಇರುವದು. ಹೆಣ್ಣಿನ ತಾಯುವೊಲೆಹಾಲಿನ ಪೋಷಕ ದ್ರವ್ಯ ಹೊಗಳುತ್ತಿರುವಂತೆಯೇ ಅವಳು ಆಗಾಗ ಜಾರುವ ನಡೆನುಡಿಗಳ ಬಗ್ಗೆ ಮುನ್ನೆಚ್ಚರಿಕೆಯನ್ನೂ ಕೊಟ್ಟಿದ್ದಾರೆ ಅಜ್ಞಾತ ಜಾನಪದ ಕವಿಗಳು. ಒಮ್ಮೊಮ್ಮೆ ಇವರೆಲ್ಲ ನಮ್ಮ ಸರ್ವಜ್ಞನಂತೆ ನಿಷ್ಠುರ ವಾಕ್ಯಗಳನ್ನು ಆಡಿದ್ದಾರೆ. ಇಂದಿನ ಅಣುಯುಗದಲ್ಲಿ ನವನಾಗರಿಕತೆಯು ಬೆಳೆದು ಮುಂದುವರಿಯುತ್ತಿರುವ ಕಾಲದಲ್ಲಿ, ‘ ನಾರಿ ಪರರುಪಕಾರಿ ’ ಎನ್ನಬಲ್ಲೆವು, ನಾರಿಗೆ ಹೆಮ್ಮಾರಿಯೆನ್ನಲಾರೆವು. ಇಂದಿನ ಮಹಿಳಾ ಲೋಕವೂ ಜನಪದ ಕವಿಯು ಮೇಲಿಂದ ಮೇಲೆ ಎತ್ತಿ ತೋರಿಸುವ ಸೌಹಾರ್ದ ಸಾಮರಸ್ಯಗಳನ್ನು, ತನಿಭಾವಗಳನ್ನೂ ತೋರ್ಪಡಿಸುತ್ತಲೇ ಇದೆ. ಸಂಸಾರದ ವಿರಸ, ಪ್ರತಿಕೂಲ ಹೆಜ್ಜೆ—ಕೊನೆಗೆ ಹಾದರದ ಹಂತ, ನಮ್ಮನ್ನಿಂದು ಸಂಧಿಸಲಾರವೆಂದು ಹೇಳುವುದೂ ಕಷ್ಟದ ಮಾತು. ಯಾವ ಶತಕದ ವಿಚಾರಧಾರೆಗೂ ಒಗ್ಗಬಲ್ಲ, ಸರಿತೂಗಬಲ್ಲ, ಸರಿಸಾಟಿಯಾಗಬಲ್ಲ, ಹೆಣ್ಣಿವಳು; ನಲ್ಲನಿಗೆ ಅನುಕೂಲೆ, ತಿಳುವಳಿಕೆಯ ಅನುಯಾಯಿ ಇವಳೆಂದು ನೂರಾರು ಹಾಡುಗಳು ಉತ್ತಮ ದೃಷ್ಟಾಂತಗಳಾಗಿ ನಿಂತಿವೆ. ನೀತಿಯನ್ನು ಪರ್ಯಾಯವಾಗಿಯೊ, ಕಾಂತಾಸಮ್ಮಿತ ರೀತಿಯಲ್ಲೊ ತಿಳಿತಿಳಿ ಪದಗಳಲ್ಲಿ ಜನಪದ ಕವಿಗಳು ಹೇಳಿಬಿಡತಕ್ಕವರು. ಲೇಸು ಲೇಸಾಗಿ ಹೇಳುವ ರೀತಿಯೆ ಇವರದು; ಇದು ಹೊಲ್ಲ, ಇದು ಸಲ್ಲ ಎಂಬ ಹೇಯದ ಮಾತುಗಳೂ ಕೂಡ ನಯವಾದ ಬಗೆಗಳಲ್ಲಿವೆ.

ಒಕ್ಕಡೆ ತುಂಬು ಬಸುರಿಯ ನೋಟಕ್ಕಾಗಿ ನಲಿದರೆ, ಇನ್ನೊಂದು ಕಡೆ ಅಣ್ಣ, ಅಕ್ಕ, ತಂಗಿ, ಅತ್ತಿಗೆ, ನಾದಿನಿಯರ ಸರಸಾಟ ಗೆಲ್ಲಾಟಗಳಿಗೆ ಸಂತೋಷಪಡುತ್ತಾರೆ ಈ ಕವಿಗಳು. ಇವರ ಸರಸ ದೃಷ್ಟಿಯಲ್ಲಿ ಮಗ ಮನೆಗೆ ಕಂಬವಾದರೆ, ಇನ್ನೊಂದು ಮನೆ ಬೆಳಗುಬಲ್ಲಾಕೆ ಮಗಳು ಎಂಬ ಭಾವ ಹರಿದಿದೆ: “ ಮರ್ತ್ಯದಾಗ ಮಗಳಷ್ಟು ಮಾಯೆ ಸೂಸಿಗಿಲ್ಲ ” ಎಂಬ ರಸ ಸಿದ್ಧಾಂತ ಹೊರಟಿರುವದು. ಇನ್ನೊಂದು ಸನ್ನಿವೇಶದಲ್ಲಿ,

“ ಮಗಳು ಮಾತಿನ ಗಿಳಿಯು ಸೊಸಿಯು ಸೂತರ ಗೊಂಬಿ
ಮನಿ ಮಾಡು ತಮ್ಮ ಮತಿವಂತ | ನ ಕೂಡ
ಮನ ಸೂರಿ ಮಾಡ ನನ್ನ ಮಗಳ

ಎಂದೂ ಮನಸೂರೆಗೊಂಡಿದ್ದಾರೆ. ತಾಯಿಯಾದಾಕೆ ಯಾವ ಸಿಟ್ಟನಿಂದ ನೋಡಿದರೂ, ಹೆಣ್ಣು—"ಹಣ್ಣಿನ ಗೊಂಚಲು"—'ಉತ್ತಮರ ಮಗಳು', 'ಅರಗೀಳಿ'—"ಮುಂಗಾರ ಮಿಂಚು" ಇತ್ಯಾದಿ.

## ಹೆಣ್ಣಿನ ಗೋಳು

"ಹಾಯ ಬಾರದ ಹಳ್ಳ ಮಾಯ ಬಾರದ ಗಂಗೆ
ಹತ್ತ ಬಾರದ ಕತ್ತಾಳಿ ಮುಳ್ಳೀಗೆ ॥ ಕಳ್ಳೀಗೆ
ಅಪ್ಪಾಜಿ ನನ್ನನೆರಗಿದರು

"ಹೆಣ್ಣೆಂಬ ಜನುಮಾವು ಇನ್ಬ್ಯೇಡ ಶಿವಗುರುವೆ
ಇನ್ನೊಬ್ಬ ತಾಯಿ ಬಸುರಲ್ಲಿ ॥ ಬಂದಾರೆ
ಹೆಣ್ಣಂತ ಪಾಪಿ ಮಗು ಬೇಡಿ

"ಅರಳೀದೆ ಮರಳೀದೆ ನೆರಳೆಂದು ಒರಗಿದ್ದೆ
ಕರಿಯ ಕಲ್ಲೆಂದು ಎಡವೀದೆ ॥ ಶಿವಗುರುವೆ
ಮಡುವಿಗೆ ತಳ್ಳುವರ ತಿಳಿಯಾದೆ

"ಹೆತ್ತಮ್ಮ ತಾಯಿ ಹೆತ್ತುದಕೆ ಫಲವೇನು
ಎಕ್ಕದ್ಹಾಲಿಟ್ಟು ಕೊಲಲಿಲ್ಲ ॥ ಹುತ್ತಾದ
ಸರ್ಪನಿಗೆ ಸೆರೆಯ ಕೊಡಿಸೀದೆ

"ಸಕ್ಕರಿ ಹೇರಿಕೊಂಡು ಸೊಗಲಕ್ಹೋಗೂ ಜಾಣ
ನಮ್ಮವ್ವಗ್ಹೇಳೊ ಮರಿ ಬ್ಯಾಡ ॥ ಅತ್ತಿಮನಿ
ಬೆಳದಿಂಗಳು ನಮಗ ಬಿಸಿಲಾಯ್ತು

"ಅತ್ತಿಯ ಮನಿಯಾಗ ಅರವತ್ತು ಗಂಗಾಳ
ಬೆಳಗೇತೇನತ್ತಿ ಬೈಬಾಡ ॥ ತವರವರು
ಸರಮುತ್ತ ಮಾಡಿ ಸಲವ್ಯಾರ

"ಹಡೆದವ್ವಗ್ಹೇಳಣ್ಣಾ ಕುಡುನೀರು ದಕ್ಕವು
ಮುಡಿಮಾಸಿ ಮೂರುದಿನವಾಗಿ ॥ ನನ್ನಣ್ಣಾ
ತಾಯವ್ವಗ್ಹೇಳೊ ಮರೆಬ್ಯಾಡ

"ಗೋಕಾವಿ ಮುಂದಿನ ತಾರೇಯ ಗಿಡಗಳಿರಾ
ತಾಯ ಹಡೆದೌವನ ಬರಹೇಳ ॥ ಅತ್ತಿಮನಿ
ಇಗ್ಗರಿ ಭಾಳ ಇರಲಾರೆ

"ಹೆಣ್ಣಾಗಿ ಹುಟ್ಟೋಕಿಂತ ಮಣ್ಣಾಗಿ ಹುಟ್ಟಿದರೆ
ಮಣ್ಣಿನ್ಮೇಲೊಂದು ಮರವಾಗಿ ॥ ಹುಟ್ಟಿದರೆ
ಪುಣ್ಯವಂತರಿಗೆ ನೆರಳಾಗಿ

## ಸೂಳೆ

" ತಂಬಿಟ್ಟಿಗುಪ್ಪುಂಟೆ ತವರೀಗೆ ಮುಪ್ಪುಂಟೆ
ದೊಂಬನಾ ಮನೆಗೆ ಕದವುಂಟೆ ॥ ಸೂಳೇಯ
ನಂಬಿದವಗುಂಟೆ ಸಂಸಾರ ?

" ಮಂಜು ಮರಾಳಲ್ಲ ಮರಳು ಸಕ್ಕರೆಯಲ್ಲ
ಮಡಗಿದ್ದ ಸೂಳೆ ಸ್ಥಿರವಲ್ಲ ॥ ಅಣ್ಣಯ್ಯ
ಮನೆಗೆ ತಂದಿರಿಸು ಮಡದೀಯ

" ಸೂಳೇಯ ಮನೆಯಲ್ಲಿ ಸೂರೆಲ್ಲ ಮಲ್ಲೀಗೆ
ಜಾಣ ನಾ ಹೋಗಿ ಮಲಗೂವೆ ॥ ಮಂಚದ್ಮೇಲೆ
ತಾಳೆಹೂವಿನ ತಲೆದಿಂಬು

" ಎಲ್ಲಿಗೆ ಹೋಗಿದ್ದೆ ಯಾವ್ಹೂವ್ ಮುಡಿದಿದ್ದೆ
ಯಾರ ತೋಳಲ್ಲಿ ಒರಗಿದ್ದೆ ॥ ಕಂದಯ್ಯ
ವಲ್ಲಿ ಸೆರಗೆಲ್ಲ ಪರಿಮಾಳ

" ಕಾಕಾನ ಕೋಟೆಯ ನಿಟ್ಗಾತಿ ಬಂದವಳೆ
ಜಾತ್ರೇಲಿ ಗಂಡ್ನ ಸುಳಿವಿಲ್ಲ ॥ ಆವಳೊಡನೆ
ಸೂಳೇರ ಬೀದಿ ಮೆರೆದಾನೋ

" ಹಾಸೀಗಿ ಮಾಡಿರಲಿ ಕೂಸಲ್ಲಿ ಮಲಗಿರಲಿ
ಸಂಪಿಗ್ಹೂವಿರಲಿ ಬನದಾಗ ॥ ಹಡೆದವ್ವ
ಮಾತಿರಲಿ ನಿನ್ನ ಮನದಾಗ

" ನಿನ್ನೊಂದಿಗಾಡಿ ತಾಲೀಯ ನಾ ಮರೆತೆ
ಹಾಸ್ಗೇಲಿ ಮರೆತೆ ಹವಳಾವ ॥ ನನಗೆಣೆಯ
ಮಾತಿನಲಿ ಮರತೆ ಮನೆಯವನ

" ಸಂಗಾತಿ ನಾನು ಸಂಜೆ ನೀರಿಗೆ ಹೋದೊ
ಸಿಂಗ ನಲ್ಲೂರ ಹೊಸಕೇರೆ ॥ ಏರಿ ಮೇಲೆ
ಸಂಗಾತಿ ಸೆರಗ ಹಿಡಿದಾನೊ

" ಕಾಕು ಹಾಕಿದ ಕಂಡು ಬೇಕಾಗಿ ನಾ ಬಂದೆ
ಬಾರೊ ನನಗೆಣೆಯ ಬಯಲೀಗೆ ॥ ನಾನೆಂದು
ಭಾಷೆ ತಪ್ಪೋಂತ ಮಗಳಲ್ಲ

## ನೀತಿ

“ ಹಾಡೀಗಿ ಹಾಡಿಲ್ಲ ಏಡೀಗಿ ತಲೆಯಿಲ್ಲ
ಮೋಡ ಬಂದಲ್ಲಿ ಬಿಸಲಿಲ್ಲ ॥ ಹೆಣ್ಣೀಗಿ
ಓಡಿ ಹೋದಲ್ಲಿ ಸುಖವಿಲ್ಲ

“ ಚೆಲುವಿ ಚೆಲುವಿಯಂತ ಅತಿಬಾಯಿ ಬಿಡಬ್ಯಾಡ
ಚಲುವಿದ್ದರೇನು ಗುಣವಿಲ್ಲ ॥ ಕೊಳೆನೀರ
ತಿಳಿಯಿದ್ದರೇನು ರುಚಿಯಿಲ್ಲ

“ ಹುಣಚೀಯ ಎಲಿಗೋಳು ಎಣಿಸಿ ನೋಡಿದರೇನ
ಮನಸೀನ ಹೆಣ್ಣು ಕೈಮಾರಿ ॥ ಹೋದರ
ನೆನಸೀದರ್ಹ್ಯಾಂಗ ದೊರೆತಾಳ

“ ಬೈದಂಥ ಬೈಗಳು ಬೆನ್ನತ್ತಿ ಬಾರವು
ಬೈದವ್ವ ಕೇಳ ನನ ಮಾತ-— ॥ ಬೈಗೂಳ
ಮಲ್ಲಿಗ್ಹೂ ಮಾಡಿ ಮುಡಿಹೋಗ

“ ಜಾತಮಲ್ಲಿಗಿ ಹೂವ ಜೆಗ್ಗಿ ಕೊಯ್ಯುವರೇನ
ಜಗ್ಗಿದರ ಮುಗ್ಗಿ ಉದರ್‍ಯಾವ ॥ ಪರಹೆಣ್ಣು
ದಿಟ್ಟೀಸಿ ನೋಡಿ ಫಲವೇನ ॥

“ ಹೆರವರ್ಹೆಣ್ಣೀಗಾಗಿ ಹೊರಗ ಮಲಗುವ ಜಾಣ
ಗಿಡದ ಮ್ಯಾಲೆರಡು ಗಿಣಿಕೂತು ॥ ನುಡಿದಾವ
ಎರವನ್ಹೊ ರಾಯ ನಿನ ಜೀವ

“ ಕರಿಯ ಕಂಬಳಿಯಾಕೊ ಬಿಳಿಯ ದಟ್ಟಿಯಾಕೊ
ಎರವಿನ ಜೋಡು ನಿನಗಾಕೊ ॥ ಅಣ್ಣಯ್ಯ
ಸರಿಹೊತ್ತಿನಲಿ ಯಾಕೊ ನೆರೆಮನೆ

“ ಹಾವುಸೆಯ ಅರೆಯನ್ನು ಹಾವಿನಾ ಮರಿಯುನ್ನು
ಹಾಡುತ್ತ ಬರುವ ಕೊರವೀಯ ॥ ಕಂಡರೆ
ಹಾದೀಯ ಬಿಟ್ಟು ಮರೆಯಾಗು

“ ಕೆಂಪಿ ತಂದಿಹೆಯೆಂತ ಎಚ್ಚಾಳ ಪಡಬೇಡ
ಕೆಂಜಗದ ಹೂವು ನಿಜಗೆಂಪು ॥ ಆದರೆ
ಅಂಚಿನಲ್ಲೀದೆ ಕಿರಿಕಿಹಿ

‘ ಮಾವನ ಮಗಳೆ, ಅತ್ತೆಯ ಮಗಳೆ ’ ಮುಂತಾಗಿ ಹೊಗಳಿಸಿಕೊಳ್ಳುವ ಚೆಂದುಳ್ಳ ಹೆಣ್ಣು, ಒಮ್ಮೊಮ್ಮೆ ಅತ್ತೆಮನೆಯ ಕಾಟಕ್ಕೆ ತುತ್ತಾಗುತ್ತಾಳೆ. ಆ



ಕೋಟೆ ಒಳಭಾಗದಲ್ಲಿರುವ ರಂಗಮಹಲು, ಬಿದರೆ



ಇಬ್ರಾಹೀಂ ರೋಜಾ, ಬಿಜಾಪುರ



ಸಿದ್ಧೇಶ್ವರ ದೇವಸ್ಥಾನ, ಬಿಜಾಪುರ



ಮುಲಿಕ್-ಇ-ಮೈದಾನ್ ಫಿರಂಗಿ, ಬಿಜಾಪುರ

ಕಾಲಕ್ಕೆ ತವರನ್ನೂ ಹೆತ್ತವರನ್ನೂ ನೆನೆನೆನೆದು ಗೋಳಿಡುತ್ತಾಳೆ. ಈ ತೆರದ ಗೋಳು ಹೆಣ್ಣಿನ, 'ಅಸಿಯಳ' ಹೃದಯದಿಂದ ನೇರವಾಗಿ ಬಂದಿಳಿದಂತೆ ಸಖೀ ಗೀತಗಳಲ್ಲಿ ಮನಕರಗುವಂತೆ ಚಿತ್ರಿತವಾಗಿದೆ. ಆಗ ಗೋಳಿಡುವ ಹೆಣ್ಣು ರೋದಿಸುವಳು, ಕಂಡಕಂಡವರಿಗೆ ತವರು ಮನೆಗೆ ಸುದ್ದಿಯನ್ನು ಮುಟ್ಟಿಸುವಳು, ಬೆನ್ನಿೀಲಿ ಬಿದ್ದ ಅಣ್ಣಯ್ಯನನ್ನು ಕರೆಕರೆದು ತನ್ನ ದುಃಖ ತೋಡುವಳು. ಇಂದಿನ ಸಮಾಜದ ನಡವಳಿಕೆಗಳನ್ನು ಪರಿಶೀಲಿಸಿದಲ್ಲಿ ಕೆಲಕಾಲ ಇದು ಅನಿವಾರ್ಯ ಪ್ರಸಂಗವೆಂದೂ ಹೇಳಬಹುದು. ಪರಸ್ಪರ ಸ್ವಭಾವ ವೈಪರೀತ್ಯ ಗಳೂ, ಕುಂದುಕೊರತೆಗಳೂ ಕಾರಣಕಾರಿಯೆಂದು ತಿಳಿದುಕೊಳ್ಳಬಹು ದಾಗಿದೆ.

## ೪. ಜನಪದ ಕವಿಯ ಸಹಜ ದೃಷ್ಟಿ

"ಮೂಡಲ್ ಮುತ್ತಿನಕೆರೆ ನೋಡೋರಿಗೊಂದ್ಭೈಭೋಗ
ಮೂಡಿ ಬರ್‍ತಾನೆ ಚಂದ್ರಾಮ ॥ ತಾನಂದನ
ಮೂಡಿಬರ್‍ತಾನೆ ಚಂದ್ರಾಮ—

"ಅಂದಾಕೆ ಅರಲ್ಕೂಡು ಚೆಂದಾಕೆ ನರಸೀಪುರ
ಚಿತ್ತರದ ಗೊಂಬೆ ಮಡಿಕೇರಿ ॥ ಬೀದಿಯ
ಕಂಬ ಕಂಬಕ್ಕೆ ಮರಿದೀಪ—

ಒಂದು ಪದ್ಯ ಮುತ್ತಿನಕೆರೆ ಎಂಬೂರ ಮೇಲೆ 'ಚಂದ್ರಾಮ ಮೂಡಿ ಬರ್‍ತಾನೆ' ಎಂದು ಹೇಳುತ್ತದೆ. ಜನಪದ ಕವಿಯ ಸಹಜ ಸೂಕ್ಷ್ಮದೃಷ್ಟಿಗೆ ಉದಾಹರಣೆ ಯೆಂದು ಇದನ್ನು ಉದಾಹರಿಸಿರುವೆನು. ಈತನ ರಸಗಣ್ಣಿಗೆ 'ಗೊರವೂರು ಚಿತ್ತರದ ಗೊಂಬೆ' ಯಿದ್ದಂತೆ. ಹಾಗೆಯೆ 'ಮಡಿಕೇರಿಯೂ ಚಿತ್ತರದ ಗೊಂಬೆ' ಯೆ; ಅಲ್ಲಿ 'ಬೀದಿಯ ಕಂಭಕಂಭಕ್ಕೆ ಮರಿದೀಪ' ಕೆಂಗೊಳಿಸುತ್ತಿರ ಬೇಕು. ಈ ಊರುಗಳನ್ನು ರಾತ್ರಿಯ ದೀಪದ ಬೆಳಕಿನಲ್ಲಿ ಕವಿ ನೋಡಿರುವನು.

"ಬಂಡೀಯ ಹೂಡುತಾವ ಬಾರ್‍ಕೋಲ ಮರೆತಿವ್ನಿ
ಕಂಡ ಗೆಣೆಯರು ಕೊಡಿರಣ್ಣ ॥ ನಮ್ಮೆತ್ತು
ಬಾಳೆ ವನಕಾಗಿ ಹರಿದಾವು—

"ಹೇರು ಕಟ್ಟಾಗ ಬಾರ್‍ಕೋಲ ನಾ ಮರೆತೆ
ತಂದು ಕೊಡು ಹೆಣ್ಣೆ ಕಡುಗಾತಿ ॥ ನಮ್ಮೆತ್ತು
ಮುಂದೆ ಮೂರ್‍ಹೆಜ್ಜೆ ತೂಯೊಲ್ಲೊ—

ಈ ಸಂದರ್ಭದಲ್ಲಿ ಒಬ್ಬ ಒಕ್ಕಲ ಹಸುಮಗ ತನ್ನ ಬಾರುಕೋಲ ಮರೆತು ಒಮ್ಮೆ ಗೆಳೆಯನನ್ನೂ, ಇನ್ನೊಮ್ಮೆ ಗೆಳತಿಯನ್ನೂ ಕೇಳುತ್ತ ತಡವರಿಸಿಕೊಳ್ಳು

ತ್ತಾನೆ. ಬಾರುಕೋಲು ಸಹಜ ಚಿತ್ರೀಕರಣಕ್ಕೆ ನಿಮಿತ್ತವಾಗಿದೆ. ಇದೊಂದು ಒಳ್ಳೆ ಚಿತ್ರ.

" ಮಳಿಬಂತು ಮಳಿಬಂತು ಬೆನ್ನಿಂದೆ ಹೊಳಿಬಂತು
ಇನ್ನೊಂದು ಕೊಡವ ತರಲಿಲ್ಲ ॥ ತಮ್ಮನ
ಗೀರಿ ಗಂಧಕ ನೀರಿಲ್ಲ—

ಇಲ್ಲಿ ನೀರು ತರುವ ಬಾಲೆ ಇನ್ನೊಂದು ಕೊಡ ಮರೆತುಹೋಗಿರುತ್ತಾಳೆ ಹೊಳೆಗೆ ನೀರು ತರಲಿಕ್ಕೆ; ಅಷ್ಟರಲ್ಲಿ ಮಳೆ ಬಂದು ಸುರಿಯುತ್ತದೆ. ಇಂಥ ರಸಚಿತ್ರ ಹಳ್ಳಿಗರ ಜೀವನದಲ್ಲಿ ತಂಗಿ ನಿಲ್ಲುತ್ತದೆ. ಜೊತೆಗೆ ನೆಮ್ಮದಿಯ ತನಿಗಂಪನ್ನು ಬೀರುತ್ತದೆ; ಒಸಗೆಯ ನುಡಿಯನ್ನು ಹೊರಸೂಸುತ್ತಿದೆ.

" ಕಾಗಿನಾ ಸೀರ್ಯೊಳೆ ಕಡೆಚೋರಿ ಮನೆಯೋಳೆ
ಹುಡುಗ ಬತ್ತಾನೆ ಕರಕೊಳ್ಳೆ ॥ ಎಲೆ ಹೆಣ್ಣೆ
ಕಳ್ಳ ತತ್ತಾನೆ ಸುರುಕೊಳ್ಳೆ—

ಇಲ್ಲಿ ಹೆಂಡದ ಹುಡುಗ ಹೆಂಡ ತರುತ್ತಾನೆ, ಸುರುಕೊಳ್ಳೆ, ಎಲೆ ಹೆಣ್ಣೆ ಎಂಬ ಸಂಬೋಧನೆಯ ಧ್ವನಿಯಿರುವದು. ಇಂಥ ನೂರಾರು ಬಿಡಿ ರಸನಿಮಿಷ ಗಳನ್ನು ಆಯ್ದು ಕೊಳ್ಳಬಹುದು.

## ತುಳು ಹಾಡುಗಳು

" ಬೀದಿಲೊಂದುಲೊ ಪಾಡ್ಯನ ಮದಿಮಾಳು
ಮದಿಮಾಳು ಮದಿಮಾಳು ॥ ಮದಿಮಾಳು ಮದಿಮಾಳು
" ಆಳು ಪಾಣೇರಾತೆ ಧೂಮಪ್ಪಣ್ಣನ ಮಗಳಾರು
" ಆಳು ಕುಡುಲಾತ ಸೋಮಪ್ಪಣ್ಣನ ಮರ್ಮಳಾಳು.

ಇವೆರಡು ಚುಟಕಿಗಳನ್ನು ಶಿವರಾಮ ಕಾರಂತರ ೧೯೪೭ರಲ್ಲಿನ ಲೇಖನದಿಂದ ಆಯ್ದುಕೊಂಡಿದೆ. " ಓಬೇಲೆ - ಓಬೇಲೆ - ಓಬೇಲೋ - ಬೇಲೇ - ಓಬೇಲೆ " ಎಂದು ಹಲವು ಹೆಂಗೊರಳುಗಳು ಮಾರ್ದನಿಗೊಡುವಾಗ ಅದು ಮಿದುವಾದ ಗಾಳಿಯ ನಲಿದಾಟಕ್ಕೆ ಸಮಾನವಾಗುವದು. ಹೊಲೆಯರು ಮದುವೆಗೋ, ಹಬ್ಬಕ್ಕೋ ಹೋಗುವಾಗ ಗುಂಪಾಗಿ ಹಾಡುವ- -ತೀತೀತಿ, ತೀತೀತಿ ಧ್ವನಿಗಳು, ಅವುಗಳೊಡನೆ ಹರಿಯುವ ಹಾಡುಗಳು ಲಲಿತವಾಗಿ ಹರಿಯುವ ನೀತಿಗಳಂತೆ ಕಾಣುತ್ತವೆ. ಹಲವರು ಕೂಡಿ ಕೆಲಸಮಾಡುವ ನೇಜಿ ಹಾಡುಗಳು ಮೇಳ ಗೀತವಾಗಿವೆ. ಓಬೇಲೆ ಹಾಡುಗಳು ಅಂಥವು. ನಮ್ಮ ಮಾರ್ಗಗೀತಗಳಲ್ಲಿ ಸಾಮುದಾಯಿಕ ಗೀತವನ್ನು ಕಾಣಲಾರೆವು. ಆದರೆ ತುಳುಗೀತಗಳೆಷ್ಟೋ ಗುಂಪಿನ ಹಾಡುಗಳು.

ನಾಡಿನ 'ಗೀತೆ' ಕೇವಲ ಜಾನಪದವಾಗಿದ್ದರೂ ಅವುಗಳಲ್ಲಿ ತುಳು ಗೀತ ಗಳಂತು "ಉತ್ತಮ ದೇಶಿಗಾನಗಳಾಗಿವೆ" ಎಂದು ಕಾರಂತರು ಬರೆಯುತ್ತಾರೆ. "ಯಕ್ಷಗಾನದ ಗದ್ಯಪದ್ಯ ಶ್ರುತಿಯಿಂದ ಕೂಡಿದ ಏಕರೂಪ ಜೀವಿ. ಹಾಡಿಗೂ ಮಾತಿಗೂ ಶ್ರುತಿಯಿದ್ದು ಕೂಡಿಯೆ ಬರುತ್ತದೆ" ಎಂದೂ ಅವರೇ ಬರೆದಿರುವರು.

ತುಳುನಾಡಿನ 'ಪಳಮೆ' ಗಳಾಗಲಿ, 'ಪುದುಮೆ' ಗಳಾಗಲಿ ತೆಂಕನಾಡಿನ ಸಾಹಿತ್ಯ ಹೊರಗೆ ಅಚ್ಚಾಗಿ ಬಂದಮೇಲೆ ನಮಗೆ ಸವಿಯಲು ದೊರೆಯುವುವು. ಅಲ್ಲಿಯವರೆಗೆ ಕೆಳಗಿನ

"ಹೆಣ್ಣು ಜನ್ಮವೆ ಸಾಕು ಯನಕಂಡ ಮರೆಯಿರೊ ॥
ರಾಮ ॥ ರಾಮ ॥ ಬಂದು |
ಕಣ್ಣಲಿ ಕಾಣಬಾರದೆ ಎನ್ನ ವಿಧಿಯ
ಶ್ರೀ ॥ ರಾಮ ॥ ರಾಮ"

—ಇಂಥ ಬಿಡಿಚರಣಗಳಿಂದ ಸಮಾಧಾನ ಹೊಂದಲಿಕ್ಕಾಗದು. ಹೊಲೆಯರ ಕುಣಿತ, ರಾಣಿಯರ ಕೋಲಾಟ, ಮಲೆಕುಡಿಯರ ಕುಣಿತ ಇವು ತುಳುನಾಡಿನ ವಿಶಿಷ್ಟ ಜಾನಪದ ನೃತ್ಯಗಳಲ್ಲವೆ? ಎಂದಮೇಲೆ ಇವುಗಳ ಮೇಳಗೀತಗಳು ಭಾವ ಪ್ರಧಾನವಾಗಿಯೇ ಇರತಕ್ಕವು. ಕೋಟಿ ಚೆನ್ನಯರ ಕುಣಿತಗಳು ಮೇಲುಮಟ್ಟ ದವು ಎಂದು ಕಾರಂತರೇ ಒಪ್ಪಿ ಬರೆಯುತ್ತಾರೆ. ತುಳುನಾಡ ಮೂಲೆಯಿಂದ ನಾಡ ಪದಗಳು ಈವರೆಗೂ ಸಂಗ್ರಹರೂಪದಲ್ಲಿ ಅಚ್ಚಾಗದಿರುವದು ದುರ್ದೈವದ ಸಂಗತಿಯು. ಯಕ್ಷಗಾನ ಪ್ರಭೇದವೆ "ಬಾಜನೆ ಗಬ್ಬ" ವೆನಿಸಬಲ್ಲ ಶಾಶ್ವತ ದತ್ತಿಯಾಗಿದೆ.

## ಕೊಡಗರ ಹಾಡುಗಳು

೧

"ಲೇಲಾ ಲೇ, ಲಾಲೇಲ, ಲೇಲೇಲ, ಲೇಲೊ
ಲೇಲೆಲೊ ಪಾಡಿತರಕೊವ್ವ ಎಂಗ
ತಪ್ಪತ್ತೆ ನಾವ್ ತರತೋಡೆ ಬಾರೊ
ಏಂಗಂಡು ತೊಂಡೆ, ಕೊರತಂಡು ನಾವು,
ಉದ್ದ ತೊಡಿಯತ್ ಉದ್ದಿಯ ಮೂವು
ಉದ್ದಿಯ ಮೂವುಲ್ ತೇದಿ ಕೊಡಾಯೊ
ನೀರ್‌ಲ್ ತಾವರೆ ರೂಪ ಬರಂದ
ಕೆತ್ತುವ ಕತ್ತಿರ ರೂಪ ಬರಂದ
ಕೆಂಬತ್ತಿ ಪೂವ್‌ರ ರೂಪ ಬರಂದ
ನೀರ್‌ಲ್ ಬೊಳ್ಳಾನೆ ರೂಪ ಬರಂದ
ನಂದಿಯ ಕಾಳೆರ ರೂಪ ಬರಂದ

ತನ್ನಡ ದೇವಂಡ ರೂಪ ಬರಂದ
ಕಾವಳ ಪೂ ಇತೆರ ರೂಪ ಬರಂದ
ಕೂವಳ ಕೋಳಿರ ರೂಪ ಬರಂದ
ನಾದತ್ತ ದೇವಂಡ ರೂಪ ಬರಂದ
ತೂಡನ್ನೆ ತಾಂಡೋರ್ ರೂವ ಬರಂದ
ಸೂರಿಯ ದೇವಂಡ ರೂಪ ಬರಂದ

೨

" ನಲ್ಲೋರಾಚಿ ನಾಳಾಯಿ ತಾಯವ್ವ
ಅಂದಿವಂದಿ ನೇರತ್ ತಾಯವ್ವ
ಒಡ್‌ರಿತೂ ತಳಿಚಿತೂ ತಾಯವ್ವ
ನಂದ ದೀಪ ಬೆಚ್ಚದೋ ತಾಯವ್ವ
ಚೋಡ್ ದೀಪ ಕಂಡಿರೋ ತಾಯವ್ವ
ಸೂರ್ಯನ ತೊತ್ತಿತ್ ತಾಯವ್ವ
ಕಾಲೂ ಮೂಡೂ ಕತ್ತಿತ್ ತಾಯವ್ವ
ಅಂದಲ್ಲ ಪಿನಿಯಾಂದ್ ತಾಯವ್ವ
ಪೊಂಬೋಲಿ ಪೊಲವಕ ತಾಯವ್ವ
ನಂದದೀಪ ನೋಟಣೆ ತಾಯವ್ವ
ಬೇಲ ನೋಟ ಪೋಯಿತ್ ತಾಯವ್ವ
ಕನ್ನಡಿಯ ನೇಕತ್ ತಾಯವ್ವ
ಮುಂದ್ ಸುತ್ತ ಬಂದೀತೋ ತಾಯವ್ವ
ಕೈ ಮಲಂಗಿ ತೊತ್ತಿತ್ ತಾಯವ್ವ
ಚಿಮ್ಮರಂಜಿ ಒಕ್ಕಣೆ ತಾಯವ್ವ
ಬಲತ್ ಕಣ್ ಪಾರ್‌ಚಿ ತಾಯವ್ವ

## ೫. ಜನಪದ ಕಾವ್ಯದ ಛಂದಸ್ಸು

ಜನಪದ ಕಾವ್ಯದ ಛಂದಸ್ಸಿನ ಕುರಿತು ಎರಡು ಮಾತು ಹೇಳುವದು ಉಚಿತ ಕಾಣುವದು. ತ್ರಿಪದಿ, ಸಾಂಗತ್ಯ, ರಗಳೆಯ ರೀತಿಗಳು ನಾಡಗಬ್ಬಕ್ಕೆ ಸರಿಯಾಗಿ ಹೊಂದಿಕೊಳ್ಳಬಲ್ಲುದೆಂಬುದಕ್ಕೆ ಮೂರು ಮಹಾಕವಿಗಳೂ, ಅವರ ಮಹಾಕಾವ್ಯಗಳೂ ಅಮರಗಳಾಗಿ ನಿಂತಿರುತ್ತವೆ.

ಧಾರವಾಡದ ಸರ್ವಜ್ಞಕವಿಯು ಹೊಸಗನ್ನಡಕ್ಕೆ ತನ್ನ ಆದಿಕಾವ್ಯ ಕೊಟ್ಟಿದ್ದಾನೆ. 'ಸರ್ವರೊಳೊಂದೊಂದು ನುಡಿಗಲಿತು ವಿದ್ಯೆಯಾ ಪರ್ವತವೆ ಆದ' ನಮ್ಮೀ ಸರ್ವಜ್ಞ ಹೊಸಗನ್ನಡದ ಚಿಕ್ಕ ವಿಶ್ವಕೋಶವಾಗಿದ್ದಾನೆ. ನಮ್ಮ ನಾಡಿನ ತೇಜೋಪಾದನಾದವನು ಸರ್ವತೋಮುಖವಾಗಿ ಲೋಕಸೇವೆಯನ್ನು

ಹದಿನಾರನೆಯ ಶತಮಾನದಲ್ಲಿ ಸಲ್ಲಿಸಿರುತ್ತಾನೆ. ಈತನು ಬಳಸಿರುವ ತ್ರಿಪದಿಯಲ್ಲಿನ ಕವಿತೆಗಳು ನಾಡಹಾಡುಗಳೆನಿಸಿ ಅಮರತೆಯನ್ನು ಪಡೆದಿವೆ. ನಾಡಹಾಡಿನ ಗತಿ, ಮಟ್ಟಕ್ಕೆ ಒಳ್ಳೆ ಹೊಂದಾಣಿಕೆಯಾಗಬಲ್ಲುದಕ್ಕೆ ಜನಪದ ಸಾಹಿತ್ಯದ ಸಂಕೀರ್ಣ ಪದ್ಯಾವಳಿಯು ಒಂದು ಅಖಂಡ ಘಟ್ಟವಾಗಿ ಸಾಹಿತ್ಯ ಲೋಕದಲ್ಲಿ ಉಳಿದುಬಿಟ್ಟರುವದು.

ಚೌಪದಿಯಾದ ಸಾಂಗತ್ಯವನ್ನು ತೆಂಕನಾಡಿನ ರತ್ನಾಕರಕವಿಯು ಚನ್ನಾಗಿ ಉಪಯೋಗಿಸಿಕೊಂಡನು ತನ್ನ "ಭರತೇಶ ವೈಭವ" ಕಾವ್ಯಕ್ಕಾಗಿ. ಹರಿಹರನಂತೂ ರಗಳೆಯ ರೀತಿ ಅಳೆದು ನೋಡಿ ನೋಡಿ ಮಹಾಕಾವ್ಯ ಸೃಷ್ಟಿಯನ್ನು ಭಕ್ತಿತರಂಗಗಳಲ್ಲಿ ನೀಡಿಬಿಟ್ಟನು.

"ಕೇಳೊ ಬಾಳೊ ಸಂಚಾರಿ" ಮತ್ತು ಇಲ್ಲಿ ಕೊಟ್ಟಿರುವ ಕೊಡಗರ 'ಪಾಟ್'ಗಳು ರಗಳೆಯ ಮಂಜುಳ ಧ್ವನಿಯನ್ನು ನೆನಪಿಗೆ ತರಬಲ್ಲವು. 'ಶ್ರೀ' ಯವರೇ 'ಗರತಿ ಹಾಡಿ'ನ ಮುನ್ನುಡಿ ಲೇಖದಲ್ಲಿ "ಇವುಗಳ ಛಂದಸ್ಸನ್ನು ತಮಿಳು, ತೆಲಗು, ಕೊಡಗು, ತುಳು ಮುಂತಾದ ಭಾಷೆಗಳ ಛಂದಸ್ಸುಗಳೊಡನೆ ಹೋಲಿಸಿ ದ್ರಾವಿಡಭಾಷೆಗಳ ಮೂಲಛಂದಸ್ಸಿನ ರಹಸ್ಯವನ್ನು ಅರಿಯಬಹುದು. ಆ ತಳಹದಿಯ ಮೇಲೆ ಹೊಸ ಛಂದಸ್ಸುಗಳನ್ನು ಕಲ್ಪಿಸುತ್ತಿರುವವರೂ ಈ ರಹಸ್ಯವನ್ನು ಅರಿತೇ ಕೆಲಸ ಮಾಡುತ್ತಿರುವರು" ಎಂದು ೧೯೩೭ರಲ್ಲಿ ಅಪ್ಪಣೆ ಕೊಡಿಸಿದರು. 'ಶ್ರೀ' ಯವರ ಭವಿಷ್ಯವಾಣಿಯು ವರುವರುಷಕ್ಕೂ ಖಚಿತವಾಗುತ್ತಿರುವದು.

## ೬. ಭವಿಷ್ಯವಾಣಿ

ಅಂತು ಜನಪದ ಸಾಹಿತ್ಯಕ್ಕೆ ಇನ್ನು ಮುಂದೆಯೂ ಒಳ್ಳೆಯ ಭವಿತವ್ಯ ಕಾದು ನಿಂತಿದೆ. ಮುಂಬರುವ ಸಾಹಿತಿಗಳು ಹೊಸಕನ್ನಡದ ಮುಂಬರಿವು, ಜೀವಕಳೆ, ತನ್ನತನಗಳನ್ನು ಕಂಡು ಮುಂದುವರಿಯುವುದು ಅತ್ಯಗತ್ಯವೆನ್ನಬಹುದು. ಜನಪದ ಸಾಹಿತ್ಯ ಸಂಗ್ರಹಗಳು ಎಷ್ಟು ಶೀಘ್ರವಾಗಿ ಅಚ್ಚಿಗಿಳಿದು ಹೊರಬರುವವೋ ಅಷ್ಟೇ ವೇಗವಾಗಿ ನಮ್ಮ ನಾಡಿಗೆ ಕಲ್ಯಾಣವಾಗುವದು.

# ಆಧುನಿಕ ಕನ್ನಡ ಸಾಹಿತ್ಯ

ಲೇಖಕರು :

ಶ್ರೀಮತಿ ಅ. ನ. ಕೃಷ್ಣರಾಯರು, ಬೆಂಗಳೂರು.

## ೧. ಆಧುನಿಕ

ಕನ್ನಡ ಸಾಹಿತ್ಯಕ್ಕೆ 'ಆಧುನಿಕ' ವಿಶೇಷಣವನ್ನು ಯಾವ ಕಾಲದಿಂದ ಉಪಯೋಗಿಸಬೇಕೆಂಬುದು ಚರ್ಚಾಸ್ಪದವಾದ ವಿಷಯ. ಪಂಪ, ಹರಿಹರ, ಕುಮಾರವ್ಯಾಸರ ಕಾಲಗಳಲ್ಲಿ ಅವರ ಕೃತಿಗಳು ಆಧುನಿಕವೇ ಆಗಿದ್ದವು. ಸಮಕಾಲೀನ ಪ್ರತಿಭಟನೆಯನ್ನು, ಉಪೇಕ್ಷೆಯನ್ನು ಎದುರಿಸುತ್ತಾ ಪ್ರತಿಯೊಬ್ಬ ಕವಿಯೂ 'ಇದು ವಿನೂತನ ಕವಿತೆಯೆಂದು ಜರಿಯಬೇಡಿ' ಎಂದು ಹೇಳಿಕೊಂಡಿದ್ದಾನೆ.

ನಾವೀಗ 'ಆಧುನಿಕ' ಶಬ್ದವನ್ನು ವಿಶೇಷಾರ್ಥದಲ್ಲಿ ಬಳಸುತ್ತಿದ್ದೇವೆ. ಪಂಪ, ಹರಿಹರ, ಕುಮಾರವ್ಯಾಸರು 'ಸಾಮ್ರಾಜ್ಯ ಯುಗ' ದಲ್ಲಿ ಬೆಳೆದವರು. ಇಂದು ಒದಗಿರುವ ಸಮಸ್ಯೆಗಳು ಅಂದು ಒದಗಿರಲಿಲ್ಲ. ಕವಿ ತನ್ನ ಇಷ್ಟದೇವತೆಯನ್ನೋ ದೊರೆಯನ್ನೋ ಮೆಚ್ಚಿಸಲು ಬರೆದರಾಯಿತು; ಇಡಿಯ ಜನಪದವನ್ನು ಅವನು ಲಕ್ಷಿಸಬೇಕಾದ ಆಗತ್ಯವಿರಲಿಲ್ಲ. ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗಿನ ಕನ್ನಡ ಸಾಹಿತ್ಯದ ಮೇಲೆ ಪರಭಾಷೆ, ಸಂಸ್ಕೃತಿಯ ಪ್ರಭಾವ ಬಿದ್ದಿರಲಿಲ್ಲ. ಉತ್ತರ ಹಿಂದೂಸ್ಥಾನದ ಭಾಷೆ, ಸಾಹಿತ್ಯ ಪರ್ಶಿಯನ್, ಅರಾಬಿಕ್ ಭಾಷೆಗಳ ಪ್ರಭಾವಕ್ಕೆ ಒಳಗಾದ ಮೇಲೂ ಕನ್ನಡ ಹಾಗೂ ಇತರ ದ್ರಾವಿಡ ಭಾಷೆಗಳು ತಮ್ಮ ವ್ಯಕ್ತಿತ್ವವನ್ನು ನಿಶ್ಚಲವಾಗಿ ಉಳಿಸಿಕೊಂಡು ಬಂದವು.

ಹತ್ತೊಂಭತ್ತು ಶತಮಾನಗಳ ಕಾಲ ಕನ್ನಡ ಎದುರಿಸದಿದ್ದ ಸಮಸ್ಯೆಯನ್ನು ಈ ಶತಮಾನದ ಆದಿಯಲ್ಲಿ ಎದುರಿಸಬೇಕಾಗಿ ಬಂತು. ಭಾರತ ರಾಷ್ಟ್ರಜೀವನದಲ್ಲಿ ಆದ ಮಹಾಕ್ರಾಂತಿಯೇ ಇದರ ಕಾರಣವೆನ್ನಬಹುದು. ಒಂದು ಶತಮಾನಕ್ಕೂ ಮಿಕ್ಕು ಒಳಗೇ ಕವರುತ್ತಿದ್ದ ಭಾರತ ಸ್ವಾತಂತ್ರ್ಯ ಜ್ವಾಲೆ ೧೯೧೨ರಲ್ಲಿ ಸ್ಫೋಟನವಾಯಿತು. ಲಾರ್ಡ್ ಕರ್ಜನ್ ಸಾಹೇಬರ 'ವಂಗ ವಿಭಜನೆ'ಯ ನೀತಿಯಿಂದಾಗಿ ಇಡಿಯ ಭಾರತದ ರಾಷ್ಟ್ರಚೇತನ ಜಾಗೃತವಾಯಿತು. ಬಂಕಿಂಚಂದ್ರ ಚಟ್ಟೋಪಾಧ್ಯಾಯರ 'ಆನಂದಮಠ'ದಲ್ಲಿ ಸಮಾವೇಶಗೊಂಡಿದ್ದ 'ವಂದೇ ಮಾತರಂ' ಗೀತೆ ಭಾರತದ ರಾಷ್ಟ್ರಗೀತೆಯಾಯಿತು. ರಾಷ್ಟ್ರಚೇತನದ ವಾಣಿಯಾಗಿ ಬಾಳಾಚಾರ್ಯ ಸಕ್ಕರಿಯವರು (ಶಾಂತಕವಿ) **'ವಿದ್ಯಾರಣ್ಯ ಕಾವ್ಯ'** ಬರೆದು ನಾಡಿನಲ್ಲಿ ರಾಷ್ಟ್ರೀಯ ಭಾವನೆ ಬೆಳೆಯಲು ನೆರವಾದರು.

ರಾಷ್ಟ್ರೀಯ ಭಾವನೆಯಿಂದ ಪ್ರಚೋದಿತರಾಗದಿದ್ದರೂ, ಕನ್ನಡದ ಸ್ವತಂತ್ರ ಸಾಹಿತ್ಯ ಬೆಳೆಗೆ ಅವಶ್ಯಕವಾಗಿದ್ದ ಆರಂಭದ ಕೃಷಿಮಾಡಿದವರಲ್ಲಿ

ಕೆಂಪು ನಾರಾಯಣ (೧೮೨೩), ಮುದ್ದಣ, ಬಸವಪ್ಪಶಾಸ್ತ್ರಿ ಮತ್ತು ತುರಮುರಿ ಶೇಷಗಿರಿರಾಯ ಮುಖ್ಯರಾಗಿದ್ದಾರೆ. ಕೆಂಪುನಾರಾಯಣನ 'ಮುದ್ರಾಮಂಜೂಷ' ಗ್ರಂಥ ಕನ್ನಡದ ಗದ್ಯಶೈಲಿಯ ಬೆಳವಳಿಗೆಗೆ ವಿಶೇಷ ಇಂಬನ್ನಿತ್ತಿತು. ಮುದ್ದಣ, ತನ್ನ 'ರಾಮಾಶ್ವಮೇಧ' ಕಾವ್ಯದಲ್ಲಿ 'ಗದ್ಯಂ ಹೃದ್ಯಂ, ಪದ್ಯಂ ವಧ್ಯಂ' ಎಂದು ಸಾರಿ ಗದ್ಯಕ್ಕೆ ಬಲವಾದ ಬುನಾದಿಯನ್ನೇ ಕಟ್ಟಿದ. ಬಸವಪ್ಪಶಾಸ್ತ್ರಿ ಮತ್ತು ತುರಮುರಿ ಶೇಷಗಿರಿರಾಯರು ಕಾಳಿದಾಸನ 'ಶಾಕುಂತಲ' ನಾಟಕವನ್ನು ಕನ್ನಡಕ್ಕೆ ಅನುವಾದಮಾಡಿ, ಅದುವರೆವಿಗೆ ಕನ್ನಡಿಗರ ಅನಾದರಕ್ಕೆ ಪಾತ್ರವಾಗಿದ್ದ ನಾಟಕ ಸಾಹಿತ್ಯದ ಬೆಳವಳಿಗೆಗೆ ಅಸ್ತಿಭಾರ ಹಾಕಿದರು.

ಕನ್ನಡನಾಡಿನಲ್ಲಿ ಆಧುನಿಕ ಸಾಹಿತ್ಯ ಯುಗ ಆರಂಭವಾಗುವುದಕ್ಕೆ ಮುನ್ನವೇ ಈ ನಾಲ್ವರು ಅದರ ಕೆಲವು ಲಕ್ಷಣಗಳನ್ನೂ ಅಸ್ಪಷ್ಟವಾಗಿ ಗುರುತಿಸಿದ್ದರೆಂಬುದು ಗಮನಾರ್ಹವಾದ ವಿಷಯ.

## ೨. ನವೋದಯಕಾಲ (೧೯೧೫–೧೯೩೫)

ಸಾವಿರದ ಒಂಭೈನೂರ ಹದಿನೈದರ ತರುವಾಯ ಬಂದ ಸಾಹಿತ್ಯ ಕೆಲವು ವಿಶಿಷ್ಟ ಲಕ್ಷಣಗಳನ್ನು ಪಡೆದುಕೊಂಡಿತು :

(೧) ಭಾರತ ಸಂಸ್ಕೃತಿಗೆ ಭಿನ್ನವಾಗಿರದ ವಿಶಿಷ್ಟ ಸಂಸ್ಕೃತಿ ಕನ್ನಡ ನಾಡಿನಲ್ಲಿದೆಯೆಂಬ ಭಾವನೆ. ಭಾರತ ಸಂಸ್ಕೃತಿ ರೂಪುಗೊಳ್ಳಲು ಕನ್ನಡನಾಡು ಗಣನೀಯವಾದ ಕಾಣಿಕೆಯನ್ನರ್ಪಿಸಿದೆ ಎಂಬ ತಿಳುವಳಿಕೆ.

(೨) ಇದುವರೆಗೆ ಕನ್ನಡ ಸಾಹಿತ್ಯದ ಮೇಲೆ ಕಾಣದಿದ್ದ ಐರೋಪ್ಯ ಸಾಹಿತ್ಯ, ಸಂಸ್ಕೃತಿ, ವಿಚಾರಸರಣಿಯ ಪ್ರಭಾವ ಬೀಳುತ್ತ ಬಂದುದು.

(೩) ಪದ್ಯ ಸಾಹಿತ್ಯಕ್ಕಿದ್ದ ಪ್ರಾಧಾನ್ಯ ಕಡಿಮೆಯಾಗಿ ಗದ್ಯಸಾಹಿತ್ಯದ ಬೆಳೆ ಹೆಚ್ಚಿದುದು.

(೪) ಇಂಗ್ಲಿಷಿನಿಂದಲೇ ಸ್ಫೂರ್ತಿಪಡೆದರೂ ಸ್ವತಂತ್ರ ನಾಟಕ ಸಾಹಿತ್ಯ ಬೆಳೆದುದು.

(೫) ವಿಚಾರ ಸಾಹಿತ್ಯ, ವೈಜ್ಞಾನಿಕ ಸಾಹಿತ್ಯದತ್ತ ಜನರ ಲಕ್ಷ್ಯ ಹೋದುದು.

## ೩. ಕರ್ನಾಟಕ ಸಂಸ್ಕೃತಿ

(೧) ದೀರ್ಘಕಾಲದ ದಾಸ್ಯಕ್ಕೆ ಸಿಕ್ಕಿದ್ದ ಕನ್ನಡಿಗರೂ ಸ್ವಸ್ವರೂಪಜ್ಞಾನ ಶೂನ್ಯರಾಗಿದ್ದರು. ಇದೇ ತೆರನ ಪರಿಸ್ಥಿತಿಗೆ ಸಿಕ್ಕಿದ್ದ ಬಂಗಾಳವನ್ನು ಎಚ್ಚರಿಸಿದವರು ರಾಜಾ ರಾಮಮೋಹನರಾಯ್, ವಿವೇಕಾನಂದ, ಅರವಿಂದರು ಮತ್ತು ಬಂಕಿಂಚಂದ್ರ ಚಟ್ಟೋಪಾಧ್ಯಾಯರು ; ಮಹಾರಾಷ್ಟ್ರವನ್ನು ಎಚ್ಚರಿಸಿದವರು ರಾನಡೆ, ಚಿಪ್ಲೂಣಕರ್, ಅಗರ್‌ಕರ್ ಮತ್ತು ಬಾಲ ಗಂಗಾಧರ ತಿಲಕರು ; ತಮಿಳು ನಾಡನ್ನು ಎಚ್ಚರಿಸಿದವರು ಎಸ್. ಶ್ರೀನಿವಾಸ ಅಯ್ಯಂಗಾರ್ಯರು, ಸುಬ್ರಹ್ಮಣ್ಯ ಭಾರತಿ ; ಆಂಧ್ರ ದೇಶವನ್ನು ಎಚ್ಚರಿಸಿದವರು ಗುರುಜಾಡ ಅಪ್ಪಾರಾಯರು,

ವೀರೇಶಲಿಂಗ ಪಂತಲು, ಗಿಡುಗು ರಾಮಮೂರ್ತಿ, ದುಗ್ಗಿರಾಲಾ ಗೋಪಾಲ ಕೃಷ್ಣಯ್ಯನವರು, ಕೊಂಡಾ ವೆಂಕಟಪ್ಪಯ್ಯನವರು; ಕನ್ನಡನಾಡನ್ನು ಎಚ್ಚರಿಸಿದವರು ಶಾಂತಕವಿ, ಕಡಪಾ ರಾಘವೇಂದ್ರರಾವ್, ಆಲೂರ ವೆಂಕಟರಾವ್, ರೊದ್ದ ಶ್ರೀನಿವಾಸರಾಯರು, ಡೆಪ್ಯುಟಿ ಚೆನ್ನಬಸಪ್ಪನವರು, ನ್ಯಾಯಮೂರ್ತಿ ಸೆಟ್ಲೂರ ಶ್ರೀನಿವಾಸಯ್ಯಂಗಾರ್ಯರು, ಎಂ. ವೆಂಕಟಕೃಷ್ಣಯ್ಯನವರು. ಇದೇ ಕಾಲದಲ್ಲಿ ಆಲೂರ ವೆಂಕಟರಾಯರು ತಮ್ಮ ಅಮೋಘ ಕೃತಿ '**ಕರ್ನಾಟಕ ಗತವೈಭವ**' (೧೯೧೭) ವನ್ನು ಬೆಳಕಿಗೆ ತಂದರು. ಇತಿಹಾಸ, ಸಾಮಾಜಿಕ ಜೀವನ, ಲಲಿತಕಲೆಗಳು, ಸಾಹಿತ್ಯ, ಧರ್ಮವಿಸ್ತಾರದಲ್ಲಿ ಕನ್ನಡನಾಡು ಸುಮಾರು ಎರಡು ಸಾವಿರ ವರ್ಷಗಳು ಸಾಧಿಸಿದ್ದುದನ್ನು ವೆಂಕಟರಾಯರು ಕ್ಷಾತ್ರಗದ್ಯದಲ್ಲಿ ನಿರೂಪಿಸಿ ಕನ್ನಡಿಗರು ಕಣ್ದೆರೆಯುವಂತೆ ಮಾಡಿದರು. ಈ ಗ್ರಂಥ ಅಣುಪ್ರಮಾಣದಲ್ಲಿರುವ ಕನ್ನಡ ಸಂಸ್ಕೃತಿಯ ವಿಶ್ವಕೋಶದಂತಿದೆ. ವೆಂಕಟರಾಯರು ಮೂವತ್ತೊಂಭತ್ತು ವರ್ಷಗಳ ಕೆಳಗೆ ಕಂಡ ಕನಸು ಇಂದು ನನಸಾಗುತ್ತಿರುವುದಕ್ಕೆ ಈ ಗ್ರಂಥ ಬಹುಮಟ್ಟಿಗೆ ಕಾರಣವಾಯಿತೆಂದು ನಿಃಸಂಶಯವಾಗಿ ಹೇಳಬಹುದು.

ಕನ್ನಡಿಗರು ಸ್ವಾಭಿಮಾನ್ಯಶೂನ್ಯರಾಗಿ ಪರಭಾಷಾಮೋಹಕ್ಕೆ ಪಕ್ಕಾಗಿದ್ದರು. ಪಂಪ, ರನ್ನ, ಹರಿಹರ, ರತ್ನಾಕರವರ್ಣಿ, ಕುಮಾರವ್ಯಾಸನ ನಾಡವರು ಇಂಗ್ಲಿಷ್, ಮರಾಟಿ ಭಾಷೆಗಳ ವ್ಯಾಮೋಹಕ್ಕೆ ಸಿಕ್ಕಿ ಕನ್ನಡವನ್ನು ಕಡೆಗಾಣಿಸಿದ್ದರು. ಕನ್ನಡ ಸಾಹಿತ್ಯ-ಸಂಸ್ಕೃತಿಯ ಪರಂಪರೆ ಯಾರಿಗೂ ಕಡಿಮೆಯಾದುದಲ್ಲವೆಂಬ ನಂಬಿಕೆ ಕನ್ನಡಿಗರಿಗೇ ಬರಬೇಕಾಗಿತ್ತು. ೧೯೨೪ರಲ್ಲಿ ಪ್ರಕಟವಾದ ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತ್ರೆ' (ಭಾಗ ೧) ಕನ್ನಡಿಗರಲ್ಲಿ ಆತ್ಮಾಭಿಮಾನ ಹುಟ್ಟಿಸುವುದಕ್ಕೆ ಬಹುಮಟ್ಟಿಗೆ ಸಹಾಯ ಮಾಡಿತು.

ಇಂಗ್ಲಿಷಿನ ಉತ್ತಮೋತ್ತಮ ಕೃತಿಗಳಿಗೆ ಸರಿದೊರೆಯಾಗಿ ನಿಲ್ಲಬಲ್ಲ ಕೃತಿಗಳನ್ನು ಕನ್ನಡದಲ್ಲಿಯೂ ರಚಿಸಬಹುದೆಂಬುದನ್ನು ಎಂ. ಎಸ್. ಪುಟ್ಟಣ್ಣನವರ '**ಮಾಡಿದ್ದುಣ್ಣೋ ಮಾರಾಯ**' (೧೯೧೫) ಕಾದಂಬರಿ ಸಿದ್ಧಮಾಡಿಕೊಟ್ಟಿತು. ಸಾಮಾನ್ಯಜನರ ಜೀವನವನ್ನು ಅವರ ಮನೆಯ ಮಾತಿನಲ್ಲೇ ನಿರೂಪಿಸುವ ಈ ಕಾದಂಬರಿ, ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿಯಾದುದಲ್ಲದೆ, ಜನಪದ ಭಾಷೆಯನ್ನು ಸಾಹಿತ್ಯಕ್ಕೆ ಅಳವಡಿಸಿಕೊಳ್ಳುವ ಮಾರ್ಗವನ್ನು ತೋರಿಸಿ ಕೊಟ್ಟಿತು.

ಹೆಚ್ಚು ಕಡಿಮೆ ಪುಟ್ಟಣ್ಣನವರ ಜಾಡಿನಲ್ಲೇ ನಡೆದ ಶ್ರೀನಿವಾಸರ '**ಕೆಲವು ಸಣ್ಣ ಕಥೆಗಳು**' (೧೯೨೦) ಮಧ್ಯಮವರ್ಗದ ಕನ್ನಡಿಗರ ಜೀವನದ ಸುಂದರ ಚಿತ್ರಗಳ ರನ್ನಗನ್ನಡಿಯಾಯಿತು. ಜನಸಾಮಾನ್ಯರ ತಿಳಿವಿಗೆ ಎಟಕುವಂಥ ಭಾಷೆಯನ್ನೇ ಶ್ರೀನಿವಾಸರು ಅಳವಡಿಸಿಕೊಂಡರೂ, ಅದಕ್ಕೊಂದು ಅಪೂರ್ವ ಶೋಭೆ, ಶಕ್ತಿ, ಬಿಗಿಯನ್ನು ತಂದುಕೊಟ್ಟರು. ಶ್ರೀನಿವಾಸರಿಗೆ ದೊರೆತಿದ್ದ ಇಂಗ್ಲಿಷ್ ಶಿಕ್ಷಣ ಅವರ ಪ್ರತಿಭೆಯ ವಿಕಸನಕ್ಕೆ ನೆರವಾಯಿತಾದರೂ, ಅವರ ಕೃತಿಗಳು ಕನ್ನಡದ ಜಾಯಮಾನವನ್ನು ಎಳ್ಳಷ್ಟೂ ಉಪೇಕ್ಷಿಸಲಿಲ್ಲ.

## ೪. ಇಂಗ್ಲಿಷಿನ ಪ್ರಭಾವ

(೨) ಇಂಗ್ಲಿಷ್ ಭಾಷೆ ಭಾರತಕ್ಕೆ ಪರದಾಸ್ಯವನ್ನು ತಂದಿತ್ತು. ಅದೇ ಭಾಷೆಯಿಂದಲೇ ಭಾರತದ ದಾಸ್ಯವಿಮೋಚನೆಯಾಗಬಾರದೇತಕ್ಕೆ? ರಾಜಾ ರಾಮಮೋಹನರಾಯರು ಈ ದೃಷ್ಟಿಯಲ್ಲಿಯೇ ವಿಚಾರಮಾಡಿ, ಇಂಗ್ಲಿಷ್ ಭಾಷಾ ಪ್ರಸಾರಕ್ಕೆ ಇಂಬುಗೊಟ್ಟಿದ್ದರು. ವಿಶ್ವವನ್ನು ಸಾಮ್ರಾಜ್ಯಶಾಹಿಯ ಹಿಡಿತದಿಂದ ಪರದಾಸ್ಯಶೃಂಖಲೆಯಿಂದ ಬಿಡುಗಡೆಮಾಡಬಲ್ಲ ಜಾನ್ ಸ್ಟುಅರ್ಟ ಮಿಲ್, ಎಡ್ಮಂಡ ಬರ್ಕ್, ಪೇನ್ ಇವರ ಕೃತಿಗಳಿದ್ದುದು ಇಂಗ್ಲಿಷಿನಲ್ಲೇ; ವಿಶ್ವದ ಎಲ್ಲ ವಿಚಾರವಾದಿಗಳ ಕೃತಿಗಳೂ ಇಂಗ್ಲಿಷಿನಲ್ಲಿ ದೊರೆಯುತ್ತಿತ್ತು. ಇಂಗ್ಲಿಷ್ ಭಾಷೆಯೊಂದರ ಪರಿಚಯದಿಂದ ವಿಶ್ವದ ಸಮಸ್ತ ವಿಚಾರಧಾರೆಯನ್ನರಿಯಲು ಅವಕಾಶವಿತ್ತೆಂದೇ ರಾಮಮೋಹನರಾಯರು ಈ ಭಾಷೆಯ ಪ್ರಸಾರಕ್ಕೆ ತ್ರಿಕರಣ ಪೂರ್ವಕವಾಗಿ ದುಡಿದರು. ಇಂಗ್ಲಿಷ್ ಭಾಷೆಯ ಉದ್ದಾಮ ಪಂಡಿತರಾದ ಬಿ. ಎಂ. ಶ್ರೀಕಂಠಯ್ಯನವರನ್ನು ಪ್ರೇರೇಪಿಸಿ, ಅವರಿಂದ ಕೆಲವು ದಿವ್ಯ '**ಇಂಗ್ಲಿಷ್ ಗೀತೆ**' ಗಳನ್ನೂ ಅನುವಾದಮಾಡಿಸಿದ ಮನೋಭಾವವೂ ಇದೇ ಆಗಿತ್ತು. ಮೂಲ ಇಂಗ್ಲಿಷ್ ಕವಿಗಳ ಕೃತಿಗಳ ಛಂದಸ್ಸುಗಳಿಗೆ ಸರಿಹೋಲುವ ಕನ್ನಡ ಛಂದಸ್ಸುಗಳನ್ನಾಯ್ದುಕೊಂಡು ಶ್ರೀಯವರು ತಮ್ಮ ಇಂಗ್ಲಿಷ್ ಗೀತೆ ಗಳನ್ನು ರಚಿಸಿ ಆಂಗ್ಲಕಾವ್ಯಸಾಹಿತ್ಯದ ಅನರ್ಘ್ಯರತ್ನಗಳು ಇಂಗ್ಲಿಷ್ ಬಾರದ ಕನ್ನಡಿಗನಿಗೂ ದೊರೆಯುವಂತೆ ಮಾಡಿದರು. ಇಂಗ್ಲಿಷಿನವರ ಆಡಳಿತ, ಸಾಮ್ರಾಜ್ಯ ದಾಹದ ಬಗ್ಗೆ ನಮಗೆ ಅಸಂತೋಷವಿರಬಹುದು. ಆದರೆ ಅವರ ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಆ ಅಸಂತೋಷ ತೋರುವ ಕಾರಣವಿಲ್ಲ. ಅವರಿಂದ ನಾವು ಕಲಿಯಬಹುದಾದುದನ್ನು—ಕಲಿಯಬೇಕಾದುದನ್ನು ಕಲಿತು ನಮ್ಮ ರಾಷ್ಟ್ರದ ಸರ್ವತೋಮುಖ ಬೆಳವಳಿಗೆಗೆ ಉಪಯೋಗಿಸಿಕೊಳ್ಳೋಣ ಎಂಬ ಭವ್ಯಧ್ಯೇಯ ದಿಂದ ಪ್ರೇರಿತರಾದ ಶ್ರೀಯವರು ಈ ಉಭಯ ರಾಷ್ಟ್ರಗಳ ಮೈತ್ರಿಗೆ ಅಡಿಗಲ್ಲು ಹಾಕಿದರು. 'ಕನ್ನಡಿಗರು ಸಂಕುಚಿತ ಮನಸ್ಕರಾಗದೆ ಎಲ್ಲ ರಾಷ್ಟ್ರಗಳ, ಎಲ್ಲ ಭಾಷೆಗಳ ಸಂಸ್ಕೃತಿ ಭಂಡಾರವನ್ನು ತಂದು ತಮ್ಮ ಭಂಡಾರ ದೊಡ್ಡದು ಮಾಡಿ ಕೊಳ್ಳಬೇಕು. ಆದರೆ ಕಂಡವರ ಭಂಡಾರ ನೋಡಿಕೊಂಡು ತೃಪ್ತರಾಗಿ ಕೂಡ ಬಾರದು. ಆ ಭಂಡಾರಕ್ಕೆ ಸರಿದೊರೆಯಾದ, ಮಿಗಿಲಾದ ಭಂಡಾರ ನಿರ್ಮಿಸಿ ತಾವೂ ಹಲವು ನಾಡಿಗೆ ಹಂಚಬೇಕು' ಎನ್ನುವುದೇ ಶ್ರೀಯವರ ಸಂದೇಶ ವಾಗಿತ್ತು.

## ೫. ಗದ್ಯಸಾಹಿತ್ಯದ ಬೆಳೆ

(೩) ಪದ್ಯಕ್ಕೇ ಪ್ರಾಧಾನ್ಯಕೊಟ್ಟು ಪ್ರಾಚೀನ ಕನ್ನಡ ಸಾಹಿತ್ಯ ಗದ್ಯ ವನ್ನು ನಿರ್ಲಕ್ಷಿಸುತ್ತ ಬಂದಿತು. ವಡ್ಡಾರಾಧನೆ (ಸು. ೯೨೫), ಚಾವುಂಡರಾಯ ಪುರಾಣ (೯೭೫) ಕನ್ನಡದ ಅತ್ಯಂತ ಪ್ರಾಚೀನ ಗದ್ಯಗ್ರಂಥಗಳು. ಈ ಗದ್ಯ ಕೂಡ ಸಾಕಷ್ಟು ಬೆಳೆಯಲಿಲ್ಲ. ಬಸವಣ್ಣ (೧೨೦೦), ಚಿಕ್ಕದೇವರಾಯರ

(೧೭೦೦) ಕಾಲಗಳಲ್ಲಿ ಗದ್ಯರಚನೆಗೆ ಸ್ವಲ್ಪ ಇಂಬುದೊರಕಿದರೂ, ಅದು ಪದ್ಯದಿಂದ ಪ್ರತ್ಯೇಕವಾದ ಅಸ್ತಿತ್ವವನ್ನು ಬೆಳಸಿಕೊಳ್ಳಲಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ (೧೭೯೪-೧೮೬೮) ಗದ್ಯಕ್ಕೆ ಪ್ರಾಶಸ್ತ್ಯ ದೊರೆತರೂ ಅದು ಸಂಸ್ಕೃತದ ಛಾಯಾನುವರ್ತಿಯಾಯಿತು. ಕನ್ನಡಿಗರ ಆಶೆ, ಆಕಾಂಕ್ಷೆ, ಧ್ಯೇಯ, ಧೋರಣೆ, ವಿಚಾರ-ವಿಕಾಸಗಳನ್ನು ಪ್ರತಿಬಿಂಬಿಸುವುದಕ್ಕೆ ಸ್ವತಂತ್ರ ಗದ್ಯಶೈಲಿಯೊಂದು ರೂಪುಗೊಳ್ಳಬೇಕಾಗಿತ್ತು. ಆಲೂರ ವೆಂಕಟರಾಯರು ೧೯೧೭ ರಲ್ಲಿಯೇ ಇಂಥ ಪ್ರಯತ್ನ ನಡೆಸಿದರು. ಎಂ. ಎಸ್. ಪುಟ್ಟಣ್ಣ, ಶ್ರೀನಿವಾಸರ ಮನೆಮಾತಿನ ಶೈಲಿಯೂ ರೂಪುತಳೆಯಿತು. ಇದೇ ಕಾಲದಲ್ಲಿಯೇ ಡಿ. ವಿ. ಗುಂಡಪ್ಪನವರು, ಮಹಾದೇವ ಪ್ರಭಾಕರ ಪೂಜಾರರು, ಪಂಜೆ ಮಂಗೇಶರಾಯರು, ಪಂಡಿತ ತಾರಾನಾಥರು, ಎ. ಆರ್. ಕೃಷ್ಣಶಾಸ್ತ್ರಿಗಳು* ವಿಚಾರಪರಿಪ್ಲುತವೂ, ಸಬಲವೂ, ಮೋನಚೂ ಆದ ಗದ್ಯಶೈಲಿಯನ್ನು ರೂಪಿಸಲು ವಿಶೇಷ ಶ್ರಮಿಸಿದರು. ಇವರ ಪ್ರಯತ್ನದಿಂದ ಹೊಸಗನ್ನಡ ಗದ್ಯಶೈಲಿ ಶಾಶ್ವತ ಸ್ವರೂಪ ತಳೆದು ನಿಂತುದಲ್ಲದೆ, ಆಧುನಿಕ ಜೀವನಕ್ಕೆ ಅಗತ್ಯವಾದ ಯಾವದೇ ವಿಷಯವನ್ನು ಸಮಂಜಸವಾಗಿ, ಪರಿಣಾಮಕಾರಿಯಾಗಿ ನಿರೂಪಿಸಲು ಸಮರ್ಥವಾಯಿತು.

## ೬. ಸ್ವತಂತ್ರ ನಾಟಕ

(೪) ಕನ್ನಡನಾಡಿನಲ್ಲಿ ನಾಟಕ ಅತಿ ಪ್ರಾಚೀನಕಾಲದಿಂದ ಬೆಳೆಯುತ್ತ ಬಂದಿದ್ದರೂ, ನಾಟಕ ಸಾಹಿತ್ಯ ಉಪಲಬ್ಧವಿಲ್ಲವಾಗಿದೆ. ಸಿಂಗಾರಾರ್ಯನ (೧೭೦೦) ಮಿತ್ರವಿಂದಾಗೋವಿಂದ ಒಂದೇ ನಮಗೆ ದೊರೆತಿರುವ ಪ್ರಾಚೀನ ಕನ್ನಡ ನಾಟಕ. ಇದೂ ಸ್ವತಂತ್ರ ಕೃತಿಯಲ್ಲ. ಶ್ರೀಹರ್ಷನ ರತ್ನಾವಳಿ ನಾಟಕದ ಭಾಷಾಂತರ. ಚಾಮರಾಜ ಒಡೆಯರವರ ಆಸ್ಥಾನ ಕವಿಗಳಾಗಿದ್ದ ಬಸವಪ್ಪಶಾಸ್ತ್ರಿಗಳು, ಸುಬ್ಬಾಶಾಸ್ತ್ರಿಗಳು, ಅನಂತನಾರಾಯಣ ಶಾಸ್ತ್ರಿಗಳು, ಅಯ್ಯಾಶಾಸ್ತ್ರಿಗಳು, ಗಿರಿಭಟ್ಟರ ತಮ್ಮಯ್ಯನವರು ಸಂಸ್ಕೃತ ಇಂಗ್ಲಿಷ್ ಭಾಷೆಗಳ ನಾಟಕಗಳನ್ನು ಕನ್ನಡಕ್ಕೆ ಅನುವಾದಮಾಡಿದರು. ವಿದ್ವಾನ್ ವೆಂಕಟಾಚಾರ್ಯರೂ, ನಂಜನಗೂಡು ಶ್ರೀಕಂಠಶಾಸ್ತ್ರಿಗಳೂ, ಬೆಳ್ಳಾವೆ ನರಹರಿಶಾಸ್ತ್ರಿಗಳೂ ಕೆಲವು ಸ್ವತಂತ್ರ ನಾಟಕಗಳನ್ನು ರಚಿಸಿದರು. ಉತ್ತರ ಕರ್ನಾಟಕದಲ್ಲಿ ವಾಮನರಾವ್ ಮಾಸ್ತರ್ ಅವರು ಗಡಕರಿ, ಖಾಡಿಲ್‌ಕರ್, ಮಾಮಾ ವರೇರ್‌ಕರ್ ಅವರ ಹಲವು ಮರಾಟಿ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರದರ್ಶಿಸುತ್ತಿದ್ದರು. ಹೆಚ್ಚು ಕಡಿಮೆ ಮರಾಟಿ ಸಂಪ್ರದಾಯವನ್ನೇ ಅನುಸರಿಸಿ ಗರೂಡ ಸದಾಶಿವರಾಯರು ಹಲವು ಸ್ವತಂತ್ರ ನಾಟಕಗಳನ್ನು ಬರೆದು ಪ್ರದರ್ಶಿಸುತ್ತಿದ್ದರು. ಈ ಬೆಳೆ ಹುಲುಸಾಗಿದ್ದರೂ ಅವುಗಳಲ್ಲಿ 'ಕನ್ನಡತನ' ಕಣ್ಮರೆಯಾಗಿತ್ತು. ಕನ್ನಡಿಗರ ಜೀವನ,

---

*ಡಿ. ವಿ. ಗುಂಡಪ್ಪನವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ'; ಮ. ಪ್ರ. ಪೂಜಾರರ ಬಿಡಿ ಪ್ರಬಂಧಗಳು; ಪಂಜೆ ಮಂಗೇಶರಾಯರ 'ಕೋಟಿ ಚೆನ್ನಯ್ಯ'; ಪಂಡಿತ ತಾರಾನಾಥರ 'ಧರ್ಮಸಂಭವ'; ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ'.

ಸಮಸ್ಯೆಗಳನ್ನು ಕಡೆದು ಜನತೆಯ ಮುಂದೆ ನಿಲ್ಲಿಸಬಲ್ಲ ಪ್ರತಿಭಾಶಾಲಿ ನಾಟಕ ಕಾರನ ಬರುವನ್ನು ನಾಡು ಕುತೂಹಲದಿಂದ ನಿರೀಕ್ಷಿಸುತ್ತಿತ್ತು. ಆ ನಿರೀಕ್ಷೆ ಯನ್ನು ಪೂರೈಸಿದವರು ಕೈಲಾಸಂ. ಅವರ 'ಟೊಳ್ಳು-ಗಟ್ಟಿ' ನಾಟಕ ೧೯೧೮ರಲ್ಲಿ ರಂಗಭೂಮಿಯಲ್ಲಿ ಪ್ರದರ್ಶಿತವಾಗಿ ಪ್ರಕಟವಾಯಿತು. ಟೊಳ್ಳು-ಗಟ್ಟಿಗೆ ದೊರೆತ ಪ್ರೋತ್ಸಾಹ ಭರ್ತ್ಸನೆಗಳೆರಡೂ ಕೈಲಾಸಂ ಅವರ ಪ್ರೇರಕಶಕ್ತಿಗಳಾದವು. ೧೯೧೮ ರಿಂದ ೧೯೪೬ರವರೆಗೆ, ಸುಮಾರು ಇಪ್ಪತ್ತೆಂಟು ವರ್ಷಕಾಲ ಕೈಲಾಸಂ ಲೇಖನಿ ಧಾರಾವಾಹಿನಿಯಾಗಿ ಪ್ರವಹಿಸಿ ಹಲವಾರು ದೊಡ್ಡ ನಾಟಕಗಳನ್ನು ಸಣ್ಣ ನಾಟಕಗಳನ್ನು ನಾಡಿಗೆ ನೀಡಿತು.

ಕೈಲಾಸಂ ಅವರ ಸಮಕಾಲೀನರಾಗಿ ರಂಗಭೂಮಿಯ ಉತ್ಕರ್ಷಕ್ಕಾಗಿ ಶ್ರಮಿಸಿ ರುದ್ರನಾಟಕಗಳಮಾಲೆಯನ್ನೇ ನಾಡಿಗರ್ಪಿಸಿದ ಮತ್ತೊಬ್ಬ ಪ್ರತಿಭಾ ಶಾಲಿ 'ಸಂಸ'ರು. ಮೈಸೂರು ಇತಿಹಾಸ 'ಸಂಸ'ರ ಪ್ರಯತ್ನದಿಂದ ಅಮರ ವಾದುದಲ್ಲದೆ, ಪ್ರೌಢವೂ ಪ್ರೋಜ್ವಲವೂ ಆದ ನಾಟಕಶೈಲಿಯೊಂದು ಅವರ ಪ್ರತಿಭೆಯ ಫಲವಾಗಿ ರೂಪು ತಳೆಯಿತು. ಪ್ರಾಚೀನ ಗ್ರೀಕ್ ರುದ್ರನಾಟಕಕಾರರ ಕೃತಿಗಳನ್ನು ನೆನಪಿಸುವ ಸಂಸರ ಕೃತಿಗಳು ಕನ್ನಡ ನಾಡಿನ ನಾಟಕ ಸಾಹಿತ್ಯಕ್ಕೆ ಮಾತ್ರವಲ್ಲದೆ ಅಖಂಡ ಭಾರತದ ನಾಟಕ ಸಾಹಿತ್ಯಕ್ಕೇ ರತ್ನಪ್ರಾಯವಾಗಿವೆ.

ಕೈಲಾಸಂ, ಸಂಸರ ಸಮಕಾಲೀನರಾಗಿ ನಾಟಕ ಸಾಹಿತ್ಯದ ಬೆಳೆಯನ್ನು ಹೆಚ್ಚಿಸಿದವರು ಶ್ರೀರಂಗ (ಆದ್ಯ ರಂಗಾಚಾರ್ಯ), ಅ. ನ. ಕೃ, ಕಾರಂತ ಮತ್ತು ಸಿ. ಕೆ. ವೆಂಕಟರಾಮಯ್ಯ. ಶ್ರೀರಂಗರ 'ಉದಯ ವೈರಾಗ್ಯ'; ಅ. ನ. ಕೃ ಅವರ 'ಮದುವೆಯೋ-ಮನೆಹಾಳೋ'; ಕಾರಂತರ 'ಗರ್ಭಗುಡಿ'; ಸಿ. ಕೆ. ವೆಂಕಟ ರಾಮಯ್ಯನವರ 'ನಮ್ಮ ಸಮಾಜ' ಸಾಮಾಜಿಕ ನಾಟಕಗಳ ಕ್ಷೇತ್ರವನ್ನು ವಿಸ್ತರಿಸಿ, ಆಳವಾದ ಸಮಸ್ಯೆಗಳ ಕಡೆ ನಮ್ಮ ಲಕ್ಷ್ಯವೆಳೆಯಿತು.

ಅಭಿಜಾತ ರಂಗಭೂಮಿಗೆ ಶ್ರೀಯವರು ತಮ್ಮ 'ಅಶ್ವತ್ಥಾಮನ್' ನಾಟಕ ವನ್ನು ಕಾಣಿಕೆಯಾಗಿತ್ತರು. ಅವರ ಮೇಲ್ಪಂಕ್ತಿಯನ್ನನುಸರಿಸಿ ಕೆ. ವಿ. ಪುಟ್ಟಪ್ಪ ನವರು ಕೆಲವು ಸರಳರಗಳೆಯ ನಾಟಕಗಳನ್ನು ರಚಿಸಿದರು. ಕಾರಂತರು ಮತ್ತು ಪು. ತಿ. ನರಸಿಂಹಾಚಾರ್ಯರು 'ಗೀತಾ ನಾಟಕ'ಗಳ ಬಗ್ಗೆ ಶ್ರಮಿಸಿದರು.

## ೭. ವಿಚಾರ, ವೈಜ್ಞಾನಿಕ ಸಾಹಿತ್ಯ

ಈ ಕಾಲವನ್ನು 'ಧೀರಪ್ರಯತ್ನಕಾಲ'ವೆಂದು ನಾವು ಕರೆಯಬಹುದು. ಅಕ್ಷರಜ್ಞತೆಯೂ, ವಾಚನಾಭಿರುಚಿಯೂ ಸಾಕಷ್ಟು ಬೆಳೆದಿರುವ ಈ ದಿನಗಳಲ್ಲಿಯೇ ಪಾಂಡಿತ್ಯಪೂರ್ಣವಾದ ಒಂದು ವೈಜ್ಞಾನಿಕ ಪತ್ರಿಕೆ ನಡೆಸುವುದು ದುಸ್ತರ ವಾಗಿರುವಾಗ ಇಂಥ ಒಂದು ಮಹತ್ಪ್ರಯತ್ನವನ್ನು ೧೯೧೮ರಲ್ಲಿ ಮಾಡಿದವರು ಬೆಳ್ಳಾವೆ ವೆಂಕಟನಾರಾಯಣಪ್ಪನವರು. ಅವರ 'ವಿಜ್ಞಾನ' ಪತ್ರಿಕೆ ಬಾಳಿದ್ದು ಎರಡು ವರ್ಷಕಾಲ. ಎಂಥ ಕ್ಲಿಷ್ಟ ವೈಜ್ಞಾನಿಕ ವಿಷಯವನ್ನಾದರೂ ಕನ್ನಡ ದಲ್ಲಿ ಅಭಿವ್ಯಕ್ತಿಗೊಳಿಸಬಹುದೆಂದು ವೆಂಕಟನಾರಾಯಣಪ್ಪನವರು ಈ ಅಲ್ಪಾವಧಿ ಯಲ್ಲಿ ಸಿದ್ಧಮಾಡಿಕೊಟ್ಟರು.

ಸಮಾಜ ವಿಜ್ಞಾನ, ತುಲನಾತ್ಮಕ ಧರ್ಮ ವಿವೇಚನೆ, ಹೈತುಕವಾದಗಳಿಗೆ ಪ್ರಾಗತಿಕ ನಾಡಿನಲ್ಲಿ ಸ್ಥಾನವಿದೆಯೆಂದು ಸ್ಥಾಪಿಸಿದವರು ಪಂಡಿತ ತಾರಾನಾಥರು. ಈ ವಿಷಯಗಳ ಮೇಲೆ ಅವರು 'ಪ್ರೇಮ' ಪತ್ರಿಕೆ ಬರೆದಿರುವ ಲೇಖನಗಳು, ಅವರ 'ಧರ್ಮಸಂಭವ' ಗ್ರಂಥ ಕನ್ನಡನಾಡಿನಲ್ಲಿ ನೂತನ ವಿಚಾರಕ್ರಾಂತಿಯನ್ನೇ ಹೊಡೆದೆಬ್ಬಿಸಿದವು.

ವಿಚಾರ ಸಾಹಿತ್ಯದ ಬೆಳೆಗೆ ತ್ರಿಕರಣಪೂರ್ವಕವಾಗಿ ಶ್ರಮಿಸಿದವರಲ್ಲಿ ದತ್ತಾತ್ರೇಯ ಕೃಷ್ಣ ಭಾರದ್ವಾಜರನ್ನು ಸ್ಮರಿಸಿಕೊಳ್ಳಬೇಕು. ಭಾರತದ ರಾಜಕೀಯ ಇತಿಹಾಸ, ಸ್ವಾತಂತ್ರ್ಯ ಸಂಗ್ರಾಮೇತಿಹಾಸದ ಕರ್ತೃಗಳೂ, ಗಾಂಧೀಸಾಹಿತ್ಯದ ಅನುವಾದಕರಲ್ಲಿ ಮೊದಲಿಗರೂ ಆದ ಭಾರದ್ವಾಜರು ದಾಂಪತ್ಯ ವಿಜ್ಞಾನ, ಸಂತಾನ ವಿಜ್ಞಾನ ಗ್ರಂಥಗಳನ್ನು ಬರೆದು ಲೈಂಗಿಕ ವಿಜ್ಞಾನದ ಮೇಲೆ ಕವಿದಿದ್ದ ಭಯ, ಭೀಭತ್ಸತೆ, ಉಪೇಕ್ಷೆಗಳನ್ನು ಹರಿದೊಗೆದರು. ತರುವಾಯದ ಲೇಖಕರಾದ ಡಾ|| ದೊಡ್ಡೇರಿ ವೆಂಕಟಗಿರಿರಾವ್, ಡಾ|| ಗೋಪಾಲ ಕೃಷ್ಣ ಮೊದಲಾದವರು ಲೈಂಗಿಕವಿಜ್ಞಾನ ಶಾಸ್ತ್ರಗ್ರಂಥ ರಚನೆಗೆ ತೊಡಗುವುದಕ್ಕೆ ಭಾರದ್ವಾಜರ ಮೇಲ್ಪಂಕ್ತಿಯೇ ಕಾರಣವಾಯಿತು.

ಕನ್ನಡ ನವೋದಯ ರೂಪುಗೊಳ್ಳುವುದಕ್ಕೆ ಪತ್ರಿಕೆಗಳು ಮಾಡಿದ ಸಹಾಯವನ್ನು ನೆನಪಿಸಿಕೊಳ್ಳಬೇಕು. ಎಂ. ವೆಂಕಟಕೃಷ್ಣಯ್ಯನವರ '**ಸಂಪದಭ್ಯುದಯ**', ತಿ. ತಾ. ಶರ್ಮರ '**ವಿಶ್ವಕರ್ನಾಟಕ**', ಮುದವೀಡು ಕೃಷ್ಣರಾಯರ '**ಕರ್ನಾಟಕ ವೃತ್ತ ಮತ್ತು ಧನಂಜಯ**', ಆಲೂರ ವೆಂಕಟರಾಯರ '**ಜಯಕರ್ನಾಟಕ**', ರಾಜಗೋಪಾಲಕೃಷ್ಣರಾಯರ '**ಕೃಷ್ಣಸೂಕ್ತಿ**', ಡಿ. ವಿ. ಗುಂಡಪ್ಪನವರ '**ಕರ್ನಾಟಕ ಜನಜೀವನ**', ನವೋದಯ ಕಾಲದ ಸಾಹಿತ್ಯ ಪ್ರಕಟನೆಯನ್ನು ಕೈಗೊಂಡು, ಅವುಗಳ ಬಗ್ಗೆ ಜನಾಭಿರುಚಿಯನ್ನು ಬೆಳಸಿದುದಲ್ಲದೆ, ಪ್ರಚಲಿತ ವಿಷಯಾಭಿವ್ಯಕ್ತಿಗೆ ಅತ್ಯವಶ್ಯಕವಾದ ಶೈಲಿಯನ್ನು ನಿರ್ಮಿಸಿದವು.

ನವೋದಯ ಸಾಹಿತ್ಯ ಕಾಲದ ಪೂರ್ವಾರ್ಧದಲ್ಲಿ ನಡೆದ ಪ್ರಯತ್ನದ ಫಲವಾಗಿ ಉತ್ತಮ ಬೆಳೆ ಸಮೃದ್ಧಿಯಾಗಿ ಬರಲಾರಂಭವಾಯಿತು.

## ೮. ಸಣ್ಣ ಕಥೆ

ಶ್ರೀನಿವಾಸರು, ಪಂಜೆ ಮಂಗೇಶರಾಯರು ಹಲವಾರು ಉತ್ತಮ ಕಥೆಗಳನ್ನು ಬರೆದು ಈ ಕಲಾಪ್ರಾಕಾರ ಚಿರಸ್ಥಾಯಿಯಾಗಿ ಕನ್ನಡದಲ್ಲಿ ಉಳಿಯುವಂತೆ ಮಾಡಿದರು. ಈ ಇಬ್ಬರು ಲೇಖಕರ ಸುಹೃದಯ ಮನೋಭಾವ, ಲಲಿತ ಮಧುರ ಶೈಲಿ, ಮನವನರಳಿಸುವ ಮೃದುಹಾಸ್ಯ, ಸಂಸಾರ ಜೀವನದ ರಸಮಯ ಸನ್ನಿವೇಶಗಳು ಬಹುಮಂದಿ ಕಿರಿಯ ಲೇಖಕರನ್ನು ಆಕರ್ಷಿಸಿದವು. ಆನಂದ, ಶ್ರೀನಾಥ, ಆನಂದಕಂದ, ಗೋಪಾಲಕೃಷ್ಣರಾವ್, ರಾಜರತ್ನಂ, ಕೃಷ್ಣಕುಮಾರ ಕಲ್ಲೂರ—ಈ ಹಿರಿಯರ ಮೇಲ್ಪಂಕ್ತಿಯನ್ನನುಸರಿಸಿ ಚಿತ್ತಾಕರ್ಷಕ ಕಥೆಗಳನ್ನು ರಚಿಸಿದರು. ಇದಕ್ಕೆ ಪಾಸಟಿಯಾಗಿ ಆಳವಾದ ಸಮಸ್ಯೆಗಳನ್ನು ಹೃದಯಂಗಮ

ವಾಗಿ ನಿರೂಪಿಸುವ ಸಂಪ್ರದಾಯವೊಂದು ಆರಂಭವಾಯಿತು. ಅ.ನ.ಕೃ, ಕಾರಂತ, ಹ.ಪೀ. ಜೋಶಿ, ಟೇಂಗ್ಸೆ ಗೋವಿಂದರಾಯ, ಪೇಜಾವರ ಸದಾಶಿವರಾಯ ಈ ಸಂಪ್ರದಾಯದ ಪುರಸ್ಕರ್ತರಾದರು. ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಜಾನಪದ ಹಾಸ್ಯದಿಂದ ತುಂಬಿದ ಹಳ್ಳಿಯ ಜೀವನವನ್ನು ತಮ್ಮ ಕಥೆಗಳಲ್ಲಿ ತಂದರು. ಪಡಕೋಣೆ ರಮಾನಂದರಾಯರು ಪಿ. ಜಿ. ವೋಡ್ ಹೌಸನ ತಿಳಿಹಾಸ್ಯವನ್ನು ನೆನಪಿಗೆ ತರುವಂಥ ಹಾಸ್ಯಕಥೆಗಳನ್ನು ಬರೆದರು. ಪು. ತಿ. ನರಸಿಂಹಾಚಾರ್ಯರು ಆಧ್ಯಾತ್ಮಿಕ ತತ್ತ್ವನಿರೂಪಣೆಗೆ ಸಣ್ಣಕಥೆಯ ಸಾಧನವನ್ನುಪಯೋಗಿಸಿಕೊಂಡು ಕೃತಕೃತ್ಯರಾದರು.

ಈ ಎರಡು ದಶಕಗಳ ಕಾಲ (೧೯೧೫-೧೯೩೫) ಸಣ್ಣ ಕಥಾ ಪ್ರಪಂಚದಲ್ಲಿ ಕನ್ನಡಕೃತಿಗಳು ತಲೆಯೆತ್ತಿ ನಿಂತವು. ವಿಶ್ವದ ಉತ್ತಮೋತ್ತಮ ಸಣ್ಣಕಥೆಗಳ ಪಂಕ್ತಿಯಲ್ಲಿ ನಿಲ್ಲಬಲ್ಲ ಹಲವು ಕಥೆಗಳು ನಿರ್ಮಾಣವಾದವು.

## ೯. ಭಾವಗೀತೆ

ಕನ್ನಡ ಕಾವ್ಯಕ್ಕೆ ಭಾವಗೀತೆ ಹೊಸದಲ್ಲ. ಚಂಪೂ, ಷಟ್ಪದಿ, ಸಾಂಗತ್ಯ ಕಾವ್ಯಗಳನ್ನು ರಚಿಸಿರುವ ಪ್ರಾಚೀನ ಕವಿಗಳು ಅನೇಕ ಭಾವಗೀತೆಗಳನ್ನು ತಮ್ಮ ಕೃತಿಗಳಲ್ಲಿ ಸಮಾವೇಶಗೊಳಿಸಿದ್ದಾರೆ. ಇಂಥ ಹಲವು ಗೀತೆಗಳನ್ನು ಅಭಿನವ ವಿದ್ಯಾನಂದ (೧೬ನೆಯ ಶತಮಾನ) ತನ್ನ 'ಕಾವ್ಯಸಾರ'ದಲ್ಲಿ ಸಂಗ್ರಹಿಸಿದ್ದಾನೆ. ನವೋದಯ ಸಾಹಿತ್ಯ ಕಾಲದಲ್ಲಿ ಭಾವಗೀತೆಗಳಿಗೆ ಹೆಚ್ಚಿನ ವ್ಯಾಪ್ತಿಯೂ ಪ್ರಾಶಸ್ತ್ಯವೂ ದೊರೆತುದಕ್ಕೆ ಕಾಲಗುಣವೂ, ಜನಗಳ ಸಾಹಿತ್ಯಾಭಿರುಚಿಯೂ ಕಾರಣಗಳಾದವು. ಮೊದಲಿನಂತೆ ಜನ ಪುರಸತ್ತಾಗಿ ಕುಳಿತು, ಪಂಪಭಾರತ, ಕುಮಾರವ್ಯಾಸ ಭಾರತ, ರಾಜಶೇಖರ ವಿಳಾಸ, ಚನ್ನಬಸವ ಪುರಾಣದಂಥ ದೊಡ್ಡ ಪ್ರಮಾಣದ ಗ್ರಂಥಗಳನ್ನು ಅಭ್ಯಾಸಿಸುವುದು ಸಾಧ್ಯವಿಲ್ಲವಾಯಿತು. ಅತ್ಯಲ್ಪವೇಳೆಯಲ್ಲಿ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಭಾವನೆ, ವಿಚಾರವನ್ನು ಅಚ್ಚೊತ್ತುವ ಕಿರುಪ್ರಮಾಣದ ಕಾವ್ಯದ ಅಗತ್ಯವಿತ್ತು. ಈ ವೇಳೆಗಾಗಲೇ ಸಾಹಿತ್ಯರಂಗಕ್ಕೆ ಉತ್ಸಾಹದಿಂದಿಳಿದಿದ್ದ ಕಿರಿಯ ಲೇಖಕರ ಬಳಗವೊಂದು ಸಿದ್ಧವಾಗಿತ್ತು. ಅವರು ಇಂಗ್ಲಿಷಿನ ಸಾನೆಟ್, ಫ್ರೀ ವರ್ಸ್, ಬ್ಲ್ಯಾಂಕ್ ವರ್ಸ್, ಓಡ್ ಮೊದಲಾದ ಛಂದಸ್ಸುಗಳನ್ನು ಕನ್ನಡದಲ್ಲಿ ಪ್ರಯೋಗಿಸಿ ನೋಡಲು ಆತುರರಾಗಿದ್ದರು. 'ವಿನೂತನ ಕವಿತೆ' ಯಾಗಿದ್ದ ಭಾವಗೀತೆಗೆ ಅತ್ಯವಶ್ಯಕವಾಗಿಬೇಕಾಗಿದ್ದ ಪಾಂಡಿತ್ಯದ ಹಿನ್ನೆಲೆ, ಭಾವಪುಷ್ಟಿ, ಅಭಿವ್ಯಕ್ತಿ ಕೌಶಲ್ಯ, ಛಂದೋಪ್ರಯೋಗ ಪ್ರಾವೀಣ್ಯತೆಗಳನ್ನೊದಗಿಸಿಕೊಟ್ಟವರು ಡಿ. ವಿ. ಗುಂಡಪ್ಪನವರು. ಇವರ 'ನಿವೇದನ' ಕೇವಲ ಕಾವ್ಯವಲ್ಲ, ಕವಿಗಳ ಕಾವ್ಯ. ಮಹಾಕಾವ್ಯದ ಅನೇಕ ಲಕ್ಷಣಗಳನ್ನೊಳಗೊಂಡಿರುವ ಈ ಸಣ್ಣಕೃತಿ ಕನ್ನಡ ಕಾವ್ಯಪ್ರಪಂಚದ ಒಂದು ಮೈಲಿಗಲ್ಲು. ಜೀವನದ ಸಮಸ್ತ ಆವಿಷ್ಕಾರವನ್ನು, ಸುಪ್ತ ಹಾಗೂ ವ್ಯಕ್ತ ಸೌಂದರ್ಯವನ್ನು, ಮಾನವನ ಹೃದಯಾಂತರಾಳದಲ್ಲಿ ನೆಲಸಿರುವ ಭಕ್ತಿಭಾವವನ್ನು ಕವಿ ಅನ್ಯಾದೃಶವಾಗಿ ವರ್ಣಿಸಿದ್ದಾರೆ. ಅವರ

'ಮಂಕುತಿಮ್ಮನ ಕಗ್ಗ' ಈ ಶತಮಾನದ ಅಮರಕೃತಿ. ಅನೇಕ ಜನ್ಮಗಳ ಅನುಭವ, ಪರಿಪಕ್ವ ವಿಚಾರಸರಣಿ, ಧ್ವನಿಪ್ರಧಾನವಾದ ನುಡಿಜಾಣ್ಮೆ, ಜೀವನದ ಸರ್ವದೋಷಗಳನ್ನರಿತು ಅದನ್ನು ಕೆಚ್ಚಿನಿಂದ ಎದುರಿಸಬಲ್ಲ ಧೀಶಕ್ತಿ ಈ ಮಹಾ ಕಾವ್ಯದಲ್ಲಿ ಲಾಸ್ಯವಾಡುತ್ತಿದೆ.

ಮಂಜೇಶ್ವರದ ಗೋವಿಂದ ಪೈ ಆಧುನಿಕ ಮಹಾಕವಿಗಳ ಪಂಕ್ತಿಗೆ ಸೇರತಕ್ಕವರು. ಗೇರುಸೊಪ್ಪೆಯ ಜಲಪಾತದಂತೆ ಧುಮ್ಮಿಕ್ಕುವ ಅವರ ಕಾವ್ಯ ತನ್ನ ಧೀರಗಂಭೀರ ನಡೆಯಿಂದ ಓದುಗನನ್ನು ಬೆರಗುಗೊಳಿಸುತ್ತದೆ. ಕವಿ 'ವೈಶಾಖಿ' 'ಗೊಲ್ಗೊಥ' ಎಂಬೆರಡು ನೀಳ್ಗವಿತೆಗಳಲ್ಲಿ ಮೇರುಸದೃಶರಾದ ಇಬ್ಬರು ಮಹಾಪುರುಷರ ಪರಿಚಯಮಾಡಿಕೊಟ್ಟಿದ್ದಾರೆ. ಕವಿ ದೊಡ್ಡವನಾದರೇ ಕಾವ್ಯ ದೊಡ್ಡದಾಗಲು ಸಾಧ್ಯ ಎಂಬ ಸತ್ಯವನ್ನು ನಿತ್ಯವನ್ನಾಗಿಸಿರುವ ಈ ಕೃತಿಗಳು ವಿಶ್ವಕಾವ್ಯಮಾಲೆಯಲ್ಲಿ ಕನ್ನಡಕಾವ್ಯಕ್ಕೆಡೆಮಾಡಿಕೊಟ್ಟಿವೆಯೆಂದು ಧಾರಾಳವಾಗಿ ಹೇಳಬಹುದು. ಕೆ. ವಿ. ಪುಟ್ಟಪ್ಪನವರದು ಬಹುಮುಖ ಪ್ರತಿಭೆ. ಅವರು ವರ್ಡ್ಸ್‌ವರ್ತ್‌ನ ಸಂಪ್ರದಾಯದ ಗೀತಾಕಾರರು. ಪುಟ್ಟಪ್ಪನವರು ಪ್ರಕೃತಿಪ್ರಿಯರು. ತಮ್ಮ ದಿವ್ಯಪ್ರತಿಭೆಯಿಂದ ಆಕೆಯ ವಿವಿಧ ವಿಲಾಸ, ರಾಗ, ಸೌಂದರ್ಯವನ್ನು ಪುಟ್ಟಪ್ಪನವರು ಚಿತ್ರಿಸಿದ್ದಾರೆ. ಜಡಪ್ರಕೃತಿ ಕೂಡ ಅವರ ಶಬ್ದವಿಲಾಸಕ್ಕೆ ಕುಣಿದಾಡುತ್ತದೆ. ಅನುಭಾವ ಮತ್ತು ಕ್ರಾಂತಿ ಎರಡೂ ಪುಟ್ಟಪ್ಪನವರ ಕಾವ್ಯದ ಹೆಗ್ಗುರುತುಗಳಾಗಿವೆ. ಪ್ರಕೃತಿಯ ಹಲವು ತೆರನ ವೈಭವಕ್ಕೆ ಕವಿ ಮನಸೋಲುವಂತೆ ಆಕೆಯ ಹಲವು ಕುಂದುಕೊರತೆಗಳನ್ನೂ ಗಮನಿಸುತ್ತಾನೆ. ಜನತೆಯ ಮನೋದೌರ್ಬಲ್ಯಗಳನ್ನೆದುರಿಸಿ, ಅವರ ಧಾರ್ಮಿಕ ಅಂಧಶ್ರದ್ಧೆ, ಸಂಕುಚಿತಮನೋಭಾವಗಳನ್ನು ಖಂಡಿಸುವುದರಲ್ಲಿ ಪುಟ್ಟಪ್ಪನವರು ಹಿಂದೆ ಮುಂದೆ ನೋಡುವುದಿಲ್ಲ. ಸೌಂದರ್ಯಾರಾಧಕನಾದ ಕವಿ ಸತ್ಯಪ್ರಿಯನೂ ಹೌದೆನ್ನುವುದನ್ನು ಪುಟ್ಟಪ್ಪನವರು ತಮ್ಮ ಕಾವ್ಯದಲ್ಲಿ ತೋರಿದ್ದಾರೆ. ಕನ್ನಡದ ಕಾವ್ಯವನದಲ್ಲಿ ಪುಟ್ಟಪ್ಪನವರ ವಾಣಿ ವಿನೂತನ ನಾದಸೌರಭದಿಂದ ಕೂಡಿದೆ. ವಿ. ಸೀತಾರಾಮಯ್ಯನವರ ಕಾವ್ಯ ನಿರ್ಮಲಗಂಗೆಯಂತೆ ಓತಪ್ರೋತವಾಗಿ ಹರಿಯುತ್ತದೆ. ಅವರ ಗೀತೆಗಳು ಸಾಣೆಗೊಂಡ ರತ್ನಗಳಂತಿವೆ. ಪರಿಶುದ್ಧ ಭಾವನೆ, ಸ್ಪಷ್ಟವಿಚಾರಗಳು ಒಡೆದು ಮೂಡಿವೆ. ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ನಮ್ಮನ್ನು ಕಾಡುತ್ತಿರುವ ಹಲವು ಸಮಸ್ಯೆಗಳನ್ನು ಕಂಡು ಕವಿಯ ಮನಸ್ಸು ನೊಂದಿದೆ. ಪುಟ್ಟಪ್ಪನವರ ಕಾವ್ಯದಲ್ಲಿ ಆಶಾವಾದವು ಕಂಡು ಬಂದರೆ ಸೀತಾರಾಮಯ್ಯನವರ ಕಾವ್ಯಡಲ್ಲಿ ನಿರಾಶಾವಾದವು ಮೂಡಿದೆ. ನಮ್ಮನ್ನು ದಾಸ್ಯಪಂಕದಲ್ಲಿ ಕೆಡವಿರುವ ಮೂವತ್ತು ಮೂರು ಕೋಟಿ ದೇವತೆಗಳು ನಾಶವಾಗಬೇಕು ಎಂದು ಕವಿ ಘೋಷಿಸುತ್ತಾನೆ. ಈ ದೇವತೆಗಳ ಬದಲು 'ಮಾನವತೆ' ಆಳಬೇಕೆಂಬುದೇ ಕವಿಯ ಆಶಯ. ಮಾನವತೆಯ ಆಧಿಪತ್ಯ ಸಾಧ್ಯವೇ ಎಂಬ ಶಂಕೆಯೂ ಕವಿಯನ್ನು ಬಾಧಿಸುತ್ತಿದೆ. ವಿ. ಸೀ. ಯವರು ಹಲವು ವೀರಗೀತೆಗಳನ್ನೂ ಬರೆದಿದ್ದಾರೆ. ಅವರ ರಾಷ್ಟ್ರಗೀತೆಗಳು ಶಕ್ತಿಯುತವಾಗಿಯೂ ಭಾವನಾಪ್ರಧಾನವಾಗಿಯೂ ಇವೆ. ಪು. ತಿ. ನರಸಿಂಹಾಚಾರ್ಯರು

ಲಲಿತಗೀತಾಕಾರರು. ಇವರ ಗೀತೆಗಳಲ್ಲಿ ಕರುಣಾರಸಕ್ಕೆ ಪ್ರಾಧಾನ್ಯ. ಹರಿದಾಸರ ಸಂಪ್ರದಾಯಕ್ಕೆ ನೂತನ ರೂಪುಗೊಟ್ಟು ನರಸಿಂಹಾಚಾರ್ಯರು ಜನಮನದಲ್ಲಿ ಭಕ್ತಿ, ನಂಬಿಕೆ, ಆಸೆಯನ್ನು ತುಂಬಿದ್ದಾರೆ. ರಾಜರತ್ನಂ ಒಂದು ವಿಶಿಷ್ಟಮಾರ್ಗವನ್ನನುಸರಿಸಿದರು. ಉಮರ್ ಖಯ್ಯಾಂನಂತೆ ಮದ್ಯದ ಉಪಮಾನ ಬಳಸಿಕೊಂಡು ಸಾಮಾನ್ಯ ಜನರ ಕಷ್ಟ ಸುಖಗಳನ್ನು ಜೀವನದರ್ಶನವನ್ನು ಚಿತ್ರವತ್ತಾಗಿ ಬಣ್ಣಿಸಿದರು. ಕಾವ್ಯಕ್ಕೆ ಜನಪದದ ರೂಢಿಭಾಷೆಯನ್ನು ಬಳಸಿಕೊಂಡವರಲ್ಲಿ ಇವರೇ ಮೊದಲಿಗರು.*

'ಆಧುನಿಕ ಕನ್ನಡ ಕಾವ್ಯದ ಇನ್ನೊಬ್ಬ ಪ್ರತಿಭಾವಂತ ಕವಿ ಬೇಂದ್ರೆ. ಅವರ ಆರಂಭದ ಕೃತಿಗಳಲ್ಲಿ ಕಂಡುಬರುವ ಭಾವನಾವೇಶ, ರಸಸಿದ್ಧಿ ವಿಸ್ಮಯವನ್ನುಂಟು ಮಾಡುತ್ತವೆ. ಕಿರುದರ್ಪಣದಲ್ಲಿ ಹಿರಿಗಜವನ್ನಡಗಿಸಬಲ್ಲ ಯಾಕ್ಷಣಿಕ ಬೇಂದ್ರೆ. ಭಾವದ ಗಾಢಿ, ನಿರಾಭರಣಸುಂದರಿಯಂತಿರುವ ಭಾಷೆಯ ಮೋಡಿ, ಎರಡೂ ಹಾಲು ಸಕ್ಕರೆಯಂತೆ ಬೆರೆತು ಅಪೂರ್ವ ಆನಂದವನ್ನೊದಗಿಸುತ್ತದೆ. ಜಾನಪದಗೀತೆಗಳ ನಿಸರ್ಗರಮಣೀಯ ಛಂದೋವಿಲಾಸ ಬೇಂದ್ರೆಯವರ ಕಾವ್ಯದಲ್ಲಿ ಮಯೂರ ನಾಟ್ಯವಾಡುತ್ತದೆ. ಬೇಂದ್ರೆಯವರ ಈಚಿನ ಕಾವ್ಯ ಅಧ್ಯಾತ್ಮದ ಕಡೆ ಹೆಚ್ಚು ಒಲಿಯುತ್ತಿದೆ. ಅರವಿಂದಯೋಗಿಗಳ ಪೂರ್ಣಯೋಗದ ಪ್ರಭಾವ ಬೇಂದ್ರೆಯವರ ಕಾವ್ಯದ ಮೇಲೆ ಸುಸ್ಪಷ್ಟವಾಗಿ ಮೂಡಿದೆ.

ಕಡೆಂಗೋಡ್ಲು ಶಂಕರಭಟ್ಟರು ಕಥನಕವನಗಳಲ್ಲಿ ಅಪೂರ್ವ ಜಾಣ್ಮೆ ಸಾಧಿಸಿದರು. ಅವರ 'ಮಾದ್ರಿಯ ಚಿತೆ', 'ಹೊನ್ನಿಯ ಮದುವೆ' ಮತ್ತು ನೀಳ್ಗವಿತೆ 'ನಲ್ಮೆ', ಭಾವಸಿದ್ಧಿ, ಭಾಷಾಸಿದ್ಧಿಗಳಿಗೆ ಹೆಸರಾಗಿವೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೂ ಕವಯಿತ್ರಿಯರ ಸಂಖ್ಯೆ ವಿಪುಲವಾಗಿಲ್ಲ. ಹದಿನೈದು ಶತಮಾನಗಳ ಸಾಹಿತ್ಯ ಶೋಧಿಸಿ ನೋಡಿದರೆ ನಮ್ಮ ಕಣ್ಣುಮುಂದೆ ನಿಲ್ಲುವವರು ನಾಲ್ವರೇ—ಕಂತಿ, ಮಹಾದೇವಿಯಕ್ಕ, ಹೆಳವನಕಟ್ಟೆ ಗಿರಿಯಮ್ಮ ಮತ್ತು ಸಂಚಿ ಹೊನ್ನಮ್ಮ. ಈ ಪಂಕ್ತಿಯಲ್ಲೇ 'ಭಾರತಿ' (ಸೌ||. ತಿರುಮಲೆ ರಾಜಮ್ಮ) ಯವರಿಗೆ ಸ್ಥಾನಕೊಡಬೇಕು. ಅವರ 'ತಪಸ್ವಿನಿ', 'ಅಹಲ್ಯೆ' ಕಾವ್ಯ ನಾಟಕಗಳೂ, ಬಿಡಿಕವನಗಳೂ, ರಾಷ್ಟ್ರಗೀತೆಗಳೂ ಮೇಲ್ಮಟ್ಟದವುಗಳಾಗಿ ಕನ್ನಡದ ಹಿರಿಮೆ ಹೆಚ್ಚಿಸಿವೆ.

## ೧೦. ಕಾದಂಬರಿ

ಕನ್ನಡದ ಚಂಪೂ, ಷಟ್ಪದಿ, ಸಾಂಗತ್ಯ ಕಾವ್ಯಗಳನ್ನು ನಾವು ಕಾದಂಬರಿಗಳೆಂದು ಪರಿಗಣಿಸುವುದಾದರೆ ಕನ್ನಡ ಕಾದಂಬರಿಯ ಇತಿಹಾಸವನ್ನು ಪಂಪಭಾರತದ ಕಾಲಕ್ಕೇ ಒಯ್ಯಬೇಕಾಗುತ್ತದೆ. ಆದರೆ ಕಾದಂಬರಿ ಇಂದು ತಳೆದಿರುವ ಸ್ವರೂಪವನ್ನು ಲೆಕ್ಕಿಸುವುದಾದರೆ ಅದು ಇಪ್ಪತ್ತನೆಯ ಶತಮಾನದ ಶಿಶು. ಕೆಂಪುನಾರಾಯಣ ೧೮೨೩ರಲ್ಲಿಯೇ 'ಮುದ್ರಾಮಂಜೂಷ' ಬರೆದರೂ ಅದು

* "ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ"—ಅ.ನ.ಕೃ. (ಪುಟ ೩)



ಸರ್ಕಾರಿ ಕಛೇರಿ, ಮಡಿಕೇರಿ
(ಈ ಭವನ ಹಿಂದೆ ಕೊಡಗಿನ ರಾಜರ ಅರಮನೆಯಾಗಿತ್ತು)



ಮಡಿಕೇರಿ ಕೋಟೆಯ ಬಳಿ ಸ್ವಗಾತ್ರದ ಆನೆ ಪ್ರತಿಮೆಗಳು



ಕೊಡಗಿನ ರಾಜರುಗಳ ಸಮಾಧಿಗಳು, ಮಡಿಕೇರಿ



ರಾಜ ಪೀಠ, ಮಡಿಕೇರಿ

ಅಚ್ಚಿನ ಮುಖಕಂಡು ಓದುಗರ ಕೈಸೇರಲು ಒಂದು ಶತಮಾನ ಕಾಯ ಬೇಕಾಯಿತು.

ಈ ಶತಮಾನದ ಆದಿಯಲ್ಲಿ ಕಾದಂಬರಿ ರಂಗದಲ್ಲಿ ಹೆಚ್ಚು ಕೃಷಿಮಾಡಿದವರು ಬಿ. ವೆಂಕಟಾಚಾರ್ಯರು ಮತ್ತು ಗಳಗನಾಥರು. ವೆಂಕಟಾಚಾರ್ಯರು ಬಂಕಿಂಚಂದ್ರ ಚಟ್ಟೋಪಾಧ್ಯಾಯರ ಬಂಗಾಳಿಕೃತಿಗಳನ್ನು ಗಳಗನಾಥರು ಹರಿನಾರಾಯಣ ಆಪ್ಟೆಯವರ ಮರಾಟಿ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ಈ ಇಬ್ಬರೂ ಸ್ವತಂತ್ರ ಕಾದಂಬರಿಕಾರರಲ್ಲದಿದ್ದರೂ, ಇವರ ಕೃತಿಗಳಿಂದಲೇ ಕನ್ನಡಿಗರ ವಾಚನಾಭಿರುಚಿ ಬೆಳೆಯಿತೆಂಬುದು ನಿರ್ವಿವಾದ. ವೆಂಕಟಾಚಾರ್ಯ—ಗಳಗನಾಥರ 'ಭಾಷಾಂತರ ಯುಗ' ದಲ್ಲಿ ಸ್ವತಂತ್ರ ಕಾದಂಬರಿ ಬರೆಯುವ ಎದೆಗಾರಿಕೆ ತೋರಿದವರು ಎಂ. ಎಸ್. ಪುಟ್ಟಣ್ಣನವರು ಮತ್ತು ಕೆರೂರು ವಾಸುದೇವಾಚಾರ್ಯರು. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ', 'ಮುಸುಕು ತೆಗೆಯೆ ಮಾಯಾಂಗನೆ' ಇಂದಿಗೂ ಹೊಸತೆನಿಸಿವೆ. ವಾಸುದೇವಾಚಾರ್ಯರ 'ಇಂದಿರಾ'—ಸಮಕಾಲೀನ ಉತ್ತರ ಕರ್ನಾಟಕದ ಜೀವನವನ್ನು ಬಹಳ ಸ್ವಾರಸ್ಯವಾಗಿ ಪ್ರತಿಬಿಂಬಿಸಿದೆ. ಅವರ 'ಭ್ರಾತೃಘಾತಕ ಅವರಂಗಜೇಬ' ಬರಲಿದ್ದ ಐತಿಹಾಸಿಕ ಕಾದಂಬರಿಕಾರರಿಗೆ ಹೆದ್ದಾರಿ ಕಲ್ಪಿಸಿಕೊಟ್ಟಿತು.

ಪುಟ್ಟಣ್ಣನವರೂ, ಕೆರೂರು ವಾಸುದೇವಾಚಾರ್ಯರೂ ಬಿತ್ತಿದ ಬೆಳೆ ಫಲಿಸಲು ಹದಿನೈದು ವರ್ಷಗಳು ಬೇಕಾದವು. ೧೯೧೫ ರಿಂದ ೧೯೩೦ ರವರೆಗೆ ಕನ್ನಡ ಸಾಹಿತಿಗಳ ಲಕ್ಷ್ಯ ಹೆಚ್ಚಾಗಿ ಕಾದಂಬರಿಯತ್ತ ಹೋಗಲಿಲ್ಲ.

೧೯೩೦ರಾನಂತರ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಯುಗವೇ ಆರಂಭವಾಯಿತು. ಕಾರಂತ, ದೇವುಡು, ಬೆಟಗೇರಿ ಕೃಷ್ಣಶರ್ಮ, ಅ.ನ.ಕೃ. ಕನ್ನಡ ಕಾದಂಬರಿಯ ಹೆಚ್ಚಿನ ಬೆಳೆಗೆ ಕಾರಣರಾದರು. ಕಾರಂತರ 'ಚೋಮನ ದುಡಿ-ಮರಳಿಮಣ್ಣಿಗೆ'; ಅ.ನ.ಕೃ. ಅವರ 'ಸಂಧ್ಯಾರಾಗ—ಮಂಗಳಸೂತ್ರ—ನಟಸಾರ್ವಭೌಮ', ದೇವುಡು ಅವರ 'ಅಂತರಂಗ'; ಬೆಟಗೇರಿ ಕೃಷ್ಣಶರ್ಮರ 'ರಾಜಯೋಗಿ', ವಿ. ಕೃ. ಗೋಕಾಕರ 'ಇಜ್ಜೋಡು' ಮೊದಲಾದ ಸಿದ್ಧಕೃತಿಗಳು ಕಾದಂಬರಿಯ ಭವಿಷ್ಯವನ್ನು ಉಜ್ಜ್ವಲಗೊಳಿಸಿದವು.

## ೧೧. ವಿಮರ್ಶೆ

ಇದೇ ಕಾಲದಲ್ಲಿಯೇ ವಿಮರ್ಶಾಶಾಸ್ತ್ರ ಕುರಿತ ಲಕ್ಷಣ, ಲಕ್ಷ್ಯಗ್ರಂಥಗಳೂ ಪ್ರಕಟವಾಗಿ ಓದುಗರ ಅಭಿರುಚಿಗೆ ಪುಟಗೊಟ್ಟವು. ಡಿ. ವಿ. ಗುಂಡಪ್ಪನವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ'; ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ 'ವಿಮರ್ಶೆ' (ಹಲವು ಭಾಗಗಳು); ಎ. ಆರ್. ಕೃಷ್ಣಶಾಸ್ತ್ರಿಗಳವರ 'ಸಂಸ್ಕೃತ ನಾಟಕ—ಭಾಸಕವಿ'; ಅ.ನ.ಕೃ. ಅವರ 'ರಾಜಾ ರವಿವರ್ಮ'—'ಸಾಹಿತ್ಯ ಮತ್ತು ಜೀವನ' (ಹಲವು ಭಾಗಗಳು) ಪ್ರಕಟವಾದುದಲ್ಲದೆ ಎಸ್. ವಿ. ರಂಗಣ್ಣ, ವಿ. ಸೀತಾರಾಮಯ್ಯ, ವಿ. ಕೃ. ಗೋಕಾಕರು, ರಂ. ಶ್ರೀ. ಮುಗಳಿ 'ಪ್ರಬುದ್ಧ

ಕರ್ನಾಟಕ—ಜಯ ಕರ್ನಾಟಕ' ಪತ್ರಿಕೆಗಳಲ್ಲಿ ಉತ್ತಮೋತ್ತಮ ಲೇಖನಗಳನ್ನು ಬರೆದರು.

## ೧೨. ಸಂಸ್ಥೆಗಳು

ಆಧುನಿಕ ಕನ್ನಡ ಸಾಹಿತ್ಯ ಬೆಳೆಯನ್ನು ನಾವು ಗಮನಿಸುವಾಗ ಅವುಗಳ ಹಿಂದಣ ಪ್ರೇರಕಶಕ್ತಿಗಳಾಗಿ ನಿಂತು, ಕಿರಿಯ ಲೇಖಕರಿಗೆ ಮಾರ್ಗದರ್ಶನಮಾಡಿ, ಅವರ ಕಿಶೋರಶಕ್ತಿ ವಿಕಾಸವಾಗಲು ನೆರವಾದ ಸಂಸ್ಥೆಗಳು ಮತ್ತು ಮಹನೀಯರನ್ನು ಸ್ಮರಿಸಿಕೊಳ್ಳಬೇಕು. ಬೆಂಗಳೂರು ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ'ವನ್ನು ನವೋದಯ ಸಾಹಿತ್ಯದ ಮಹಾಮನೆಯೆಂದು ಕರೆಯಬೇಕು. ಎ. ಆರ್. ಕೃಷ್ಣಶಾಸ್ತ್ರಿಗಳವರು, ದಿವಂಗತ ಟಿ. ಎಸ್. ವೆಂಕಣ್ಣಯ್ಯನವರು ಈ ಸಂಸ್ಥೆಯ ಚಾಲಕರಾಗಿ ಹಲವಾರು ಲೇಖಕರನ್ನು ಬೆಳಕಿಗೆ ತಂದರು. ಲಲಿತ ಸಾಹಿತ್ಯ, ಕಲಾ ವಿಮರ್ಶೆ, ಸಾಹಿತ್ಯ ವಿಮರ್ಶೆ, ವೈಜ್ಞಾನಿಕ ಸಾಹಿತ್ಯ ವಿಪುಲವಾಗಿ ಬೆಳೆಯಲು ಅವಶ್ಯಕವಾದ ಆರಂಭದ ಕೃಷಿಯನ್ನು ಅದ್ವಿತೀಯವಾಗಿ ಮಾಡಿದರು. ನವೋದಯ ಸಾಹಿತ್ಯದ ವ್ಯಾಪ್ತಿ ಹಾಗೂ ಕಲಾಸಿದ್ಧಿ ಈ ಇಬ್ಬರು ಕನ್ನಡ ತಪಸ್ವಿಗಳ ನಿಷ್ಕಾಮಕರ್ಮದ ಫಲವೆಂದು ಧಾರಾಳವಾಗಿ ಹೇಳಬಹುದು.

ಇದೇ ತರನ ಉದ್ಯಮವನ್ನು ಧಾರವಾಡದಲ್ಲಿ ಕೈಗೊಂಡು 'ಗೆಳೆಯರ ಗುಂಪು' ಎಂಬ ಹೆಸರಿನಲ್ಲಿ ತರುಣ ಲೇಖಕರ ತಂಡವನ್ನು ಕಟ್ಟಿದವರು ದ.ರಾ. ಬೇಂದ್ರೆ. ಮಂಗಳೂರಿನಲ್ಲಿ ಪಂಜೆ ಮಂಗೇಶರಾಯರು 'ಬಾಲ ಸಾಹಿತ್ಯ ಮಂಡಳಿ' ಸ್ಥಾಪಿಸಿ ಹಲವು ಉದಯೋನ್ಮುಖ ಲೇಖಕರ ಭವಿಷ್ಯವನ್ನು ರೂಪಿಸಿದರು.

ಬೆಂಗಳೂರಿನ 'ತುಂಟರ ತಂಡ' ಸ್ವತಂತ್ರ ಸಾಹಿತ್ಯ ವಿಕಾಸಕ್ಕೆ ನೆರವು ನೀಡಿತು. ಕನ್ನಡದಲ್ಲಿ ಲ್ಯಾಂಬ್, ಅಡಿಸನ್, ಡಿಕ್ವೆನ್ಸಿ ಮಾದರಿಯ ಪ್ರಬಂಧಗಳು ಹುಟ್ಟಿಕೊಳ್ಳುವುದಕ್ಕೆ ತುಂಟರ ತಂಡ ತುಂಬ ದುಡಿಮೆಮಾಡಿತು. ತಿ.ತಾ. ಶರ್ಮ, ಕೋ. ಸಂಪದ್ಗಿರಿರಾಯರು, ಟಿ. ಪಿ. ಕೈಲಾಸಂ ಈ ತಂಡದ ಪುರಸ್ಕರ್ತರಾಗಿದ್ದರು.

ತುಂಟರ ತಂಡದ ಧ್ಯೇಯಗಳನ್ನೇ ಧಾರವಾಡದಲ್ಲಿ ಸಾಧಿಸಿದ ಸಂಸ್ಥೆ 'ಮಂಗ ಮಠ'. ಕನ್ನಡದಲ್ಲಿ ಲಘುಗೀತೆ, ಲಘು ಹರಟೆ ಬರುವುದಕ್ಕೆ ಈ ಸಂಸ್ಥೆ ವಿಶೇಷ ಪ್ರಯತ್ನಮಾಡಿತು. ತುಂಟರ ತಂಡರ ಆಧಾರಸ್ತಂಭವಾಗಿದ್ದವರು ದಿ.ಪ್ರೊ. ಅ.ತು. ಸಾಸನೂರ್, ಅವರು.

## ೧೩. ನವೋದಯ ಸಾಹಿತ್ಯ ಕಾಲದ ಕೆಲವು ಲಕ್ಷಣಗಳು

ನವೋದಯ ಕಾಲದ ಸಾಹಿತ್ಯದ ಕೆಲವು ಮುಖ್ಯ ಲಕ್ಷಣಗಳನ್ನು ಹೀಗೆ ವಿವರಿಸಬಹುದು:

(೧) ಈ ಕಾಲದ ಸಾಹಿತ್ಯ ಸಾಧಾರಣ ಮಧ್ಯಮ ವರ್ಗವನ್ನು ಪ್ರತಿಬಿಂಬಿಸಿತು.

(೨) ಇಂಗ್ಲಿಷಿನ ಪ್ರಭಾವಕ್ಕೆ ಸಿಕ್ಕಿದ್ದರೂ ಆ ಪ್ರಭಾವದಿಂದ ದೂರ ನಿಂತು ಭಾರತೀಯ ಸಂಸ್ಕೃತಿಗೂ ಕನ್ನಡ ಜನಜೀವನಕ್ಕೂ ಅನುಗುಣವಾದ ಸಾಹಿತ್ಯ ನಿರ್ಮಿಸಬೇಕೆಂಬ ಪ್ರಯತ್ನ ನಡೆಯಿತು.

(೩) ಲಲಿತ ಸಾಹಿತ್ಯದ ಜತೆಯಲ್ಲಿ ವಿಚಾರ ಪ್ರಬೋಧಕ ಸಾಹಿತ್ಯ ಬೆಳಸಬೇಕೆಂಬ ಆಕಾಂಕ್ಷೆ ಕಂಡುಬಂದಿತು.

(೪) ಈ ಕಾಲದ ಸಾಹಿತ್ಯೋಪಾಸಕರು ದೇಶಾಭಿಮಾನಿಗಳಾಗಿದ್ದರೂ ದೇಶಾಭಿಮಾನ ಪ್ರೇರಕವೂ ಸ್ವಾತಂತ್ರ್ಯಪೂರಕವೂ ಆದ ಸಾಹಿತ್ಯದ ಕಡೆ ಅವರ ಲಕ್ಷ್ಯ ಹೆಚ್ಚಾಗಿ ಹೋಗಲಿಲ್ಲ.

(೫) ಆಧುನಿಕ ಜೀವನಾವಶ್ಯಕತೆಯನ್ನು ಪೂರೈಸಬಲ್ಲ ಬಗೆಬಗೆಯ ಗದ್ಯಶೈಲಿಯ ಆವಿಷ್ಕಾರವಾಯಿತು.

## ೧೪. ಪ್ರಗತಿಶೀಲ ಕಾಲ

ಸುಮಾರು ಮೂರು ದಶಕಕಾಲ ಅಭೂತಪೂರ್ವ ಸೇವೆಮಾಡಿದ ನವೋದಯ ಸಾಹಿತ್ಯವೂ ಒಂದು ಸಮಯಾಚಾರಕ್ಕೆ ಒಳಪಟ್ಟಿತು. ೧೯೪೨ರ ಆಗಸ್ಟ್ ವಿಪ್ಲವ ದಂಥ ಮಹತ್ತ್ವದ ವಿಷಯವೂ ಬಂಗಾಳ, ಕೇರಳ, ಬಿಜಾಪುರಗಳ ಘೋರ ಕ್ಷಾಮವೂ ಬಹುಮಂದಿ ಸಾಹಿತಿಗಳ ಅಂತಃಕರಣ ಕಲಕಲಿಲ್ಲ. ಸಾಹಿತಿ ಯಾದವನೂ ರಾಷ್ಟ್ರಿಕನಲ್ಲವೇ? ಅವನಿಗೆ ಸಾಮಾಜಿಕ ಹೊಣೆಗಾರಿಕೆಯೇ ಇಲ್ಲವೇ? ದೇಶದ ಮುಖವನ್ನೇ ಬದಲಿಸುವಂಥ, ಪುನರೇತಿಹಾಸವನ್ನೇ ನಿರ್ಮಾಣ ಮಾಡುತ್ತಿದ್ದ ಘಟನೆಗಳು ನಡೆಯುತ್ತಿದ್ದರೂ ಸಾಹಿತಿ ತನ್ನ ದಂತ ಪರಮನೆಯಲ್ಲಿಯೇ ಚಂದ್ರೋದಯ ಸೊಬಗನ್ನಾಸ್ವಾದಿಸುತ್ತ, ಚೆನ್ನೆಯರ ಚಲುವಿನ ವಿಭ್ರಮ ವಿಲಾಸದಲ್ಲಿ ಮೈಮರೆಯಬೇಕೇ ಎನ್ನುವ ಪ್ರಶ್ನೆ ಉದ್ಭವಿಸಿತು. ಈ ಪ್ರಶ್ನೆಗೆ ಉತ್ತರ ರೂಪವಾಗಿ 'ಪ್ರಗತಿಶೀಲ ಚಳುವಳಿ' ಆರಂಭವಾಗಿ, ಸಾಹಿತ್ಯ ಜನಜೀವನದ ರನ್ನಕನ್ನಡಿಯಾಗಬೇಕಲ್ಲದೆ, ಜನತೆಯ ದುಃಖ ಸಮಸ್ಯೆಗಳನ್ನು ಪರಿ ಹರಿಸಬಲ್ಲ ಸಾಧನವೂ ಆಗಬೇಕೆಂಬ ತತ್ವ ಪ್ರತಿಪಾದಿತವಾಯಿತು. ಈ ಕಾಲದ ಸಾಹಿತ್ಯವನ್ನು ನಾವು 'ಸಾಮಾಜಿಕ ಪರಿಜ್ಞಾನ ಸಾಹಿತ್ಯ'*ವೆಂದು ಕರೆಯ ಬಹುದು. ಪ್ರಗತಿಶೀಲರ ತತ್ವಕ್ಕೆ ವಿರುದ್ಧವಾಗಿ ಸಂಪ್ರದಾಯ ಸಾಹಿತಿಗಳು 'ಶುದ್ಧ ಸಾಹಿತ್ಯ'ದ ವಾದವನ್ನೆಬ್ಬಿಸಿ, ಸಾಹಿತ್ಯ ಪ್ರತಿನಿತ್ಯದ ಸಮಸ್ಯೆಗಳಿಂದ ದೂರನಿಂತು, ತ್ರಿಕಾಲಾಬಾಧಿತ ಸತ್ಯವನ್ನಷ್ಟೇ ಪ್ರತಿಪಾದಿಸಬೇಕೆಂದು ಹೇಳಿದರು.

ಪ್ರಗತಿಶೀಲ ಚಳುವಳಿ ಜೀವಂತವಾಗಿದ್ದ ನಾಲ್ಕು ವರ್ಷಗಳು (೧೯೪೩-೪೭) ಮಹೋನ್ನತವಾದ ಸಾಹಿತ್ಯಸೃಷ್ಟಿಯಾಗದಿದ್ದರೂ, ಸಾಹಿತ್ಯದ ಕ್ಷೇತ್ರ ವಿಶಾಲ ವಾಯಿತು. ಮುಂದೆ ಕನ್ನಡ ಸಾಹಿತ್ಯಕ್ಕೆ ಹಲವು ಉತ್ತಮ ಕಾಣಿಕೆಗಳನ್ನರ್ಪಿಸ ಲಿದ್ದ ಅನೇಕ ಲೇಖಕರನ್ನು ಬೆಳಕಿಗೆ ತಂದಿತು. ಮಧ್ಯಮ ವರ್ಗಕ್ಕೇ ಅಡಕ

*Literature of Social Consciousness.

ವಾಗಿದ್ದ ಲೇಖಕರು ಸಾಮಾನ್ಯರು, ಶ್ರಮಜೀವಿಗಳು, ರೈತರು, ವಿದ್ಯಾರ್ಥಿಗಳ ಜೀವನಗಳನ್ನು ಚಿತ್ರಿಸಲಾರಂಭಿಸಿದರು. ಇವರು ಪ್ರಕಟಿಸಿದ ಪ್ರಗತಿಶೀಲ ಸಾಹಿತ್ಯ, ಮ್ಯಾಕ್ಸಿಮ್ ಗಾರ್ಕಿ, ಭಾರತಶಕ್ತಿ, ನನ್ನನ್ನು ನಾನೇ ಕಂಡೆ, ರಸಋಷಿ ಇತ್ಯಾದಿ ಗ್ರಂಥಗಳು ಜೀವನಸಾಹಿತ್ಯವಾದವನ್ನು ಚೆನ್ನಾಗಿ ಪ್ರತಿಪಾದಿಸಿದವು.

## ೧೫. ಸ್ವಾತಂತ್ರ್ಯೋತ್ತರ ಸಾಹಿತ್ಯ

೧೯೪೭ ಆಗಸ್ಟ್ ತಿಂಗಳು ಹದಿನೈದನೆಯ ತಾರೀಖು ಭಾರತ ಪರದಾಸ್ಯ ನೊಗವನ್ನು ಕೆಳಗಿಳುಹಿತು. ಸ್ವಾತಂತ್ರ್ಯ ಸೂರ್ಯೋದಯದ ಪ್ರಭೆಯನ್ನು ನೋಡಲಾರದೆ ಹಲವು ಸಾಹಿತಿಗಳು ಕಣ್ಣುಮುಚ್ಚಿಕೊಂಡರು. ಇಂಗ್ಲೀಷ ರನ್ನುಳಿದು ಅನ್ಯ ಬಂಧುಗಳಿಲ್ಲವೆಂದು ನೆರೆನಂಬಿದ್ದ ಈ ಸಾಹಿತಿಗಳು ಇಂಗ್ಲಿಷರ ನಿಷ್ಕ್ರಮಣದಿಂದ ಭಾರತ ಸ್ವಯೂಥಕಲಹಗಳಿಗೀಡಾಗಿ ನಾಶವಾಗುತ್ತದೆಂದು ಭಾವಿಸಿದರು. ಅವರ ಭವಿಷ್ಯ ಕೆಲ ಮಟ್ಟಿಗೆ ನಿಜವಾಯಿತು. ಸ್ವಯೂಥ ಕಲಹಗಳಾದವು. ದೇಶ ಇಬ್ಭಾಗವಾಯಿತು—ಆದರೆ ನಾಶವಾಗಲಿಲ್ಲ. ಭಾರತ ತನ್ನ ಅನಂತ ಸಮಸ್ಯೆಗಳನ್ನು ಧೀಶಕ್ತಿಯಿಂದ ಎದುರಿಸಲಾರಂಭಿಸಿ ಪ್ರಾಗತಿಕ ರಾಷ್ಟ್ರಗಳ ಮೆಚ್ಚುಗೆಗೆ ಪಾತ್ರವಾಯಿತು. ಪ್ರಥಮ ಪಂಚವಾರ್ಷಿಕ ನಿಯೋಜನೆ—ದ್ವಿತೀಯ ಪಂಚವಾರ್ಷಿಕ ನಿಯೋಜನೆಗಳು ಕಾರ್ಯೋನ್ಮುಖವಾಗಿ ದೇಶದ ಸರ್ವತೋಮುಖ ಪ್ರಗತಿಯನ್ನು ಸಾಧಿಸಲಾರಂಭಿಸಿದವು.

## ೧೬. ಸಾಹಿತ್ಯದ ನೂತನ ಆವಿಷ್ಕಾರ

ಸ್ವಾತಂತ್ರ್ಯಪ್ರಭೆ ಪರ್ಯಾಯವಾಗಿ ಸಾಹಿತ್ಯಲೋಕದ ಮೇಲೂ ತನ್ನ ಬೆಳಕು ಬಿತ್ತಲಾರಂಭಿಸಿತು.

### (ಅ) ಕಾದಂಬರಿ

ಈ ಕಾಲದ ಸಾಹಿತ್ಯವನ್ನು ಕಾದಂಬರಿ ಸಂಪೂರ್ಣವಾಗಿ ಕಬಳಿಸಿತು. ಮಿಕ್ಕ ಸಾಹಿತ್ಯ ಪ್ರಕಾರಗಳಲ್ಲಿ ಕಂಡುಬರದ ಉತ್ಸಾಹ, ಸಿದ್ಧಿ ಕಾದಂಬರಿಯಲ್ಲಿ ಕಂಡುಬಂದಿತು. ಕಾರಂತ, ಅ.ನ.ಕೃ. ಅವರ ಲೇಖನಿ ಬಿಡುವಿಲ್ಲದೆ ಕಾದಂಬರಿಗಳನ್ನು ಸೃಷ್ಟಿಸಿತು. ತ.ರಾ.ಸು., ಬಸವರಾಜ ಕಟ್ಟೀಮನಿ, ಇನಾಂದಾರ್, ಕೃಷ್ಣಮೂರ್ತಿ ಪುರಾಣಿಕ, ಮಿರ್ಜಿ ಅಣ್ಣಾರಾಯ, ನಿರಂಜನ, ತ್ರಿವೇಣಿ, ಅನುಪಮಾ, ಉಷಾದೇವಿ, ವ್ಯಾಸರಾಯ ಬಲ್ಲಾಳ, ರಾಮಮೂರ್ತಿ, ಕೆ. ವಿ. ಅಯ್ಯರ್, ಕುಲಕರ್ಣಿ ಬಿಂದುಮಾಧವ, ಸೀತಾರಾಮಶಾಸ್ತ್ರಿ, ಕುವೆಂಪು, ಮಾಸ್ತಿ, ದೇವುಡು, ಬೀಚಿ ಮೊದಲಾದ ಲೇಖಕರು ಕಾದಂಬರಿಯ ಬೆಳೆಯನ್ನು ಹೆಚ್ಚಿಸುತ್ತ ಬಂದರು.

ವಾಹಿನಿ ಪ್ರಕಾಶನ ಸಂಸ್ಥೆಯವರು ೧೯೫೩ರಲ್ಲಿ ಆರಂಭಿಸಿದ ಸುಲಭ ಬೆಲೆಯ ಕೈಹೊತ್ತಗೆಗಳು ಕಾದಂಬರಿಯ ಬೆಳೆಗೆ ವಿಶೇಷ ಇಂಬನ್ನಿತ್ತಿತು.

ಇವರ ಮೊದಲನೆಯ ಪ್ರಕಟನೆ 'ಗೃಹಲಕ್ಷ್ಮಿ'ಗೆ ಸಿಕ್ಕಿದ ಅಭೂತಪೂರ್ವ ಪ್ರೋತ್ಸಾಹ ಹಲವು ಪ್ರಕಾಶಕರ ಸಾಹಸೋದ್ಯಮಕ್ಕೆ ಅಸ್ತಿಭಾರ ಹಾಕಿತು.

## (ಆ) ಸಣ್ಣ ಕಥೆ

ನವೋದಯ ಸಾಹಿತ್ಯ ಕಾಲದೊಂದಿಗೆ ಕನ್ನಡದ ಸಣ್ಣ ಕಥೆಗಳು ಹೇಳ ಹೆಸರಿಲ್ಲವಾಯಿತೆಂದರೆ ತಪ್ಪಾಗಲಿಕ್ಕಿಲ್ಲ. ಆ ಕಾಲದಲ್ಲಿ ಸಣ್ಣ ಕಥೆಗಳ ಸೌಧ ಕಟ್ಟಿದ ಶ್ರೀನಿವಾಸ, ಆನಂದ, ಅ.ನ.ಕೃ., ರಾಜರತ್ನಂ, ಬೆಟಗೇರಿ ಮೊದಲಾದ ಲೇಖಕರು ಸಣ್ಣ ಕಥೆಯನ್ನು ಕಡೆಗಾಣಿಸುತ್ತ ಬಂದರು. ಮಾಸ ಪತ್ರಿಕೆಗಳಿಗೆ ಬರೆಯುತ್ತಿದ್ದ ಹೊಸ ಲೇಖಕರು ಆ ಮಟ್ಟಕ್ಕೆ ಬರಲಿಲ್ಲ. ಒಂದು ಕಾಲದಲ್ಲಿ ವಿಶೇಷ ವೈಭವದಿಂದ ವರ್ಧಿಸಿದ ಈ ಸಾಹಿತ್ಯ ಪ್ರಕಾರ ಕನ್ನಡ ಸಾಹಿತ್ಯಲೋಕದಿಂದ ಅಳಿಸಿಹೋಗದಂತೆ ದೇವರಾಯ, ಅಶ್ವತ್ಥ, ರಮಾನಂದ ಘಾಟೆ, ಉಷಾದೇವಿ ಮೊದಲಾದ ಲೇಖಕರು ಪ್ರಯತ್ನಿಸುತ್ತಿದ್ದಾರೆ.

## (ಇ) ಕಾವ್ಯ

ಕಾವ್ಯ ಸಾಹಿತ್ಯಕ್ಕೆ ಕನ್ನಡದಲ್ಲಿ ಹೆಚ್ಚು ಪ್ರೋತ್ಸಾಹವಿಲ್ಲದಿದ್ದರೂ ಅದರ ಬೆಳೆ ಅವ್ಯಾಹತವಾಗಿ ಸಾಗಿತು. ಬೇಂದ್ರೆ, ಕುವೆಂಪು, ಗೋಕಾಕ, ಪು. ತಿ. ನರಸಿಂಹಾಚಾರ್ಯರು ಈ ವೃಕ್ಷಕ್ಕೆ ಸತತವಾಗಿ ನೀರೆರೆಯುತ್ತ ಬಂದರು. ನವ್ಯಕಾವ್ಯ ಪಂಥವೊಂದು ಆರಂಭವಾಗಿ ಗೋಪಾಲಕೃಷ್ಣ ಅಡಿಗ, ರಾಮಚಂದ್ರ ಶರ್ಮ, ಚನ್ನವೀರ ಕಣವಿ, ಜಯದೇವಿಬಾಯಿ ಮೊದಲಾದ ಕಿರಿಯ ಕವಿಗಳನ್ನು ಬೆಳಕಿಗೆ ತಂದಿತು.

## (ಈ) ನಾಟಕ

ನಾಟಕ ಸಾಹಿತ್ಯ ರಚನೆಯಲ್ಲಿಯೂ ಹೆಚ್ಚಿನ ಪ್ರಗತಿ ಕಂಡು ಬಂದಿಲ್ಲ. ಪರ್ವತವಾಣಿ, ರಾಜಾರಾವ್, ಕ್ಷೀರಸಾಗರ, ಹಾಸ್ಯರಸಪ್ರಧಾನವಾದ ಲಘು ನಾಟಕಗಳನ್ನೇ ಬರೆಯುತ್ತ ಬಂದರು. ಎ. ಎಸ್. ಮೂರ್ತಿ ಕೆಲವು ಗಂಭೀರ ಸಮಸ್ಯೆಗಳನ್ನೆತ್ತಿಕೊಂಡು ನಾಟಕಗಳನ್ನು ರಚಿಸುವ ಪ್ರಯತ್ನ ಮಾಡಿದ್ದಾರೆ. ಪ್ರದರ್ಶನ ಹಾಗೂ ಪ್ರಕಟನಾನುಕೂಲ ಒದಗುವವರೆಗೆ ನಾಟಕ ಸಾಹಿತ್ಯ ಬೆಳೆಯುವುದು ಕಠಿಣವಾಗಿದೆ.

## (ಉ) ಜೀವನ ಚರಿತ್ರೆ, ಆತ್ಮಕಥೆ

ಜೀವನ ಚರಿತ್ರೆಗಳ ಬೆಳೆ ಹುಲುಸಾಗಿದ್ದರೂ ಅವು ಗುಂಡಪ್ಪನವರು, ಕೆ. ವಿ. ಪುಟ್ಟಪ್ಪ, ಸಿ. ಕೆ. ವೆಂಕಟರಾಮಯ್ಯ, ರಾಜರತ್ನಂ, ಅ.ನ.ಕೃ. ಇವರ ಪ್ರಯತ್ನಗಳಿಗೆ ಸರಿದೊರೆಯಾಗಿಲ್ಲ. ಕೇವಲ ಪಠ್ಯಪುಸ್ತಕ ಸಮಿತಿಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಬರೆಯಲ್ಪಡುತ್ತಿರುವ ಜೀವನ ಚರಿತ್ರೆಗಳಲ್ಲಿ ವಿಷಯ ಸಂಗ್ರಹವಾಗಲಿ, ಕಲಾದಕ್ಷತೆಯಾಗಲಿ, ಪಾತ್ರಸ್ಫುಟತೆಯಾಗಲಿ ಕಂಡು ಬರುತ್ತಿಲ್ಲ.

ಕಾರಂತರು, ಜಿ. ಪಿ. ರಾಜರತ್ನಂ ತಮ್ಮ ಕೆಲವು ವರ್ಷಗಳ ಅನುಭವ ಗಳನ್ನು ಬರೆದ ಮೇಲೆ ಯಾರೂ ಆ ರಂಗದಲ್ಲಿ ಕೃಷಿಮಾಡಲಿಲ್ಲ. ಈಚೆಗೆ ನವರತ್ನ ರಾಮರಾಯರು ತಮ್ಮ 'ಕೆಲವು ನೆನಪುಗಳು' ಬರೆದು ಈ ಕೊರತೆಯನ್ನು ತಕ್ಕ ಮಟ್ಟಿಗೆ ಹೋಗಲಾಡಿಸಿದರು. ರಾಮರಾಯರ ಗ್ರಂಥ ಒಬ್ಬ ಸುಸಂಸ್ಕೃತ ಜೀವಿಯ ಜೀವನಯಾತ್ರೆಯ ವರ್ಣನೆಯಾಗಿರುವುದಲ್ಲದೆ ಅರ್ಧ ಶತಮಾನದ ನಮ್ಮ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜೀವನದ ರನ್ನಗನ್ನಡಿ ಯಾಗಿದೆ.

ಕರ್ನಾಟಕ ಸಂಗೀತದ ಆಚಾರ್ಯಪುರುಷರಾದ ವಾಸುದೇವಾಚಾರ್ಯರು ತಮ್ಮ ಸಂಗೀತ ನೆನಪುಗಳನ್ನೂ, ಸಮಕಾಲೀನ ಸಂಗೀತ ವಿದ್ವಾಂಸರ ಕೆಲವು ಸ್ವಾರಸ್ಯ ಸಂಗತಿಗಳನ್ನೂ ವಿವರಿಸುವ 'ನಾ ಕಂಡ ಕಲಾವಿದರು' ಗ್ರಂಥ ಬರೆದು ಈ ಬಗೆಯ ಸಾಹಿತ್ಯದ ಕೊರತೆಯನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿದ್ದಾರೆ.

### (ಊ) ಅನುವಾದ

ಕನ್ನಡದಲ್ಲಿ ಅನುವಾದ ಸಾಹಿತ್ಯಕ್ಕೆ ಯಾವ ಕೊರತೆಯಿಲ್ಲದಿದ್ದರೂ ಮೂಲ ಲೇಖಕನ ಕೃತಿಗೆ ಅಪಚಾರವೆಸಗದಿರುವ ಕೃತಿಗಳು ವಿರಳ. ಶರತ್‌ಚಂದ್ರ ಚಟ್ಟೋಪಾಧ್ಯಾಯ, ರವೀಂದ್ರನಾಥರ ಹಲವು ಕೃತಿಗಳು ಕನ್ನಡಕ್ಕೆ ಅನುವಾದ ವಾಗಿದ್ದರೂ ಅವು ಮೂಲ ಲೇಖಕರ ಬಗ್ಗೆ ಹೆಚ್ಚು ಆದರ ಹುಟ್ಟಿಸುವಂತಿಲ್ಲ.

ಡಿ. ವಿ. ಗುಂಡಪ್ಪನವರ 'ಈಶಾವಾಸ್ಯ', 'ಪುರುಷಸೂಕ್ತ', ಡಾ. ಕೃಷ್ಣ ಮೂರ್ತಿಯವರ 'ಧ್ವನ್ಯಾಲೋಕ' ಕನ್ನಡಕ್ಕೆ ವಿಶೇಷ ಗೌರವ ತಂದಿರುವ ಅನು ವಾದ ಗ್ರಂಥಗಳಾಗಿವೆ.

### (ಎ) ಪ್ರಬಂಧ

ಕನ್ನಡಕ್ಕೆ ಹೊಸದಾದ ಪ್ರಬಂಧ ಸಾಹಿತ್ಯ ಈ ಎರಡು ದಶಕಗಳಲ್ಲಿ ವಿಪುಲವಾಗಿ ಬೆಳೆದಿದೆ. ನವೋದಯ ಸಾಹಿತ್ಯ ಕಾಲದಲ್ಲಿಯೇ ಪಂಜೆ ಮಂಗೇಶ ರಾಯರು, ಪ್ರೊ. ಅ. ತು. ಸಾಸನೂರವರು, ತಿ. ತಾ. ಶರ್ಮರು ಕೆಲವು ಪ್ರಯೋಗಗಳನ್ನು ನಡೆಸಿದರು. ಆದರೆ ಈ ಸಾಹಿತ್ಯ ಪ್ರಕಾರವನ್ನು ಮೇಲ್ಮಟ್ಟಕ್ಕೆ ಒಯ್ದು ವಿಚಾರ ವಿಹಾರಗಳೆರಡನ್ನೂ ಸಮನ್ವಯಗೊಳಿಸಿದ ಕೀರ್ತಿ ಎಸ್. ವಿ. ರಂಗಣ್ಣ, ಎ. ಎನ್. ಮೂರ್ತಿರಾವ್, ವಿ. ಸೀತಾರಾಮಯ್ಯ ಅವರಿಗೆ ಸೇರಬೇಕು.

### (ಏ) ಹರಟೆ

ಕನ್ನಡದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತಿಳಿಹಾಸ್ಯ ಸಾಹಿತ್ಯ ಬೆಳೆಯುವುದಕ್ಕೆ ಕೈಲಾಸಂ ಸ್ಫೂರ್ತಿಯೇ ಮೂಲಕಾರಣ. ಹುಟ್ಟಾ ಹರಟೆಮಲ್ಲ ಕೈಲಾಸಂ ಅವರ 'ತಾವರೆಕೆರೆ' ಯಲ್ಲಿ ಹಾಸ್ಯ ಗಂಗಾಪ್ರವಾಹದಂತೆ ಹರಿದಿದೆ. ತರುವಾಯ ಬೇಂದ್ರೆ, ಅ. ನ. ಕೃ., ನಾಡಿಗೇರ, ಬೀಚಿ, ಗದಗ್‌ಕರ್, ರಾ.ಶಿ., ಕಸ್ತೂರಿ,

ನಾಡಿಗೇರ ಗೋವಿಂದ, ಕುಡ್ವಿ ವಾಸುದೇವ ಶೆಣೈ, ಕಾರಂತ, ಬುಳ್ಳ ಮೊದಲಾದ ಲೇಖಕರು ಹರಟೆಗಳ ವಿಶೇಷ ಬೆಳೆಗೆ ಕಾರಣರಾದರು.

### (ಐ) ಇತರ ಗ್ರಂಥಗಳು

ಕುವೆಂಪು ಅವರ 'ರಾಮಾಯಣ ದರ್ಶನ'; ಎ. ಆರ್. ಕೃಷ್ಣಶಾಸ್ತ್ರಿಗಳವರ 'ಮಹಾಭಾರತ ಸಂಗ್ರಹ'; ಡಾ. ನರಸಿಂಹಯ್ಯನವರ 'ವೈಜ್ಞಾನಿಕ ಗ್ರಂಥಗಳು'; ರಂ. ಶ್ರೀ ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ'; ಡಾ. ಎಸ್. ಶ್ರೀಕಂಠಶಾಸ್ತ್ರಿಗಳವರ' 'ಭಾರತೀಯ ಸಂಸ್ಕೃತಿ'; ತೀ.ನಂ. ಶ್ರೀಕಂಠಯ್ಯನವರ 'ಭಾರತೀಯ ಕಾವ್ಯಮೀಮಾಂಸೆ'; ಡಿ. ವಿ. ಗುಂಡಪ್ಪನವರ 'ಸಂಸ್ಕೃತಿ'; ಮಿರ್ಜಿ ಅಣ್ಣಾರಾಯರ 'ಜೈನಧರ್ಮ'; ಅ.ನ.ಕೃ. ಅವರ 'ಸಾಹಿತ್ಯ ಮತ್ತು ಕಾಮಪ್ರಚೋದನೆ'; ಶ್ರೀ ಕೃಷ್ಣಯೋಗಿಗಳ 'ಭಗವದ್ಗೀತಾರ್ಥಸಾರ'—ಈ ದಶಕದಲ್ಲಿ ಪ್ರಕಟವಾಗಿರುವ ಉತ್ತಮ ಗ್ರಂಥಗಳು.

## ೧೭. ಕೊನೆಯ ಮಾತು

ಕನ್ನಡದಲ್ಲಿ ಈಗ ಬಂದಿರುವ ಬೆಳೆ ಇತರ ಪ್ರಾಂತ್ಯ ಸಾಹಿತ್ಯಗಳಿಗೆ ಯಾವ ರೀತಿಯಲ್ಲಿಯೂ ಕಡಿಮೆಯಿಲ್ಲದಿದ್ದರೂ ಕನ್ನಡಿಗರು ತೃಪ್ತರಾಗಿ ಕೈಕಟ್ಟಿ ಕೂಡಬಾರದು. ಬೆಳೆಯುತ್ತಿರುವ ಈ ನಾಡಿನ ಎಲ್ಲ ಆವಶ್ಯಕತೆಗಳನ್ನೂ ಪೂರೈಸಬಲ್ಲ ವಿವಿಧ ಸಾಹಿತ್ಯದ ರಚನೆಗೆ ಹೆಚ್ಚು ಮನಸ್ಸುಕೊಡಬೇಕು. ಲಲಿತ ಸಾಹಿತ್ಯದೊಂದಿಗೆ ಹೆಚ್ಚಿನ ಪ್ರಮಾಣದಲ್ಲಿ ವಿಚಾರ-ವಿಜ್ಞಾನ ಸಾಹಿತ್ಯವೂ, ವಿಮರ್ಶೆಯೂ ಬೆಳೆಯಬೇಕು. ವಿಶ್ವಸಾಹಿತ್ಯದ ಅನರ್ಘ್ಯರತ್ನಗಳನ್ನೆಲ್ಲಾ ತಂದುಕೊಂಡು ಕನ್ನಡಿಗರು ತಮ್ಮ ಭಂಡಾರ ಹೆಚ್ಚಿಸಿಕೊಳ್ಳಬೇಕಲ್ಲದೆ, ವಿಶ್ವ ಸಾಹಿತ್ಯ ಭಂಡಾರ ತುಂಬಬಲ್ಲ ರತ್ನಗಳನ್ನು ಕೊಡಲು ತಾವೂ ಸಮರ್ಥರಾಗಬೇಕು.

---

# ಕನ್ನಡ ನಾಡಿನಲ್ಲಿ ಸಹಕಾರ

ಲೇಖಕರು:

ಶ್ರೀಮಾನ್ ವ್ಹಿ. ಎಸ್. ಬಸವನಾಳ ಅವರು, ಧಾರವಾಡ.

## ೧. ಸಹಕಾರ ಸಾಧನ

ನವಭಾರತ ನಿರ್ಮಾಣಕ್ಕಾಗಿ ಜನಜೀವನದಲ್ಲಿ ನವಜೀವನವು ಸಂಚರಿಸುವಂತೆ ಮಾಡುವ ಕೆಲವು ಸಮರ್ಥ ಸಾಧನಗಳನ್ನು ಭಾರತವು ತನ್ನ ರಾಜ್ಯಘಟನೆಯಲ್ಲಿಯೇ ಮಂಡಿಸಿದೆ. ಅವುಗಳಲ್ಲಿ 'ಸಹಕಾರ'ವೂ ಒಂದು.

ನಮ್ಮ ರಾಷ್ಟ್ರೀಯ ಜೀವನದ ಪುನರ್ನಿರ್ಮಾಣಕ್ಕಾಗಿ ಜೀವನದ ಅನೇಕ ರಂಗಗಳಲ್ಲಿ ವಿವಿಧ ಪುನರ್ಘಟನೆಗಳು ಈಗ ನಡೆದಿವೆ. ಇವುಗಳಲ್ಲಿ ಆರ್ಥಿಕ ರಂಗದಲ್ಲಿ ನಡೆದಿರುವ ಪುನರ್ಘಟನೆಯು ಆ ಬಗೆಗೆ ಇರಬೇಕಾದ ಧ್ಯೇಯ ಧೋರಣೆಗಳನ್ನು ಮೂಲಭೂತವಾಗಿ ಪರಿವರ್ತಿಸಿ ಶಾಂತಿಯುತ ಮತ್ತು ಅಹಿಂಸಾತ್ಮಕ ಕ್ರಾಂತಿಯನ್ನೇ ಸಾಧಿಸಲಿದೆ. ಭಂಡವಲ ವಾದ ಮತ್ತು ಸಮಾಜ ವಾದಗಳ ನಡುವಿನ ಸುವರ್ಣ ಮಧ್ಯಮದಂತಿದ್ದ 'ಸಹಕಾರ'ವು ಭಾರತದ ಜೀವಾಳವಾದ ಗ್ರಾಮ ಜೀವನವನ್ನೇ ಪುನರುಜ್ಜೀವನಗೊಳಿಸುವ ಏಕಮೇವ ಸಮರ್ಥ ಸಾಧನವೆಂದು ಘೋಷಿಸಲಾಗಿದೆ.

ಇಂಥ ಸಹಕಾರಿ ಆಂದೋಲನದ ಹುಟ್ಟು ಬೆಳವಣಿಗೆಗಳು ಭಾರತದಾದ್ಯಂತ ಆಚೆ ವರ್ಷ ಬಹು ಸಂಭ್ರಮದಿಂದ ಆಚರಿಸಲ್ಪಟ್ಟವು. ಅದರ ಜೀವನದ ಅರ್ಧ ಶತಮಾನದ ಬಗೆಗೆ ನಡೆದ ಸುವರ್ಣ ಮಹೋತ್ಸವದವರೆಗಿನ ವೃತ್ತಾಂತವನ್ನು ಕನ್ನಡ ರಾಜ್ಯದ ಕನಸು ನನಸಾದ ಸಿಹಿ ನೆನಪಾಗಿ ಇಲ್ಲಿ ಸಂಕ್ಷಿಪ್ತವಾಗಿ ರೂಪಿಸುವದು ಬಹು ಸಮಯೋಚಿತವಾದುದೆಂದು ಬೇರೆ ಹೇಳಬೇಕಾಗಿಲ್ಲ.

ಇಂದು ಭಾರತದಲ್ಲಿ ಆಚರಣೆಯಲ್ಲಿರುವ ಸಹಕಾರಿ ಆಂದೋಲನವನ್ನು ಮತ್ತು ಮುಂದೆ ರೂಪಿಸಲ್ಪಡಲಿರುವ ಯೋಜನಾತ್ಮಕ ಸ್ವರೂಪದ ಸಹಕಾರವನ್ನು, ಅಂದು ೫೦ ವರ್ಷಗಳ ಹಿಂದೆ ಬ್ರಿಟಿಶರಿಂದ ಯೋಚಿಸಲಾದ ಸಹಕಾರದ ಸಂಗಡ ತುಲನೆಮಾಡಿದಲ್ಲಿ ಇವುಗಳಲ್ಲಿ ಯಾವ ದೊಡ್ಡ ಹೋಲಿಕೆಯನ್ನೂ ಕಾಣದಾಗಿ ಆಶ್ಚರ್ಯಪಡಬಹುದು. ಬ್ರಿಟಿಶ್ ಭಾರತ ಸರಕಾರದ ಪ್ರಾಥಮಿಕ ಆರ್ಥಿಕ ನೀತಿಯಾಗಿ, ಬಡವರಿಗೆ ಅಲ್ಪನೆರವಾಗಿ, ಸಹಕಾರವು ಭಾರತದ ಜನಜೀವನವನ್ನು ಪ್ರವೇಶಿಸಿದ್ದು ೧೯೦೪ರಲ್ಲಿ. ಮದ್ರಾಸ ಸರಕಾರದ ಪ್ರತಿನಿಧಿಯಾದ ಸರ್ ಎಫ್. ನಿಕೋಲ್‌ಸನ್ ಅವರ ವರದಿಯೇ ಮುಂದೆ ೧೯೦೪ರಲ್ಲಿ ಇಂಡಿಯಾ ಗೌರ್ನಮೆಂಟಿನ ಸಹಕಾರಿ ಪತ್ತಿನ ಸಂಘಗಳ ಕಾಯಿದೆಗೆ ಆಧಾರವಾಗಿ ಸಹಕಾರವು ಮೊದಲು ಬಾರಿಗೆ ಭಾರತದಲ್ಲೆಲ್ಲ ಜಾರಿಯಾಯಿತು.

ಭಾರತವು ಹಳ್ಳಿಗಳ ಮಹಾನಾಡು. ಹಳ್ಳಿಗಳು ಒಕ್ಕಲಿಗರ ಬೀಡು. ಒಕ್ಕಲುತನವೇ ಜನಪದ ಜೀವನದ ಜೀವಾಳ. ಅತಿವೃಷ್ಟಿಯಿಂದ ಅಥವಾ ಅನಾವೃಷ್ಟಿಯಿಂದ ಬೆಳೆಗೇಡಾಗುವದು, ಬರ ಬೀಳುವದು ಇವು ಭಾರತದಲ್ಲಿ ನಿರಂತರ ಘಟನೆಗಳಾಗಿವೆ. ಇವುಗಳ ಜೊತೆಗೆ ನಿರ್ದಯ ಸಾಹುಕಾರನ ಅತಿ ತುಟ್ಟಿಯ ಬಡ್ಡಿ ದರವು ಮತ್ತು ಘಾತಕ ಭೂಶಾಸನಗಳು ಒಕ್ಕಲು ವಂಶವನ್ನೇ ನಿರಂತರ ಕ್ಷಯಕ್ಕೆ ತುತ್ತುಮಾಡಿದುದು ಮರೆಯಲಾಗದ ಹಲವು ಶತಮಾನಗಳ ಇತಿಹಾಸವಾಗಿದೆ.

ಈ ಎಲ್ಲ ಕಾರಣಗಳಿಂದ ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು, ಸಾಲಗಾರನಾಗಿಯೆ ಸಾವಿನ ದವಡೆಯನ್ನು ಸೇರುವ ನಮ್ಮ ಒಕ್ಕಲಿಗನ ದಾರಿದ್ರ್ಯ ದುಃಸ್ಥಿತಿಗಳ ಪರಿಹಾರವು ಅತ್ಯವಶ್ಯಕವಾಗಿದ್ದುದು ಕಂಡುಬರತೊಡಗಿದವು. ಇದಕ್ಕನುಗುಣವಾಗಿ ೧೯೦೪ರಲ್ಲಿ ಆಗಿನ ಭಾರತ ಸರಕಾರವು ಸಹಕಾರಿ ಪತ್ತಿನ ಸಂಘಗಳ ಕಾಯಿದೆಯನ್ನು ಪಾಸುಮಾಡಿತು. ಈ ಕಾಯಿದೆ ಮೇರೆಗೆ, ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯ ಕಣಗಿನಹಾಳ ಗ್ರಾಮದಲ್ಲಿ ಪ್ರಥಮ ಪತ್ತಿನ ಸಂಘವು ಸ್ಥಾಪಿಸಲ್ಪಟ್ಟಿತು. ಇಂದು ನವಭಾರತ ನಿರ್ಮಾಣಕ್ಕೆ ಸಾಧನವಾಗಿ ವಿಶ್ವವಿಖ್ಯಾತಿ ಪಡೆದ ಸಹಕಾರಿ ಆಂದೋಲನದ ಜ್ಯೇಷ್ಠ ಸಂಸ್ಥೆಗೆ ಕನ್ನಡ ಗ್ರಾಮ ವೊಂದು ಜನ್ಮಮಾತೆಯಾಗಿ, ಅತುಲ, ಅಪೂರ್ವ, ಆರ್ಥಿಕ ಪ್ರಯೋಗ ಒಂದಕ್ಕೆ ಕನ್ನಡ ರಾಜ್ಯವು ತವರು ರಾಜ್ಯವಾಗಿರುವುದಕ್ಕಾಗಿ ಯಾವ ಕನ್ನಡಿಗನ ಎದೆ ಉಬ್ಬಲಿಕ್ಕಿಲ್ಲ ?

ಸಹಕಾರಿ ಆಂದೋಲನದ ಅಂದು-ಇಂದು-ಮುಂದು ಇವುಗಳ ಕೂಲಂಕುಷ ವಿವೇಚನೆಯನ್ನು ಮಾಡುವ ಮುನ್ನ ಸಹಕಾರವೆಂದರೇನು ಎಂಬುದನ್ನು ಅರಿತು ಕೊಳ್ಳುವದು ಅತಿ ಮುಖ್ಯವಾಗಿದೆ.

## ೨. ಆರ್ಥಿಕ ಪದ್ಧತಿಗಳು

'ಬಲವಂತನೇ ಬಾಳುವನೆಂಬ' ಕಾಡು ವ್ಯವಸ್ಥೆಯನ್ನು ಮೂರೆಸೆದು, ಅದರ ಬದಲು ಈ ಹೊಸ ಯೋಜನೆಯಲ್ಲಿ ಒಂದು ಹೊಸ ತತ್ವ ನಿರೂಪಿಸಲಾಗಿದೆ. ಪರಸ್ಪರ ಸಹಾಯ ಸ್ವಾವಲಂಬನೆ ಮತ್ತು ದಕ್ಷತೆಯಿಂದ ದುರ್ಬಲರು ಕೂಡಿ ನಡೆ ದರೆ ಸಾಮಾಜಿಕ ನ್ಯಾಯ ಸಮತೆ, ಸುಖ ಶಾಂತಿಗಳ ವಿಶ್ವಸಾಮ್ರಾಜ್ಯವನ್ನು ಈ ಸಹಕಾರದಿಂದ ತಾವೇ ಕಟ್ಟಬಹುದೆಂದು ಭರವಸೆ ಇದರಲ್ಲಿ ಮಂಡಿಸಲಾಗಿದೆ. "ಪ್ರತಿಯೊಬ್ಬರೂ ಎಲ್ಲರಿಗಾಗಿ ಎಲ್ಲರೂ ಪ್ರತಿಯೊಬ್ಬರಿಗಾಗಿ" ಎಂಬ ಸೇವೈಕ ಭಾವನೆಯೇ ಭೂಲೋಕವನ್ನೂ ಕೈಲಾಸವನ್ನಾಗಿ ಮಾಡಬಲ್ಲುದೆಂಬುದೇ ಸಹ ಕಾರದಲ್ಲಿ ಮಹಾಮಂತ್ರವಾಗಿದೆ.

ಈ ಆರ್ಥಿಕ ಪ್ರಪಂಚದಲ್ಲಿ ಎರಡು ಮಹತ್ವದ ಆರ್ಥಿಕ ಪದ್ಧತಿಗಳ ನಡುವೆ ಈಗ ಘನ ಹೋರಾಟ ನಡೆದಿದೆ. ಒಂದು ಭಂಡವಲ ವಾದ; ಇನ್ನೊಂದು ಸಮಾಜ ವಾದ. ಇವು ಪರಸ್ಪರ ವಿರೋಧಿಗಳಾಗಿದ್ದರೂ ಇವುಗಳಲ್ಲಿ ಸಾಮಾನ್ಯವಾದ ಕೆಲವು ವಿಘಾತಕ ಅಂಶಗಳೂ ಎದ್ದು ಕಾಣವವು; ಅನೇಕ ಸಾಮಾಜಿಕ ದೋಷ

ಗಳೂ ಎದ್ದು ಕಾಣುವವು. ಮುಖ್ಯವಾಗಿ ಲಾಭ ಮತ್ತು ಸ್ಪರ್ಧೆಗಳ ಮೇಲೆ ಅವಲಂಬಿಸಿದ ಈ ಪದ್ಧತಿಗಳು ಸಮಾನತೆಯನ್ನೂ, ಮಾನವ ವ್ಯಕ್ತಿತ್ವವನ್ನೂ ಪೂರ್ಣ ನಾಶಮಾಡಬಲ್ಲವು. ಪ್ರಪಂಚದ ಇಂದಿನ ಅನುಭವವು ಇದನ್ನೆ ಬೆರಳುಮಾಡಿ ತೋರಿಸುತ್ತಿದೆ.

ಸಹಕಾರವು ಈ ಎರಡು ವಿಶಿಷ್ಟ ಪದ್ಧತಿಗಳ ನಡುವಿನ ಮಾರ್ಗವಾಗಿದೆ. ಅದು ಮಾನವ ವ್ಯಕ್ತಿತ್ವವನ್ನು ಮತ್ತು ವೈಯಕ್ತಿಕ ಒಡೆತನವನ್ನೂ ಉಳಿಸಿ ಉತ್ಪಾದನೆಯಲ್ಲಿ ಮತ್ತು ಅದರ ವಿತರಣೆಯಲ್ಲಿ ಭಂಡವಲಕ್ಕೆ ಮತ್ತು ಶ್ರಮಕ್ಕೆ ಸಮಾನವಾದ ಬೆಲೆಯನ್ನು ಕೊಟ್ಟು, ಲಾಭವನ್ನು ಎಲ್ಲರಲ್ಲಿಯೂ ನ್ಯಾಯವಾಗಿ ಹಂಚುವ ಸುವರ್ಣಯುಗದ "ಸುವರ್ಣ ಮಧ್ಯಮ."

ಇದರಿಂದ ಮಾನವ ಶೋಷಣೆಯನ್ನೂ, ದಲ್ಲಾಲಿಗಳ ಲಾಭ ಬಡಕತನವನ್ನೂ ಹೊಡೆದೋಡಿಸಿ, ಬಡತನ, ನಿರಾಶೆ, ಆರ್ಥಿಕ ವಿಷಮತೆಗಳನ್ನು ನಿವಾರಿಸಿ, ಮಾನವನ ಮಧುರ ಮಿಲನವನ್ನೂ ಸಮಾನತೆಯನ್ನೂ ನೆಲೆಗೊಳಿಸಬಹುದು. ಈ ಆಶಾಂಕುರಕ್ಕೆ ಬೆಳೆಯಲು ವಿಶೇಷಾನುಕೂಲತೆಗಳು ಈಗಲಾದರೂ ಸಿಕ್ಕಿದುದು ಸುದೈವವಲ್ಲವೆ?

ಇಂಥ ಸಹಕಾರವು ಭಾರತದಲ್ಲಿ ಸಾಗಿಬಂದು ೫೦ ವರ್ಷಕ್ಕೂ ಮಿಕ್ಕಿ ಹೋದವು. ಈ ಅವಧಿಯಲ್ಲಿ ಸಹಕಾರಿ ಆಂದೋಲನದ ಫಲಶೃತಿ ಏನು? ಆಗುಹೋಗುಗಳೇನು? ಈ ಅಂದೋಲನದ ಸುಪ್ತಶಕ್ತಿ ಯಾವದು? ಅದರ ಭವಿತವ್ಯವು ಏನು?—ಇವೆಲ್ಲವುಗಳನ್ನೂ ಇಲ್ಲಿ ಪರಿಶೀಲಿಸುವದು ಸಮಂಜಸವಾಗುವದು.

## ೩. ಒಕ್ಕಲುತನ ಮತ್ತು ಹಣದ ಸಹಕಾರ

ಒಕ್ಕಲುತನದಲ್ಲಿ ಒಕ್ಕಲಿಗನಿಗೆ ಹಣದ ಅವಶ್ಯಕತೆಯೇ ಅತಿ ಮುಖ್ಯವಾದುದು. ಆದ್ದರಿಂದ ಸಹಕಾರದ ಕಾರ್ಯಕಲಾಪಗಳ ಈವರೆಗಿನ ವೃತ್ತಾಂತವನ್ನು ಆದ್ಯಂತ ನೋಡುವಾಗ, ಪ್ರಥಮತಃ ಪತ್ತಿನ ಸಂಘಗಳಿಂದ ಪ್ರಾರಂಭಿಸುವುದು ಕ್ರಮಪ್ರಾಪ್ತವಾದುದು ಮತ್ತು ಸಮಯೋಚಿತವಾದುದು.

ಅಖಿಲ ಭಾರತದಲ್ಲಿ ಇಂಥ ಪತ್ತಿನ ಮತ್ತು ವಿವಿಧ ಉದ್ದೇಶಗಳ ಸಂಸ್ಥೆಗಳನ್ನೆಲ್ಲ ಕೂಡಿಸಿ ೧೯೫೬-೫೭ರ ಕೊನೆಗೆ ೧,೬೪,೮೧೯ ಸಂಘಗಳಿದ್ದವು.

ಅಖಿಲ ಭಾರತ ಸಹಕಾರಿ ಯೋಜನಾ ಸಮಿತಿಯವರು ನೂರಕ್ಕೆ ೫೦ರಷ್ಟು ಹಳ್ಳಿಗಳು ಮತ್ತು ನೂರಕ್ಕೆ ೩೦ ರಷ್ಟು ಜನಸಂಖ್ಯೆ ಸಹಕಾರಿ ತಕ್ಷೆಯಲ್ಲಿ ಬರಬೇಕೆಂದು ಗುರಿಯನ್ನು ಹಾಕಿಕೊಟ್ಟಿದ್ದಾರೆ. ಆದರೆ ಮುಂಬೈ, ಕೊಡಗು ಮೊದಲಾದ ೪-೫ ರಾಜ್ಯಗಳು ನೂರಕ್ಕೆ ೫೦ಕ್ಕಿಂತ ಹೆಚ್ಚು ಹಳ್ಳಿಗಳನ್ನು ಸಹಕಾರದ ತಕ್ಷೆಯಲ್ಲಿ ತಂದಿವೆ. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಈ ಗುರಿಯನ್ನು ಬಹು ಕಾಲದ ಹಿಂದೆಯೇ ಮುಟ್ಟಲಾಗಿದೆ.

ಸಂಘಗಳ ದುಡಿಯುವ ಭಂಡವಲದ ಮೊತ್ತವನ್ನು ತೆಗೆದುಕೊಂಡು, ಆ ಸಂಘಗಳ ಆರ್ಥಿಕ ಸ್ಥಿತಿಗಳನ್ನೂ ಮತ್ತು ವಿಸ್ತಾರವನ್ನೂ ನೋಡುವದೊಂದು ವಿಧ

ವಾದ ಉಪಯುಕ್ತ ಪರೀಕ್ಷೆ. ಆ ದೃಷ್ಟಿಯಿಂದ ಭಾರತದಲ್ಲೆಲ್ಲ ಒಂದೊಂದು ರಾಜ್ಯದಲ್ಲಿ ಒಂದೊಂದು ಸಂಘದ ದುಡಿಯುವ ಭಂಡವಲವನ್ನೂ, ಒಬ್ಬೊಬ್ಬ ಸದಸ್ಯನಿಗೆ ಕೊಡುವ ಸಾಲವನ್ನೂ ನೋಡಿದರೆ ಬಹಳ ಸ್ವಾರಸ್ಯವಾದ ಸಂಗತಿಗಳು ಹೊರಹೊಮ್ಮುತ್ತವೆ.

ಯಾವದೇ ರಾಜ್ಯದ ಒಂದು ಸಂಘದ ಸರಾಸರಿ ಪರಮಾವಧಿ ದುಡಿಯುವ ಭಂಡವಲವನ್ನು ತೆಗೆದುಕೊಂಡರೆ ೧೯೫೩-೫೪ಕ್ಕೆ ಪುನಃ ಮುಂಬೈ ರಾಜ್ಯಕ್ಕೆ ಪ್ರಥಮ ಸ್ಥಾನದೊರೆಯುವದು. ಅಲ್ಲಿಯ ಸಂಘದ ಸರಾಸರಿ ದುಡಿಯುವ ಭಂಡವಲು ೧೪,೬೦೦ ಲಕ್ಷ ರೂಪಾಯಿಗಳಿರುವದು. ಮುಂಬೈ ರಾಜ್ಯಕ್ಕಿಂತ ಸರಾಸರಿ ಭಂಡವಲದಲ್ಲಿ ರೂ. ೩,೭೧೪ರಿಂದ ಕಡಿಮೆಯಿದ್ದರೂ, ಈ ವಿಷಯದಲ್ಲಿ ಚಿಕ್ಕ ಕೊಡಗಿಗೆ ದ್ವಿತೀಯ ಗಣ್ಯಸ್ಥಾನ ಸಿಗುವದು. ಮುಂಬೈ ರಾಜ್ಯದಲ್ಲಿಯೇ ಉತ್ತರ ಕರ್ನಾಟಕದ ಸ್ಥಾನ ಉನ್ನತಸ್ಥಾನ. ಮೈಸೂರು ರಾಜ್ಯದಲ್ಲಿ ಸಂಘದ ಸರಾಸರಿ ದುಡಿಯುವ ಭಂಡವಲು ಕೇವಲ ೩,೮೧೯ ರೂಪಾಯಿಗಳಿದ್ದುದು ವಿಚಾರಾರ್ಹವಾದುದು. ಆಂಧ್ರದ ಸರಾಸರಿ ೯,೧೫೦ ರೂಪಾಯಿಗಳು; ಹೈದರಾಬಾದದ ಸರಾಸರಿ ೩,೧೧೩ ರೂಪಾಯಿಗಳು.

ಇನ್ನೊಂದು ದೃಷ್ಟಿಯಿಂದ ನೋಡಿದರೆ ಭಾರತದಲ್ಲಿಯೇ ಸದಸ್ಯ ಸಾಲಗಾರನಾದ ಪ್ರತಿಯೊಬ್ಬ ಒಕ್ಕಲಿಗನಿಗೆ ಹೆಚ್ಚಿನ ಸಾಲ ಕೊಡುವ ರಾಜ್ಯಗಳೆಂದರೆ ಮೊದಲನೆಯದು ಮುಂಬೈ. ಅನಂತರ ನಮ್ಮ ನೂತನ ರಾಜ್ಯದಲ್ಲಿ ಎರಡನೆಯದು ಹೈದರಾಬಾದು. ಮೂರನೆಯದು ಆಂಧ್ರ. ನಾಲ್ಕನೆಯದು ಕೊಡಗು. ಐದನೆಯದು ಮೈಸೂರು. ಅವುಗಳ ಪ್ರತಿಯೊಬ್ಬ ಸದಸ್ಯನ ಸಾಲದ ಸರಾಸರಿ ಅನುಕ್ರಮವಾಗಿ ೧೭೫ ರೂ., ೧೦೭ ರೂ., ೧೦೪ ರೂ., ೮೮ ರೂ., ಮತ್ತು ೫೯ ರೂ. ಇರುತ್ತದೆ. ಉತ್ತರ ಕರ್ನಾಟಕದಲ್ಲಿ ಮಾತ್ರ ಸರಾಸರಿ ೩೧೮ ರೂ. ಗಳನ್ನು ಸಾಲವಾಗಿ ಕೊಡಲಾಗಲಿದೆ.

ಒಂದೊಂದು ರಾಜ್ಯದಲ್ಲಿ ಸಂಘದಿಂದ ಕೊಟ್ಟ ಒಟ್ಟು ಸಾಲದ ಸರಾಸರಿ ೧೯೫೪ರಲ್ಲಿ ಮುಂಬೈರಾಜ್ಯದಲ್ಲಿ ೯,೩೪೬ ರೂಪಾಯಿ, ಕೊಡಗು ೫,೭೧೧ ರೂಪಾಯಿ. ಇವೇ ರಾಜ್ಯಗಳು ಈ ವಿಷಯದಲ್ಲಿಯೂ ಪುನಃ ಪ್ರಥಮ ಮತ್ತು ದ್ವಿತೀಯ ಶ್ರೇಣಿಯಲ್ಲಿರುವುವು.

ಇನ್ನು ಸಂಘಗಳಿಂದ ಕೊಡುವ ಸಾಲಕ್ಕೆ ಆಕರಿಸುವ ಬಡ್ಡಿಯ ದರವನ್ನು ನೋಡಿದರೆ ಪುನಃ ಮುಂಬೈ ರಾಜ್ಯಕ್ಕೆ ಗಣ್ಯಸ್ಥಾನ ಸಿಗುವದು. ಇದರಲ್ಲಿಯೂ ಉತ್ತರ ಕರ್ನಾಟಕಕ್ಕೆ ಅತ್ಯುನ್ನತ ಸ್ಥಾನವಿದೆ. ಇಲ್ಲಿ ಸಂಘದಲ್ಲಿ ಒಕ್ಕಲಿಗನಿಗೆ ನೂರಕ್ಕೆ ೬ ೧/೪ ರಿಂದ ೭ ೧೩/೧೬ ರೂಪಾಯಿಗಳವರೆಗಿನ ಬಡ್ಡಿಯ ದರದಿಂದ ಸಾಲ ಸಿಗುವದು. ಕೃಷಿವರ್ಗಕ್ಕೆ ಶೋಷಣೆಯನ್ನು ತಪ್ಪಿಸಿದುದರಲ್ಲಿ ಇದೊಂದು ಹೆಚ್ಚಿನ ಸೇವೆ. ಈ ದಿಶೆಯಲ್ಲಿ ರಿಝರ್ವ್ ಬ್ಯಾಂಕಿನ ನಿಧಿಯು ಬಹಳ ಉಪಯುಕ್ತವಾಗಿ ಉತ್ತಮ ಸೇವೆ ಸಲ್ಲಿಸಲು ನೆರವಾದುದನ್ನು ಮರೆಯುವಂತಿಲ್ಲ. ಇನ್ನು ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳ ಅಂಕೆ ಅಂಶಗಳನ್ನು ನೋಡಿದರೆ ಭಾರತದಲ್ಲಿ ಅವುಗಳು ಈ ಕೆಳಗಿನಂತೆ ಇರುವದು ಕಂಡುಬರುವದು :—

ಒಟ್ಟು ೪೯ ಜಿಲ್ಲಾ ಬ್ಯಾಂಕುಗಳಿದ್ದು ಇವುಗಳಲ್ಲಿ ಒಟ್ಟು ೧,೧೮,೪೦೭ ವ್ಯಕ್ತಿ ಶೇರುದಾರರೂ, ೧,೧೨,೯೧೨ ಸದಸ್ಯ ಸಂಘ ಸಂಸ್ಥೆಗಳೂ ಕೂಡಿ ೨,೩೧,೩೧೮ ಸದಸ್ಯರಿರುವರು. ಇವುಗಳ ಒಟ್ಟು ದುಡಿಯುವ ಭಂಡವಲು ೬೦೧೧·೪೦ ಲಕ್ಷ ಇರುವದು. ೧೯೫೪ರ ಕೊನೆಗೆ ಒಟ್ಟು ವ್ಯಕ್ತಿಗಳ ಮೇಲೆ ೩೧೮·೯೮ ಲಕ್ಷ ಸಾಲ ಮತ್ತು ಸಂಘ ಸಂಸ್ಥೆಗಳ ಮೇಲೆ ೩೫೦೩·೯೪ ಲಕ್ಷ ಸಾಲ ಬಾಕಿ ಇದ್ದು ೧೦೦ಕ್ಕೆ ೧೭·೪ ಕಟ್ಟು ಬಾಕಿಯಾಗಿ ನಿಂತ ಸಾಲವಾಗಿತ್ತು. ಬ್ಯಾಂಕುಗಳನ್ನು ಬಲ ಪಡಿಸುವ ಕಾರ್ಯನೀತಿಯ ಪರಿಣಾಮವಾಗಿ ಜಿಲ್ಲಾ ಬ್ಯಾಂಕುಗಳ ಸಂಖ್ಯೆ ಕೆಲ ಮಟ್ಟಿಗೆ ಕಡಿಮೆಯಾಗಿದ್ದರೂ ಬ್ಯಾಂಕುಗಳ ಸದಸ್ಯರ ಸಂಖ್ಯೆಯಲ್ಲಿ ವ್ಯಕ್ತಿಗಳು ಕಡಿಮೆಯಾಗಿ, ಸದಸ್ಯ ಸಂಘಗಳು ಹೆಚ್ಚಾಗಿ, ಒಟ್ಟನಲ್ಲಿ ಸದಸ್ಯತ್ವ ಹೆಚ್ಚಾಗಿರುತ್ತದಲ್ಲದೆ, ವ್ಯಕ್ತಿ ಪ್ರಭಾವ ಕಡಿಮೆಯಾಗುತ್ತಿರುವದು ಬಹು ಶುಭಪ್ರದವಾದುದೆಂದು ಎಲ್ಲರೂ ಒಪ್ಪಬಹುದಾದ ಮಾತು.

ಬ್ಯಾಂಕುಗಳ ಶೇರು ಭಂಡವಲದಲ್ಲಿ ಸಂಘಗಳ ಶೇರು ಭಂಡವಲವು ವ್ಯಕ್ತಿ ಭಂಡವಲದಕ್ಕಿಂತ ಅಧಿಕವಾಗಿರುವ ಅಂಶವು ಸಮಾಧಾನಕಾರಕವಿದ್ದರೆ, ಈ ಬ್ಯಾಂಕುಗಳ ಕಾಯ್ದಿಟ್ಟ ನಿಧಿ (Reserve) ಇನ್ನೂ ಸಾಕಷ್ಟು ಬೆಳೆಯದೆ ಇದ್ದುದು ಅಸಮಾಧಾನಕಾರಕವಾದುದು. ಮುಂಬೈ ಮತ್ತು ಮದ್ರಾಸು ರಾಜ್ಯಗಳಲ್ಲಿ ಒಂದು ಬ್ಯಾಂಕಿನ ಸರಾಸರಿ ನಿಧಿ ೧೮೦ ಲಕ್ಷ, ೯೯ ಲಕ್ಷವಿದ್ದಾಗ ಇನ್ನುಳಿದ ಅನೇಕ ರಾಜ್ಯಗಳಲ್ಲಿ ಈ ಸರಾಸರಿ ೫೦ ಸಾವಿರದ ಕೆಳಗೆ ಇರುವದು ವಿಷಾದಕರವಾದುದು.

ಸ್ವಂತ ಭಂಡವಲದ ಮತ್ತು ಠೇವಣಾತಿಗಳ (Deposits) ಮತ್ತು ಉಳಿತಾಯಗಳ (Savings) ಬೆಳೆವಣಿಗೆಯ ದೃಷ್ಟಿಯಿಂದ ಈ ಜಿಲ್ಲಾ ಬ್ಯಾಂಕುಗಳನ್ನು ನೋಡಿದಲ್ಲಿ ಮುಂಬೈ ಮತ್ತು ಮದ್ರಾಸು ರಾಜ್ಯಗಳೇ ಮುಂಚೂಣಿಯಲ್ಲುಳಿಯುವವು. ಈ ರಾಜ್ಯಗಳ ಈ ಯಶಸ್ಸು ಇನ್ನುಳಿದ ರಾಜ್ಯಗಳಿಗೆ ಮಾರ್ಗದರ್ಶನವಾಗುವಂಥವುಗಳಿವೆ. ಮುಂಬೈ ರಾಜ್ಯದಲ್ಲಿಯ ಉತ್ತರ ಕರ್ನಾಟಕದ ಬ್ಯಾಂಕುಗಳ ಸ್ಥಾನವು ಈ ಬಗೆಗೆ ಅತ್ಯುನ್ನತವಾದುದು.

ಅವುಗಳ ಅಂಕಿ ಸಂಖ್ಯೆಗಳು ೩೦ನೆ ಜೂನ್ ೧೯೫೫ಕ್ಕೆ ಕೆಳಗಿನಂತೆ ಇರುತ್ತವೆ.

## ಕರ್ನಾಟಕದಲ್ಲಿಯ ಮಧ್ಯವರ್ತಿ ಬ್ಯಾಂಕುಗಳು

(ಲಕ್ಷ ರೂಪಾಯಿಗಳಲ್ಲಿ)

| ಅ. ನಂ. | ಜಿಲ್ಲೆ | ಕಚೇರಿಗಳ ಸಂಖ್ಯೆ | ಸದಸ್ಯತ್ವ | | ವಸೂಲಾದ ಶೇರು ಭಂಡವಲು |
|---|---|---|---|---|---|
| | | | ಸಂಘಗಳು | ವ್ಯಕ್ತಿಗಳು | |
| ೧ | ೨ | ೩ | ೪ | ೫ | ೬ |
| ೧ | ಧಾರವಾಡ .... | ೨೯ | ೯೯೭ | ೨,೫೧೨ | ೧೬.೪೬ |
| ೨ | ಬೆಳಗಾಂವಿ .... | ೨೩ | ೮೨೩ | ೧,೮೫೧ | ೧೨.೧೭ |
| ೩ | ಬಿಜಾಪುರ .... | ೧೫ | ೬೪೮ | ೨,೦೯೩ | ೮.೦೪ |
| ೪ | ಕಾರವಾರ .... | ೩ | ೧೯೪ | ೧೭೦ | ೧.೩೫ |

(ಲಕ್ಷ ರೂಪಾಯಿಗಳಲ್ಲಿ)

| ಅ. ನಂ. | ಜಿಲ್ಲೆ | ರಿಝರ್ವ ಫಂಡು | | ಶೇವು | ಕೊಟ್ಟ ಸಾಲ | ದುಡಿಯುವ ಭಂಡವಲು |
|---|---|---|---|---|---|---|
| | | ಸ್ಟ್ಯಾಚೂಟರಿ | ಇತರ | | | |
| | | ೭ | ೮ | ೯ | ೧೦ | ೧೧ |
| ೧ | ಧಾರವಾಡ .... | ೬.೪೪ | ೪.೭೬ | ೧೬೮.೮೦ | ೧೨೮.೧೧ | ೨೦೨.೫೧ |
| ೨ | ಬೆಳಗಾಂವಿ .... | ೪.೯೦ | ೨.೭೦ | ೧೧೫.೪೫ | ೯೯.೪೯ | ೧೫೨.೭೬ |
| ೩ | ಬಿಜಾಪುರ .... | ೨.೧೬ | ೨.೩೨ | ೭೬.೨೮ | ೪೨.೨೬ | ೯೦.೮೦ |
| ೪ | ಕಾರವಾರ .... | ೦.೫೭ | ೦.೨೮ | ೮.೦೫ | ೬.೧೦ | ೧೧.೭೮ |

ಇವುಗಳು ಕೇವಲ ಕನ್ನಡ ರಾಜ್ಯಕ್ಕಲ್ಲದೆ ಭಾರತಕ್ಕೆ ಅಂಶತಃ ಪ್ರೇರಕ ಶಕ್ತಿಯನ್ನು ಕೊಡಬಲ್ಲಂಥವಲ್ಲವೇ?

ಇನ್ನು ರಾಜ್ಯಮಟ್ಟದ ಸಹಕಾರಿ ಬ್ಯಾಂಕುಗಳ (State Banks) ಬಗೆ ವಿಚಾರಿಸಬಹುದು. ಈಗೆಲ್ಲ ರಾಜ್ಯಗಳಲ್ಲಿ ಹೊಸದಾಗಿ ರಾಜ್ಯ ಮಟ್ಟದ ಬ್ಯಾಂಕು ನಿರ್ಮಿತವಾಗಿದೆ. ಇಂಥ ಬ್ಯಾಂಕುಗಳಿಗೆ ಹೆಚ್ಚಿನ ಷೇರು ಭಂಡವಲವನ್ನು ರಾಜ್ಯ ಸರಕಾರದವರೇ ಕೊಡುವ ಈ ಹೊಸ ಯೋಜನೆಯು ಕಾರ್ಯಗತವಾಗುತ್ತಿರುವುದು ಸ್ವಾಗತಾರ್ಹವಾಗಿದೆ. ಈ ಯೋಜನೆಯ ಪೂರ್ವದಲ್ಲಿಯೇ ಪ್ರಥಮತಃ ಮುಂಬೈ ರಾಜ್ಯವು ಈ ದಿಶೆಯಲ್ಲಿ ಪ್ರಯೋಗಮಾಡಿ ಯಶಸ್ವಿಯಾದುದು ಗಮನಾರ್ಹವಾದುದು. ಕರ್ನಾಟಕ ಜಿಲ್ಲೆಗಳಲ್ಲಿ ಈ ಯಶಸ್ಸು ಧಾರವಾಡ ಜಿಲ್ಲೆಗೆ ಸಿಕ್ಕಿರುವದು ಪ್ರಗತಿ ಪರವಾದ ಈ ಜಿಲ್ಲೆಗೆ ಸೋಜಿಗವಾದುದೇನೂ ಅಲ್ಲ.

ಸರಕಾರದ ಷೇರು ಭಂಡವಲು ಪಡೆವ ಭಾರತದ ಎಲ್ಲ ರಾಜ್ಯಗಳಲ್ಲಿ ಮುಂಬೈ ರಾಜ್ಯವು ೧೯೫೪ರವರೆಗೆ ೨೬ ಲಕ್ಷ ರೂಪಾಯಿಗಳು ಪಡೆದು ಪ್ರಥಮ ಸ್ಥಾನ ಸಂಪಾದಿಸಿದೆ. ಅನಂತರ ಈ ದಿಶೆಯಲ್ಲಿ ಬಹು ದೂರದಲ್ಲಿ ಮೈಸೂರು ರಾಜ್ಯವು ಕಂಡುಬರುವದು. ಅದು ೫ ಲಕ್ಷ ರೂಪಾಯಿಗಳನ್ನು ಪಡೆದಿದೆ. ಅನಂತರ ಹೈದರಾಬಾದು ರಾಜ್ಯ ೫ ಲಕ್ಷ ರೂಪಾಯಿ; ನಂತರ ಕೊಡಗು ರಾಜ್ಯ ೨·೭೫ ಲಕ್ಷ ರೂಪಾಯಿ.

ಬೆಳೆಯುತ್ತಿರುವ ದುಡ್ಡಿನ ಬೇಡಿಕೆಯನ್ನು ಪೂರೈಸಲು, ಬೆಳೆಯುತ್ತಿರುವ ಸಂಘಗಳ ಸಾಲದ ಬೇಡಿಕೆಯು ಹೆಚ್ಚಾದಾಗ, ನೂತನ ಕರ್ನಾಟಕ ರಾಜ್ಯ ಮಟ್ಟದ ಅಪೆಕ್ಸ್ (Apex) ಬ್ಯಾಂಕು ನೂತನ ಆರ್ಥಿಕ ಸಾಮರ್ಥ್ಯವನ್ನು ಒದಗಿಸಿಕೊಂಡು ಈ ದಿಶೆಯಲ್ಲಿ ಉತ್ತಮ ಸಂಪ್ರದಾಯ, ಮತ್ತು ಉನ್ನತ ಪ್ರಗತಿಗಳನ್ನು ಕಾಯ್ದುಕೊಳ್ಳುವುದು ಅತ್ಯವಶ್ಯಕವೆಂಬುದು ಅನುಭವಿಕರಿಗೆ ಸ್ಫುಟವಾಗಿ ಕಾಣುವ ವಿಷಯ.

ಇನ್ನು ಪತ್ತಿನ ಬಿನ್ ರೇತರೆ ಸಂಘಗಳ ಬಗ್ಗೆ ಕೇವಲ ವಿಹಂಗಮ ದೃಷ್ಟಿಯಿಂದ ನೋಡಿದರೂ, ಇವುಗಳ ಪ್ರಗತಿಯು ಭಾರತದಲ್ಲಿ ಸಾಮಾನ್ಯವಾಗಿ ಸಮಾಧಾನಕರವಾಗಿದೆ ಎಂದು ಹೇಳಬಹುದು. ಇವುಗಳಲ್ಲಿಯೂ ಮುಂಬೈ ಮತ್ತು ಅವಿಭಕ್ತ ಮದ್ರಾಸು ಇವೆರಡು ರಾಜ್ಯಗಳು ಕೂಡಿ ೧೯೫೪ರಲ್ಲಿ ಒಟ್ಟಿನಲ್ಲಿ ಅರ್ಧದ ಮೇಲ್ಪಟ್ಟು ಸದಸ್ಯತ್ವವನ್ನು ದುಡಿಯುವ ಭಂಡವಲವನ್ನು ಪಡೆದಿವೆ

ಎಂಬುದು ಗಮನಾರ್ಹವಾದುದು. ಈ ಸಂದರ್ಭದಲ್ಲಿ ಮೈಸೂರು ರಾಜ್ಯದ ಪ್ರಗತಿಯೂ ನೋಡತಕ್ಕಂಥದಿದೆ ಎಂದು ಹೇಳಿದರೆ ತಪ್ಪಾಗಲಾರದು.

ಇನ್ನು ದೀರ್ಘಾವಧಿ ಪತ್ತಿನ ಸಂಸ್ಥೆಗಳ ಬಗೆಗೆ ವಿಚಾರಿಸುವುದು ಉಚಿತವಾದುದು. ಇವುಗಳಿಗೆ ಭೂವತ್ತಿ ಬ್ಯಾಂಕುಗಳೆಂದು ಕರೆಯುವರು. ಇವುಗಳು ಅನೇಕ ರಾಜ್ಯಗಳಲ್ಲಿದ್ದರೂ ಈವರೆಗೆ ಕೆಲವೇ ರಾಜ್ಯಗಳಲ್ಲಿ ಮಾತ್ರ ಯಶಸ್ವಿಯಾಗಿರುವವು.

ರಿಝರ್ವ್ ಬ್ಯಾಂಕಿನ ೧೯೫೩-೫೪ರ ಅಂಕಿ ಸಂಖ್ಯೆಗಳ ವರದಿಯ ಮೇರೆಗೆ ಭಾರತದಲ್ಲಿ ಒಟ್ಟು ೧೦ ರಾಜ್ಯ ಕೇಂದ್ರ (Apex) ಭೂವತ್ತಿ ಬ್ಯಾಂಕುಗಳು ಮಾತ್ರ ಇದ್ದವು. ಅವುಗಳಿಗೆ ಒಟ್ಟು ೪೯,೭೫೩ ಸದಸ್ಯರೂ, ೧೯೨·೬೬ ಲಕ್ಷ ರೂಪಾಯಿಗಳ ದುಡಿಯುವ ಭಂಡವಲೂ ಇದ್ದವು. ಈ ಬ್ಯಾಂಕುಗಳು ಸಾಲ ಕೊಟ್ಟ ಉದ್ದೇಶಗಳಲ್ಲಿ ಹಳೇಸಾಲ ತೀರಿಸುವ ಉದ್ದೇಶವೇ ಅತಿ ಪ್ರಾಮುಖ್ಯವಾದದು; ಉತ್ಪಾದನಾ ಉದ್ದೇಶವು ಅಲ್ಪ ಪ್ರಮಾಣದಲ್ಲಿ ಮಾತ್ರ ಕಂಡುಬರುವದು.

ಭೂವತ್ತಿ ಬ್ಯಾಂಕುಗಳು ಮದ್ರಾಸು ರಾಜ್ಯದಲ್ಲಿ ಅತ್ಯಂತ ಯಶಸ್ವಿ ರೀತಿಯಲ್ಲಿ ಸಾಗಿವೆ. ಅನಂತರ ಮೈಸೂರು ರಾಜ್ಯವು ತನ್ನ ವಿಕ್ರಮವನ್ನು ಸ್ಥಾಪಿಸಿದೆ. ೧೯೫೩-೫೪ಕ್ಕೆ ಮೈಸೂರು ಭೂವತ್ತಿ ಬ್ಯಾಂಕುಗಳ ಒಟ್ಟು ದುಡಿಯುವ ಭಂಡವಲು ೧೩೪·೪೪ ಲಕ್ಷ ರೂಪಾಯಿಗಳಿದ್ದು, ಆ ವರ್ಷದಲ್ಲಿ ೧೬·೨೦ ಲಕ್ಷ ರೂಪಾಯಿಗಳ ಸಾಲ ಕೊಟ್ಟಿದೆ ಮತ್ತು ಒಟ್ಟು ೧೧೨·೨೮ ಲಕ್ಷ ರೂಪಾಯಿಗಳ ಸಾಲಬಾಕಿ ಉಳಿದಿದೆ.

## ೪. ಒಕ್ಕಲುತನ ಮತ್ತು ಮಾರಾಟದ ಸಹಕಾರ

ಈವರೆಗೆ ಪತ್ತಿನ ಸಂಘಗಳ ಕಾರ್ಯಕಲಾಪಗಳ ಸ್ಥೂಲ ವಿವರಗಳನ್ನೆಲ್ಲ ನೋಡಿದುದಾಯಿತು. ಈಗ ಮೂಲಭೂತವಾದ ಒಕ್ಕಲುತನ ಉತ್ಪಾದನೆಯ ಸಹಕಾರಿ ಚಟುವಟಿಕೆಗಳನ್ನು ನೋಡೋಣ.

ದೇಶದ ಆಹಾರ ಧಾನ್ಯ ಉತ್ಪಾದನೆಯಲ್ಲಿ ಸಹಕಾರವು ಸ್ವಾತಂತ್ರ್ಯ ಪೂರ್ವದಲ್ಲಿಯೂ, ಅನಂತರವೂ, ಬಹು ಉಜ್ವಲ ಪಾತ್ರವನ್ನಾಡಿದೆ ಎಂದು ನಾವು ಅಭಿಮಾನದಿಂದ ಹೇಳಬಹುದು. ಈ ಉತ್ಪಾದನೆಯ ಸಾಧನವಾಗಿ ಸುಧಾರಿಸಿದ ಬೀಜಗಳನ್ನು ಹಂಚುವುದು, ಮಿಶ್ರಣಗೊಬ್ಬರವನ್ನು ಪೂರೈಸುವದು, ನೀರಾವರಿ ಸೌಕರ್ಯಗಳನ್ನು ಒದಗಿಸಿಕೊಡುವದು, ಸಹಕಾರಿ ಬೇಸಾಯವನ್ನು ಆಚರಣೆಯಲ್ಲಿ ತರುವದು ಇವೇ ಮುಂತಾದ ಕಾರ್ಯಗಳು ನಡೆಯುವದಲ್ಲದೆ ಭಾವಿಗಳನ್ನು, ಕೆರೆಗಳನ್ನು ಕಡಿಯಲಿಕ್ಕೆ, ಒಕ್ಕಲತನ ಯಂತ್ರಗಳನ್ನು ಕೊಡಲಿಕ್ಕೆ, ಭೂಸುಧಾರಣೆಮಾಡಲಿಕ್ಕೆ—ಹೀಗೆ ಅನೇಕ ಉತ್ಪಾದನಾ ಚಟುವಟಿಕೆಗಳ ಸಹಾಯಾರ್ಥ ಅನೇಕ ಸಹಕಾರಿ ಸಂಘಗಳು ಬಹು ಯಶಸ್ವಿಯಾಗಿ ನಡಿಸಿವೆ.

ಮುಂಬೈ ರಾಜ್ಯದಲ್ಲಿ ೧೯೫೩-೫೪ರಲ್ಲಿ ನೀರಾವರಿಗೆ ಸಂಬಂಧಿಸಿದ ಸಂಘಗಳೇ

೩೧೩ ಇದ್ದು, ಅವುಗಳಲ್ಲಿ ೨೪,೧೯೦ ಸದಸ್ಯರಿದ್ದು, ಒಟ್ಟು ೨೫,೦೨೯ ಎಕರೆ ಭೂಮಿ ನೀರುಣ್ಣುತ್ತಿತ್ತು. ಇದಲ್ಲದೆ ಬೆಳೆಸಂರಕ್ಷಣೆ ಮತ್ತು ಬೇಲಿ (Fencing) ಸಂಘಗಳು ಮುಂಬೈ ರಾಜ್ಯದಲ್ಲಿ ವೈಶಿಷ್ಟ್ಯ ಪಡೆದವುಗಳಿವೆ.

ಇನ್ನು ಸಹಕಾರಿ ಬೇಸಾಯ ಸಂಘಗಳ ಪ್ರಗತಿಯನ್ನು ಮುಂಬೈ ರಾಜ್ಯದ ಈ ಕೆಳಗಿನ ಅಂಕಿಗಳಿಂದ ಕಾಣಬಹುದು. ಆ ರಾಜ್ಯದಲ್ಲಿ ೧೯೫೩-೫೪ರಲ್ಲಿ ಒಟ್ಟು ೨೬೪ ಬೇಸಾಯ ಸಂಘಗಳಿದ್ದುವು. ಅವುಗಳಲ್ಲಿ ೯,೩೮೪ ಸದಸ್ಯರಿದ್ದು, ಈ ಸಂಘಗಳ ಕಾರ್ಯ ಕ್ಷೇತ್ರದಲ್ಲಿ ೬೭,೯೨೭ ಎಕರೆ ಭೂಮಿ ಇತ್ತು. ಅವುಗಳಲ್ಲಿ ೩೦,೧೯೭ ಎಕರೆ ಭೂಮಿ ಸಾಗುಮಾಡಲ್ಪಟ್ಟಿದೆ. ಇವುಗಳಲ್ಲದೆ ೮೬ ಬೆಟರ್ ಫಾರ್ಮಿಂಗ್ ಸಂಘಗಳೂ ಇರುತ್ತವೆ. ಇವುಗಳ ಜೊತೆಗೆ ಅಲ್ಲಲ್ಲಿ ಹಾಲು ಹೈನದ ಸಂಘಗಳು ತಲೆದೋರುತ್ತಿರುವುವು.

ಗ್ರಾಮಾಂತರವನ್ನೆಲ್ಲ ಆವರಿಸಿ ಅತಿದೊಡ್ಡ ಪ್ರಮಾಣದಲ್ಲಿ ಕೆಲಸಮಾಡುತ್ತಿರುವ ಸಂಘಗಳಲ್ಲಿ ತನ್ನದೇ ಆದ ಒಂದು ದೀರ್ಘ ಇತಿಹಾಸವಿರುವ ಕೈಮಗ್ಗ ಉದ್ದಿಮೆಯಿಂದ ಸುಮಾರು ಒಂದು ಕೋಟಿ ಜನರ ಪೋಷಣೆಯಾಗುತ್ತದೆ ಎಂದೂ, ಅವರಲ್ಲಿ ಸುಮಾರು ೬೦ ಲಕ್ಷ ಜನರು ದುಡಿಯುವವರಿರುವರೆಂದೂ ಅಂದಾಜಿದೆ. ಇಂಥ ಉದ್ದಿಮೆಯು ಜೀವನ ಮರಣದ ಸಮಸ್ಯೆಯನ್ನು ಎದುರಿಸಿದ ಪ್ರಸಂಗದಲ್ಲಿ ಕೇಂದ್ರಸರಕಾರವು ಮುಂದೆ ಬಂದು ಲಕ್ಷಾನುಲಕ್ಷ ಜನರಿಗೆ ಉದ್ಯೋಗ ಮತ್ತು ನೆರವು ಸಿಗುವಂತೆ ಪಂಚವಾರ್ಷಿಕ ಯೋಜನೆಗಳಲ್ಲಿ ಬೃಹತ್ ಯೋಜನೆಗಳನ್ನು ಮಾಡಿಕೊಟ್ಟಿರುವದು ಬಹು ಉಚಿತವಾದುದು. ಈ ಯೋಜನೆಗಳ ಮೇರೆಗೆ ಕೈಮಗ್ಗ ಉದ್ದಿಮೆಯು ಈಗ ಸಾವಧಾನವಾಗಿ ಚೇತರಿಸಿಕೊಳ್ಳತೊಡಗಿದೆ.

ಇನ್ನುಳಿದ ಕೈಗಾರಿಕೆ-ಸಂಘಗಳ ಬಗ್ಗೆ ಸ್ಥೂಲವಾಗಿ ವಿಚಾರಿಸಿದರೆ, ತೊಗಲು ಹದಮಾಡುವವರ ಸಂಘ, ಕಾರ್ಮಿಕರ ಸಂಘ, ಅರಣ್ಯ ಕೆಲಸಗಾರರ ಸಂಘ, ಉಣ್ಣೆ ಉತ್ಪಾದಕರ ಸಂಘ, ಬಡಿಗ—ಕಮ್ಮಾರರ ಸಂಘ ಮುಂತಾದ ಇನ್ನೂ ಅನೇಕ ಸಂಘಗಳು ಕಂಡುಬರುತ್ತವೆ. ಮುಂಬೈ ರಾಜ್ಯದಲ್ಲಿ ೧೯೫೩-೫೪ಕ್ಕೆ ಇಂಥ ಸಂಘಗಳು ೮೪೯ ಇದ್ದು, ೭೨,೫೮೫ ಸದಸ್ಯರಿದ್ದರು. ಈ ಕ್ಷೇತ್ರದಲ್ಲಿಯೂ ಮುಂಬೈ ರಾಜ್ಯವೇ ಅಗ್ರಸ್ಥಾನದಲ್ಲಿದೆ. ಇವುಗಳನ್ನೆಲ್ಲ ಹೊಸ ರಾಜ್ಯದಲ್ಲಿ ಬೆಳೆಸುವುದು ಅತಿಮುಖ್ಯವಾಗಿದೆ.

ಉತ್ಪಾದನೆಯ ಸಂಘಗಳ ನಂತರ ಈಗ ಮಾರಾಟ ಸಂಘಗಳ ಬಗ್ಗೆ ವಿಚಾರಿಸಬಹುದು. ಈ ಮಾರಾಟ ಸಂಘಗಳು ಸಹಕಾರಿ ಆಂದೋಲನದಲ್ಲಿಯೇ ಅತಿಮುಖ್ಯವಾಗಿದ್ದು, ಒಕ್ಕಲುತನ ಹುಟ್ಟುವಳಿ ಮಾರಾಟದಲ್ಲಿ ಮುಖ್ಯ ಪಾತ್ರವನ್ನಾಡಬೇಕಾಗಿದೆ. ೧೯೫೩-೫೪ರಲ್ಲಿ ಭಾರತದಲ್ಲಿ ಒಟ್ಟು ೯,೨೪೦ ಪ್ರಾಥಮಿಕ ಮಾರಾಟ ಸಂಘಗಳಿದ್ದು, ಅವುಗಳ ವ್ಯಕ್ತಿ ಸದಸ್ಯರು ೯,೧೮,೩೪೪ ಇದ್ದರು; ಮತ್ತು ಇವರಲ್ಲದೆ ೯,೬೭೮ ಸದಸ್ಯ ಸಂಘಗಳಿದ್ದವು. ಇವು ಆ ಅವಧಿಯಲ್ಲಿ ಒಟ್ಟು ೨,೧೯೧.೬೮ ಲಕ್ಷ ರೂಪಾಯಿಗಳ ಹುಟ್ಟುವಳಿಯನ್ನು ಮಾರಾಟಮಾಡಿವೆ.

ಮುಂಬೈ ರಾಜ್ಯದಲ್ಲಿಯೂ ಈ ಮಾರಾಟ ಸಂಘಗಳ ಪ್ರಗತಿಯು ಎಲ್ಲೆಡೆಯಲ್ಲಿ ಸಮನಾಗಿರುವುದಿಲ್ಲ. ಈ ಮಾರಾಟ ಸಂಘಗಳ ಇತಿಹಾಸದಲ್ಲಿ ಉತ್ತರ



ಮಂಗಳೂರು ಬಂದರಿನಲ್ಲಿ ಸಾಮಾನು ಸಾಗಿಸುವ ದೋಣಿಗಳು



ಮಲ್ಪೆ ಸಮುದ್ರ ತೀರ



ಮಂಗಳೂರು ಸಮುದ್ರ ತೀರದಲ್ಲಿ ಹೆಂಚಿನ ಕಾರ್ಖಾನೆಗಳು



ಮಡಿಕೇರಿ ನಗರದ ಒಂದು ದೃಶ್ಯ

ಕರ್ನಾಟಕದ, ಅದರಲ್ಲಿಯೂ ಧಾರವಾಡ ಜಿಲ್ಲೆಯ, ಇತಿಹಾಸವು ಬಹು ಉಜ್ವಲ ವಿದೆ. ಹತ್ತಿಮಾರಾಟದ ಸಂಘವನ್ನು ದೇಶಕ್ಕೆ ಮಾದರಿಯ ಕಾಣಿಕೆಯಾಗಿ ಕೊಟ್ಟು ಇಂದಿಗೂ ಕರ್ನಾಟಕದ ಹೆಸರು ಚಿರಸ್ಥಾಯಿಯಾಗುವಂತೆ ಮಾಡಿದ ಶ್ರೇಯಸ್ಸನ್ನು ಯಾವ ಕನ್ನಡಿಗನೂ ಹೆಮ್ಮೆಯಿಂದ ಸ್ವಾಗತಮಾಡಲಿಕ್ಕಿಲ್ಲ. ಈ ಸ್ಥಾನವನ್ನು ಉತ್ತರ ಕರ್ನಾಟಕವು ದಿನೇದಿನೇ ಅಭಿವೃದ್ಧಿಗೊಳಿಸುತ್ತ, ಇಂದಿಗೂ ಈ ದಿಶೆಯಲ್ಲಿ ಮುನ್ನಡೆಯುತ್ತಿದೆ ಎಂಬುದು ಶುಭಸೂಚಕವಾದ ಅಭಿಮಾನದ ವಿಷಯ. ಉತ್ತರ ಕರ್ನಾಟಕವು ಹತ್ತಿಮಾರಾಟ ಸಂಘಗಳ ತವರೂರು. ಇಲ್ಲಿಂದ ಅವುಗಳು ಮುಂದೆ ಬೇರೆ ಕಡೆ ಸ್ವಾಗತಿಸಲ್ಪಟ್ಟವು. ೧೯೫೪ರಲ್ಲಿ ಮುಂಬೈ ರಾಜ್ಯದಲ್ಲಿ ಒಟ್ಟು ೮೬ ಹತ್ತಿ ಮಾರಾಟದ ಸಂಘಗಳಿದ್ದುದು ತಿಳಿದು ಬರುತ್ತದೆ. ಇವಲ್ಲದೆ ೧೩ ಜಿನಿಂಗ್ ಮತ್ತು ಪ್ರೆಸ್ಸಿಂಗ್ ಸೊಸಾಯಿಟಿಗಳು ಸಹ ಇದ್ದವು.

ಮುಂಬೈ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿರುವ ಮಾರಾಟ ಸಂಘಗಳ ಕಾರ್ಯಕಲಾಪಗಳೂ, ಪ್ರಗತಿಯೂ ಈ ಕೆಳಗಿನ ತಾ|| ೩೦ನೆಯ ಜೂನ್ ೧೯೫೬ಕ್ಕಿರುವ ಅಂಕಿ ಸಂಖ್ಯೆಗಳಿಂದ ಒಡೆದು ಕಾಣದೆ ಇರಲಾರವು.

## ಮುಂಬೈ ಕರ್ನಾಟಕದಲ್ಲಿಯ ಮಾರಾಟ ಸಂಘಗಳು

| ಅ. ನಂ. | ತಪಶೀಲು | ಧಾರವಾಡ | ಬೆಳಗಾಂವಿ | ವಿಜಾಪೂರ | ಕಾರವಾರ |
|---|---|---|---|---|---|
| ೧ | ಸಂಘಗಳ ಸಂಖ್ಯೆ ... | ೧೬ | ೬ | ೬ | ೪ |
| ೨ | ಸದಸ್ಯರ ಸಂಖ್ಯೆ— | | | | |
| | ವ್ಯಕ್ತಿ ... | ೧೪,೯೬೬ | ೫,೩೫೪ | ೪,೧೪೬ | ೨,೨೯೫ |
| | ಸಂಘಗಳು ... | ೩೬೬ | ೩೦೧ | | ೭೨ |
| | | ರೂ. | ರೂ. | ರೂ. | ರೂ. |
| ೩ | ಷೇರಭಂಡವಲು ... | ೪,೨೬,೯೦೦ | ೧,೫೪,೩೬೯ | ೪೫,೯೬೫ | ೧,೫೨,೨೫೫ |
| ೪ | ರಿಜರ್ವ್ ಮತ್ತು ಉಳಿಕೆ ನಿಧಿಗಳು. | ೮,೨೦,೩೨೦ | ೧,೩೨,೩೮೫ | ೧,೬೯,೨೯೯ | ೧,೪೦,೯೧೫ |
| ೫ | ಸಾಲಗಳು ... | ೧೭,೪೦,೪೧೨ | ೮,೭೬,೪೮೬ | ೩,೨೭,೪೩೮ | ೩,೮೬,೩೨೯ |
| ೬ | ದುಡಿಯುವ ಭಂಡವಲು. | ೩೮,೮೪,೬೦೧ | ೧೩,೨೩,೭೮೪ | ೫,೭೮,೯೩೩ | ೬,೭೯,೫೦೦ |
| ೭ | ಮಾರಾಟ ರಕಮು. | ೧,೦೫,೨೩,೫೮೫ | ೧೨,೨೦,೩೪೫ | ೧೨,೧೧,೮೨೩ | ೫೬,೬೪,೦೪೯ |
| ೮ | ಲಾಭ ... | ೮೧,೮೨೭ | ೨೪,೮೯೦ | ೨೪,೧೯೦ | ೩೧,೦೩೦ |

ಮೈಸೂರು ರಾಜ್ಯದ ಎಲ್ಲ ವಿಧದ ಮಾರಾಟ ಸಂಘಗಳ ಪರಿಸ್ಥಿತಿಯನ್ನು ಒಟ್ಟಾರೆ ನೋಡಿದರೆ ಅಲ್ಲಿಯೂ ಅಲ್ಪಪ್ರಗತಿಯಾಗಿದೆ ಎಂದು ಹೇಳಬಹುದು. ೧೯೫೩-೫೪ರಲ್ಲಿ ಆ ರಾಜ್ಯದಲ್ಲಿ ಕೇವಲ ೮೫ ಮಾರಾಟ ಸಂಘಗಳೂ, ೧೯,೩೮೨ ಸದಸ್ಯರೂ ಇದ್ದರು.

ಇನ್ನು ಗ್ರಾಹಕರ ಸಹಕಾರಿ ಸಂಘಗಳ (stores) ವಿಷಯಕ್ಕೆ ನೋಡುವಾ. ಮದ್ರಾಸಿನ ಕೆಲವು ಸಂಘಗಳ ವಿನಃ ಈ ಸಂಘಗಳು ನಮ್ಮ ದೇಶದ ಇತರ ಕಡೆಗಳಲ್ಲಿ ಅಷ್ಟು ಯಶಸ್ವಿಯಾಗಿಲ್ಲವೆಂದು ಹೇಳಬೇಕಾಗುವುದು. ಇವುಗಳ ಭವಿತವ್ಯವು ಸಧ್ಯ ಅಷ್ಟು ಆಶಾದಾಯಕವಾಗಿ ಕಾಣುವುದಿಲ್ಲ.

ಗೃಹನಿರ್ಮಾಣ ಸಂಘಗಳ ಚಟುವಟಿಕೆಗಳನ್ನೂ ಅವುಗಳ ಪ್ರಗತಿಯನ್ನೂ ನೋಡಿದರೆ, ಅಲ್ಲಿಯೂ ಹೆಚ್ಚಿನ ಪ್ರಗತಿಯು ಕಂಡುಬರುವದಿಲ್ಲ. ಮುಂಬೈ ರಾಜ್ಯವು ಮಾತ್ರ ಹೊಸ ಯೋಜನೆಗಳನ್ವಯದಿಂದ ಹೊಸ ಹೊಸ ಸಂಘಗಳನ್ನು ಸಂಘಟಿಸಿ, ಅಧಿಕ ಧನಸಹಾಯವನ್ನು ಮಾಡಿ ಕೆಲಮಟ್ಟಿಗೆ ಪ್ರಗತಿಯನ್ನು ಸಾಧಿಸಿದುದು ಸ್ಪಷ್ಟವಿದೆ. ಆದರೆ, ಇವುಗಳಿಂದ ಬಡವರಿಗಿಂತ ಮಧ್ಯಮ ವರ್ಗದ ಜನರಿಗೆ ಮಾತ್ರ ಹೆಚ್ಚು ಸಹಾಯವಾಗಲಿದೆ. ಮುಂಬೈರಾಜ್ಯ ಹೊರ್ತುಪಡಿಸಿ ಯಾವ ರಾಜ್ಯಗಳೂ ಬಡವರಿಗೆ ಮನೆಕಟ್ಟಲು ಯೋಜಿಸಿಲ್ಲ ಮತ್ತು ಮದ್ರಾಸು ಹೊರ್ತುಪಡಿಸಿ ಗ್ರಾಮಾಂತರ ಗೃಹನಿರ್ಮಾಣವು ಯೋಜಿತವಾಗಿಲ್ಲವೆಂದೂ ಹೇಳಬಹುದು.

ಉಳಿದ ಮಾದರಿಯ ಸಂಘಗಳನ್ನು ಸಾಮಾನ್ಯವಾಗಿ (೧) ಕಾರ್ಮಿಕರ ಸಂಘ, (೨) ಸ್ತ್ರೀಯರ ಸಂಘ, (೩) ಸೇವಾ ಸಂಘ ಮತ್ತು (೪) ವಿಮಾ ಸಂಘಗಳೆಂದು ವರ್ಗೀಕರಿಸಬಹುದು. ಈ ಎಲ್ಲ ವಿಧದ ಸಂಘಗಳು ಕರ್ನಾಟಕದಲ್ಲಿ ಅಲ್ಲಲ್ಲಿ ಕಂಡು ಬಂದರೂ ಅವೆಲ್ಲವುಗಳೂ ಎಲ್ಲೆಡೆಯಲ್ಲಿ ಬೆಳೆದು ಇನ್ನು ಹೆಚ್ಚು ಪ್ರಗತಿಹೊಂದುವುದು ಅವಶ್ಯವಿದೆ.

ಈ ಸಂದರ್ಭದಲ್ಲಿ ಇನ್ನೊಂದು ಅಪೂರ್ವವಾದ ಸಹಕಾರಿ ಸಂಘದ ಬಗ್ಗೆ ಇಲ್ಲಿ ಹೇಳಲೇ ಬೇಕಾಗುವದು. ಇದೊಂದು ಅಮೋಘವಾದ ಸಹಕಾರಿ ಸಾಹಿತ್ಯ ಸಂಘ. ಕರ್ನಾಟಕ ಸಾಹಿತ್ಯ ಸಹಕಾರಿ ಸಂಘ, ಲಿ. ಎಂಬ ಈ ಸಂಘವು ಧಾರವಾಡದಲ್ಲಿ ಸ್ಥಾಪಿತವಾಗಿದ್ದು, ಅದು ಕನ್ನಡ ಸಾಹಿತ್ಯ ಪ್ರಸಾರ ಮತ್ತು ಸಾಹಿತಿಗಳಿಗೆ ಸಹಾಯವನ್ನು ಒದಗಿಸುತ್ತಲಿದೆ. ವಿವಿಧ ವಿಷಯಗಳ ಬಗ್ಗೆ ಕನ್ನಡದಲ್ಲಿ ಅನುಭವಿಕ ಸಾಹಿತಿಗಳಿಂದ ಪುಸ್ತಕಗಳನ್ನು ಬರೆಸಿ ಪ್ರಕಟಿಸುವುದು ಮತ್ತು ಸಾಹಿತಿಗಳಿಗೆ ಧನಸಹಾಯುಮಾಡುವುದು ಈ ಸಂಸ್ಥೆಯ ಮೂಲ ಉದ್ದೇಶವಾಗಿದೆ. ಈ ಸಂಘವು ಮುಂಬೈ ರಾಜ್ಯದ ಈಗಿನ ಸಹಕಾರ ಮಂತ್ರಿಗಳಾದ ಮಾನ್ಯ ಶ್ರೀ ಎಮ್. ಪಿ. ಪಾಟೀಲ ಇವರ ಮಾರ್ಗದರ್ಶನಕ್ಕೆ ಪೂರ್ಣ ಹೊಣೆಯಾಗಿದೆ.

## ೫. ಸಹಕಾರಿ ಶಿಕ್ಷಣ

ಸಹಕಾರಿ ಆಂದೋಲನದ ಅಖಂಡ ಭವಿತವ್ಯವೇ ಶಿಕ್ಷಣದ ಮೇಲೆ ಅವಲಂಬಿಸಿದೆ ಎಂದು ಹೇಳಿದರೆ ಇದರಲ್ಲಿ ಅತಿಶಯೋಕ್ತಿ ಏನೂ ಇರುವುದಿಲ್ಲ. ಯಶಸ್ವಿಯಾದ ಸಂಘಗಳಲ್ಲಿ ಕಂಡುಬರುವ ರಹಸ್ಯವೂ, ಅಯಶಸ್ವಿಯಾದವುಗಳಲ್ಲಿ ಕಂಡುಬರುವ ಹೊಣೆಗೇಡಿತನವೂ ಈ ಶಿಕ್ಷಣ ಪ್ರಭಾವ ಅಭಾವಗಳನ್ನೇ ಅವಲಂಬಿಸಿದೆ. ಸಹಕಾರಿ ಇಲಾಖೆಗಳಲ್ಲಿ ದುಡಿಯಲು ತರಬೇತಿ ಹೊಂದಿದ ತಜ್ಞಅಧಿಕಾರಿಗಳು ಬಹಳ ರಾಜ್ಯಗಳಲ್ಲಿ ಸಿಗುವದೇ ಅಸಾಧ್ಯ. ಸಹಕಾರಿ ಸಂಸ್ಥೆಗಳಲ್ಲಿ ಯೋಗ್ಯಶಿಕ್ಷಣ ಪಡೆದ ನವಕರರು ಸಿಗುವದೂ ಅಷ್ಟೇ ದುರ್ಲಭ. ಇಂಥ ಪರಿಸ್ಥಿತಿಯಲ್ಲಿ ಸಹಕಾರಿ ಶಿಕ್ಷಣದ ಶಾಲೆ ಕಾಲೇಜುಗಳು ಅನೇಕ ವರ್ಷಗಳಿಂದ ಅವಶ್ಯವೆನಿಸಿದರೂ, ಈ ಬಗ್ಗೆ ಮಾಡುವ ಖರ್ಚು ಮತ್ತು ಸಮರ್ಥ ಶಿಕ್ಷಕರ ಅಭಾವದಿಂದ ಆ ದಿಶೆಯಲ್ಲಿ ಬಹಳ ಪ್ರಗತಿಯಾಗಲೂ ಸಾಧ್ಯವಾಗಿರಲಿಕ್ಕಿಲ್ಲ.

ಈಗ ರಿಜರ್ವ್ ಬ್ಯಾಂಕಿನವರ ಅಖಿಲ ಭಾರತ ಶಿಕ್ಷಣ ಯೋಜನೆಯ ಪ್ರಕಾರ ಮತ್ತು ಅದೇ ಬ್ಯಾಂಕು ಮತ್ತು ಕೇಂದ್ರ ಸರಕಾರದವರೂ ಕೂಡಿ ನಿಯಮಿಸಿದ ಸಹಕಾರಿ ಶಿಕ್ಷಣದ ಕೇಂದ್ರ ಸಮಿತಿಯ (Control Committee for Co-operative Training) ಯೋಜನೆ ಮತ್ತು ಮಾರ್ಗದರ್ಶನದ ಪ್ರಕಾರ ಸಹಕಾರಿ ಖಾತೆಯ ಎಲ್ಲ ಮೇಲಧಿಕಾರಿ ಮತ್ತು ಇತರ ಅಧಿಕಾರಿವರ್ಗದ ಮತ್ತು ಸಂಘ ಸಂಸ್ಥೆಗಳ ಜವಾಬ್ದಾರಿ ನೌಕರರ ಶಿಕ್ಷಣವರ್ಗದ, ಬೇರೆ ಬೇರೆ ಅವಧಿಯ ಶಿಕ್ಷಣ ವ್ಯವಸ್ಥೆಯೂ ಬೇರೆ ಬೇರೆ ಮಂಡಲಗಳೂ ಏರ್ಪಡಿಸಲ್ಪಟ್ಟು, ಶಿಕ್ಷಣಯತ್ನಗಳು ಪ್ರಗತಿಯತ್ತ ಭರದಿಂದ ಸಾಗಿದುದು ಅಭಿನಂದನೀಯ. ಈಗ ಪುಣೆಯಲ್ಲಿರುವ ಅಖಿಲ ಭಾರತ ಸಹಕಾರಿ ಟ್ರೇನಿಂಗ್ ಕಾಲೇಜ್ (All India Co-operative Training College) ಅಲ್ಲದೆ, ಐದು ಪ್ರಾದೇಶಿಕ ಶಿಕ್ಷಣ ಕೇಂದ್ರಗಳನ್ನು (Regional Training Centres) ಯೋಜಿಸಿ ಕಾರ್ಯಗತ ಮಾಡಿದುದು ಬಹು ಸಮಯೋಚಿತವಾದುದು.

ಇನ್ನು ಪ್ರಸಾರದ ಕಾರ್ಯದ ಬಗೆಗೆ ಸಹಕಾರಿ ಪ್ರಸಾರಕಾರ್ಯವು ಶಿಕ್ಷಣದ ಜೊತೆಗೆ ಸಹಕಾರಿ ಇನ್‌ಸ್ಟಿಟ್ಯೂಟಿನವರಿಂದಲೇ ನಡಿಸಲ್ಪಡುತ್ತಿರುವದು ಅನೇಕರಿಗೆ ಗೊತ್ತಿದ್ದ ವಿಷಯ. ಪರಿಷತ್ತು, ಪ್ರದರ್ಶನ, ಭಾಷಣ, ಗ್ರಂಥ ಪ್ರಕಟನೆ, ಪತ್ರಿಕೆಗಳು—ಇವೆಲ್ಲವುಗಳ ಮುಖಾಂತರ ನಡೆದ ಪ್ರಸಾರ ಕಾರ್ಯವನ್ನು ಮುಂಬೈ ಮತ್ತು ಮದ್ರಾಸಿನ ಇನ್‌ಸ್ಟಿಟ್ಯೂಟ್‌ಗಳು ಬಹು ಯಶಸ್ವಿಯಾಗಿ ಮಾಡಿವೆ. ಇಂಥ ಸಂಸ್ಥೆಗಳಿಲ್ಲದಲ್ಲೆಲ್ಲ ಅವುಗಳನ್ನು ರಚಿಸಿ ಎಲ್ಲೆಡೆಯಲ್ಲಿಯೂ ಅವುಗಳನ್ನು ಹೆಚ್ಚಿಗೆ ಪ್ರಭಾವಿಯಾಗುವಂತೆ ಮಾಡುವದು ಸಹಕಾರ ಬೃಹದಾಕಾರ ತಾಳುತ್ತಿರುವ ಈ ಸಮಯದಲ್ಲಿ ಅತ್ಯವಶ್ಯಕ.

## ೬. ನಮ್ಮ ಆದರ್ಶ

ಕಲ್ಯಾಣ ರಾಜ್ಯದ (Welfare State) ಆದರ್ಶವನ್ನಿಟ್ಟುಕೊಂಡು ಇಷ್ಟರಲ್ಲಿಯೇ ಯೋಜನಾತ್ಮಕ ಅಭಿವೃದ್ಧಿ ಪಥದಲ್ಲಿ ನಡೆಯುತ್ತಿದ್ದ ಭಾರತಕ್ಕೆ ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳಮಾಡಿ, ಜೀವನ ಮಟ್ಟದ ಉನ್ನತಿಯನ್ನು ಸಾಧಿಸಿ, ಆದಾಯ ಮತ್ತು ಸಂಪತ್ತಿಯಲ್ಲಿನ ವೈಷಮ್ಯವನ್ನು ತಗ್ಗಿಸಿ, ಸಮಾಜ ನ್ಯಾಯವನ್ನು ನೀಡಿ, ಸಮಾಜವಾದಿ ಸ್ವರೂಪದ ಸಮಾಜಕ್ಕೆ ಈಗ ಸಹಕಾರ ವನ್ನು ಜೋಡಿಸುವ ವಿಚಾರವಿದೆ. ಸಹಕಾರವು ಸಮಾಜವಾದದ ಸಂಗಡ ಸಹಕರಿಸಲು ಪ್ರಬಲವಾಗಬೇಕಾಗಿದೆ. ನಮ್ಮ ರಾಷ್ಟ್ರವು ಸಹಕಾರಿ ಸಮಾಜವಾದಿ ಸಮಾಜವಾಗಬೇಕಾಗಿದೆ.

ಈ ದೃಷ್ಟಿಯಿಂದ ನೋಡಿದಲ್ಲಿ ಅಖಿಲ ಭಾರತ ಗ್ರಾಮಾಂತರ ಪತ್ತಿನ ಪರಿಶೀಲನೆಯ ಬಗೆಗೆ ನಿಯಮಿಸಲ್ಪಟ್ಟ ನಿರ್ದೇಶಕ ಸಮಿತಿಯ ವರದಿಯು ಸಹಕಾ ರದಲ್ಲಿ 'ಒಂದು ಹೊಸ ಶಕ'ವನ್ನೇ ಪ್ರಾರಂಭಿಸಲಿದೆ. ಭಾರತದ ಆರ್ಥಿಕ ಅಭಿವೃದ್ಧಿಯ ಇತಿಹಾಸದಲ್ಲಿಯೇ ಇದೊಂದು ಮೈಲುಗಲ್ಲಾಗಿದೆ.

"ಸಹಕಾರದಲ್ಲಿ ಸರಕಾರವು ಪಾಲುಗಾರಿಕೆಯಿಂದ ಕೆಲಸಮಾಡದ ವಿನಃ

ಗ್ರಾಮಾಂತರದಲ್ಲಿ ಅಭಿವೃದ್ಧಿಯಾಗಲಾರದು; ಸಹಕಾರವು ಈಗ ವಿಫಲವಾಗಿದ್ದರೂ ಅದು ಸಫಲವಾಗಲೇಬೇಕು; ಸಹಕಾರದ ವಿನಃ ಹಳ್ಳಿಗಳ ಉದ್ಧಾರವಾಗಲಾರದು."—ಎಂಬ ನಿರ್ಣಯಕ್ಕೆ ಈಗ ನಿರ್ದೇಶಕ ಸಮಿತಿಯು ಬಂದಿದೆ. ಈ ನಿರ್ಣಯದ ಮೇರೆಗೆ ಈಗ ಸಹಕಾರದ ಅಖಿಲ ಭಾರತ ಪುನರ್ಘಟನೆಯನ್ನು ಸೂಚಿಸಲಾಗಿದೆ.

ಕೇಂದ್ರ ಸರಕಾರವು ಈ ನಿರ್ಣಯಗಳ ಮತ್ತಿತರ ಸೂಚನೆಗಳ ಮುಖ್ಯ ರೂಪ ರೇಖೆಗಳನ್ನು ಒಪ್ಪಿಕೊಂಡು ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರಕ್ಕೆ ಒಂದು ಹೆಮ್ಮೆಯ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ೧೨ ಸಾವಿರ ದೊಡ್ಡ ಪುನರ್ಘಟಿತಾ ಸಂಘಗಳನ್ನು ದೇಶದಾದ್ಯಂತ ಸ್ಥಾಪಿಸಿ, ೨೫೮ ಕೋಟಿ ರೂ.ಗೆ ಮಿಕ್ಕಿ ಒಕ್ಕಲಿಗರಿಗೆ ಉತ್ಪಾದನಾ ನೆರವನ್ನು ಕೊಡುವದಕ್ಕಿದೆ. ೧,೭೦೦ ಕ್ಕೂ ಮೇಲ್ಪಟ್ಟು ರೈತರ ಹುಟ್ಟುವಳಿಯನ್ನು ರೂಪಾಂತರಿಸುವ ಜಿನ್ನು, ಪ್ರೆಸ್ಸು, ಸಕ್ಕರೆ ಕಾರಖಾನೆಗಳನ್ನು ಸ್ಥಾಪಿಸಲು ಆರ್ಥಿಕ ನೆರವನ್ನು ಒದಗಿಸಲಿದೆ. ೭,೦೦೦ಕ್ಕೂ ಮಿಕ್ಕಿ ಗುದಾಮು ಮತ್ತು ಸಂಗ್ರಹಾಲಯಗಳನ್ನು ನಿರ್ಮಿಸಲು ಸಹಾಯಮಾಡುವ ಯೋಜನೆಯನ್ನು ಸೂಚಿಸಲಾಗಿದೆ.

ಈ ದೃಷ್ಟಿಯಿಂದ ಈ ಐವತ್ತು ವರ್ಷಗಳಲ್ಲಿ, ಜನತೆಗೆ ಆದ ಫಲಪ್ರಾಪ್ತಿಯನ್ನು ನಾವು ಈಗ ನೋಡಬಹುದು. ಸಹಕಾರವು ಇನ್ನೂ ಬಹಳ ಹಳ್ಳಿಗಳಲ್ಲಿ ಪ್ರವೇಶಿಸಬೇಕಾಗಿದೆ. ಈಗ ಸ್ಥಾಪಿತವಾದ ಸಂಘಗಳಲ್ಲಿ ಇನ್ನೂ ಬಹಳ ಜನ ರೈತರು ಸದಸ್ಯರಾಗಬೇಕಾಗಿದೆ. ಈಗಾಗಲೇ ಸದಸ್ಯರಾದವರೆಲ್ಲ ಸಂಘಗಳಲ್ಲಿಯೇ ಸಾಲ ತೆಗೆದುಕೊಳ್ಳುವುದನ್ನು ಇನ್ನು ಕಲಿಯಬೇಕಾಗಿದೆ. ಎಲ್ಲ ಸದಸ್ಯರಿಗೆ ಸಾಕಷ್ಟುಸಾಲವನ್ನು ಸಕಾಲಕ್ಕೆ ಕೊಡಬೇಕಾಗಿದೆಯಲ್ಲದೇ ಉತ್ಪಾದನೆಗಾಗಿಯೇ ಉಪಯೋಗಿಸುವದನ್ನು ಕಲಿಸಬೇಕಾಗಿದೆ. ಹಣಕಾಸಿನ ಸಹಾಯದ ವಿಷಯದಲ್ಲಿ ಈ ಎಲ್ಲ ಕೊರತೆಗಳು ವಿವಂಚನೆಯನ್ನುಂಟುಮಾಡಬಹುದು; ಆದ್ದರಿಂದ ಕರ್ನಾಟಕದಲ್ಲಿಯೂ ಇವೆಲ್ಲ ಅವಸರದಿಂದ ಗಮನಿಸಬೇಕಾದ ವಿಷಯಗಳು. ಉತ್ತರ ಕರ್ನಾಟಕವು ಭಾರತದಲ್ಲಿಯೇ ಅತಿ ಹೆಚ್ಚಿಗೆ ಪ್ರಮಾಣದಲ್ಲಿ ಅಂದರೆ, ಶೇಕಡಾ ೪೪ ರಷ್ಟು ಹಣ ಕೊಡುತ್ತಿದ್ದರೂ ಮತ್ತು ಕೊಡಗು ಪ್ರಾಂತ ತನ್ನ ಎಲ್ಲ ಗ್ರಾಮಗಳಲ್ಲಿಯೂ ಸಂಘಗಳನ್ನು ಸ್ಥಾಪಿಸಿದ್ದರೂ, ಒಟ್ಟಾರೆ ಕರ್ನಾಟಕದ ಅಗತ್ಯಗಳನ್ನು ನೋಡಿದರೆ ಇದೆಲ್ಲ ಅತ್ಯಲ್ಪ.

ಮಾರಾಟ ಸಂಘಗಳನ್ನು ಮತ್ತು ಹುಟ್ಟುವಳಿ ರೂಪಾಂತರಿಸುವ (Processing Society) ಸಂಘಗಳನ್ನು ನೋಡಿದಲ್ಲಿ ಉತ್ತರ ಕರ್ನಾಟಕದ ಹತ್ತಿ ಮಾರಾಟ ಸಂಘಗಳಂಥ, ಮದ್ರಾಸಿನ ಶೇಂಗಾ ಮಾರಾಟ ಸಂಘಗಳಂಥ, ಉತ್ತರ ಪ್ರದೇಶದ ಸಕ್ಕರೆ ಗಿರಣಿಗಳ ಮಾರಾಟ ಸಂಘಗಳಂಥ ಉನ್ನತ ಮಟ್ಟದ ಸಂಘಗಳು ಭಾರತದಲ್ಲಿ ಎಲ್ಲಿಯಾದರೂ ಒಂದೊಂದು ಸಿಗುವವು. ಇವುಗಳಿಂದ ಇಂಥ ಸಂಘಗಳು ಎಷ್ಟು ಲಾಭ ಮತ್ತು ಸೇವೆ ಕೊಡಬಲ್ಲವೆಂಬುದು ಸುಸ್ಪಷ್ಟವಾಗುವದೇ ವಿನಃ ನಮ್ಮ ಅಗತ್ಯವೆಲ್ಲ ಪೂರೈಸಲ್ಪಡಲಾರದು. ದಲ್ಲಾಲಿಗಳ ಪದ್ಧತಿಯನ್ನು ಇಲ್ಲದಂತೆಮಾಡಿ ಹುಟ್ಟುವಳಿ ಸಂಗ್ರಹವನ್ನು ದೀರ್ಘಕಾಲ ಕಾದಿಟ್ಟು ಹುಟ್ಟುವಳಿಗೆ

ಹೆಚ್ಚಿನ ಬೆಲೆ ಕೊಡಿಸುವದಕ್ಕಿಂತ ಹೆಚ್ಚು ಅವಸರದ ನೆರವಿನ ಕೆಲಸ ಇನ್ನೊಂದಿಲ್ಲ ವೆಂದೇ ಹೇಳಬಹುದು. ಪತ್ತು ಮತ್ತು ಮಾರಾಟವನ್ನು ಸಂಯೋಜಿಸಿ ವಿಸ್ತರಿಸಿದ ವಿನಃ ಸಹಕಾರದಲ್ಲಿ ಪ್ರಥಮ ಯಶಸ್ವಿ ಹೆಜ್ಜೆಯನ್ನಿಟ್ಟಂತೆ ಆಗುವದಿಲ್ಲ. ಗ್ರಾಹಕರ ಸಂಘಗಳು ಸಹ ಯಶಸ್ಸನ್ನು ಸಂಪಾದಿಸದೆ, ವಿನಿಯಂತ್ರಣದ ಕಾರಣದಿಂದ ದಿನೇ ದಿನೇ ಅವನತಿಗೀಡಾಗುತ್ತ ನಡೆದಿದ್ದು ಕಂಡುಬರುತ್ತದೆ. ಸದಸ್ಯರ ನಿಷ್ಠೆ, ವ್ಯವಸ್ಥಾಪಕರ ಕರ್ತವ್ಯ ದಕ್ಷತೆ ಮತ್ತು ಪ್ರಮಾಣಿಕತೆಗಳೇ—ಈ ದಿಶೆಯಲ್ಲಿ ಯಶಸ್ಸನ್ನು ಸಾಧಿಸಿಕೊಡಬಲ್ಲವು.

ರಾಜ್ಯಗಳ ಪುನರ್ಘಟನೆಯಾಗಿ ಭಾರತದ ಭೂಪಟವೇ ಬದಲಾಗಲಿರುವ ಈ ಪ್ರಸಂಗದಲ್ಲಿ ಅಗಲಿದ ಅಣ್ಣತಮ್ಮಂದಿರು ಪುನಃ ಒಂದುಗೂಡಿ ತಮ್ಮ ಮನೆಯನ್ನು ವಿಸ್ತರಿಸಬೇಕಾಗಿದೆ; ನಾಡನ್ನು ಪುನರುಜ್ಜೀವನಗೊಳಿಸಬೇಕಾಗಿದೆ; ನಾಡಿನ ಕಲ್ಯಾಣಮಂದಿರವನ್ನು ಕಟ್ಟಬೇಕಾಗಿದೆ.

ಈ ಸಂದರ್ಭದಲ್ಲಿ ನವಕರ್ನಾಟಕದ ಕೊರತೆ, ವಿಫಲತೆಗಳ ಮತ್ತು ವೈಶಿಷ್ಟ್ಯ, ವೈವಿಧ್ಯತೆಗಳ ಸ್ಥೂಲ ವಿವೇಚನೆಯನ್ನು ಮಾಡಿದರೆ, ಈ ನವಯೋಜನೆಗಳಿಗೆ ಸಹಾಯಕಾರಿಯಾಗುವದರಲ್ಲಿ ಸಂದೇಹವಿಲ್ಲ.

## ೭. ಕೆಲವು ಸಲಹೆಗಳು

ನವ ಕರ್ನಾಟಕದಲ್ಲಿ ಸಾಕಷ್ಟು ಅರಣ್ಯ ಸಂಪತ್ತು ಇದೆ. ಸುತ್ತೂ ಕಡೆ ಹರಿಯುತ್ತಿರುವ ಹೊಳೆ ಹಳ್ಳಗಳಿವೆ, ತಡಸಲು ದಭೆದಭೆಗಳಿವೆ. ಹೇರಳವಾದ ಖನಿಜ ಸಂಪತ್ತು ಇದೆ. ಫಲಪ್ರದವಾದ ಭೂಮಿ ವಿಸ್ತಾರವಿದೆ. ಅನುಕೂಲವಾದ ಮತ್ತು ಹಿತಕರವಾದ ಹವೆ ಇದೆ. ೨೦೦ ಮೈಲಿಗಳಿಗೆ ಮಿಕ್ಕಿ ಸಮುದ್ರಕರಾವಳಿ ಪ್ರದೇಶವಿದೆ. ಉತ್ತಮ ಬಂದರುಗಳನ್ನು ನಿರ್ಮಿಸಿಕೊಳ್ಳಲು ಸಾಕಷ್ಟು ಅನುಕೂಲತೆಗಳಿವೆ. ಇಂಥ ವಿಸ್ತಾರವಾದ ಪುಣ್ಯ ಕ್ಷೇತ್ರದಲ್ಲಿ ಜನ್ಮಪಡೆದು ಜೀವನ ವಿಕಾಸಕ್ಕೆ ಯತ್ನಿಸುತ್ತಿರುವ ಎರಡು ಕೋಟಿ ಕನ್ನಡ ಸಹೋದರ, ಸಹೋದರಿಯರ ಭಾಗ್ಯ ಈಗ ತೆರದಂತೆ ಅಲ್ಲವೇ?

ಈ ಅತುಲ ನಿಸರ್ಗ ಸಂಪತ್ತಿನ ಅಲ್ಪಾಂಶವನ್ನು ಸಹ ನಾವು ಈವರೆಗೆ ಉಪಯೋಗಿಸಿಕೊಂಡಿಲ್ಲ. ಇದಕ್ಕೆ ಕಾರಣಗಳಿರಬಹುದು; ಅಖಿಲ ಭಾರತಕ್ಕೆ ಸಾಮಾನ್ಯವಿದ್ದ, ವಿದೇಶಿ ಆಳಿಕೆಯ ಅನರ್ಥ ಪರಂಪರೆಯೆ ಮುಖ್ಯಕಾರಣವೆನಿಸಬಹುದು. ಇನ್ನೂ ಕೆಲವುಕಾರಣಗಳಿವೆ ಎಂಬುದು ಸುಸ್ಪಷ್ಟವಿದೆ. ನಾವು ಅನೇಕ ರಾಜ್ಯಗಳಲ್ಲಿ ಛಿನ್ನವಿಚ್ಛಿನ್ನವಾಗಿ ದುರ್ಬಲರಾಗಿದ್ದ ನಮ್ಮ ಆರ್ತನಾದವು ಸಹ ಈವರೆಗೆ ಯಾರಿಗೂ ಕೇಳಿಸಲಿಲ್ಲ. ಕರ್ನಾಟಕದ ಭೂಗರ್ಭ ಪರೀಕ್ಷೆ ಪರಿಶೀಲನೆಗಳು ಈವರೆಗೆ ಸಮಗ್ರವಾಗಿ ಮತ್ತು ಶಾಸ್ತ್ರೋಕ್ತವಾಗಿ ನಡೆಯದಿರುವದೂ ಗಮನಾರ್ಹವಾದುದು. ಈ ಸಂಗತಿಗಳ ಅವಸರದ ಅವಲೋಕನೆ ಪ್ರಥಮ ಪ್ರಶಸ್ತಿಪಡೆಯಬೇಕಾದ ವಿಷಯ.

ಕರ್ನಾಟಕಕ್ಕೆ ಅಕ್ಷಯ ಉಗ್ರಾಣದಂತಿದ್ದ ಉತ್ತರ ಕರ್ನಾಟಕದ ಧಾರವಾಡ ಬಿಜಾಪುರ, ಬೆಳಗಾಂವಿ ಜಿಲ್ಲೆಗಳು ಮತ್ತು ಹೈದರಬಾದಿನ ಕೆಲವು ಕ್ಷೇತ್ರವು

ಆಹಾರವನ್ನು ಬೆಳೆಯುವದಲ್ಲದೆ, ಜವಳಿ, ಉಣ್ಣೆ, ತಂಬಾಕು ಮುಂತಾದ ಉದ್ದಿಮೆ ಗಳಿಗೆ ಕಚ್ಚಾಮಾಲನ್ನು ಸಹ ಬೇಕಾದಷ್ಟು ಕೊಡುವವು. ಒಕ್ಕಲುತನದ ಹುಟ್ಟು ವಳಿಯನ್ನು, ಅರಣ್ಯ ಹುಟ್ಟುವಳಿಯನ್ನು, ಖನಿಜ ಸಂಪತ್ ಮುಂತಾದವುಗಳನ್ನು ಉಪಯೋಗಿಸಲು ಉದ್ದಿಮೆಗಳನ್ನು ತೀವ್ರ ಪ್ರಾರಂಭಿಸುವುದು ಅತ್ಯಗತ್ಯ.

ಕರ್ನಾಟಕಕ್ಕೆ ಕಲ್ಲಿದ್ದಲು ಇರಲಿಕ್ಕಿಲ್ಲ. ಕರ್ನಾಟಕದಲ್ಲಿ ಪೆಟ್ರೋಲ್ ಉತ್ಪಾದನೆಯಾಗಲಿಕ್ಕಿಲ್ಲ. ಆದರೆ ಇವುಗಳ ಬದಲು ವಿಪುಲ ವಿದ್ಯುತ್‌ಶಕ್ತಿ, ಅಲ್ಕೊಹಾಲ್, (Alcohol) ಮೋಟಾರು ಶಕ್ತಿ ಮುಂತಾದವುಗಳು ಲಭಿಸುವುವು. ವಿದ್ಯುತ್ ಶಕ್ತಿಯಲ್ಲಿಯಂತೂ ಕರ್ನಾಟಕದ ಭಾಗ್ಯ ಅತುಲವಾದುದು. ನೀರಾವರಿ ಯೋಜನೆಗಳು ಸಾಕಷ್ಟು ಬೆಳೆಯಬಲ್ಲವು.

ಇವುಗಳಲ್ಲದೆ ಕಡಲತೀರದ ಮತ್ತು ಬಂದರಿನ ಉದಾರ ಸಂಪತ್ತು ಮತ್ತು ನೆರವು ಅಧಿಕಗೊಳಿಸಲು ಬರುವುದು.

ಇಂಥದೊಂದು ವಿಶಾಲವಾದ ಸಮಗ್ರ ದೃಷ್ಟಿಯಿಂದ ನೋಡಿದರೆ ಒಕ್ಕಲು ತನವು ಚಿಕ್ಕದೊಡ್ಡ ಉದ್ಯಮಗಳು ಮತ್ತು ಗ್ರಾಮಕುಟೀರ ಕೈಗಾರಿಕೆಗಳು, ಅನೇಕ ವಿಧವಾಗಿ ವಿದ್ಯುತ್ ಶಕ್ತಿಯನ್ನು ಉಪಯೋಗಿಸಿಕೊಂಡು ಸಮಾಧಾನ ಕರವಾಗಿ ಬೆಳೆಯಲು ಅವಕಾಶವಿದೆ. ಇದೆಲ್ಲವನ್ನು, ಇಲ್ಲವೆ ಇದರ ಮುಕ್ಕಾಲು ಭಾಗವನ್ನು, ಸಹಕಾರದಿಂದ ಮಾಡಬಹುದೆಂಬುದು ಈವರೆಗಿನ ಅನುಭವ. ಮಾರಾಟ, ಖರೀದಿ, ಆಮದು ರಫ್ತುಗಳನ್ನು 'ಸಹಕಾರ' ದಿಂದ ಮಾಡಬಹು ದೆಂಬುದು ಬೇರೆಡೆ ಸಂಪೂರ್ಣ ಸಾಧಿಸಲ್ಪಟ್ಟ ವಿಷಯಗಳು.

ಮಹಾಕರ್ನಾಟಕದ ಈವರೆಗಿನ ಸಹಕಾರ ಪ್ರಗತಿಯನ್ನು ಮಥಿಸಿ ನೋಡಿದಲ್ಲಿ, ಕೆಲವು ಸುಂದರವಾದ ಅಂಶಗಳು; ಹಲವು ಪ್ರಯೋಜನಕಾರಿಯಾದವು ಗಳು; ಇನ್ನು ಕೆಲವು ಅಸಮಾಧಾನಕರವಾದವುಗಳು ; ಉಳಿದವು ಕೆಲವು ಅಸ್ಪಷ್ಟ ಅಂಶಗಳು ಕಂಡುಬರುವವು.

ಅತಿ ಮುಖ್ಯವಾದ ಮತ್ತು ಮೂಲಭೂತವೆನಿಸುವ ಒಂದೆರಡು ವಿಷಯಗಳಲ್ಲಿ ಮಾತ್ರ ಕರ್ನಾಟಕದ ಕೆಲವು ಭಾಗಗಳಲ್ಲಿ ಸಹಕಾರದ ಮಹತ್ವಾಕಾಂಕ್ಷೆಯು ಪೂರ್ಣಗೊಂಡಿದೆ. ಎಲ್ಲ ಗ್ರಾಮಗಳು ಸಹಕಾರದ ಪ್ರಭಾವದಲ್ಲಿ ಬಂದು, ಹೆಚ್ಚಿಗೆ ಸಹಕಾರಿ ಸಂಸ್ಥೆಗಳನ್ನು ಪಡೆಯುವುದು ಕೊಡಗು ಪ್ರಾಂತದಲ್ಲ ಮತ್ತು ಉತ್ತರ ಕರ್ನಾಟಕದಲ್ಲಿ ಸಾಧ್ಯವಾಗಿದೆ. ಅಖಿಲ ಭಾರತ ಸಹಕಾರಿ ಯೋಜನಾ ಸಮಿತಿ ಯವರು ಈ ಬಗೆಗೆ ಹಾಕಿಕೊಟ್ಟ ಗುರಿಯನ್ನು ದಾಟಿದುದು ಹೆಮ್ಮೆಯು ಮಾತಲ್ಲದೆ ಮಾದರಿಯ ಕಾರ್ಯವೂ ಅಹುದು. ಅದರಂತೆ ಸದಸ್ಯರನ್ನು ಹೆಚ್ಚಿಸಿ ಅತಿಹೆಚ್ಚಿಗೆ ಹಳ್ಳಿಗಳನ್ನು ಸಹಕಾರಿಗಳನ್ನಾಗಿ ಮಾಡಿರುವದರಲ್ಲಿ ಮತ್ತು ಸದಸ್ಯ ಒಕ್ಕಲಿಗರಿಗೆ ಅತಿಹೆಚ್ಚು ಉತ್ಪಾದನಾ ಸಾಲವನ್ನು ಕೊಡುವದರಲ್ಲಿ ಉತ್ತರ ಕರ್ನಾಟಕವು ಅಖಿಲ ಭಾರತ ವಿಕ್ರಮವನ್ನೇ ಪಡೆಯುವಂತಿದೆ. ಭಾರತದಲ್ಲಿ ಮುಂಬೈರಾಜ್ಯದ ಸಹಕಾರಿ ಸಂಘಗಳ ಸರಾಸರಿ ದುಡಿಯುವ ಭಂಡವಳ ೧೯೫೩-೫೪ರಲ್ಲಿ ೧೪,೬೦೦ ಕೋಟಿ ರೂಪಾಯಿ. ಪ್ರತಿ ಸದಸ್ಯನ ದುಡಿಯುವ ಭಂಡವಲು ೧೭೫ ರೂಪಾಯಿ. ಇವು ಪರಮಾವಧಿಯೆನಿಸಿದರೆ, ಉತ್ತರ ಕರ್ನಾಟಕ

ಇದರ ಜೊತೆಗೆ ಒಕ್ಕಲುತನ ಹುಟ್ಟುವಳಿಯ ರೂಪಾಂತರ ಸಂಘಗಳತ್ತ ವಿಮರ್ಶಾತ್ಮಕ ದೃಷ್ಟಿಯನ್ನು ಹೊರಳಿಸಿದರೆ, ಉತ್ತರ ಕರ್ನಾಟಕದಲ್ಲಿ ಹೆಚ್ಚಿನ ಪ್ರಗತಿಯಾಗಿದೆ ಎಂದು ಕಂಡುಬರುತ್ತದೆ. ಜಿನ್, ಪ್ರೆಸ್, ಹಾಲರ್, ಮುಂತಾದ ಸಲಕರಣೆಗಳ ಉಪಯೋಗ ಪಡೆಯುವ ಅನೇಕ ಸಂಘ ಸಂಸ್ಥೆಗಳು ಎಲ್ಲೆಡೆ ಉದಯಿಸಿದಲ್ಲಿ ಒಕ್ಕಲಿಗನಿಗೆ ಬಹಳ ಉಳಿತಾಯಮಾಡಿಕೊಳ್ಳಲು ಸಾಧ್ಯ ವಾಗುವದು.

ಧಾರವಾಡದಲ್ಲಿ ೨೫,೦೦೦ ಕದಿರುಗಳ ಒಂದು ಸಹಕಾರಿ ನೂಲುವ ಗಿರಣಿಯ ಸಂಘಟನೆಯು ಅತಿ ಉತ್ಸಾಹದಿಂದ ಮತ್ತು ಅವಸರದಿಂದ ಸಾಗಿದೆ. ಇದೇ ಪ್ರಕಾರ ಸಕ್ಕರೆ ಗಿರಣಿ ಮುಂತಾದ ಬೇರೆ ಬೇರೆ ಗಿರಣಿಗಳನ್ನು ಪ್ರಾರಂಭಿಸಿದಲ್ಲಿ ದಲ್ಲಾಲಿಗಳ ಹಿಡಿತದಿಂದ ಬಡಒಕ್ಕಲಿಗನನ್ನು ಬೇಗನೇ ಪಾರುಮಾಡಬಹುದು. ಈ ಕಾರ್ಯಕ್ಕೆ ರಾಷ್ಟ್ರೀಯ ಯೋಜನೆಯಲ್ಲಿ ಉನ್ನತ ಸ್ಥಾನವಿದೆ. ಇದು ನಮ್ಮೆಲ್ಲರ ಗಮನವನ್ನು ಇನ್ನೂ ಹೆಚ್ಚುಹೆಚ್ಚಾಗಿ ಸೆಳೆಯಬೇಕಾಗಿದೆ.

ಇನ್ನು ಗ್ರಾಹಕರ ಸಹಕಾರಿ ಸಂಘಗಳನ್ನು ನೋಡಿದಲ್ಲಿ ಮದ್ರಾಸಿನ ವಿನಃ ಎಲ್ಲಿಯೂ ಹೆಚ್ಚಿನ ಪ್ರಗತಿ ಕಂಡುಬರುವದಿಲ್ಲ. ಈ ದಿಶೆಯಲ್ಲಿ ಹೊಸ ಯತ್ನಗಳು ನಡೆಯಬೇಕಾಗಿದೆ.

ಗೃಹನಿರ್ಮಾಣ ಸಂಘಗಳ ಪ್ರಗತಿಯು ಮುಂಬೈ ರಾಜ್ಯದಲ್ಲಿ ಬಡವರಿಗಾಗಿ ಗೃಹನಿರ್ಮಿಸಿದ್ದರಲ್ಲಿ ಮತ್ತು ಮದ್ರಾಸಿನಲ್ಲಿ ಹಳ್ಳಿಗಳಿಗಾಗಿ ಮಾಡಿದ ಯೋಜನೆ ಗಳಲ್ಲಿ ಅಲ್ಪಯಶಸ್ಸು ಪಡೆದಿದ್ದರೂ, ಈ ದಿಶೆಯಲ್ಲಿ ನಮ್ಮ ನೂತನ ರಾಜ್ಯವು ಪ್ರಗತಿಪರ ಧೋರಣೆಯನ್ನು ಅನುಸರಿಸುವದು ವಿಹಿತವಾಗಿದೆ.

ಇನ್ನುಳಿದ ಮಾದರಿಯ ಸಂಘಗಳ ವೈವಿಧ್ಯತೆಯನ್ನು ಉಪಯುಕ್ತತೆಯನ್ನು ಅನುಲಕ್ಷಿಸಿ ನಮ್ಮ ನೂತನ ರಾಜ್ಯದಲ್ಲಿ ಅವುಗಳನ್ನು ಪ್ರಯೋಗಮಾಡುವುದು ಅವಶ್ಯವೆಂದು ಹೇಳುವದರ ಜೊತೆಗೆ ಸಹಕಾರಿ ಶಿಕ್ಷಣ ಸಂಸ್ಥೆಗಳ ಬಗ್ಗೆ ನಾವು ಬಹಳ ಪ್ರಗತಿಪರ ಮತ್ತು ಉದಾರ ಧೋರಣೆಯನ್ನು ಅನುಸರಿಸಬೇಕಾಗುವ ದೆಂದು ಹೇಳುವುದು ಅವಶ್ಯಕ. ಸಹಕಾರಿ ಪ್ರಸಾರ ಕಾರ್ಯವೂ ಸಹ ಪ್ರಶಸ್ತಿ ಯನ್ನು ಪಡೆಯಬೇಕಾಗಿದೆ.

ರಾಷ್ಟ್ರೀಯ ಯೋಜನೆಗಳ ಈ ಯೋಜನಾಯುಗದಲ್ಲಿ ಯೋಜನೆಗಳ ಕೊರತೆಯು ಆಗುವುದಿಲ್ಲವೆಂದೇ ಹೇಳಬಹುದು. ಆದರೆ, ಈ ಯೋಜನೆಗಳನ್ನು ಮಾಡುವ ದೃಷ್ಟಿ ಮಾತ್ರ ನ್ಯಾಯ ದೃಷ್ಟಿ, ಹಾಗೂ ಪ್ರಗತಿಪರ ದೃಷ್ಟಿಯಾಗಿರ ಬೇಕಾಗುವುದು. ಈ ನೂತನ ರಾಜ್ಯದ ಹಿನ್ನೆಲೆಯನ್ನು ಲಕ್ಷಿಸಿದರೆ ಮೈಸೂರ ಮತ್ತು ಕೊಡಗುಗಳನ್ನು ಬಿಟ್ಟರೆ ಇನ್ನುಳಿದ ಭಾಗಗಳು ಈವರೆಗೆ ದುರ್ಲಕ್ಷಿತವಾಗಿ ಹಿಂದೆಬಿದ್ದು ಅನರ್ಥಪರಂಪರೆಗೆ ತುತ್ತಾಗಿರುವುದು ಕಂಡುಬರದೆ ಇರಲಾರದು. ಇವು ಗಳೆಲ್ಲ ಒಟ್ಟುಗೂಡಲು ಆತುರರಾದುದು ಅವುಗಳ ಸುಧಾರಣೆಯ ಲವಲವಿ ಕೆಯೇ ಮುಖ್ಯವಾದುದೆಂಬುದು ನಾವು ನೆನಪಿಡಬೇಕಾದ ಸಂಗತಿ. ಪ್ರಗತಿಪರ ರಾಜ್ಯವು ಸರ್ವಾಂಗ ಸುಧಾರಣೆಗೆ ಮೀಸಲಾಗದಿದ್ದರೆ ಅದರ ಪ್ರಗತಿಯೇ ವಿಪರೀತವಾಗಬಹುದು. ಈ ದೃಷ್ಟಿಯಿಂದ ಯೋಜನೆಗಳು ರೂಪುಗೊಳ್ಳುವುದು

ಅಗತ್ಯ. ಇಷ್ಟೇ ಮಹತ್ವದ ಇನ್ನೊಂದು ಮೂಲಭೂತ ಅಗತ್ಯವೆಂದರೆ ಈ ಯೋಜನೆಗಳನ್ನು ಕಾರ್ಯಗತಮಾಡಿ ಪೂರ್ಣಗೊಳಿಸುವುದು. ಈ ದಿಶೆಯಲ್ಲಿ ಕಾರ್ಯಕ್ಷಮತೆ, ಇಲ್ಲದಿದ್ದರೆ ಎಲ್ಲವೂ ಗಾಳಿಗೋಪುರವಾಗುವುದು. ರಾಜ್ಯದ ಅಭಿವೃದ್ಧಿ ಕಾರ್ಯವೆಲ್ಲ ಯಶಸ್ವಿಯಾಗಬೇಕಾದರೆ ಸ್ವತಂತ್ರ ಹೊಣೆಯ ಅಭಿವೃದ್ಧಿ ಶಾಖೆಯೊಂದು ನಿರ್ಮಿತವಾಗುವುದು ಅಗತ್ಯ. ಕಲ್ಯಾಣ ರಾಜ್ಯದ ಸಂಸ್ಥಾಪನೆಯ ಕಾರ್ಯದಲ್ಲಿ ಈ ಕ್ರಮವು ಅತಿ ಮುಖ್ಯವಾಗಿದೆ ಎಂಬುದನ್ನು ನಾವೆಲ್ಲರೂ ಗಮನದಲ್ಲಿಟ್ಟುಕೊಳ್ಳಬೇಕಾದುದು ವಿಹಿತವಾದುದು.

ಯೋಜಿತ ಸಹಕಾರದ ಮತ್ತು ಇನ್ನುಳಿದ ಅಭಿವೃದ್ಧಿ ಕಾರ್ಯಗಳ ಯಶಸ್ಸು ಅಧಿಕಾರಿಗಳನ್ನೂ, ಅಧಿಕಾರೇತರ ಜನರನ್ನೂ ಅಷ್ಟೇ ಪ್ರಮಾಣದಲ್ಲಿ ಅವಲಂಬಿಸಿದೆ. ಕೇವಲ ಸರಕಾರವೇ ಆಗಲಿ, ಇಲ್ಲವೇ ಅದರ ಅಧಿಕಾರಿಗಳಾಗಲಿ, ಸಹಕಾರವನ್ನು ಯಶಸ್ವಿಗೊಳಿಸಲಾರರೆಂಬುದು ಸ್ಪಷ್ಟವಿದೆ. ಜನತೆಯು ತನ್ನ ಧುರೀಣರ ಮಾರ್ಗದರ್ಶನದಲ್ಲಿ ವಿಶ್ವಾಸವನ್ನಿಟ್ಟುಕೊಂಡು ಸಹಕರಿಸಬೇಕಾದುದು ಬಹು ಮುಖ್ಯವಾದದ್ದು. ಆದ್ದರಿಂದ ಈ ಕಲ್ಯಾಣರಾಜ್ಯದ ನಿರ್ಮಾಣದಲ್ಲಿ ಪ್ರಚಂಡ ಪ್ರಚಾರಕಾರ್ಯ ಮತ್ತು ಶಿಕ್ಷಣಕಾರ್ಯಗಳು ನಡೆದು, ಜನತೆಯಲ್ಲಿ ನೂತನ ಜಾಗ್ರತಿ, ನೂತನ ಚೈತನ್ಯ ಉಕ್ಕಿ ಬಂದು, ಉತ್ಸಾಹದಿಂದ, ನಿಷ್ಠೆಯಿಂದ ಮುನ್ನಡೆದರೆ ಈ ಸುಖಸಾಮ್ರಾಜ್ಯದ ಸಾಹಸವು ಫಲಪ್ರದವಾಗುವುದು.

ಈ ನೂತನ ಕರ್ನಾಟಕ ರಾಜ್ಯಕ್ಕೆ ಅನೇಕ ಅವಸರದ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಪ್ರಶಸ್ತಿ ಪಡೆಯಬೇಕಾದ ಇನ್ನೊಂದು ವಿಷಯವೂ ಇದೆ. ಅಖಂಡ ಕರ್ನಾಟಕದ ಎಲ್ಲ ವಿಷಯಗಳ, ಎಲ್ಲ ವಿಭಾಗಗಳ ಅಂಕಿಅಂಶಗಳನ್ನು ಕಲೆ ಹಾಕುವುದು; ಇವುಗಳ ಆಧಾರದ ಮೇಲೆ ಸಂಶೋಧನೆ ನಡೆಯಿಸುವದು—ಈ ಸೂಚನೆಯು ಸರಕಾರಕ್ಕೂ ಅನ್ವಯಿಸುವುದು. ವಿಶ್ವವಿದ್ಯಾಲಯಗಳಲ್ಲಿ ಬಿ. ಎ. (ಆನರ್ಸ್) ಮುಂತಾದ ಪದವೀ ಪರೀಕ್ಷೆಗಳಲ್ಲಿ ಸಹಕಾರ ವಿಷಯ ಒಂದನ್ನೇ ಪರೀಕ್ಷಾ ವಿಷಯವನ್ನಾಗಿಟ್ಟು ಹೆಚ್ಚಿನ ಸಂಶೋಧನಾ ಕಾರ್ಯಕ್ಕೆ ನೆರವು ನೀಡುವದು ಗಮನಾರ್ಹವಾಗಿದೆ.

ಒಕ್ಕಲತನ—ಉದ್ಯಮ, ನಗರ—ಗ್ರಾಮ, ಬಡತನ—ಶಿರಿವಂತಿಕೆ, ಸುಶಿಕ್ಷಿತ—ಅಶಿಕ್ಷಿತ, ಉದ್ಯೋಗ—ನಿರುದ್ಯೋಗ, ಪ್ರಪಂಚ—ಪಾರಮಾರ್ಥ, ಸುಧಾರಣೆ—ಸಾಂಪ್ರದಾಯ, ಇವುಗಳಲ್ಲಿಯೂ ಸಮನ್ವಯಭಾವದ ಸಮ ತೋಲವು ನೂತನ ಕರ್ನಾಟಕದ ವೈಶಿಷ್ಟ್ಯವಾಗಲು ಒಂದು ಭವ್ಯ ಹಿನ್ನೆಲೆಯೂ ಇದೆ.

ಎರಡು ಕೋಟಿ ಕನ್ನಡಿಗರು ನಾಲ್ಕು ಕೋಟಿ ಕೈಗಳಿಂದ ಸಹಕಾರ ಕೋಟೆಯೊಂದನ್ನು ಕಟ್ಟಿ, ಒಂದು ಮನಸ್ಸಿನಿಂದ ಸಹಕರಿಸಿ ನಡೆದರೆ, ಕರ್ನಾಟಕದ ಕೊರಡು ಕೊನರುವುದು, ಬರಡು ಹಯನಹುದು. ಆಗ ಕರುನಾಡು ಕೈಲಾಸ ವಾಗಬಲ್ಲದು.

ಜಯ ಕರ್ನಾಟಕ — ಜಯ ಭಾರತ.

---

# ಕನ್ನಡ ನಾಡಿನಲ್ಲಿ ಕೈಗಾರಿಕೆ

ಲೇಖಕರು :

ಶ್ರೀಮಾನ್ ಎಸ್. ಕೆ. ಕಲ್ಲಾಪುರ್ ಅವರು, ಧಾರವಾಡ.

## ೧ ಒಕ್ಕಲತನ

ಒಕ್ಕಲತನವೇ ಪ್ರಧಾನವಾಗಿ, ಜನಸಂಖ್ಯೆಯು ಹೆಚ್ಚಿದ್ದು, ಹಣದ ಕೊರತೆಯುಳ್ಳ ಪ್ರದೇಶಗಳು ಕೈಗಾರಿಕೆಗಳಿಲ್ಲದೆ ಬಾಳಲಾರವೆಂದು ನಮ್ಮ ಅರ್ಥಶಾಸ್ತ್ರಜ್ಞರು ಒಂದು ಶತಮಾನಕ್ಕಿಂತ ಹೆಚ್ಚಿನ ಅವಧಿಯಿಂದಲೂ ಹೇಳುತ್ತ ಬಂದಿರುತ್ತಾರೆ. ನಮ್ಮ ದೇಶವು ಈ ವರ್ಗಕ್ಕೆ ಸೇರಿರುತ್ತದೆ. ನಮ್ಮಲ್ಲಿಯ ಒಕ್ಕಲತನದಲ್ಲಿ ಇನ್ನೂ ಒಂದು ವೈಶಿಷ್ಟ್ಯವಿದೆ. ಬಹು ಸಂಖ್ಯಾತರಾದ ಒಕ್ಕಲಿಗರಿಗೆ ತಮ್ಮ ಹೊಲಗಳಲ್ಲಿ ವರ್ಷದ ತುಂಬ ಕೆಲಸವಿರುವುದಿಲ್ಲ; ಮತ್ತು ಈ ಕಸಬಿನಿಂದ ಅವರಿಗೆ ಇಡೀ ವರ್ಷದ ಜೀವನವೂ ಸಾಗುವುದಿಲ್ಲ.

ನಮ್ಮ ದೇಶವು ಕೈಗಾರಿಕೆಗಳ ತವರು ಮನೆಯಾಗಿತ್ತು. ಆದರೆ ಯಂತ್ರ ಯುಗವು ಪ್ರಾರಂಭವಾದಂದಿನಿಂದ ಕೈಗಾರಿಕೆಗಳು ಅಳಿಯ ಹತ್ತಿದವು. ಅವುಗಳ ಪುನರುದ್ಧಾರಕ್ಕೆ ೧೯೦೬ರ ಸುಮಾರಕ್ಕೆ ನಮ್ಮಲ್ಲಿಯ ದೇಶಾಭಿಮಾನಿಗಳು ಬಂಗಾಲ ವಿಭಜನೆಯಾದನಂತರ ಕೆಲಮಟ್ಟಿನ ಪ್ರಯತ್ನಮಾಡಿದರು. ಅನಂತರ ಮಹಾತ್ಮಾಗಾಂಧಿಯವರ ಲಕ್ಷ್ಯವು ೧೯೨೦ರ ಸುಮಾರಿಗೆ ಸೆಳೆಯಲ್ಪಟ್ಟಿತು. ಆ ಮೇಲೆ ಈ ವಿಷಯವು ಕಾಂಗ್ರೆಸ್ಸಿನ ಮತ್ತು ಮಹಾತ್ಮಾಗಾಂಧಿಯವರ ವಿಧಾಯಕ ಕಾರ್ಯಕ್ರಮಗಳಲ್ಲ ಒಂದಾಯಿತು. ಆಗ ಹಿಂದುಸ್ಥಾನದ ಜನತೆಯು ಕೈಗಾರಿಕೆಗಳ ವಿಚಾರದಲ್ಲ ಆಸ್ಥೆ ತಾಳಿದವು. ಪ್ರಥಮದಲ್ಲಿ ೧೯೩೭ರಲ್ಲಿ ಕಾಂಗ್ರೆಸ ಮಂತ್ರಿಮಂಡಲವು ಅಧಿಕಾರವನ್ನು ವಹಿಸಿದಾಗ ಅನೇಕ ಪ್ರಾಂತಗಳು ಕೈಗಾರಿಕೆಗಳ ಪುನರುದ್ಧಾರಕ್ಕಾಗಿ ಮನಮುಟ್ಟಿ ಪ್ರಯತ್ನಿಸಿದವು. ಆದರೆ ಆ ಮಂಡಲವು ಅಲ್ಪ ಜೀವಿಯಾಗಿತ್ತು. ೧೯೪೬ರಲ್ಲಿ ತಿರುಗಿ ಕಾಂಗ್ರೆಸ್ಸು ಅಧಿಕಾರವನ್ನು ವಹಿಸಲು ಈ ವಿಷಯಕ್ಕೆ ವಿಶೇಷ ಕಳೆ ಬಂತು. ಬಹುಶಃ ಎಲ್ಲ ರಾಜ್ಯಗಳೂ ಒಂದಿಲ್ಲೊಂದು ರೀತಿಯಲ್ಲಿ ಕೈಗಾರಿಕೆಗಳನ್ನು ಮುಂದೆ ತರಲು ಯತ್ನಿಸಿ ಹೆಚ್ಚು ಕಡಿಮೆ ಪ್ರಮಾಣದ ಯಶಸ್ಸನ್ನೂ ಸಂಪಾದಿಸಿದುವು. ಮುಂಬಯಿ ರಾಜ್ಯದಲ್ಲಿ ಮತ್ತು ವಿಶೇಷತಃ ಅದರ ಕರ್ನಾಟಕ ವಿಭಾಗದಲ್ಲಿ ದೊರೆತ ಯಶಸ್ಸು ಗಣನೀಯವಾಗಿದೆಯೆಂದು ನನ್ನ ಅಭಿಪ್ರಾಯ.

## ೨. ಪಂಚವಾರ್ಷಿಕ ಯೋಜನೆ

೧೯೫೩ರಲ್ಲ ಪಂಚವಾರ್ಷಿಕ ಯೋಜನೆಯ ಅನ್ವಯ ಅಖಿಲ ಭಾರತ ಗ್ರಾಮೋದ್ಯೋಗ ಮಂಡಲ ಮುಂತಾಗಿ ಆರು ಮಂಡಲಗಳು ಸ್ಥಾಪಿಸಲ್ಪಟ್ಟವು.

ಅವುಗಳ ಕಾರ್ಯಕ್ರಮಗಳಿಗಾಗಿ ಧಾರಾಳವಾದ ಹಣ ಸಹಾಯವು ದೊರೆಯು ಹತ್ತಿದೆ. ಅದರಿಂದಾಗಿ ಇಡೀ ದೇಶದಲ್ಲಿ ಹೊಸ ಹುರುಪು ಬಂದಿರುತ್ತದೆ. ಅನೇಕ ಸಂಘ ಸಂಸ್ಥೆಗಳು ಹುಟ್ಟ ಹತ್ತಿರುತ್ತವೆ. ಅವೂ, ರಾಜ್ಯಸರಕಾರಗಳೂ ಆ ಮಂಡಲಗಳಿಂದ ಪರಿಪರಿಯಿಂದ ಹಣ ಸಹಾಯವನ್ನೊ ಹೊಂದ ಹತ್ತಿರುತ್ತವೆ. ಆದರೆ ಅವುಗಳ ದ್ವಾರಾ ವೆಚ್ಚ ಮಾಡಲ್ಪಡುತ್ತಿರುವ ಹಣದ ಸದ್ವಿನಿಯೋಗವಾಗತಕ್ಕದ್ದು; ಅಂದರೆ, ಕೈಗಾರಿಕೆಗಳ ಕೇವಲ ತಾತ್ಪೂರ್ತಿಕವಾದ ಲಾಭವಾಗದೆ ಅವು ನಮ್ಮ ಜೀವನದ ಅಂಗವಾಗಿ ಒಂದು ಶಾಶ್ವತ ಸ್ಥಾನವನ್ನು ಪಡೆಯತಕ್ಕದ್ದು. ಕೆಲವೇ ಅವಧಿಯನಂತರ ಸರಕಾರದ ಸಹಾಯವಿಲ್ಲದೆ ಅವು ಮುಂದರಿಯತಕ್ಕದ್ದು. ಹೀಗಾಗಬೇಕಾದರೆ ನಮ್ಮ ದಿಗ್ದರ್ಶಕರು ಕೈಗಾರಿಕೆಗಳ ಪುನರುದ್ಧಾರವನ್ನು ಕುರಿತು ಶಾಸ್ತ್ರೀಯವಾಗಿ ವಿಚಾರಿಸಿ, ಅವುಗಳಿಗೆ ತಗಲಿದ ನಿಜವಾದ ರೋಗಗಳನ್ನು ಕಂಡುಹಿಡಿದು, ತಕ್ಕ ಪ್ರತೀಕಾರಗಳನ್ನು ಮಾಡತಕ್ಕದ್ದಿರುತ್ತದೆ.

## ೩. ಕೈಗಾರಿಕೆಗಳ ಅವನತಿ

ಕೈಗಾರಿಕೆಗಳ ಅವನತಿಯು ಅನೇಕ ಕಾರಣಗಳಿಂದುಂಟಾಯಿತು. ಬೇರೆ ಬೇರೆ ಸ್ಥಳಗಳಲ್ಲಿ, ಬೇರೆ ಬೇರೆ ಕೈಗಾರಿಕೆಗಳಿಗೆ, ಬೇರೆ ಬೇರೆ ಕಾರಣಗಳುಂಟಾದವು. ಕೆಲವು ಪ್ರಸಂಗಗಳಲ್ಲಿ ಹಣದ ಕೊರತೆಯು ಕಾರಣವಾಯಿತು. ಇನ್ನು ಕೆಲವುಗಳಲ್ಲಿ ಕಚ್ಚಾ ಸರಕುಗಳ ಅಭಾವವು ಕಾರಣವಾಯಿತು. ಆದರೆ ಯೋಗ್ಯ ಬೆಲೆಗೆ ಕೈಗಾರಿಕೆಗಳ ಸರಕುಗಳನ್ನು ಕೊಳ್ಳುವ ಪೇಟೆಯು ನಷ್ಟವಾದದ್ದು ಅತಿ ಹೆಚ್ಚಿನ ಕಾರಣವೆಂದು ನಾನು ತಿಳಿಯುತ್ತೇನೆ. ಹಣದ ಅನುಕೂಲತೆ ಮತ್ತು ಕಚ್ಚಾ ಸರಕುಗಳ ಪೂರೈಕೆಯನ್ನು ಸರಕಾರವು ಕೆಲವೊಂದು ರೀತಿಗಳಿಂದ ಮಾಡಬಲ್ಲದು. ಆದರೆ ಪೇಟೆಯನ್ನು ದೊರಕಿಸಿಕೊಡುವದು ಕೇವಲ ಸರಕಾರದಿಂದ ಕೈಸಾಗದ ಮಾತು. ಕೆಲವು ಪ್ರಮಾಣದಿಂದ ಸರ್ಕಾರದವರು ಕೈಗಾರಿಕೆಗಳ ಸರಕುಗಳನ್ನು ಖರೀದಿಸಿ ಪ್ರೋತ್ಸಾಹಿಸಬಲ್ಲರು. ಆದರೆ ಹೆಚ್ಚಿನ ಪ್ರಮಾಣದಿಂದ ಖರೀದಿಗೆ ಬೇಕಾದವರು ಸರ್ವ ಸಾಮಾನ್ಯ ಜನರು. ಅವರು ನೆರವಾದರೆ ಮಾತ್ರ ಕೈಗಾರಿಕೆಗಳು ಚೇತರಿಸಿಕೊಳ್ಳಬಹುದು. ಇಲ್ಲವಾದರೆ ಅವು ನಿರ್ನಾಮವಾಗಬಹುದು.

ಪೇಟೆಯು ನಷ್ಟವಾಗುವುದಕ್ಕೆ ಅತಿ ಮಹತ್ವದ ಕಾರಣವು ಕೈಗಾರಿಕೆ ಒಡವೆಗಳ ಹೆಚ್ಚಿನ ಕ್ರಯವು. ಯಂತ್ರ ಯುಗವು ಪ್ರಾರಂಭವಾದಂದಿನಿಂದ ಸರಕುಗಳು ಯಂತ್ರ ಶಕ್ತಿಯಿಂದ ದೊಡ್ಡ ಪ್ರಮಾಣದ ತಯಾರಿಕೆ ಕೇಂದ್ರಗಳಲ್ಲಿ ತಯಾರಾಗ ಹತ್ತಿದವು. ಕಚ್ಚಾ ಸರಕುಗಳನ್ನು ಅಗ್ಗವಾಗಿ ದೊರಕುವಲ್ಲಿಂದ ಅಗ್ಗವಾಗಿ ದೊರಕುವ ಸಮಯದಲ್ಲಿ ಅತಿ ದೊಡ್ಡ ಪ್ರಮಾಣದಲ್ಲಿ ಆ ಬಗ್ಗೆ ಖರೀದಿಸಿಕೊಳ್ಳುವಂತಾಯಿತು. ಈ ಬಗ್ಗೆ ಬ್ಯಾಂಕು ಮುಂತಾದ ಆರ್ಥಿಕ ವ್ಯವಸ್ಥೆಗಳು ಹಣದ ಪೂರೈಕೆಯನ್ನು ಮಾಡಿಕೊಡಹತ್ತಿದವು. ತಾಂತ್ರಿಕ ಜ್ಞಾನವುಳ್ಳವರು ತಯಾರಿಕೆಯ ವೆಚ್ಚವು ತೀರ ಕಡಿಮೆಯಾಗುವಂತೆ ಪ್ರಯತ್ನಿಸ

ಹತ್ತಿದರು. ಕೈಗಳಿಂದಲೇ ನೂತು ನೇಯಲ್ಪಡುವ ಬಟ್ಟೆಗಿಂತ ಅರಿವೆಯ ಗಿರಣಿಗಳಲ್ಲಿ ತಯಾರಾಗುವ ವಸ್ತ್ರಗಳು ಅಗ್ಗವಾಗಿರುವುದು ಇದಕ್ಕೆ ಒಂದು ಉದಾಹರಣೆ. ಗಿರಣಿಗಳ ನೂಲನ್ನು ಕೈಮಗ್ಗಗಳಲ್ಲಿಯೇ ನೇಯ್ದ ಬಟ್ಟೆಗಳಿಗಿಂತ ಯಾಂತ್ರಿಕ ಮಗ್ಗಗಳಲ್ಲಿ ನೇಯಲ್ಪಟ್ಟ ಅರಿವೆಗಳು ಅಗ್ಗವಾಗಿರುವದು ಇನ್ನೊಂದು ಉದಾಹರಣೆ. ಸಾರ್ವಜನಿಕರು ಅಗ್ಗವಾದ ಒಡವೆಗಳನ್ನೇ ಪ್ರೋತಾಹಿಸುವುದು ಸ್ವಾಭಾವಿಕ.

ಕೈಗಾರಿಕೆ ಒಡವೆಗಳಲ್ಲಿ ಕೆಲವೊಂದು ಅತಿನಯವಾಗಿಯೂ, ಸುಂದರವಾಗಿಯೂ ಹೊರಡುತ್ತಿದ್ದಾಗ್ಯೂ ಬಹುಮಟ್ಟಿನವು ಒರಟಾಗಿರುತ್ತವೆ. ದೊಡ್ಡ ತಯಾರಿಕೆ ಕೇಂದ್ರಗಳಲ್ಲಿ ಕಲಾ ಕುಶಲರನ್ನು ನೇಮಿಸಿಕೊಳ್ಳುವದು ಸಾಧ್ಯವಾಗುತ್ತದೆ. ಜನರು ಮೆಚ್ಚುವಂಥ ಕಲಾಮಯವಾದ ಒಡವೆಗಳ ತಯಾರಿಕೆಗೆ ಇವರು ಸಹಾಯ ಮಾಡುತ್ತಾರೆ. ಕೈಗಾರಿಕೆಗಳಲ್ಲಿ ಸೇರಿದ ನಮ್ಮ ಹಳ್ಳಿಗರು ನಿರಕ್ಷರಿಗಳಿರುತ್ತಾರೆ. ಕಲಾಹೀನರಿರುತ್ತಾರೆ. ಕಲೆಯ ಮತ್ತು ತಮ್ಮ ಕೈಗಾರಿಕೆಗಳ ಜ್ಞಾನವನ್ನು ಮಾಡಿಕೊಳ್ಳಲು ಅವರಿಗೆ ಅವಕಾಶವಿಲ್ಲ.

ಕೈಗಳಿಂದ ತಯಾರಿಸಲ್ಪಟ್ಟ ಕೆಲವು ಒಡವೆಗಳು ತಾಳುತ್ತವೆ. ಆದರೆ ಕೆಲವು ತಾಳುವುದಿಲ್ಲ. ಯಂತ್ರದಿಂದ ತಯಾರಿಸಲ್ಪಟ್ಟವುಗಳಷ್ಟು ಸರಿಯಾಗಿ ಕೆಲಸವನ್ನು ಕೊಡುವದಿಲ್ಲ. ನಮ್ಮ ಹಳ್ಳಿಗರಲ್ಲಿ ತಾಂತ್ರಿಕ ಜ್ಞಾನವಿಲ್ಲದಿರುವದೂ, ತಾಂತ್ರಿಕ ವಿಚಾರಗಳಲ್ಲಿ ಅವರಿಗೆ ಸಲಹೆ ಇಲ್ಲದಿರುವುದೂ ಇದಕ್ಕೊಂದು ಕಾರಣ.

ತಕ್ಕ ಯಂತ್ರೋಪಕರಣಗಳಿಲ್ಲದಿರುವದು ಇನ್ನೊಂದು ಕಾರಣ. ಅನೇಕ ಶತಮಾನಗಳಿಂದ ನಡೆದು ಬಂದಿರುವ ಸಾಧನೆಗಳಿಂದಲೇ ಈವರೆಗೂ ನಮ್ಮ ಹಳ್ಳಿಯವರು ಕೈಕಸಬುಗಳನ್ನು ಮಾಡುತ್ತ ಬಂದಿರುತ್ತಾರೆ. ಅತಿ ಕಡಿಮೆ ಖರ್ಚಿನಿಂದ ಅವುಗಳನ್ನೇ ಸುಧಾರಿಸಬರುತ್ತದೆ. ಎಷ್ಟೋ ವಿಷಯಗಳಲ್ಲಿ ಸುಧಾರಿಸಿದ ಹೊಸ ನಮೂನೆಯ ಯಂತ್ರ ಸಾಧನಗಳನ್ನು ಉಪಯೋಗಿಸಬರುತ್ತದೆ. ಹಳ್ಳಿಗಳಲ್ಲಿಯ ಬಡಿಗ ಕಮ್ಮಾರರು ಉಪಯೋಗಿಸುತ್ತಿರುವ ಸಾಧನಗಳು ಈ ಬಗ್ಗೆ ಉದಾಹರಣೆಗಳು.

ಕೆಲವು ಕೈಗಾರಿಕೆಗಳು ಮಿತಿ ಮೀರಿದ ಶ್ರಮವನ್ನೇ ಕೊಡುತ್ತವೆ. ಹಳೇ ದಿನಗಳಲ್ಲಿ ಇವುಗಳನ್ನು ಬಿಟ್ಟರೆ ಅನ್ಯ ಗತಿಯಿರಲಿಲ್ಲ. ಆದರೆ ಹೊಸ ರೀತಿಯ ಸಾಧನೆಗಳು ಶೋಧಿಸಲ್ಪಟ್ಟನಂತರ ಹಳ್ಳಿ ಹಳ್ಳಿಗಳಲ್ಲಿಯೂ ತಯಾರೀ ಒಡವೆಗಳು ಬರಹತ್ತಿದವು. ಯಂತ್ರ ಸಾಧನಗಳು ಬರಹತ್ತಿದವು. ಭತ್ತ ಕುಟ್ಟುವ ಗಿರಣಿಗಳು, ಹಿಟ್ಟಿನ ಗಿರಣಿಗಳು ಇದಕ್ಕೆ ಉದಾಹರಣೆಗಳು.

ಜನರ ನಡೆನುಡಿಗಳೂ, ಜೀವನದ ಕ್ರಮಗಳೂ ದಿನಗಳೆದಂತೆ ಬದಲಾಗುತ್ತವೆ. ಸಂದುಹೋದ ದಿನಗಳಲ್ಲಿ ಜನಪ್ರಿಯವಾದ ಒಡವೆಗಳಲ್ಲಿ ಕೆಲವೊಂದನ್ನು ಈ ಕಾಲಮಾನದಲ್ಲಿ ಜನರು ಕಣ್ಣೆತ್ತಿಯೂ ನೋಡುವದಿಲ್ಲ. ಹೀಗಾಗಿ ಕೆಲವೊಂದು ಕೈಗಾರಿಕೆಗಳು ಅಳಿಯ ಹತ್ತಿರುತ್ತವೆ. ಜನರ ಆರ್ಥಿಕ ಸ್ಥಿತಿಯು ಸುಧಾರಿಸಿದಂತೆ ಸ್ವಲ್ಪ ಹೆಚ್ಚು ಕ್ರಯಕೊಟ್ಟು ಕೂಡ ತಾಳಿಕೆಬಾಳಿಕೆಯುಳ್ಳ ಅಂದ ಚಂದವಾದ ಒಡವೆಗಳೇ ಆವರನ್ನು ಆಕರ್ಷಿಸುತ್ತವೆ. ಹಳ್ಳಿಯ ಕುಂಬಾರಿಕೆಯ ವ್ಯವಸಾಯದ ಅಳಿಗಾಲವು ಇದಕ್ಕೊಂದು ಉದಾಹರಣೆಯು.

ಹೊಸ ಹೊಸ ಶೋಧಗಳಿಂದಾಗಿ, ಕೇಂದ್ರೀಕೃತವಾ ದಕೈಗಾರಿಕೆಗಳಿಂದಾಗಿ, ನಮ್ಮ ಹಳ್ಳಿಯ ಕೈಗಾರಿಕೆಗಳು ಮೇಲೆ ವಿವರಿಸಲ್ಪಟ್ಟ ಕಾರಣಗಳಿಂದ ನಷ್ಟ ವಾದವು. ಸಂದು ಹೋದ ದಿನಗಳೇ ಸರಿಯಾದವುಗಳು. ಆ ಕಾಲದ ಜೀವನ ಮತ್ತು ಆರ್ಥಿಕ ವ್ಯವಸ್ಥೆಗಳಿಗೇ ನಾವು ಹಿಂದಿರುಗತಕ್ಕದ್ದು. ಆ ಕಾಲದಲ್ಲಿ ತಯಾರಿಸಲ್ಪಡುತ್ತಿದ್ದ ತರದ ಮತ್ತು ತರಗತಿಯ ಒಡವೆಗಳನ್ನೇ ನಾವು ತಿರುಗಿ ಉಪಯೋಗಿಸತಕ್ಕದ್ದು. ಇದರಿಂದಲೇ ನಮ್ಮ ಹಿತವಾಗುವದೆಂದು ನಮ್ಮ ಮುಖಂಡರಲ್ಲಿ ಅನೇಕರು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಜನ ಸಾಮಾನ್ಯರು, ಅಂದರೆ ಗಿರಾಕಿಗಳ ಹಾಗೂ ಅಳಿಯುತ್ತಿರುವ ಮತ್ತು ಅಳಿದು ಹೋದ ಕೈಗಾರಿಕೆಗಳಲ್ಲಿ ತೊಡಗಿದ್ದವರ ಅಭಿಪ್ರಾಯಗಳನ್ನು ಅವರು ವಿಚಾರಿಸು ವದಿಲ್ಲ. ಈಗಿನ ಜಗತ್ತಿನಲ್ಲಿ ತತ್ವಜ್ಞಾನ ಸದಸದ್ವಿಚಾರಗಳಿಗೆ ಮುಂಚಿನಷ್ಟು ಎಡೆ ಇಲ್ಲ. ಒತ್ತಾಯಕ್ಕೂ ಎಡೆ ಇಲ್ಲ. ಜನರ ವಿಚಾರಗಳು ಬದಲಾಗಿರುತ್ತವೆ, ಬದಲಾಗುತ್ತಿರುತ್ತವೆ. ಕೈಗಾರಿಕೆಗಳ ಪುನರುಜ್ಜೀವನದ ವಿಚಾರಗಳಲ್ಲಿ ಜನ ಸಾಮಾನ್ಯರು, ಅವರ ಒಲವು ಮತ್ತು ಅವರ ಹಿತ, ಇವೇ ಅತಿ ಮಹತ್ವದ ವಿಷಯಗಳು—ಅಲ್ಲದೆ, ಕೈಗಾರಿಕೆಯ ಒಡವೆಗಳಲ್ಲ.

## ೪. ವಿಧಾನಗಳು

ಈ ಅಭಿಪ್ರಾಯಗಳು ಸರಿಯಾಗಿದ್ದರೆ, ನಾವು ಕೈಕೊಳ್ಳಬೇಕಾದ ಅನೇಕ ವಿಧಾನಗಳಲ್ಲಿ ಕಡೆಗಣಿಸಲ್ಪಟ್ಟ ಒಂದೆರಡು ವಿಷಯಗಳನ್ನು ಕುರಿತು ವಿವೇಚಿಸು ವುದು ಅವಶ್ಯವದೆ. ಕೈಗಾರಿಕೆಗಳ ಸಾಧನಗಳು, ಅವುಗಳ ತಯಾರಿಕೆ ಮತ್ತು ತಾಂತ್ರಿಕ ಜ್ಞಾನ.

ನಮ್ಮ ಹಳ್ಳಿಗರು ಕೆಲವು ಶತಮಾನಗಳಿಂದಲೂ ಉಪಯೋಗಿಸಲಾಗುತ್ತಿರುವ ಸಾಧನೆಗಳನ್ನೇ ಉಪಯೋಗಿಸುತ್ತಿದ್ದಾರೆಂದು ಹೇಳಿದೆನು. ಆ ಕಾಲಕ್ಕೆ ಇವು ತಕ್ಕವಾಗಿದ್ದವು. ಆಗ ದೊಡ್ಡ ದೊಡ್ಡ ಕೇಂದ್ರಗಳಲ್ಲಿ ತಯಾರಾಗುತ್ತಿರುವ ಸರಕುಗಳಿಂದ ಗೃಹ ಕೈಗಾರಿಕೆಗಳ ಸರಕುಗಳಿಗೆ ಸ್ಪರ್ಧೆ ಇರಲಿಲ್ಲ. ಈ ಯುಗದಲ್ಲಿ ಸ್ಪರ್ಧೆ ಉಂಟಾಗಿದೆ. ವೇಗದಿಂದ ಮತ್ತು ಸುಧಾರಿಸಿದ ರೀತಿಯಿಂದ ಸರಕು ಗಳನ್ನು ತಯಾರಿಸತಕ್ಕ ಸಾಧನಗಳನ್ನು ಹಳ್ಳಿಗಳಲ್ಲಿ ಬಳಕೆಯಲ್ಲಿ ತರುವದು ಅತಿ ಅವಶ್ಯವಾಗಿರುತ್ತದೆ. ಕೆಲವು ಸಾಧನಗಳು ಪೇಟೆಯಲ್ಲಿ ದೊರಕುತ್ತವೆ. ಬಡಿಗತನ, ಕಮ್ಮಾರಿಕೆಗೆ ಬೇಕಾಗುವ ಸಾಧನಗಳು ಈ ಬಗ್ಗೆ ಉದಾಹರಣೆ. ಆದರೆ ಇತರ ಕೆಲವು ಕೈಗಾರಿಕೆಗಳಿಗೆ ಬೇಕಾಗುವ ಸಾಧನಗಳು ದೊರಕುವದಿಲ್ಲ. ಕೆಲವು ಕೈಗಾರಿಕೆಗಳಲ್ಲಿ ಈಗಿನ ಸಾಧನಗಳಲ್ಲಿ ಕೆಲಮಟ್ಟಿನ ಸುಧಾರಣೆಗಳನ್ನು ಮಾಡಿದರೂ ಸಾಕಾಗುತ್ತದೆ. ಕೆಲವು ವಿಷಯಗಳಲ್ಲಿ ಅತಿ ಕಡಿಮೆ ಶ್ರಮದಿಂದ ಹೊಸರೀತಿಯ ಉಪಕರಣಗಳನ್ನು ತಯಾರಿಸಬರುವಂತಿದೆ. ಈ ಬಗ್ಗೆ ಸಂಶೋಧನ ಕೇಂದ್ರಗಳು ಅವಶ್ಯವಿರುತ್ತವೆ. ೨-೩ ಜಿಲ್ಲೆಗಳಿಗೊಂದರಂತೆ ಕೇವಲ ಒಂದೆರಡೇ ಕೈಗಾರಿಕೆಗಳ ಅವಶ್ಯಕತೆಗಳನ್ನು ಗುರಿಯಾಗಿಟ್ಟುಕೊಂಡ ಕೇಂದ್ರಗಳು ಬೇಕು. ಅವು ಆಯಾ ಕೈಗಾರಿಕೆಗಳು ಬಳಕೆಯಲ್ಲಿರುವ ಪ್ರದೇಶಗಳಲ್ಲಿ

ಇರಬೇಕಾಗಿರುತ್ತದೆ. ಕೇವಲ ೧೫,೦೦೦—೨೦,೦೦೦ ರೂಪಾಯಿಗಳ ಮೆಶಿನರಿ ಗಳನ್ನು ಖರೀದಿಸಿ ೧,೫೦೦—೨,೦೦೦ ಚೌರಸ ಫೂಟಿನ ಸ್ಥಳದಲ್ಲಿ ಇಟ್ಟು ಈ ಕೆಲಸ ಮಾಡುವದು ಸಾಧ್ಯವದೆ. ಈ ಬಗ್ಗೆ ಸಾಲಿಯಾನ ಖರ್ಚು ೧೨,೦೦೦ ರೂಪಾಯಿ ಗಳ ಮಟ್ಟಿಗಿದ್ದರೂ ಸಾಕು.

ಈ ರೀತಿಯ ಸಂಶೋಧನಾಲಯಗಳಲ್ಲಿ ಹೊಸ ಮತ್ತು ಸುಧಾರಿಸಿದ ಸಾಧನಗಳನ್ನು ತಯಾರಿಸಿದರೆ ಸಾಲದು; ಅವುಗಳ ಪೂರೈಕೆಯಾಗಬೇಕು; ಮತ್ತು ಅವುಗಳ ಬಿಡಿಭಾಗಗಳು ಅವಶ್ಯವಿದ್ದಾಗ ವ್ಯವಸಾಯಗಾರರಿಗೆ ದೊರಕ ತಕ್ಕದ್ದು. ಅವು ಕೂಡ ಸವಲತ್ತಿನ ದರದಲ್ಲಿ ಅಥವಾ ತೀರ ಕಡಿಮೆ ದರದಲ್ಲಿ ದೊರಕತಕ್ಕದ್ದು. ಈ ಬಗ್ಗೆ ಕೂಡ ಸಂಸ್ಥೆಗಳ ನಿರ್ಮಾಣವಾಗತಕ್ಕದ್ದು.

ಇನ್ನು ಹೊಸ ಮಾದರಿಯ ಉಪಕರಣಗಳಂದರೇನು.—ಅವುಗಳ ಉದ್ದೇಶ ಗಳೇನು? ನಮ್ಮಲ್ಲಿಯ ಕೈಗಾರಿಕೆಗಳು ಕೇವಲ ಕೈಗಳಿಂದ ಅಥವಾ ಕಾಲುಗಳಿಂದ ಮತ್ತು ಕೆಲವು ಪ್ರಸಂಗಳಲ್ಲಿ ಎತ್ತು ಒಂಟೆ ಮೊದಲಾದ ಪ್ರಾಣಿಗಳ ಸಹಾಯ ದಿಂದ ನಡಿಸಲ್ಪಡುತ್ತವೆ. ಇತ್ತಿತ್ತಲಾಗಿನವರೆಗೆ ವಿದ್ಯುತ್ ಸಹಾಯ ಮತ್ತು ಇಂಜನುಗಳ ಸಹಾಯವನ್ನು ಪಡಕೊಳ್ಳುವದು ನಿಷಿದ್ಧವೆಂದು ನಮ್ಮ ಮುಂದಾಳುಗಳು ತಿಳಿಯುತ್ತಿದ್ದರು. ಬಾಲಬೇರಿಂಗ ಉಪಯೋಗಿಸಿದ್ದ ಸಾಧನಗಳು ಕೂಡಾ ನಿಷಿದ್ಧವಾದವೆಂದು ಕೆಲವರು ಹೇಳುತ್ತಿದ್ದರು. ಈ ತಿಳು ವಳಿಕೆಗಳು ಈಗ ಬದಲಾಗಿರುತ್ತವೆ. ಅಂಬರ ಚರಖಾವನ್ನು ಕೂಡಾ ವಿದ್ಯುತ್ ಸಹಾಯದಿಂದ ನಡಿಸಿದರೂ ತನ್ನ ಒಪ್ಪಿಗೆ ಇರುತ್ತದಾಗಿ ಮೊನ್ನೆ ಮೊನ್ನೆ ಶ್ರೀ ವಿನೋಬಾ ಭಾವೆಯವರು ಹೇಳಿರುತ್ತಾರೆ. ಇಷ್ಟೇ—ಅವು ಹಳ್ಳಿಗಳಲ್ಲಿ ಅಥವಾ ಗುಡಿಸಲುಗಳಲ್ಲಿ ಕೆಲಸ ಮಾಡುವವರು ತಮ್ಮ ಸ್ವಂತ ಹಣದಿಂದ, ಅಥವಾ ಸ್ವಲ್ಪವೇ ಅವಧಿಯಲ್ಲಿ ತೀರಿಸಬಹುದಾದ ಸಾಲದ ಹಣದಿಂದ ಖರೀದಿಸ ಬರುವಂಥವಿರಬೇಕು. ನಾಲ್ಕಾರು ಜನರು ಅಥವಾ ಹೆಚ್ಚಿನ ಜನರು ಕೂಡ ಸಾಮುದಾಯಕವಾಗಿ ಖರೀದಿಸಬಹುವಂಥವಿದ್ದರೂ ನಡಿಯಬಹುದು.

ಆ ಮೇಲೆ ಈ ರೀತಿಯ ಉಪಕರಣಗಳ ಪ್ರಚಾರವು ಹಳ್ಳಿಗಳಲ್ಲಾಗ ತಕ್ಕದ್ದು. ಇವುಗಳಿಂದಾಗತಕ್ಕ ಉಪಯೋಗಗಳು ಜನರ ನಿದರ್ಶನಕ್ಕೆ ಬರತಕ್ಕದ್ದು. ಅದಕ್ಕಾಗಿ ಪ್ರತಿ ಜಿಲ್ಲೆಯಲ್ಲಿ ಒಂದೆರಡರಂತೆ ಮಾದರಿ ಕೇಂದ್ರಗಳ ಅವಶ್ಯಕತೆ ಯಿದೆ. ಇಲ್ಲಿ ಆಯಾ ಪ್ರದೇಶಗಳ ಕೈಗಾರಿಕೆಗಳನ್ನು ಸುಧಾರಿಸಿದ ಪದ್ಧತಿ ಯಿಂದ ನಡಿಸತಕ್ಕದ್ದು.

ಈ ಮಾದರೀ ಕೇಂದ್ರಗಳು ಕೇವಲ ನಿದರ್ಶನಕ್ಕಾಗಿರದೆ ವ್ಯಾಪಾರಿ ಪದ್ಧತಿಯಿಂದ ನಡಿಸಲ್ಪಡತಕ್ಕದ್ದು. ಯಾವದೊಂದು ಹೊಸ ಸಾಧನದಿಂದ ನಡಿಸಲ್ಪಡುವ ಕೈಗಾರಿಕೆಯ ಮೂಲಕ ಯಾವರೀತಿಯಿಂದ ಲಾಭಗಳಾಗುತ್ತವೆ ಯೆಂಬದು ಅಲ್ಲಿ ಹೋದಾಕ್ಷಣ ಜನರ ತಿಳಿವಳಿಕೆಗೆ ಬರಬೇಕು.

ಸಂಶೋಧನಾಲಯಕ್ಕೆ ಸಂಬಂಧಪಟ್ಟ ೨-೩ ಸಂಚಾರೀ ಶಿಕ್ಷಣ ವ್ಯವಸ್ಥೆ ಇರತಕ್ಕದ್ದು. ಈ ಸಂಚಾರೀ ಶಾಲೆಗಳು ಅದರಲ್ಲಿ ಸುಧಾರಿಸಲ್ಪಟ್ಟ ಹಾಗೂ ಹೊಸದಾಗಿ ಸಂಶೋಧಿಸಲ್ಪಟ್ಟ ಯಂತ್ರೋಪಕರಣಗಳ ಪ್ರಚಾರವನ್ನು

ಸಂಬಂಧಪಟ್ಟ ಹಳ್ಳಿ ಹಳ್ಳಿಗಳಿಗೂ, ಜಾತ್ರೆ ಪ್ರದರ್ಶನಗಳಿಗೂ ಹೋಗಿ ಮಾಡತಕ್ಕದ್ದು.

ಇಂಥ ಹಳ್ಳಿಗಳಲ್ಲಿ ಈ ರೀತಿಯ ಸಾಧನಗಳನ್ನೂ, ಬಿಡಿ ಭಾಗಗಳನ್ನೂ ಕಡಿಮೆ ಅಥವಾ ಸವಲತ್ತಿನ ದರದ ಮೇಲೆ ಮಾರಾಟ ಮಾಡುವ ಅಂಗಡಿಗಳಿರ ಬೇಕು. ಕೇವಲ ಈ ಬಗ್ಗೆ ಅಂಗಡಿಗಳನ್ನು ಸ್ಥಾಪಿಸಬೇಕೆಂಬುದಲ್ಲ. ಕೋ-ಆಪರೇಟಿವ್ ಅಥವಾ ಇತರ ಮಾರಾಟದ ಸಂಸ್ಥೆಗಳಲ್ಲಿ ಇತರ ಸರಕುಗಳಂತೆ ಅವನ್ನೂ ಮಾರಾಟ ಮಾಡುವ ವ್ಯವಸ್ಥೆಗಳನ್ನು ಮಾಡತಕ್ಕದ್ದು. ತಯಾರಿಕೆಯ ಹೊಸ ಕ್ರಮಗಳನ್ನು ಇಂಥ ಸಂಘಗಳವರು ಕಲಿಸುವ ಏರ್ಪಾಡು ಇರತಕ್ಕದ್ದು ಅಥವಾ ಈ ಶಿಕ್ಷಣದ ಹೊಣೆಗಾರಿಕೆಯನ್ನು ಹಳ್ಳಿಗಳ ಶಾಲೆಗಳ ಅಧ್ಯಾಪಕರ ಲ್ಲೊಬ್ಬರಿಗೆ ಒಪ್ಪಿಸತಕ್ಕದ್ದು. ಯಾವನೊಬ್ಬನು ಶಿಕ್ಷಣಹೊಂದಿದ ಬಳಿಕ ಹೊಸ ಮಾದರಿಯ ಸಾಧನಗಳನ್ನು ಖರೀದಿಸಿದಾಗ ಆ ಶಿಕ್ಷಣ ಕೊಟ್ಟವರಿಗೆ ನಿರ್ದಿಷ್ಟ ಪಡಿಸಿದ ಕಮಿಶನ್ ಅಥವಾ ಫೀಯನ್ನು ಕೊಡುವ ವ್ಯವಸ್ಥೆಯನ್ನು ಸಂಶೋಧ ನಾಲಯದವರು ಮಾಡತಕ್ಕದ್ದು.

ಹೀಗೆ ಮಾಡುವದರಿಂದ ಹಳ್ಳಿಗಳಿಗೂ, ಸಂಶೋಧನಾಲಯಗಳಿಗೊ ಒಂದು ರೀತಿಯ ಪ್ರೇಮ ಸಂಬಂಧ ಉಂಟಾಗುತ್ತದೆ. ಅದರ ಕಾರ್ಯಕ್ರಮಗಳ ಪ್ರಸಾರವಾಗುತ್ತದೆ. ಹಳ್ಳಿಗರಿಗೆ ಹೊಸ ಉಪಕ್ರಮಗಳ ಬಗ್ಗೆ ಇರುವ ಸಂಶಯ ಗಳ ನಿವಾರಣೆಯಾಗುತ್ತದೆ. ಈ ವಿನಹ ಅಂಥವುಗಳಲ್ಲಿಯ ಕುಂದು ಕೊರತೆಗಳ ನಿವಾರಣೆ ಇನ್ನೂ ಹೆಚ್ಚಿನ ಸುಧಾರಣೆಗಳು ಸಾಧ್ಯವಾಗುತ್ತವೆ.

ಈ ಸಂಶೋಧನಾಲಯಗಳ ಇನ್ನೊಂದು ಶಾಖೆಯಲ್ಲಿ ಹೊಸ ಮಾದರಿಯ ಒಡವೆಗಳ ತಯಾರಿಕೆ, ಹಳೇ ಒಡವೆಗಳ ಸುಧಾರಣೆ, ಈಗ ಹಳ್ಳಿಗಳಲ್ಲಿ ಹಾಳಾಗು ತ್ತಿರುವ ಕಚ್ಚಾಮಾಲುಗಳ ಉಪಯೋಗ – ಈ ಕುರಿತು ಪ್ರಯತ್ನಗಳು ನಡೆಯ ತಕ್ಕದ್ದು. ಈಗ ಪ್ರಚಾರದಲ್ಲಿರುವ ಯಾವದೊಂದು ಒಡವೆಯು ಪೇಟೆಯು ಹಾಳಾಗಹತ್ತಲು ಅವುಗಳ ಬದಲು ಇನ್ಯಾವ ಒಡವೆಯನ್ನು ಆ ವ್ಯವಸಾಯಗಾರರು ಮಾಡತಕ್ಕದ್ದು ಎಂಬದರ ವಿಚಾರಗಳೂ ಅಲ್ಲಿ ನಡೆಯತಕ್ಕದ್ದು. ದೊಡ್ಡ ಕೇಂದ್ರಗಳಿಂದ ಹಳ್ಳಿಗಳಿಗೆ ತರಿಸಿಕೊಳ್ಳಲ್ಪಡುವ ಒಡವೆಗಳಲ್ಲಿ ಯಾವ್ಯಾವವನ್ನು ಮುಖ್ಯತಃ ಹಳ್ಳಿಗಳಲ್ಲಿ ಹಾಳಾಗುತ್ತಿರುವ ಕಚ್ಚಾ ಸರಕುಗಳಿಂದ ಮಾಡಬರುತ್ತದೆ ಯೆಂಬುದನ್ನು ಕೂಡ ಅವುಗಳಲ್ಲಿ ವಿವೇಚಿಸಲ್ಪಡತಕ್ಕದ್ದು ಮತ್ತು ಪರಿಣಾಮ ಗಳನ್ನು ಪ್ರಚಾರಕರ ಮುಖಾಂತರ ಹಳ್ಳಿಗಳಲ್ಲಿ ಸಾರತಕ್ಕದ್ದು.

ಆ ಮೇಲೆ ಇವೇ ಸಂಶೋಧನಾಲಯಗಳಿಗೆ ಸಂಬಂಧಪಟ್ಟ ಒಂದು ಶಾಲೆ ಇರತಕ್ಕದ್ದು. ಅದರಲ್ಲಿ ಕೈಗಾರಿಕೆಗಳನ್ನು ಹಳ್ಳಿಗರಿಗೆ ಕಲಿಸುವ ಶಿಕ್ಷಕರ ತರಬೇತಿಯಾಗತಕ್ಕದ್ದು. ಈ ರೀತಿಯ ಶಾಲೆಗಳನ್ನು ಮಾದರೀ ಕೇಂದ್ರಗಳಿಗೂ ಹಚ್ಚಬರುತ್ತದೆ. ಅದರಿಂದಲೂ ಕೆಲಮಟ್ಟಿನ ಲಾಭಗಳು ಉಂಟಾಗುತ್ತವೆ. ಆದರೆ ಶಿಕ್ಷಕರಲ್ಲಿ ಸಂಶೋಧನೆಯನ್ನು ಮಾಡುವ ಒಲವು ಹುಟ್ಟತಕ್ಕದ್ದು ಎಂದಿದ್ದರೆ ಅವುಗಳನ್ನು ಸಂಶೋಧನಾಲಯಗಳಿಗೆ ಸೇರಿಸಿಡುವದರಿಂದಲೇ ಹೆಚ್ಚಿನ ಲಾಭವಾಗುತ್ತದೆ. ಕೈಗಾರಿಕೆಗಳು ಇನ್ನೂ ಹೀನಸ್ಥಿತಿಯಲ್ಲಿರುವ ನಮ್ಮ ದೇಶಕ್ಕೆ



ಕಾರವಾರದ ಬಳಿ ಸಮುದ್ರ ತೀರ



ಕುಮಟದ ಬಳಿ ದೇವಗಿ ನದಿಯ ಒಂದು ದೃಶ್ಯ



ಖೆಡ್ಡಾದಲ್ಲಿ ಕಾಡಾನೆಗಳನ್ನು ಪಳಗಿದ ಆನೆಗಳು ಕೊಂಡೊಯ್ಯುತ್ತಿರುವುದು



ಬಂಡೀಪುರದ ಆರಣ್ಯದಲ್ಲಿ ಕಾಡು ಕೋಣಗಳು

ಕೆಲಮುಟ್ಟಿನ ತಾಂತ್ರಿಕ ಜ್ಞಾನವುಳ್ಳ ಶಿಕ್ಷಕರು ಅತಿ ಅವಶ್ಯ. ಈ ಜ್ಞಾನವು ತಾನಾಗಿ ಸಂಶೋಧನಾಲಯಗಳಿಗೆ ಸೇರ್ಪಟ್ಟು ಇರುವವರಲ್ಲಿ ಬರುತ್ತದೆ.

## ೫. ಹಣದ ವಿನಿಯೋಗ

ನಮ್ಮ ಪಂಚವಾರ್ಷಿಕ ಯೋಜನೆಗಳಂತೆ ಕೈಗಾರಿಕೆಗಳ ಪುನರ್ನಿವೇಶನಕ್ಕೆ ದೊರೆಯುವ ಹಣದಲ್ಲಿ ಬಹು ಅಂಶವನ್ನು ಸಾಲ ಸಹಾಯ ಧನಗಳಿಗೇ ಹಂಚಿ ಹಾಕುವ ಧೋರಣವು ಅನೇಕ ಮುಂದಾಳುಗಳಲ್ಲಿ ಕಾಣಬರುತ್ತದೆ. ಇವು ಅವಶ್ಯವೇ. ಆದರೆ ಅವಶ್ಯವಿದ್ದುದಕ್ಕಿಂತ ಹೆಚ್ಚಿನ ಹಣವನ್ನು ಇವುಗಳಿಗಾಗಿ ಕೊಡುವದರಿಂದ ಪರಾವಲಂಬನದ ಪ್ರವೃತ್ತಿಯು ನಮ್ಮ ಹಳ್ಳಿಗರಲ್ಲಿ ಬೆಳೆಯ ಬಹುದು. ಕೇವಲ ಇವುಗಳನ್ನು ಪಡಕೊಳ್ಳುವದಕ್ಕಾಗಿಯೇ, ನಾಯಿ ಕೊಡೆಗಳು (ಹಣಬೆ) ಮಳೆಗಾಲದಲ್ಲಿ ಹುಟ್ಟುವ ರೀತಿಯಿಂದ ಸಂಸ್ಥೆಗಳು ನಿರ್ಮಾಣವಾಗ ಬಹುದು. ಹಣದ ಅಪವ್ಯಯವೂ ಆಗಬಹುದು. ಸರಕಾರದಿಂದ ಮೀಸಲಾಗಿಟ್ಟ ಹಣವು ಕೈಗಾರಿಕೆಗಳ ಶಾಶ್ವತವಾದ ಸಹಾಯಕ್ಕಾಗಿಯೇ ವಿನಿಯೋಗವಾಗ ತಕ್ಕದ್ದು. ಇವು ಸರಿಯಾದ ವಿಚಾರಗಳಾಗಿದ್ದರೆ, ಮೇಲೆ ವಿವರಿಸಿದ ರೀತಿಗಳ ಸಂಶೋಧನಾಲಯಗಳೂ, ಮಾದರಿ ಕೇಂದ್ರಗಳೂ, ಯಂತ್ರ ಮತ್ತು ಅವುಗಳ ಬಿಡಿ ಭಾಗಗಳ ತಯಾರಿಕೆಯ ಕೇಂದ್ರಗಳೂ, ಅವುಗಳ ಮಾರಾಟದ ವ್ಯವಸ್ಥೆಯೂ, ಶಿಕ್ಷಕರ ತರಬೇತಿಯ ಕೇಂದ್ರಗಳೂ, ಹಳ್ಳಿಗಳಲ್ಲಿಯೇ ಹಳ್ಳಿಗರ ಶಿಕ್ಷಣಕ್ಕಾಗಿ ವ್ಯವಸ್ಥೆಗಳೂ ಅತ್ಯವಶ್ಯ. ಇವೆಲ್ಲ ಕೂಡಿ ಒಂದು ಯೂನಿಟ್ ಎಂದು ತಿಳಿಯ ಬೇಕಾಗಿರುತ್ತದೆ. ಇವುಗಳಲ್ಲಿ ಒಂದು ಕಳಚಿ ಹೋದರೂ ಈ ಏರ್ಪಾಡು ಸರಿಯಾಗಿ ನಡೆಯಲಾರದು. ಇದಕ್ಕಾಗಿ ಅವಶ್ಯವುಳ್ಳಷ್ಟು ಹಣವು ಮೀಸಲಾಗಿ ಇಡಲೇಬೇಕು. ನಮ್ಮ ಸರಕಾರಗಳ ಮತ್ತು ಮುಂದಾಳುಗಳ ಗಮನ ಸಾಕಷ್ಟು ಪ್ರಮಾಣದಿಂದ ಇತ್ತ ಸಾಗಿರುವದಿಲ್ಲ.

---

# ಕನ್ನಡ ಪತ್ರಿಕಾ ಪ್ರಪಂಚ

ಲೇಖಕರು :
ಶ್ರೀಮಾನ್ ಪಿ. ಆರ್. ರಾಮಯ್ಯನವರು, ಬೆಂಗಳೂರು.

## ೧. ಹೊಸ ಸನ್ನಿವೇಶ

ನೂತನ ವಿಶಾಲ ಮೈಸೂರು ರಾಜ್ಯವು ನಿರ್ಮಾಣವಾಯಿತು. ಇದು ಅಖಂಡ ಕರ್ಣಾಟಕದ ಆಧುನಿಕ ಪುನರ್ಜನ್ಮವೆಂದು ಹೇಳಬಹುದು. ಈ ನೂತನ ವಿಶಾಲ ಮೈಸೂರು ರಾಜ್ಯದಲ್ಲಿ ಕರ್ಣಾಟಕದ ಆತ್ಮಶಕ್ತಿಯು ಮತ್ತೊಮ್ಮೆ ರೂಪುಗೊಂಡು ಕನ್ನಡಿಗರ ನೂತನ ರಾಷ್ಟ್ರಜೀವನದಲ್ಲಿ ಬಹುಮುಖವಾಗಿ ಪ್ರಜ್ವಲಿಸುವುದು. ಈ ಸನ್ನಿವೇಶದಲ್ಲಿ ಕನ್ನಡ ಪತ್ರಿಕೆಗಳ ಪಾತ್ರವು ಇನ್ನೂ ಹೆಚ್ಚಿನ ಮಹತ್ವಪೂರಿತವಾಗುತ್ತವೆ.

ಇಂದಿನ ಪ್ರಪಂಚದಲ್ಲಿ ಭಾರತವು ಹೊಸ ಸನ್ನಿವೇಶದಲ್ಲಿದೆ. ಮಹಾತ್ಮಾ ಗಾಂಧಿಯವರು ಭಾರತಕ್ಕೆ ಸತ್ಯ, ಅಹಿಂಸೆ, ಅಸಹಕಾರ ಮಾರ್ಗಗಳಿಂದ ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟು ಚಿರಂಜೀವಿಗಳಾಗಿದ್ದಾರೆ. ಗಾಂಧೀಜಿಯವರ ಪಟ್ಟಶಿಷ್ಯರಾದ ಭಾರತದ ಪ್ರಧಾನಿ ಪಂಡಿತ ಜವಹರಲಾಲ ನೆಹರುರವರು ಸ್ವತಂತ್ರ ಭಾರತವನ್ನು ಸುಭದ್ರವಾದ ತಳಹದಿಯ ಮೇಲೆ ನಿರ್ಮಿಸುತ್ತಿದ್ದಾರೆ. ಗಾಂಧೀಜಿಯವರ ಸತ್ಯ, ಅಹಿಂಸೆ, ಶಾಂತಿ ತತ್ವಗಳ ಮೇಲೆ ಭಾರತದ ಪ್ರಗತಿಯನ್ನು ರೂಪಿಸಲೂ, ವಿಶ್ವಶಾಂತಿಯನ್ನು ಸಾಧಿಸಲೂ ಪ್ರಧಾನಿ ನೆಹರುರವರು ಅವಿಶ್ರಾಂತವಾಗಿ ಶ್ರಮಿಸುತ್ತಿದ್ದಾರೆ. ಆಧುನಿಕ ಜಗತ್ತಿಗೆ ಭಾರತದ ಶಾಂತಿ ಸಂದೇಶವು ಅಗತ್ಯವಾಗಿದೆ.

ವಿಶ್ವಶಾಂತಿಸಾಧನೆಯೂ, ಸರ್ವಪ್ರಾಣಿಗಳಲ್ಲಿ ಭೂತದಯಾಭಾವನೆಯೂ, ಮಾನವಕುಟುಂಬದ ಶ್ರೇಯಸ್ಸಾಧನೆಯೂ, ವೇದಕಾಲದಿಂದಲೂ ಭಾರತೀಯ ಸಂಸ್ಕೃತಿಯಲ್ಲಿ ಬೆಳೆದು ಬಂದ ನಿತ್ಯತತ್ವಗಳಾಗಿವೆ. ಬ್ರಿಟಿಷರ ಆಳ್ವಿಕೆಯ ಮತ್ತು ಆಂಗ್ಲವಿದ್ಯಾಭ್ಯಾಸದ ಪರಿಣಾಮವಾಗಿ ಪಾಶ್ಚಿಮಾತ್ಯ ಜ್ಞಾನ ಭಂಡಾರವೂ, ವೈಜ್ಞಾನಿಕ ವಿದ್ಯೆಯೂ, ಆಧುನಿಕ ನಾಗರೀಕತೆಯ ಅಂಶಗಳೂ ಭಾರತೀಯ ಸಂಸ್ಕೃತಿಯಲ್ಲಿ ಮಿಳನವಾಗಿವೆ. ಭಾರತವು ಈ ಪುರಾತನ ಮತ್ತು ಆಧುನಿಕ ಸಂಸ್ಕೃತಿಗಳೆರಡನ್ನೂ ಸಮನ್ವಯಮಾಡಿಕೊಂಡು, ತನ್ನ ಪ್ರಗತಿಯನ್ನೂ, ವಿಶ್ವಶಾಂತಿಯನ್ನೂ ರೂಪಿಸುತ್ತಿದೆ. ಮಾನವ ಸಂಸ್ಕೃತಿಯ ಸೌಜನ್ಯತೆಯು ಭಾರತೀಯ ಸಂಸ್ಕೃತಿಯಲ್ಲಿ ಪ್ರಕಾಶವಾಗಿರುವಷ್ಟು ಮಟ್ಟಿಗೆ, ಪ್ರಪಂಚದ ಇನ್ನಾವ ಸಂಸ್ಕೃತಿಯಲ್ಲಿಯೂ ಇಲ್ಲವೆಂದು ಬಲ್ಲವರು ಹೇಳಿದ್ದಾರೆ.

## ೧. ಪತ್ರಿಕೆಗಳು ಮತ್ತು ಜನಸೇವೆ

ಜನತೆಯ ಸಾರ್ವತ್ರಿಕ ಪ್ರಗತಿ ಸಾಧನೆಯಲ್ಲಿ ಪತ್ರಿಕೆಗಳ ಪಾತ್ರವು ಮಹತ್ವದ್ದಾಗಿದೆ. ಕನ್ನಡ ಜನತೆಗೆ ಕನ್ನಡ ಪತ್ರಿಕೆಗಳಿಂದಲೇ ರಾಷ್ಟ್ರಶಕ್ತಿಯ ಅರಿವುಂಟಾಗಬೇಕು. ಭಾರತದ ರಾಷ್ಟ್ರೀಯ ಐಕಮತ್ಯಕ್ಕೆ ಮತ್ತು ಪ್ರಗತಿಗೆ ಕನ್ನಡಿಗರೂ ತಮ್ಮ ಸೇವಾಭಾಗವನ್ನು ಸಲ್ಲಿಸಬೇಕು. ನೂತನ ವಿಶಾಲ ಮೈಸೂರು ಭಾರತದ ಒಂದು ಮುಖ್ಯಅಂಗವಾಗುವುದು. ಕರ್ಣಾಟಕ ಆತ್ಮ ಶಕ್ತಿಯು ಈ ನೂತನ ರಾಜ್ಯದಲ್ಲಿ ಪ್ರಕಾಶಗೊಳ್ಳುವುದು. ಪ್ರತಿಯೊಬ್ಬ ಕನ್ನಡಿಗ ನಲ್ಲಿಯೂ ಈ ಆತ್ಮ ಶಕ್ತಿಯು ವಿಕಾಸವಾಗಬೇಕು. ನೂತನ ಮೈಸೂರು ರಾಜ್ಯದ ಪ್ರಗತಿಯೂ, ಸಮಗ್ರ ಭಾರತದ ಅಭಿವೃದ್ಧಿಯೂ ಪರಸ್ಪರ ಹೊಂದಾಣಿಕೆ ಯಿಂದಲೂ, ಸೌಹಾರ್ದದಿಂದಲೂ ಮುಂದುವರಿಯಬೇಕು. ಜನತೆಯ ತಿಳಿವಳಿ ಕೆಯೂ, ಸಾರ್ವತ್ರಿಕ ಅಭಿವೃದ್ಧಿಯ ಅಂಶಗಳೂ ಪತ್ರಿಕೆಗಳಿಂದಲೇ ಜನತೆಯಲ್ಲಿ ಹರಡಬೇಕು. ನಾಡಿನ ಪ್ರಗತಿಗೆ ಪ್ರತಿಕೂಲವಾದಂಶಗಳನ್ನು ನಿರ್ಮೂಲ ಮಾಡಬೇಕು. ಹೀಗೆ ದೇಶದ ಅಭ್ಯುದಯಕ್ಕೆ ಪತ್ರಿಕೆಗಳ ಸೇವೆಯು ಬಹು ಅವಶ್ಯಕವಾದುದು ಎಂಬುದರಲ್ಲಿ ಸಂದೇಹವಿಲ್ಲ.

## ೨. ಮೈಸೂರು ಮತ್ತು ಕರ್ಣಾಟಕ

ಮೈಸೂರು ಮತ್ತು ಕರ್ಣಾಟಕದಲ್ಲಿ ಪತ್ರಿಕೆಗಳ ಉದಯವು ಈಗ ಸುಮಾರು ೭೦-೮೦ ವರ್ಷಗಳ ಹಿಂದೆ ಆಯಿತು. ಮೈಸೂರಿನಲ್ಲಿ ಕನ್ನಡ ಪತ್ರಿಕೆಗಳ ವ್ಯವಸಾಯವೂ, ಪ್ರಚಾರವೂ, ಪ್ರಭಾವವೂ ಮುಖ್ಯವಾಗಿ ಮೈಸೂರಿನ ವೃದ್ಧಪಿತಾಮಹರೆಂದೂ, ತಾತಯ್ಯನವರೆಂದೂ ಪ್ರಸಿದ್ಧರಾದ ದಿವಂಗತ ಎಂ. ವೆಂಕಟಕೃಷ್ಣಯ್ಯನವರಿಂದಲೂ, ಅವರ ಕಾಲದಲ್ಲೂ ನಡೆದುಬಂದಿತು. ಬೆಂಗಳೂರಿನಲ್ಲಿಯೂ ಅನೇಕ ಪತ್ರಿಕೆಗಳು ನಡೆದುಬಂದಿವೆ. ಮಂಗಳೂರು, ಹುಬ್ಬಳ್ಳಿ, ಧಾರವಾಡಗಳಲ್ಲಿಯೂ ಅನೇಕ ಕನ್ನಡ ಪತ್ರಿಕೆಗಳು ಪ್ರಕಾಶವಾಗಿ ನಡೆಯುತ್ತಿವೆ. ದೈನಂದಿನ ಪತ್ರಿಕೆಗಳು ಜನಸೇವೆಯಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತಿವೆ. ಈಗ ೪೦-೫೦ ವರ್ಷಗಳ ಹಿಂದಿನ ಸ್ಥಿತಿಗೂ ಈಗಿನ ಸ್ಥಿತಿಗೂ ಎಷ್ಟೋ ವ್ಯತ್ಯಾಸವಿದೆ.

ಈಗ ಜನತೆಯ ರಾಜಕೀಯ ತಿಳಿವಳಿಕೆ ಮಟ್ಟವು ಹಿಂದಿಗಿಂತಲೂ ಅಧಿಕವಾಗಿದೆ, ವಿಶಾಲವಾಗಿದೆ. ಪ್ರಪಂಚದ ನಾನಾ ದೇಶಗಳ ವಿಚಾರಗಳು ಜನರಿಗೆ ಗೊತ್ತಾಗುತ್ತಿವೆ. ನಾನಾ ದೇಶಗಳ ಪರಿಸ್ಥಿತಿಗಳೇನು, ನಮ್ಮ ದೇಶದ ಪರಿಸ್ಥಿತಿಗಳೇನು, ವಿಶ್ವಶಾಂತಿಗೆ ಧಕ್ಕೆ ಬರದಂತೆ ನಮ್ಮ ದೇಶವೂ ಇತರ ದೇಶಗಳೂ ಯಾವ ರೀತಿಯಲ್ಲಿ ಪ್ರಗತಿಹೊಂದಬೇಕು, ಜನತೆಯ ಕರ್ತವ್ಯ ವೇನು, ರಾಷ್ಟ್ರ ನಾಯಕರ ಜವಾಬ್ದಾರಿಯೇನು, ಎಂಬಂಶಗಳು ಜನರಿಗೆ ಗೊತ್ತಾಗುತ್ತಿವೆ.

ಪ್ರಜಾಪ್ರಭುತ್ವದ ಈ ಯುಗದಲ್ಲಿ, ಪ್ರಜಾರಾಜ್ಯದಲ್ಲಿ, ಜನತೆಯನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯುವುದು ಪತ್ರಿಕೆಗಳ ಜವಾಬ್ದಾರಿ. ಪತ್ರಿಕೆಗಳೆಂದರೆ ದೇಶದ ಪ್ರಗತಿಯ ಜ್ಯೋತಿ. ಪತ್ರಿಕೆಗಳ ಸಂಪಾದಕವರ್ಗದವರು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಲು ಶಕ್ತರಾಗಿರಬೇಕು ಮತ್ತು ಅರ್ಹರಾಗಿರಬೇಕು. ಜನತೆಯಾಗಲಿ, ಸರ್ಕಾರಗಳಾಗಲಿ ರಾಷ್ಟ್ರದ ಹಿತಸಾಧನೆಗೆ ವಿರುದ್ಧವಾಗಿ ನಡೆದರೆ ಇದನ್ನು ಸರಿಪಡಿಸುವುದು ಪತ್ರಿಕೆಗಳ ಕರ್ತವ್ಯ. ಸಾರ್ವಜನಿಕ ಹಿತಸಾಧನೆಯಲ್ಲಿ ಸ್ವಾರ್ಥಸಾಧನೆಗೆ ಎಡೆಯಿಲ್ಲ.

## ೪. ಇಂದಿನ ಆವಶ್ಯಕತೆ

ಪತ್ರಿಕೆಗಳ ಪ್ರಚಾರವು ಹೆಚ್ಚಾದಷ್ಟೂ ಜನತೆಯಲ್ಲಿ ತಿಳಿವಳಿಕೆ ಮಟ್ಟವು ಹೆಚ್ಚುತ್ತದೆ. ಕನ್ನಡ ನಾಡಿನಲ್ಲಿ ಪತ್ರಿಕೆಗಳ ಸಂಖ್ಯೆಯೂ, ಪ್ರಚಾರವೂ ಈಗಿನಿಗಿಂತ ಎಷ್ಟೋಪಾಲು ಹೆಚ್ಚಬೇಕು. ಓದುಬರಹ ಬಲ್ಲವರೆಲ್ಲರೂ ಪತ್ರಿಕೆಗಳನ್ನು ಕೊಂಡುಕೊಳ್ಳಬೇಕು. ಗಂಡಸರು, ಹೆಂಗಸರು ಎಲ್ಲರೂ ಪತ್ರಿಕೆಗಳನ್ನು ಓದಬೇಕು. ತಿಳುವಳಿಕೆಯೂ, ವಿಶಾಲಭಾವನೆಯೂ ಹೆಚ್ಚಬೇಕು. ಜನತೆಯಲ್ಲಿ ಪರಸ್ಪರ ಸೌಹಾರ್ದಭಾವನೆ, ಮೈತ್ರಿ, ಸಹನೆ ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಕಾರ್ಯಸಾಧನೆ ಶಕ್ತಿ, ಆರ್ಥಿಕ ಪ್ರಗತಿ ಮತ್ತು ಧಾರ್ಮಿಕ ಭಾವನೆ ಹೆಚ್ಚಬೇಕು. ಪತ್ರಿಕೆಗಳ ಚಂದಾದಾರರ ಸಂಖ್ಯೆ ಈಗಿರುವ ಹತ್ತಾರು ಸಾವಿರ ಏನೂ ಸಾಲದು. ಕ್ಷಿಪ್ರದಲ್ಲಿಯೇ ಕನ್ನಡ ಪತ್ರಿಕೆಗಳಿಗೆ—ಪ್ರತಿ ಪತ್ರಿಕೆಯ ಚಂದಾದಾರರ ಸಂಖ್ಯೆ ಐವತ್ತು ಸಾವಿರಕ್ಕಾದರೂ ಏರಬೇಕು. ಪಾಶ್ಚಿಮಾತ್ಯ ದೇಶಗಳ ಪತ್ರಿಕೆಗಳಂತೆ ಲಕ್ಷಗಟ್ಟಲೆ ಚಂದಾದಾರರ ಸಂಖ್ಯೆಇರಬೇಕು. ಪತ್ರಿಕೆಗಳ ಆರ್ಥಿಕಬಲವು ಹೆಚ್ಚದೆ ಅವು ಹೆಚ್ಚಾಗಿ ಜನಸೇವೆಮಾಡಲು ಕಷ್ಟ.

ಪತ್ರಿಕೆಗಳಿಗೆ ಜನಬಲವೂ, ಧನಬಲವೂ ಅಗತ್ಯ. ಪತ್ರಿಕಾವೃತ್ತಿಯ ಕಷ್ಟ ಪರಿಸ್ಥಿತಿಗಳೇನು, ಪತ್ರಿಕಾವೃತ್ತಿಯಲ್ಲಿ ನಿರತರಾಗಿರುವವರು, ದೇಶಾಭಿಮಾನದಿಂದಲೂ, ಆರ್ಥಿಕ ಕಷ್ಟದಿಂದಲೂ ಹೇಗೆ ಸೇವೆ ಸಲ್ಲಿಸುತ್ತಿದ್ದಾರೆ ಎಂಬಂಶಗಳನ್ನು ಸಾರ್ವಜನಿಕರೂ ಸರಕಾರದವರೂ ಅರಿಯಬೇಕು.

ಕನ್ನಡನಾಡಿನ ಪತ್ರಿಕೆಗಳು ಜನಸೇವೆಯನ್ನೂ, ರಾಷ್ಟ್ರಸೇವೆಯನ್ನೂ, ಇನ್ನೂ ಹೆಚ್ಚಾಗಿ, ಇನ್ನೂ ವಿಶಾಲವಾಗಿ, ಮಾಡುವಂತಾಗಬೇಕಾದರೆ, ಸಾರ್ವಜನಿಕರೂ, ಪತ್ರಿಕೆಯ ವಾಚಕರೂ, ಪತ್ರಿಕೆಗಳಿಗೆ ಹೆಚ್ಚು ಬೆಂಬಲ ಕೊಡಬೇಕು. ಧನಸಹಾಯ ಮಾಡಬೇಕು. ಇಲ್ಲದಿದ್ದರೆ ಸಾಧ್ಯವಿಲ್ಲ.

## ೫. ಇಂದಿನ ಪತ್ರಿಕೆಗಳು

ಪತ್ರಿಕೆಗಳು ಸಾರ್ವಜನಿಕ ಸೇವಾಸಂಸ್ಥೆಗಳು. ೩೦-೪೦ ವರ್ಷಗಳ ಹಿಂದೆ ಇದ್ದ ಪರಿಸ್ಥಿತಿಗಿಂತಲೂ ಈಗ ಪತ್ರಿಕೆಗಳ ಸ್ಥಿತಿ ಎಷ್ಟೋ ಉತ್ತಮವಾಗಿದೆ. ಆದರೂ ಕನ್ನಡ ಪತ್ರಿಕೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ. ಅವುಗಳಿಗೆ ಧನಬಲವಿಲ್ಲ. ಜನತೆಯ ಬೆಂಬಲ ಸಾಲದು. ಕನ್ನಡ ಜನತೆಯು ಎಚ್ಚೆತ್ತುಗೊಂಡು, ಪತ್ರಿಕೆ

ಗಳಿಗೆ ಹೆಚ್ಚುಹೆಚ್ಚಾಗಿ ಚಂದಾದಾರರಾಗಬೇಕು. ಪತ್ರಿಕೆಗಳ ಪ್ರಚಾರವು ಹೆಚ್ಚುವುದಕ್ಕೆ ಸರಕಾರದವರೂ ಸಾಧ್ಯವಾದ ಸಹಾಯವೆಲ್ಲವನ್ನೂ ಮಾಡಬೇಕು.

ಮೈಸೂರಿನಲ್ಲಿ ಸಾಧ್ವಿ ಮೊದಲಾದ ಪತ್ರಿಕೆಗಳೂ, ಬೆಂಗಳೂರಿನಲ್ಲಿ ತಾಯಿನಾಡು, ವಿಶ್ವಕರ್ಣಾಟಕ, ಜನವಾಣಿ, ಪ್ರಜಾವಾಣಿ ಮೊದಲಾದ ಪತ್ರಿಕೆಗಳೂ, ಮಂಗಳೂರಿನಲ್ಲಿ ನವಭಾರತ ಮೊದಲಾದ ಪತ್ರಿಕೆಗಳೂ, ಹುಬ್ಬಳ್ಳಿಯಲ್ಲಿ ಸಂಯುಕ್ತಕರ್ಣಾಟಕ, ನವಯುಗ ಮೊದಲಾದ ಕನ್ನಡ ಪತ್ರಿಕೆಗಳೂ ಪ್ರಸಿದ್ಧವಾಗಿವೆ. ಇವಲ್ಲದೆ ನೂರಾರು ವಾರಪತ್ರಿಕೆಗಳೂ, ಮಾಸಪತ್ರಿಕೆಗಳೂ ಕರ್ಣಾಟಕದಲ್ಲಿ ನಡೆಯುತ್ತಿವೆ. ಪತ್ರಿಕಾವೃತ್ತಿಯು ಇನ್ನೂ ಅಧಿಕವಾಗಿ ಬೆಳೆಯಬೇಕು. ಜನರ ತಿಳಿವಳಿಕೆ ಮಟ್ಟವು ಹೆಚ್ಚಬೇಕು.

## ೬. ಪತ್ರಿಕಾ ವ್ಯವಸಾಯ

ನಮ್ಮ ಕನ್ನಡ ಪ್ರಾಂತವು ವಿಶಾಲವಾಗುವ ಈ ಕಾಲದಲ್ಲಿ ಪತ್ರಿಕಾ ವ್ಯವಸಾಯವನ್ನು ದೃಢವಾದ ಅಡಿಪಾಯದ ಮೇಲೆ ಕಟ್ಟುವುದು ಅತ್ಯಂತ ಆವಶ್ಯಕ. ಸ್ವರಾಜ್ಯ ಪ್ರಾಪ್ತಿಯಾದ ಮೇಲೆ ನಮ್ಮ ದೇಶದ ರಾಜಕೀಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯು ನಾಗಾಲೋಟದಿಂದ ಪರಿವರ್ತನೆ ಹೊಂದುತ್ತಿದೆ. ಅಂತರ್ ರಾಷ್ಟ್ರ ಪ್ರಪಂಚದಲ್ಲಿ ನೂತನ ಆವಶ್ಯಕತೆಗಳಿಗೆ ಅನುಗುಣವಾಗಿ ಭಾರತವು ವಿಶಾಲ ಭಾವನೆಯಿಂದ ಕೂಡಿದ ಮಾನವ ನೀತಿಯನ್ನು ವಿಕಾಸಗೊಳಿಸುತ್ತಿದೆ. ಇಡೀ ಪ್ರಪಂಚವೇ, ಇಡೀ ಮಾನವ ಜಾತಿಯೇ, ಒಂದೇ ಗೃಹಕೃತ್ಯ ಭಾವನೆಯಿಂದ ಮುಂದುವರಿಯುತ್ತಿರುವ ಈ ನವಯುಗದಲ್ಲಿ ಕನ್ನಡ ಪತ್ರಿಕೆಗಳು ತಮ್ಮ ನೀತಿಯನ್ನು ವಿಶಾಲಗೊಳಿಸಿಕೊಂಡು ಮುಂದುವರಿಯಬೇಕಾಗಿದೆ. ಜಾತಿ, ಪ್ರಾಂತ, ಕೋಮು ಮುಂತಾದ ಸಂಕುಚಿತ ಭಾವನೆಗಳನ್ನು ಬಿಟ್ಟು ರಾಷ್ಟ್ರೀಯ ಭಾವನೆಯಿಂದ ಹೆಜ್ಜೆ ಇಡಬೇಕಾಗಿದೆ. ಒಂದು ರೀತಿಯಾಗಿ ಇಡೀ ಪ್ರಪಂಚ ಪರಿಚಯವನ್ನು ಕನ್ನಡ ಜಗತ್ತಿಗೂ ಕನ್ನಡ ಜಗತ್ತನ್ನು ಇಡೀ ಪ್ರಪಂಚಕ್ಕೂ ಪರಿಚಯ ಮಾಡಿಕೊಡಬೇಕಾಗಿದೆ. ಪರಿಚಯ ಮಾತ್ರವೇ ಅಲ್ಲ, ಇಡೀ ಪ್ರಪಂಚದ ನೀತಿಯನ್ನು ಕನ್ನಡನಾಡಿನಲ್ಲಿ ಅಳವಡಿಸಿ ಕನ್ನಡ ಭೂಮಿಯ ವಿಶೇಷ ಸಂದೇಶವನ್ನು ಇಡೀ ಪ್ರಪಂಚಕ್ಕೆ ಸಾರಬೇಕಾಗಿದೆ. ಆದ್ದರಿಂದ ಮೈಸೂರಿನ ಮತ್ತು ಕನ್ನಡನಾಡಿನ ಪತ್ರಿಕೆಗಳು ದೊಡ್ಡ ವ್ಯಕ್ತಿತ್ವದಿಂದಲೂ ವಿಶೇಷ ಗುಣದಿಂದಲೂ ಪ್ರಕಾಶಿಸಬೇಕಾಗಿದೆ.

## ೭. ಕನ್ನಡ ನುಡಿಯು ಪರಿವರ್ತನೆ

ಕನ್ನಡನುಡಿ ನೂತನ ಜವಾಬ್ದಾರಿಗೆ ಹೊಂದುಕೊಳ್ಳುವಂತೆ ಪರಿವರ್ತನೆ ಹೊಂದಿಸುವ ಕರ್ತವ್ಯವೂ ಕನ್ನಡ ಪತ್ರಿಕೆಗಳಿಗೆ ಸೇರಿದ್ದು. ನೂತನ ಭಾಷಾ ನಿರ್ಮಾಣದಲ್ಲಿ ಕನ್ನಡ ಪತ್ರಿಕೆಗಳ ಪಾತ್ರವು ಗಾಢವಾದುದು ಮತ್ತು ವಿಸ್ತಾರವಾದುದೂ ಆಗಿದೆ. ರಾಜ್ಯಾಂಗ ವಿಧಾನ, ವಿಜ್ಞಾನದ ನೂತನ ಆವಿಷ್ಕರಣಗಳು, ಸಮಾಜ ಶಾಸ್ತ್ರದ ಹೊಸ ಕ್ರಮಗಳು, ಔದ್ಯೋಗಿಕ ಯುಗದ ನೂತನ ಮಾರ್ಗ

ಗಳು, ಇವೆಲ್ಲವೂ ಕನ್ನಡ ಪತ್ರಿಕೆಗಳಲ್ಲಿ ಪ್ರಸ್ತಾಪಿಸಲ್ಪಡಬೇಕಾಗಿವೆ. ಎಲ್ಲ ಭಾವ ಭಾವನೆಗಳಿಗೂ ಸಿದ್ಧವಾದ ಕನ್ನಡ ಪದಗಳು ನಮ್ಮಲ್ಲಿ ಈಗ ಇಲ್ಲ; ಹೊಸ ಪದಗಳನ್ನು ಹುಡುಕಬೇಕಾಗಿದೆ. ಆದರೆ ಉಚ್ಚರಿಸಲು ಸಾಧ್ಯವಿಲ್ಲದ, ಅರಗಿಸಿ ಕೊಳ್ಳಲು ಆಗದ ಸಂಸ್ಕೃತ ಸಮಾಸ ಶಬ್ದಗಳನ್ನು ಸೃಷ್ಟಿಸುತ್ತ ಹೋದರೆ ಅದರಿಂದ ಸಾಮಾನ್ಯ ಮನುಷ್ಯನಿಗೆ ಅಷ್ಟು ಉಪಯೋಗವಾಗದೆ ಹೋಗಬಹುದು. ಅಲ್ಲದೆ ಭಾರತದಲ್ಲಿರುವುದು ಕನ್ನಡ ಒಂದೇ ಭಾಷೆಯಲ್ಲ. ತಮಿಳು, ತೆಲುಗು, ಮರಾಠಿ, ಗುಜರಾತಿ, ಬಂಗಾಳಿ, ಹಿಂದಿ ಮುಂತಾದ ಅನೇಕ ಭಾಷೆಗಳಿವೆ. ಆ ಭಾಷೆಯ ಪತ್ರಿಕೆಗಳು ಕೂಡ ನಮ್ಮ ಕನ್ನಡ ಪತ್ರಿಕೆಗಳಿಗೆ ಇರುವ ಸಮಸ್ಯೆಗಳನ್ನೇ ಎದುರಿಸ ಬೇಕಾಗಿದೆ. ಅವು ಯಾವರೀತಿಯಾಗಿ ಈ ಸಮಸ್ಯೆ ಪರಿಹಾರಮಾಡುತ್ತಿವೆ ಎಂಬುದನ್ನು ನೋಡಬೇಕು. ಅವುಗಳೊಡನೆ ಅಭಿಪ್ರಾಯ ವಿನಿಮಯ ಮಾಡಿಕೊಳ್ಳಬೇಕು. ಕೇಂದ್ರ ಸರ್ಕಾರವು ಈ ಬಗ್ಗೆ ಸಮಿತಿಗಳನ್ನು ನೇಮಿಸಿ ನಮಗೆ ಸ್ವಲ್ಪ ಸಾಹಿತ್ಯವನ್ನು ಒದಗಿಸಿಕೊಟ್ಟಿದೆ. ಆದರೆ ಈ ಸಾಹಿತ್ಯವು ಇನ್ನೂ ಪ್ರಾಥಮಿಕ ಅಪರಿಪಕ್ವ ಸ್ಥಿತಿಯಲ್ಲಿಯೇ ಇದೆ. ಆದ್ದರಿಂದ ನನ್ನ ಅಭಿಪ್ರಾಯದಲ್ಲಿ ಆದಷ್ಟು ಮಟ್ಟಿಗೆ ಇಂಗ್ಲಿಷ್ ಶಬ್ದಗಳನ್ನೇ ಬಳಕೆಗೆ ತಂದುಕೊಳ್ಳುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ನಮ್ಮ ಪತ್ರಿಕೆಗಳಲ್ಲಿ ನಾವು ಆದಷ್ಟು ಮಟ್ಟಿಗೆ ಜನರಿಗೆ ಅರ್ಥವಾಗುವ ಮತ್ತು ಬಳಕೆಯಲ್ಲಿರುವ ಇಂಗ್ಲಿಷ್ ಪದಗಳನ್ನೇ ಉಪಯೋಗ ದಲ್ಲಿಟ್ಟುಕೊಂಡಿದ್ದೇವೆ. ಯಾವಾಗಲೂ ಹೀಗೆಯೇ ಇಟ್ಟುಕೊಳ್ಳಬೇಕೆಂಬ ಹಠವೇನೂ ಅಲ್ಲ. ಆದರೆ ನೂತನ ಭಾವ ಭಾವನೆಗಳನ್ನು ನಮ್ಮ ವಾಚಕರಿಗೆ ನಾವು ಮಾಡಿಕೊಡಲೇ ಬೇಕು. ಅದು ನಮ್ಮ ಕರ್ತವ್ಯ. ಸರಿಯಾದ ಕನ್ನಡ ಶಬ್ದಗಳು ಇಲ್ಲದ ಕಡೆ ಇಂಗ್ಲಿಷ್ ಪದಗಳನ್ನು ಉಪಯೋಗಿಸುವುದು ಅಕ್ರಮ ವಲ್ಲವೆಂದು ನಮ್ಮ ಭಾವನೆ. ಭಾಷಾ ಸಾಹಿತ್ಯದ ವಿಷಯವಾಗಿ ನಮ್ಮ ಪತ್ರಿಕೆಗಳ ಆವಶ್ಯಕತೆಯನ್ನು ಕುರಿತು ಇಷ್ಟುಮಾತು ಸಾಕು.

## ೮. ವಾಚಕರ ಸಂಖ್ಯೆ ಹೆಚ್ಚಬೇಕು

ಕನ್ನಡ ಪತ್ರಿಕೆಗಳು ಅಭಿವೃದ್ಧಿಯಾಗಬೇಕಾದರೆ ವಾಚಕರ ಸಂಖ್ಯೆ ಹೆಚ್ಚಬೇಕು. ವಾಚಕರ ಸಂಖ್ಯೆ ಹೆಚ್ಚಬೇಕಾದರೆ ಓದು ಬಲ್ಲವರ ಸಂಖ್ಯೆ ಹೆಚ್ಚಬೇಕು. ಇಂಗ್ಲೆಂಡ್, ಅಮೆರಿಕಾ, ರಷ್ಯಾ, ಜಪಾನ್ ಮುಂತಾದ ದೇಶಗಳಲ್ಲಿ ಓದು ಬರಹ ಬಲ್ಲವರ ಸಂಖ್ಯೆ ನಮ್ಮ ದೇಶಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿದೆ. ನೂರಕ್ಕೆ ೮೦-೯೦ರ ವರೆಗೂ ಆ ದೇಶಗಳಲ್ಲಿ ಓದು ಬರಹ ಬಲ್ಲವರಿದ್ದಾರೆ. ಆದ್ದರಿಂದ ಪತ್ರಿಕೆಗಳ ಪ್ರಚಾರ ಮಿಲಿಯನ್ ಗಟ್ಟಲೆ ಇದೆ. ನಮ್ಮ ದೇಶದಲ್ಲಿಯಾದರೋ ಯಾವ ಭಾಷಾಪತ್ರಿಕೆಯನ್ನು ತೆಗೆದು ಕೊಂಡರೂ, ಅವುಗಳ ಪ್ರಚಾರವನ್ನು ನೋಡಿದರೆ ಸಾವಿರ ಸಂಖ್ಯೆಯಲ್ಲಿ ಹೇಳ ಬಹುದೇ ಹೊರತು, ಲಕ್ಷಗಟ್ಟಲೆಯಲ್ಲಿ ಹೇಳುವ ಹಾಗಿಲ್ಲ. ಇದಕ್ಕೆ ಕಾರಣ ನಮ್ಮ ದೇಶದಲ್ಲಿ ಓದು ಬರಹ ಬಲ್ಲವರ ಸಂಖ್ಯೆ ಕಡಿಮೆಯಾಗಿರುವುದೆ. ದೊಡ್ಡ ಪಟ್ಟಣಗಳಲ್ಲಿ ಓದು ಬರಹ ಬಲ್ಲವರ ಸಂಖ್ಯೆ ಸುಮಾರಾಗಿದೆ. ಆದರೆ ಹಳ್ಳಿಗಾಡಿ

ನಲ್ಲಿ ತೀರಾಕಡಿಮೆ. ಒಟ್ಟು ತೆಗೆದುಕೊಂಡರೆ ೧೦೦ಕ್ಕೆ ೧೪-೧೫ ಜನರು ಓದು ಬರಹ ಬಲ್ಲವರು ಸಿಕ್ಕುವುದು ಕೂಡ ಕಷ್ಟ. ಆದ್ದರಿಂದ ಓದು ಬರಹ ಬಲ್ಲವರ ಸಂಖ್ಯೆಯನ್ನು ಹೆಚ್ಚುಮಾಡಿದ ಹೊರತು, ಪತ್ರಿಕೆಗಳ ಪ್ರಚಾರವು ಹೆಚ್ಚುವುದು ಸಾಧ್ಯವಿಲ್ಲ. ನಮ್ಮ ಕನ್ನಡನಾಡಿನಲ್ಲಿ ಪತ್ರಿಕೆಗಳು ಬೆಳೆಯಬೇಕಾದರೆ, ಅವುಗಳ ಪ್ರಚಾರ ಹೆಚ್ಚಬೇಕಾದರೆ, ಓದು ಬರಹ ಬಲ್ಲವರ ಸಂಖ್ಯೆ ೧೦೦ಕ್ಕೆ ೮೦-೯೦ ರಷ್ಟಾದರೂ ಇರಬೇಕು. ಈ ಕೊರತೆಯನ್ನು ನಿವಾರಿಸುವುದು ಎಲ್ಲರ ಕರ್ತವ್ಯವೂ ಆಗಿದೆ.

## ೯. ಆಕರ್ಷಣೀಯವಾದ ಸುಧಾರಣೆಗಳು

ಪತ್ರಿಕೆಗಳಲ್ಲಿ ಇನ್ನು ಮುಂದೆ ಒಂದು ದೊಡ್ಡ ಸುಧಾರಣೆಯಾಗಬೇಕಾಗಿದೆ. ಅದು ಯಾವುದೆಂದರೆ, ಪತ್ರಿಕೆಗಳಲ್ಲಿ ಪ್ರಕಟವಾಗುವ ಮತ್ತು ಚರ್ಚೆಯಾಗುವ ವಿಷಯಗಳು. ನಮಗೆ ಸ್ವಾತಂತ್ರಬರುವವರೆಗೂ ನಮ್ಮ ಕನ್ನಡ ಭಾಷಾ ಪತ್ರಿಕೆಗಳು ಇತರ ಭಾಷಾ ಪತ್ರಿಕೆಗಳಂತೆಯೇ ರಾಜಕೀಯಕ್ಕೆ ಪ್ರಾಧಾನ್ಯವಾದ ಗಮನ ಕೊಟ್ಟಿದ್ದವು. ಇದು ಸಹಜವೇ. ಆದರೆ ಸ್ವಾತಂತ್ರ್ಯಬಂದ ಮೇಲೂ ಇನ್ನೂ ಹೆಚ್ಚಾಗಿ ರಾಜಕೀಯ ವಿಷಯಗಳಿಗೆ ಗಮನ ಕೊಡುವುದು ಸರಿಯಾದ ನೀತಿಯಲ್ಲ. ಇದು ಸರಿಯಾದ ಸೇವೆಯೂ ಅಲ್ಲ. ರಾಜಕೀಯ ಬೇಕು; ಆದರೆ ನಮ್ಮ ಸಮಾಜದ ಚಟುವಟಿಕೆಗಳಲ್ಲಿ ರಾಜಕೀಯವೂ ಒಂದು ಭಾಗ ಮಾತ್ರ. ಇದನ್ನು ನಾವು ತಿಳಿದು ಇನ್ನು ಮುಂದೆ ಪತ್ರಿಕೆ ನಡೆಸಬೇಕಾಗಿದೆ. ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಕ್ರೀಡೆ ಇವುಗಳಿಗೆ ಈಗ ಕೊಡುವುದಕ್ಕಿಂತ ಹೆಚ್ಚಿನ ಗಮನವನ್ನು ಕೊಡಬೇಕು. ವ್ಯಾಪಾರ ಮತ್ತು ಉದ್ಯಮಗಳಿಗೆ ಸಂಬಂಧಪಟ್ಟ ಲೇಖನಗಳು ಹೆಚ್ಚಾಗಿ ಬರಬೇಕು. ಎಲ್ಲ ವರ್ಗದ ಮತ್ತು ಎಲ್ಲ ವಯಸ್ಸಿನ ಜನರಿಗೂ ಆಕರ್ಷಣೀಯವಾಗಿರುವಂತೆ ಪತ್ರಿಕೆಗಳಲ್ಲಿ ವಿಷಯಗಳು ಬರಬೇಕು. ಒಂದೇ ವಿಷಯವಾದರೆ ಜನಕ್ಕೆ ಬೇಜಾರಾಗುತ್ತದೆ. ಬೆಳಿಗ್ಗೆ ಎದ್ದು ಪತ್ರಿಕೆಯನ್ನು ತೆಗೆದರೆ ಓದುವವರಿಗೆ ಉತ್ಸಾಹವೂ, ಸ್ಫೂರ್ತಿಯೂ, ಸಂತೋಷವೂ ಆಗುವಂತೆ ಇರಬೇಕು. ಲವಲವಿಕೆಯಿಂದ ಕೂಡಿದ ಮತ್ತು ಲಘು ಹಾಸ್ಯದಿಂದ ಕೂಡಿದ ಬರವಣಿಗೆಗಳಿರಬೇಕು. ಇನ್ನು ಮುಂದೆ ಪತ್ರಿಕೆಗಳು ಸ್ತ್ರೀಯರನ್ನೂ ಬಾಲಕ ಬಾಲಕಿಯರನ್ನೂ ಹೆಚ್ಚಾಗಿ ಆಕರ್ಷಿಸಬೇಕಾಗಿದೆ. ಅವರಿಗೆ ಉಪಯುಕ್ತವಾಗುವ ಮತ್ತು ಸಂತೋಷ ಕೊಡುವ ವಿಷಯಗಳಿಂದ ಪತ್ರಿಕೆಗಳು ತುಂಬಿದ್ದರೆ ಅವು ಆದರಣೆಯನ್ನು ಪಡೆಯುತ್ತವೆ. ಸಾಮಾನ್ಯ ಮನುಷ್ಯರ ಉಡುಪು, ಅದರ ಬದಲಾವಣೆ, ಹಬ್ಬ ಹುಣ್ಣಿಮೆಗಳು ಕ್ರೀಡಾ ವಿನೋದಗಳು, ಸಾಮಾಜಿಕ ಸಮಾರಂಭಗಳು ಇವುಗಳ ವಿವರಣೆಯು ಪತ್ರಿಕೆಗಳಲ್ಲಿ ಇದ್ದಷ್ಟೂ ಒಳ್ಳೆಯದು. ಭಾಷೆಯಾದರೋ ಸರಳವಾಗಿ ಲಲಿತವಾಗಿ ಬಿಕ್ಕಟ್ಟಿಲ್ಲದೆ ಒಂದೇ ಓದಿನಲ್ಲಿ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಇರಬೇಕು. ಹೀಗಿದ್ದರೇನೇ ನಮ್ಮ ಪತ್ರಿಕೆಗಳಿಗೆ ಒಂದು ಸೌಂದರ್ಯ, ಒಂದು ಲಾವಣ್ಯ. ಕಗ್ಗಗಳಿಗೂ, ಭೂರಗಳೆಗಳಿಗೂ ನಾವು ಎಷ್ಟರಮಟ್ಟಿಗೆ ಪತ್ರಿಕೆಗಳಲ್ಲಿ ಅವಕಾಶಕೊಡುವೆವೋ ಅಷ್ಟರಮಟ್ಟಿಗೆ ಅವುಗಳ ಬೆಲೆ ಕಡಿಮೆಯಾಗುವುದು.

ನೂತನ ಕಾಲದ ಬಾಲಕ ಬಾಲಕಿಯರು, ತರುಣ ತರುಣಿಯರು, ಜೀವನ ಪ್ರವಾಹದ ನೋಟವನ್ನು ಪತ್ರಿಕೆಗಳಲ್ಲಿ ನಿರೀಕ್ಷಿಸುವರು. ಆದ್ದರಿಂದ ನೂತನ ಪರಿಸ್ಥಿತಿಗೆ ಹೊಂದಿಕೊಂಡು ನಮ್ಮ ಕನ್ನಡ ಪತ್ರಿಕೆಗಳು ಪ್ರವರ್ಧಮಾನಕ್ಕೆ ಬರಬೇಕಾಗಿದೆ. ಹಳೆಯ ಹಾದಿಯನ್ನು ಬಿಟ್ಟು ಹೊಸ ಹಾದಿಯಲ್ಲಿ ಪತ್ರಿಕೆಗಳು ಕಾಲಿಡಬೇಕು.

## ೧೦. ಪಾರ್ಲಿಮೆಂಟರಿ ಪದ್ಧತಿ ಮತ್ತು ಪತ್ರಿಕೆಗಳು

ಈಗ ನೂತನವಾಗಿ ಜಾರಿಗೆ ಬಂದಿರುವ ಪಾರ್ಲಿಮೆಂಟರಿ ಪದ್ಧತಿಯಲ್ಲಿ ಪತ್ರಿಕೆಗಳಿಗೆ ಹೊಸ ಸ್ಥಾನವಿದೆ. ಈಗ ರಾಜ್ಯದ ಕಾರ್ಯವನ್ನು ನಡೆಸುವವು ರಾಜಕೀಯ ಪಕ್ಷಗಳು. ಯಾವ ರಾಜಕೀಯ ಪಕ್ಷಕ್ಕೆ ಶಾಸನ ಸಭೆಯಲ್ಲಿ ಬಹು ಮತವಿದೆಯೋ ಆ ಪಕ್ಷದ ನಾಯಕರು ಮುಖಂಡರಾಗಿ ಮಂತ್ರಿಗಳನ್ನು ಆರಿಸು ವರು. ಈಗ ಪರಿಣಾಮಕಾರಿಯಾದ ಪ್ರಜಾಭಿಪ್ರಾಯವೆಂದರೆ ಶಾಸನ ಸಭೆಯ ಬಹುಮತ ಸಂಪಾದಿಸಿರುವ ಪಕ್ಷದ ಅಭಿಪ್ರಾಯವೇ ಎಂಬುದು ಅನುಭವಕ್ಕೆ ಬಂದಿದೆ. ಶಾಸನ ನಿರ್ಮಾಣದಲ್ಲಿ, ಹಣಕಾಸಿನ ಯೋಜನೆಯಲ್ಲಿ, ತೆರಿಗೆಗಳನ್ನು ಹಾಕುವುದು ಮತ್ತು ಇಳಿಸುವುದರಲ್ಲಿ ಇವೇ, ಮುಂತಾದ ಮಹತ್ವದ ಅಂಶಗಳಲ್ಲಿ ಶಾಸನ ಸಭೆಯ ಬಹುಮತ ಸಂಪಾದಿಸಿರುವ ಪಕ್ಷದ ವಾಣಿಯೇ ಅಧಿಕಾರ ವಾಣಿ. ಕೇಂದ್ರದಲ್ಲಿಯೂ ಅಂತೆಯೆ, ಪ್ರಾಂತಗಳಲ್ಲೂ ಅಂತೆಯೆ. ಈಗಿನ ಸ್ಥಿತಿಯಲ್ಲಿ ನಮ್ಮ ದೇಶದಲ್ಲಿ ಕಾಂಗ್ರೆಸ್ ಪಕ್ಷದ ಕೈಮೇಲಾಗಿದೆ. ಕಾಂಗ್ರೆಸ್ಸಿನ ನೀತಿಯಂತೆ ರಾಜ್ಯಾಡಳಿತ ನಡೆಯುತ್ತಿದೆ. ವಸ್ತುತಃ ಈಗ ಕಾಂಗ್ರೆಸ್ ಪಕ್ಷದ ವಾಣಿಯೇ ರಾಜ್ಯಾಡಳಿತದ ಅಧಿಕಾರವಾಣಿಯಾಗಿದೆ. ಈ ಸ್ಥಿತಿಯಲ್ಲಿ ನಮ್ಮ ಕನ್ನಡ ಪತ್ರಿಕೆ ಗಳೂ ಕೂಡ ಇತರ ದೇಶದ ಭಾಷಾ ಪತ್ರಿಕೆಗಳಂತೆ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿವೆ. ಕೆಲವು ಸಂದರ್ಭಗಳಲ್ಲಿ ಕಾಂಗ್ರೆಸ್ಸಿನ ನೀತಿಯನ್ನು ಖಂಡಿಸು ತ್ತವೆ, ಇನ್ನು ಕೆಲವು ಸಂದರ್ಭಗಳಲ್ಲಿ ಪೋಷಿಸುತ್ತವೆ. ಈಗ ನಮ್ಮ ಪತ್ರಿಕೆಗಳು ಸರ್ಕಾರದ ವಿಷಯದಲ್ಲಿ, ನೀತಿಯ ವಿಷಯದಲ್ಲಿ, ಸಲಹೆಗಳನ್ನು ಕೊಡುತ್ತಿವೆಯೇ ಹೊರತು ಬೇರೆ ಏನನ್ನೂ ಮಾಡುತ್ತಿಲ್ಲ. ಬ್ರಿಟಿಷರ ಕಾಲದಲ್ಲಿ ಇದ್ದಂತೆ ಸರ್ಕಾರ ವನ್ನು ಉರುಳಿಸುವ ಪ್ರಯತ್ನವನ್ನು ಪತ್ರಿಕೆಗಳು ಈಗ ಮಾಡುತ್ತಿಲ್ಲ. ಸ್ವಾತಂತ್ರ್ಯ ಬಂದ ಈ ಒಂಭತ್ತು ವರ್ಷಗಳು ಪತ್ರಿಕೆಗಳಿಗೂ ಪ್ರಭುತ್ವಕ್ಕೂ ಅಂತಹ ದೊಡ್ಡ ತಿಕ್ಕಾಟವೇನೂ ಆಗಿಲ್ಲ. ಎಲ್ಲೋ ಹಲಕೆಲವು ಪತ್ರಿಕೆಗಳ ವಿಷಯದಲ್ಲಿ ಹಲಕೆಲವು ಆಡಳಿತಗಾರರ ಅಸಮಾಧಾನವಿದ್ದಾಗ್ಯೂ ಒಟ್ಟಿನಲ್ಲಿ ಪತ್ರಿಕೆಗಳ ವಿಷಯದಲ್ಲಿ ಸರ್ಕಾರ ಸಮಾಧಾನ ಹೊಂದಿದೆ. ಈಗ ನಮ್ಮ ದೇಶದಲ್ಲಿ ಯಾವ ಪತ್ರಿಕಾ ಕಾನೂನೂ ಇಲ್ಲದಿರುವುದು ಈ ಅಂಶವನ್ನು ರುಜುವಾತುಮಾಡಿ ಕೊಡುತ್ತದೆ.

ಆದರೆ ಮುಂದೆಯೂ ಪತ್ರಿಕೆಗಳಿಗೂ ಆಡಳಿತಕ್ಕೂ ಇದೇ ಸಂಬಂಧವಿರು ವುದೇ ಎಂದು ಈಗಲೇ ಹೇಳುವುದು ಸಾಧ್ಯವಿಲ್ಲ. ಕಾಂಗ್ರೆಸ್ಸಿನ ಅಧಿಕಾರವು ಇದೇ ರೀತಿಯಾಗಿ ಮುಂದೆಯೂ ಶಾಶ್ವತವಾಗಿ ಇರುವುದೆಂದು ಯಾರೂ ಹೇಳಲು ಸಾಧ್ಯ ವಿಲ್ಲ. ಈಗ ನಮ್ಮ ದೇಶದಲ್ಲಿ ಕಾಂಗ್ರೆಸ್ಸಿನ ಸ್ಥಾನವನ್ನು ತೆಗೆದುಕೊಳ್ಳುವ

ಯಾವ ಪ್ರಬಲ ವಿರೋಧ ಪಕ್ಷವೂ ಇಲ್ಲ. ಮುಂದೆ ಬೆಳೆಯಬಹುದು. ಆಗ ಪತ್ರಿಕೆಗಳು ಆ ಸಮಯಕ್ಕೆ ಉಚಿತವಾದ ನೀತಿಯನ್ನು ಅವಲಂಬಿಸಬೇಕಾಗುವುದು.

ಕಡೆಯದಾಗಿ, ಇಂಡಿಯಾ ಸರ್ಕಾರದವರು ಏರ್ಪಡಿಸಿದ ಪ್ರೆಸ್ ಕಮಿಷನ್ನಿನ ಶಿಫಾರಸುಗಳು ಜಾರಿಗೆ ಬರುತ್ತಿವೆ ಮತ್ತು ಬರುವುದರಲ್ಲಿವೆ. ಕಾರ್ಯನಿರತ ಪತ್ರಿಕೋದ್ಯಮಿಗಳ ಸ್ಥಿತಿಯು ಬಹುಮಟ್ಟಿಗೆ ಉತ್ತಮ ಹೊಂದುವುದರಲ್ಲಿ ಸಂದೇಹವಿಲ್ಲ. ಆದರೆ ಪತ್ರಿಕೆಗಳೂ, ಕಾರ್ಯನಿರತ ಪತ್ರಿಕೋದ್ಯೋಗಿಗಳೂ, ಸಹಕಾರ ಮತ್ತು ಸಾಮರಸ್ಯದಿಂದ ನಡೆದರೆ ಮಾತ್ರ ಇದು ಸಾಧ್ಯ. ಪತ್ರಿಕೆಗಳು ಇದ್ದರೆ ಪತ್ರಿಕೋದ್ಯೋಗಿಗಳು. ಆದ್ದರಿಂದ ಪತ್ರಿಕಾ ವ್ಯವಸಾಯವೂ ಪತ್ರಿಕೋದ್ಯೋಗಿಗಳ ಸ್ಥಿತಿಯೂ ಪರಸ್ಪರ ಪೋಷಣೆಯಿಂದ ಬೆಳೆಯಲಿ ಎಂಬುದೇ ನನ್ನ ಆಶಯ. ಕನ್ನಡ ಪತ್ರಿಕೆಗಳ ವಿಷಯವನ್ನು ಹೇಳುವುದಾದರೆ ಎಲ್ಲರ ಬೆಂಬಲವೂ ಬೇಕು. ವಾಚಕರ ಬೆಂಬಲಬೇಕು, ಚಂದಾದಾರರ ಬೆಂಬಲ ಬೇಕು, ಜಾಹಿರಾತು ಕೊಡುವವರ ಬೆಂಬಲ ಬೇಕು, ಜನ ಸಾಮಾನ್ಯರ ಬೆಂಬಲ ಬೇಕು.

## ೧೧. ನೂತನ ವಿಶಾಲ ಮೈಸೂರು

ನೂತನ ವಿಶಾಲ ಮೈಸೂರು ಎಂಬ ಅಖಂಡ ಕರ್ಣಾಟಕದಲ್ಲಿ ಸುಮಾರು ಎರಡುಕೋಟಿ ಜನಸಂಖ್ಯೆ ಇರುವುದು. ಈ ಹೊಸ ರಾಜ್ಯದ ದೊಡ್ಡ ಸರಕಾರವೂ, ಎರಡುಕೋಟಿ ಜನರೂ ಕನ್ನಡ ಪತ್ರಿಕೆಗಳಿಗೆ ಬೆಂಬಲಕೊಡಬೇಕು. ಮೈಸೂರು, ಮಂಗಳೂರು, ಬಳ್ಳಾರಿ, ರಾಯಚೂರು, ಹುಬ್ಬಳ್ಳಿ, ಧಾರವಾಡ, ಕಾರವಾರ ಈ ಎಲ್ಲ ಪ್ರದೇಶಗಳ ಕನ್ನಡಿಗರೂ ತಾವೆಲ್ಲರೂ ಒಂದೇ ಎಂಬ ಭಾವನೆಯನ್ನೂ, ರಾಷ್ಟ್ರಜೀವನದ ವಿವಿಧ ಕ್ಷೇತ್ರಗಳಲ್ಲಿ ವ್ಯಕ್ತಗೊಳಿಸಬೇಕು. ವಿಶಾಲ ಮೈಸೂರಿನ ಕನ್ನಡಿಗರೆಲ್ಲರೂ ನಾಡಿನ ಸಾರ್ವತ್ರಿಕ ಹಿತಸಾಧನೆ ದೃಷ್ಟಿಯಿಂದ ಕನ್ನಡ ಪತ್ರಿಕೆಗಳ ಅಭಿವೃದ್ಧಿಗೆ ಸರ್ವವಿಧದಲ್ಲಿಯೂ ಸಹಾಯ ನೀಡಲೆಂದು ನನ್ನ ಪ್ರಾರ್ಥನೆ.

---

# ಕನ್ನಡ ನಾಡಿನ ಸಂಚಾರ-ಸಂಪರ್ಕ

ಲೇಖಕರು :
ಶ್ರೀಮರ್ತಾ ಕೃಷ್ಣಕುಮಾರ ಕಲ್ಲೂರ್ ಅವರು, ಬೊಂಬಾಯಿ.

## ಭಾಗ ೧

### ಎಂಟು ಅಡಿಗಲ್ಲುಗಳು

ಕರ್ಣಾಟಕ ಹಾಗೂ ಮೈಸೂರುಗಳ ಸಂಯುಕ್ತ ರಾಜ್ಯದಲ್ಲಿ ಆಧುನಿಕ ಸಂಚಾರ-ಸಂಪರ್ಕ ಸಾಧನಗಳಿಗೆ ಹೆಚ್ಚಿನ ಮಹತ್ವವಿದೆ. ನಾಡಜೀವನಕ್ಕೆ ಸುವ್ಯವಸ್ಥಿತವಾದ ಆಡಳಿತದ ಏರ್ಪಾಡು ಪ್ರಾಣ; ಆರ್ಥಿಕ ಬಲ ಅದರ ಹೃದಯ; ಹಾಗೂ ಸುಸಂಘಟಿತವಾದ ಸಂಚಾರ-ಸಂಪರ್ಕಗಳ ಸಾಧನಗಳೇ ರಕ್ತವಾಹಿನಿಗಳು. ನಾಡಿನ ನಾಡಿಗಳೇ ಅವು; ನಾಡಿನ ಜೀವಂತತನದ ಕುರುಹುಗಳೂ ಅಹುದು. ನಮ್ಮ ಹೊಸ ಸಂಯುಕ್ತ ರಾಜ್ಯದಲ್ಲಿ ಸಂಚಾರ ಸಾಧನಗಳಾದ ರಸ್ತೆ, ರೈಲು ದಾರಿ ಮತ್ತು ಜಲಮಾರ್ಗಗಳಿಗೆ ಪ್ರಾಥಮಿಕ ಹಾಗೂ ಹೆಚ್ಚಿನ ಮಹತ್ವವಿದೆ. ವಿಮಾನ ಮಾರ್ಗಗಳಿಗೂ ಕೆಲಮಟ್ಟಿನ ವಿಶೇಷ ಮಹತ್ವವಿದ್ದೇ ಇದೆ. ಸಂಪರ್ಕದ ಸಾಧನಗಳಾದ ಆಕಾಶವಾಣಿ, ದೂರವಾಣಿ, ಅಂಚೆ-ತಂತಿ ಮುಂತಾದುವುಗಳ ಮಹತ್ವವೂ ಸಹ ಬಹುಮಟ್ಟಿಗೆ ಅಷ್ಟೇ ಆಗಿದೆ. ಈ ಮಹತ್ವದ ನಿಜಾಂಶವನ್ನು ತಿಳಿಯಬೇಕಾದರೆ ಈ ಕೆಳಗಿನ ಮೂಲಭೂತ ಮಾತುಗಳನ್ನು ಮನಗಂಡು ಅರಿತಿರಬೇಕು.

ಮೂಲಭೂತ ಮಾತುಗಳು:—

(ಅ) ಅನೇಕ ಕ್ಷೇತ್ರಗಳೂ, ಪುಣ್ಯಸ್ಥಳಗಳೂ, ಪ್ರಾಚೀನ ಐತಿಹಾಸಿಕ ಹಾಗೂ ಕಲಾತ್ಮಕ ಅವಶೇಷಗಳೂ, ಚೆಲುವಿನ ಬೀಡುಗಳೂ, ನವನಾಗರಿಕತೆಯ ಸ್ಥಳಗಳೂ ಉಳ್ಳಂಥ ನಾಡು.

---

ಸೂಚನೆ :—ಈ ಬರೆಪದಲ್ಲಿ ಮೈಸೂರು, ಮೈಸೂರು ಸಂಸ್ಥಾನ, ಮೈಸೂರು ಪ್ರದೇಶ ಎಂದಿರುವ ಕಡೆಗಳಲ್ಲೆಲ್ಲಾ, ಬಳ್ಳಾರಿ ಜಿಲ್ಲೆಯೂ ಸೇರಿ, ಎಂದು ಅರ್ಥ ಮಾಡಿಕೊಳ್ಳಬೇಕು.

ಈ ಬರೆಹದಲ್ಲಿ ಎತ್ತಿ ಹೇಳಿರುವ ಅಂಕಿಅಂಶಗಳಿಗೂ, ನಕ್ಷೆ ವಿವರಣೆಗಳಿಗೂ ಈ ಬರಹಗಾರರೇ ಹೊಣೆಗಾರರು. ಕಾರಣ, ಈ ಬರೆಹದ 'Copy Right' ಬರಹಗಾರರಿಗೇ ಸೇರಿದೆ. ಇದರಲ್ಲಿರುವ ಹೇಳಿಕೆ, ಅಭಿಪ್ರಾಯ, ಸೂಚನೆ—ಇತ್ಯಾದಿ ವಿಷಯಗಳಿಗೂ ಬರಹಗಾರರೇ ಹೊಣೆ.

(ಆ) ಭೌಗೋಳಿಕ ಸ್ವರೂಪದಲ್ಲಿ ಉದ್ದವಾಗಿ, ದಕ್ಷಿಣೋತ್ತರವಾಗಿ ಹಬ್ಬಿದ ಹಾಗೂ ಒಂದು ಮೂಲೆಯಲ್ಲಿ ರಾಜಧಾನಿಯುಳ್ಳ ನಾಡು.

(ಇ) ಅತ್ಯಧಿಕ ಔದ್ಯೋಗಿಕ ವಿಕಾಸಕ್ಕೆ ಎಡೆಯುಳ್ಳ ನಾಡು.

(ಈ) ದಕ್ಷಿಣ ಭಾರತದ ನಡುನಾಡು.

(ಉ) ಭಾರತದ ರಸ್ತೆ-ರೈಲುಗಳ ಹೆದ್ದಾರಿಗಳಿಗೆ ಹೊಂದಿದ ನಾಡು.

(ಊ) ಜಗತ್ತಿನ ಅತಿ ಪುರಾತನವಾದ ಪ್ರಥಮ ರಚಿತವಾದ ಭೂಭಾಗ.

(ಎ) ಕರ್ಣಾಟಕವು ಒಂದು ಕಡಲ ಕರಾವಳಿಯ ನಾಡು.

(ಏ) ಕೊನೆಯದಾಗಿ, ಕಳೆದ ೧೫೦ ವರ್ಷಗಳಿಂದ ಆಡಳಿತ, ಭೌಗೋಳಿಕ, ಹತ್ತುಗಡಿ, ಸಾಮಾಜಿಕ ಸಂಬಂಧ-ಸಂಪರ್ಕ, ವ್ಯಾಪಾರ ಸಾಗಾಟ—ಇವೆಲ್ಲವುಗಳ ದೃಷ್ಟಿಯಿಂದ ಶಿಥಿಲವಾದ, ಸರಪಳಿ ಹರಿದ ನಾಡು.

ಮೇಲೆ ಕಾಣಿಸಿರುವ ಎಂಟು ಮಾತುಗಳು ಹೊಸ ಮೈಸೂರು ರಾಜ್ಯದ ಸಂಚಾರ-ಸಂಪರ್ಕಗಳ ವಿಕಾಸಕ್ಕೂ, ಒಟ್ಟಾರೆ ಜನಜೀವನದ ಅಭಿವೃದ್ಧಿಗೂ ಅಡಿಗಲ್ಲುಗಳಂತಿವೆ. ನಮ್ಮ ನಾಡಿನ ಸರ್ವಾಂಗೀಣ ಅಭಿವೃದ್ಧಿಯ ಗುರಿಯನ್ನೂ, ಸಂಚಾರ-ಸಂಪರ್ಕ ಸಾಧನಗಳ ಬೆಳವಣಿಗೆಯ ಸಿರಿಯನ್ನೂ, ಅವುಗಳ ಯೋಜನೆಯ ಪರಿಯನ್ನೂ ಪೂರ್ತಿಯಾಗಿ ತಿಳಿಯುವುದು ಈ ಎಂಟು ಮೂಲಭೂತ ಮಾತುಗಳನ್ನು ಚೆನ್ನಾಗಿ ಅರಿತುಕೊಂಡಾಗ ಮಾತ್ರ ಸಾಧ್ಯ. ಕಾರಣ, ಇವುಗಳನ್ನು ಒಂದೊಂದಾಗಿ ಮೊತ್ತಮೊದಲಾಗಿ ಪೃಥಕ್ಕರಿಸಿ ನೋಡುವ.

## (ಏ) ಶಿಥಿಲವಾದ ನಾಡು

ಕೊನೆಯದಾಗಿ ಹೇಳಿದ ಮಾತು ಮಿಕ್ಕ ಏಳು ಮಾತುಗಳಿಗಿಂತ ಹೆಚ್ಚು ನಿರ್ಣಯಾತ್ಮಕವಾಮುದರಿಂದ ಅದನ್ನು ಮೊತ್ತಮೊದಲು ಎತ್ತಿಕೊಳ್ಳುವುದವಶ್ಯ. ವಿಜಯನಗರ ಪಥನದ ನಂತರ ತುಂಡು ತುಂಡಾದ ನಮ್ಮನಾಡು ಬ್ರಿಟಿಷರ ಆಳ್ವಿಕೆಯಲ್ಲಿ ಇಪ್ಪತ್ತೆಂಟು ಆಡಳಿತಗಳಲ್ಲಿ ಹಂಚಿಹೋದುದರಿಂದ ನಮ್ಮ ನಾಡಿನ ಸಂಚಾರ-ಸಂಪರ್ಕಗಳ ಬೆಳವಣಿಗೆ ಒಂದು ಸಮಗ್ರವಾದ ರೀತಿಯಲ್ಲಿ ಆಗಲಿಲ್ಲ. ಇದ್ದಬಿದ್ದ ಸಂಚಾರಸಾಧನಗಳು ಜನಜೀವನವನ್ನು ವಿವಿಧ ಮುಖವಾಗುವಂತೆ ಒಂಗಡಿಸಿದುವೇ ಹೊರತು, ನಾಡಿನ ಏಕಮುಖತೆಗೆ ಕಾರಣವಾಗಲಿಲ್ಲ. ತುಂಡಾದ ಒಂದೊಂದು ಭಾಗವೂ ನಾಡಿನ ಕೇಂದ್ರಭಾಗದಿಂದ ವಿಮುಖವಾಗಿ, ದೂರದ ಇತರ ಆಡಳಿತ ಕೇಂದ್ರಗಳ ತುದಿಬಾಲಗಳಾಗಿ ರಸ್ತೆ, ರೈಲು, ದಾರಿ ಇತ್ಯಾದಿಗಳ ಬೆಳವಣಿಗೆಗೆ ಸಾಕಾದಷ್ಟು ಅವಕಾಶ, ಅವಶ್ಯಕತೆಗಳೆರಡೂ ಇಲ್ಲದಂತಾಗಿ ದುರ್ಲಕ್ಷಿತವಾದವು. ಉತ್ತರ ಕನ್ನಡ ಜಿಲ್ಲೆ, ಬಿಜಾಪುರ ಜಿಲ್ಲೆ, ಹೈದರಾಬಾದ್ ಕರ್ಣಾಟಕ ಇವುಗಳ ನಿಕೃಷ್ಟಾವಸ್ಥೆಯೇ ಇದಕ್ಕೆ ನಿದರ್ಶನ. ಉತ್ತರ ಕನ್ನಡ ಜಿಲ್ಲೆಯಲ್ಲಿ ರಸ್ತೆಗಳು ತಕ್ಕಮಟ್ಟಿಗಿದ್ದರೂ ರೈಲು ದಾರಿಗಳು ಇಲ್ಲವೇ ಇಲ್ಲ ಎನ್ನಬಹುದು. ಕಾಸರಗೋಡು ಕೈಬಿಟ್ಟರೆ, ದಕ್ಷಿಣ ಕನ್ನಡದಲ್ಲೂ ರೈಲು

ದಾರಿಗಳ ಸ್ಥಿತಿ ಅಲ್ಲಿಗೆ ಬರುತ್ತದೆ. ಆದರೆ ಮಂಗಳೂರು ಟರ್ಮಿನಸ್ ಆಗಿರುವುದೂ, ದಕ್ಷಿಣ ಕನ್ನಡದಲ್ಲಿ ರಸ್ತೆಗಳು ಸಾಕಷ್ಟಿರುವುದೂ ಒಂದು ಸಮಾಧಾನಕರವಾದ ಸಂಗತಿ. ರಸ್ತೆಗಳ ಮಟ್ಟಿಗೆ ಈ ಹೋಲಿಕೆ ನೋಡಿ:—

(ಸರಾಸರಿ ೧೦೦ ಚದರ ಮೈಲಿಗೆ)

| | | | |
|---|---|---|---|
| (೧) | ಮೈಸೂರು ಸಂಸ್ಥಾನ | .... | ೨೪ ಮೈಲಿ ರಸ್ತೆಗಳು. |
| (೨) | ಧಾರವಾಡ, ಬೆಳಗಾವಿ ಜಿಲ್ಲೆಗಳು | .... | ೧೯ ಮೈಲಿ ರಸ್ತೆಗಳು. |
| (೩) | ಉತ್ತರ ಕನ್ನಡ ಜಿಲ್ಲೆ | .... | ೧೮ ಮೈಲಿ ರಸ್ತೆಗಳು. |
| (೪) | ದಕ್ಷಿಣ ಕನ್ನಡ ಜಿಲ್ಲೆ | .... | ೨೨ ಮೈಲಿ ರಸ್ತೆಗಳು. |
| (೫) | ಬಿಜಾಪುರ ಜಿಲ್ಲೆ | .... | ೯ ಮೈಲಿ ರಸ್ತೆಗಳು. |
| (೬) | ಹೈದರಾಬಾದ್ ಕರ್ನಾಟಕ ಜಿಲ್ಲೆಗಳು. | | ೫ ಮೈಲಿ ರಸ್ತೆಗಳು. |

ಇದರಿಂದ ಒಡೆದು ಕಾಣುವ ಮಾತೆಂದರೆ, ಇಷ್ಟು ದಿನ ಸ್ವಾಯತ್ತವಾಗಿದ್ದ ಮೈಸೂರು ಪ್ರದೇಶ ರಸ್ತೆಗಳ ವಿಷಯದಲ್ಲಿ ತುಂಬಾ ಮುಂದುವರಿದಿದೆ. ಸಂಸ್ಥಾನದ ಸರಾಸರಿಯೇ ೨೪ ಮೈಲಿಗಳಿರುವುದರಿಂದ ಹೆಚ್ಚು ಮುಂದುವರಿದ ಜಿಲ್ಲೆಗಳಲ್ಲಿ ಈ ಅಂಕಿಯು ೨೫-೨೬ ರ ವರೆಗೂ ಇದೆ. ತದ್ವಿರುದ್ಧವಾಗಿ ಬೇರೆ ಆಡಳಿತಗಳ ತುದಿ ಬಾಲಗಳಲ್ಲಿದ್ದ ಮಿಕ್ಕ ಕರ್ನಾಟಕ ಭಾಗಗಳಲ್ಲಿ ಮುಖ್ಯತಃ ಬಿಜಾಪುರ, ಗುಲ್ಬರ್ಗ (ಕಲ್ಬುರ್ಗಿ) ಭಾಗಗಳಲ್ಲಿ ಅವಸ್ಥೆ ಅತ್ಯಂತ ನಿಕೃಷ್ಟವಾಗಿದೆ. ಒಟ್ಟಾರೆ ಹೊಸ ರಾಜ್ಯದ ರಸ್ತೆಗಳ ಪರಿಸ್ಥಿತಿ 'ಒಗ್ಗಾಲಿ' ಯಾಗಿದೆ; ಎಂದರೆ, ಕೆಲಭಾಗ ಮುಂದುವರಿದಿದ್ದು ಕೆಲಭಾಗ ತೀರಾ ಹಿಂದುಳಿದಿವೆ. ಈ ಹಿಂದುಳಿದ ಭಾಗ ಸುಮಾರು ಇಡೀ ಕರ್ನಾಟಕದ ಅರ್ಧದಷ್ಟಾದರೂ ಇದೆ.

## ಓರೆಯಾದ ಬೆಳವಣಿಗೆ

ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ರೈಲುದಾರಿಗಳ ಸ್ಥಿತಿ ನಿಕೃಷ್ಟ ವಾಗಿದ್ದರೆ, ಪೂರ್ವೋತ್ತರ ಕರ್ನಾಟಕದಲ್ಲಿ (ಬಿಜಾಪುರ, ಬಳ್ಳಾರಿ, ಬಿದರೆ) ರಸ್ತೆಗಳ ಸ್ಥಿತಿ ನಿಕೃಷ್ಟವಾಗಿದೆ. ಆದರೆ, ಈ ಪೂರ್ವೋತ್ತರ ಭಾಗದಲ್ಲಿ ರೈಲು ದಾರಿಗಳ ಪರಿಸ್ಥಿತಿ ತಕ್ಕಮಟ್ಟಿಗಿದ್ದರೂ ರಾಯಚೂರು, ಬಿದರೆ, ಬಳ್ಳಾರಿ ಜಿಲ್ಲೆಗಳಲ್ಲಿ ಶೋಚನೀಯವೇ ಆಗಿದೆ.

ರಾಯಚೂರು ಜಿಲ್ಲೆಯ ಒಟ್ಟು ರೈಲುದಾರಿ ೩೫ ಮೈಲಿ
(ಪ್ರತಿ ನೂರು ಚ. ಮೈಲಿಗೆ ೦·೬ ಮೈಲಿ.)
ಬಿದರೆ ಜಿಲ್ಲೆಯ ಒಟ್ಟು ರೈಲುದಾರಿ ೪೫ ಮೈಲಿ
(ಪ್ರತಿ ನೂರು ಚ. ಮೈಲಿಗೆ ೧·೫ ಮೈಲಿ.)

---

ಕರ್ನಾಟಕದ ಮಟ್ಟಿಗೆ ಮೈಸೂರು ದೇಶ ಮುಂದುವರಿದಂತಿದ್ದರೂ ನಿಜಪರಿಸ್ಥಿತಿ ಹೀಗಿದೆ :—

| | | | | |
|---|---|---|---|---|
| ಮೈಸೂರು ಸಂಸ್ಥಾನ | ಸರಾಸರಿ | ೧೦೦ ಚದರ ಮೈಲಿಗೆ | ೨೪ | ಮೈಲಿ ರಸ್ತೆಗಳು. |
| ಉತ್ತರ ಪ್ರದೇಶ | ,, | ,, | ೩೩ | ,, |
| ಬಿಹಾರ | ,, | ,, | ೩೮ | ,, |
| ಇಂಗ್ಲೆಂಡ್ | ,, | ,, | ೩೦೦ | ,, |

ಬಳ್ಳಾರಿ ಜಿಲ್ಲೆಯ ಒಟ್ಟು ರೈಲುದಾರಿ ೧೫೦ ಮೈಲಿ
(ಪ್ರತಿ ನೂರು ಚ. ಮೈಲಿಗೆ ೧·೫ ಮೈಲಿ.)
ಗುಲ್ಬರ್ಗಾ (ಕಲ್ಲುಬುರ್ಗಿ) ಜಿಲ್ಲೆಯ ಒಟ್ಟು ರೈಲುದಾರಿ ೧೨೦ ಮೈಲಿ
(ಪ್ರತಿ ನೂರು ಚ. ಮೈಲಿಗೆ ೨·೦ ಮೈಲಿ.)
ಬಿಜಾಪುರ ಜಿಲ್ಲೆಯ ಒಟ್ಟು ರೈಲುದಾರಿ ೧೩೦ ಮೈಲಿ
(ಪ್ರತಿ ನೂರು ಚ. ಮೈಲಿಗೆ ೨·೦ ಮೈಲಿ.)
ಬೆಳಗಾವಿ ಜಿಲ್ಲೆಯ ಒಟ್ಟು ರೈಲುದಾರಿ ೧೩೦ ಮೈಲಿ
(ಪ್ರತಿ ನೂರು ಚ. ಮೈಲಿಗೆ ೨·೩ ಮೈಲಿ.)

ಕೊನೆಯ ಮೂರು ಜಿಲ್ಲೆಗಳ ಪರಿಸ್ಥಿತಿ ತಕ್ಕಮಟ್ಟಿಗಿದ್ದರೂ, ಈ ರೈಲುದಾರಿಗಳು ಕರ್ನಾಟಕದ ಕೇಂದ್ರ ಭಾಗಗಳಿಂದ ವಿಮುಖವಾಗಿ ಕನ್ನಡನಾಡಿನ ವ್ಯಾಪಾರ ಹಾಗೂ ಮಿಕ್ಕ ಸಾರಿಗೆ ಕರ್ನಾಟಕದಿಂದ ಬಹಿರ್ಮುಖವಾಗಲು ಉಪಯೋಗವಾಗಿವೆಯೇ ಹೊರತು, ಕರ್ನಾಟಕದ ವ್ಯಾಪಾರ, ಜನತೆಯ ಓಡಾಟ, ಸಾಮಾಜಿಕ ರಾಜಕೀಯ ಸಂಬಂಧಗಳು ಏಕೀಕೃತ ಅಥವಾ ಕ್ರೋಢೀಕೃತವಾಗಲು ಸಾಧನಗಳಾಗಿಲ್ಲ. ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳ ಹಣೆಯ ಬರೆಹ ಈ ವಿಷಯದಲ್ಲಿ ಇದಕ್ಕೂ ಕೇಡಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಒಟ್ಟು ರೈಲುದಾರಿ ೩೦ ಮೈಲಿ
(೦·೮ ಮೈಲಿ ಪ್ರತಿ ನೂರು ಚ. ಮೈಲಿಗೆ).
ದಕ್ಷಿಣ ಕನ್ನಡ (ಕಾಸರಗೋಡು ತಾಲ್ಲೋಕು ಬಿಟ್ಟು) ಜಿಲ್ಲೆಯ ಒಟ್ಟು ರೈಲುದಾರಿ ೮ ಮೈಲಿ (೦·೩ ಮೈಲಿ ಪ್ರತಿ ನೂರು ಚ. ಮೈಲಿಗೆ).
ಕೊಡಗು ಜಿಲ್ಲೆಯ ಒಟ್ಟು ರೈಲುದಾರಿ ೦ ಮೈಲಿ
(೦·೦ ಮೈಲಿ ಪ್ರತಿ ನೂರು ಚ. ಮೈಲಿಗೆ).

ಇವೆರಡೂ ಅಂಕಿಗಳ ಪಟ್ಟಿಗಳನ್ನು ಕೆಳಗಿನ ಪಟ್ಟಿಯೊಡನೆ ಹೋಲಿಸಿ ನೋಡಿ:—

ಬೆಂಗಳೂರು ಜಿಲ್ಲೆಯ ಒಟ್ಟು ರೈಲುದಾರಿ ೧೨೦ ಮೈಲಿ
(೩·೯ ಮೈಲಿ ಪ್ರತಿ ನೂರು ಚ. ಮೈಲಿಗೆ).
ಧಾರವಾಡ ಜಿಲ್ಲೆಯ ಒಟ್ಟು ರೈಲುದಾರಿ ೨೦೫ ಮೈಲಿ
(೪·೦ ಮೈಲಿ ಪ್ರತಿ ನೂರು ಚ. ಮೈಲಿಗೆ.)

ಇದನ್ನೆಲ್ಲಾ ಬಗೆದು ನೋಡಿದರೆ ಇಡೀ ಕರ್ನಾಟಕದಲ್ಲೆಲ್ಲಾ, ರೈಲುದಾರಿಯಮಟ್ಟಿಗೆ ಬೆಂಗಳೂರು ಧಾರವಾಡ ಜಿಲ್ಲೆಗಳೆರಡೇ ಎಲ್ಲಕ್ಕೂ ಮುಂದುವರಿದ ಜಿಲ್ಲೆಗಳು. ಅಲ್ಲದೆ ಇವೆರಡೂ ಜಿಲ್ಲೆಗಳ ರೈಲುದಾರಿಗಳು ಕ್ರಮಶಃ ಬೆಂಗಳೂರು ಹುಬ್ಬಳ್ಳಿಗಳಲ್ಲಿ ಚೆನ್ನಾಗಿ ಕೇಂದ್ರೀಕೃತವಾಗಿವೆ. ಮೈಸೂರು ಸಂಸ್ಥಾನದ ರೈಲುದಾರಿಗಳು—ಒಂದು ಕ್ರಮದಿಂದ ಕಟ್ಟಲ್ಪಟ್ಟವಾದುದರಿಂದ—ಬೆಂಗಳೂರಿಗಭಿಮುಖವಾಗಿವೆ. ಉತ್ತರ ಕರ್ನಾಟಕದ ರೈಲುದಾರಿಗಳೂ ಹೀಗೇ ಹುಬ್ಬಳ್ಳಿಗೆ ಅಭಿಮುಖವಾಗಿದ್ದರೂ ಅದು ತೋರಿಕೆಯಲ್ಲಿ ಮಾತ್ರ. ಏಕೆಂದರೆ, ಹುಬ್ಬಳ್ಳಿ-

ಕಾರವಾರ ರೈಲು ಆಗದ್ದರಿಂದ, ಕರ್ನಾಟಕದ ವ್ಯಾಪಾರ, ಸಾರಿಗೆ-ಸಾಗಾಟಗಳೆಲ್ಲಾ ಹುಬ್ಬಳ್ಳಿಯಲ್ಲೇ ಕೇಂದ್ರಿತವಾಗದೆ, ಕರ್ನಾಟಕದ ಹೊರಗೇ ಹರಿಯುತ್ತಿವೆ. ಹುಬ್ಬಳ್ಳಿಯ ವ್ಯಾಪಾರ ಸಹ ಹೆಚ್ಚಿಗೆ ಮುಂಬೈಯೊಡನೇ ಸರಿ.

ಬೆಂಗಳೂರು-ಧಾರವಾಡ ಜಿಲ್ಲೆಗಳ ರೈಲುದಾರಿಯ ಪರಿಸ್ಥಿತಿಯೂ ಭಾರತದ ಮಿಕ್ಕ ಕೆಲ ಮುಂದರಿದ ಭಾಗಗಳಿಗಿಂತ ಹಿಂದುಳಿದಿದೆ. ಇದೋ ನೋಡಿ:—

| | | | |
|---|---|---|---|
| ಬೆಂಗಳೂರು ಜಿಲ್ಲೆ ರೈಲುದಾರಿ ೧೦೦ ಚ. ಮೈಲಿಗೆ | | | ೩·೯* ಮೈಲಿ |
| ಧಾರವಾಡ ಜಿಲ್ಲೆ | ,, | ,, | ೪·೦* ಮೈಲಿ |
| ಮೈಸೂರು ಸಂಸ್ಥಾನ | ,, | ,, | ೨·೬* ಮೈಲಿ |
| ಇಡೀ ಕರ್ನಾಟಕ | ,, | ,, | ೨·೨ ಮೈಲಿ |
| ಬಂಗಾಳ | ,, | ,, | ೪·೦ ಮೈಲಿ |
| ಯು. ಪಿ. | ,, | ,, | ೫·೧ ಮೈಲಿ |
| ಸೌರಾಷ್ಟ್ರ | ,, | ,, | ೬·೦ ಮೈಲಿ |
| ಯೂರೋಪ್ | ,, | ,, | ೧೧·೫ ಮೈಲಿ |
| ಇಂಗ್ಲೆಂಡ್ | ,, | ,, | ೨೫.೦ ಮೈಲಿ |

ಈ ಪರಿಶೀಲನೆಯಿಂದ ಹೊರಡುವ ತಾತ್ಪರ್ಯ ಮೂರು:—(೧) ಇಡೀ ಕರ್ನಾಟಕವೇ ಆಗಲಿ ಮೈಸೂರು ಪ್ರದೇಶವೇ ಆಗಲಿ ಭಾರತದ ಮಿಕ್ಕ ಕೆಲ ಮುಂದರಿದ ಭಾಗಗಳಿಂತ ಸಾಕಷ್ಟು ಹಿಂದುಳಿದಿವೆ. (೨) ಅವುಗಳಲ್ಲಿ ಬೆಂಗಳೂರು, ಧಾರವಾಡಗಳಂತಹ ಒಂದೆರಡು ಜಿಲ್ಲೆಗಳನ್ನುಳಿದರೆ ಮಿಕ್ಕ ಜಿಲ್ಲೆಗಳು ಬಹಳ ನಿಕೃಷ್ಟವಾಗಿವೆ. ರೈಲಿನ ದರ್ಶನವೇ ಇಲ್ಲದ ಕೊಡಗು ಜಿಲ್ಲೆಯೂ ಇದೆ. (೩) ಇದ್ದ ರೈಲುದಾರಿಗಳೂ, ರಸ್ತೆಗಳೂ ನಾಡಿನ ಸಾರಿಗೆ ಸಂಪರ್ಕಗಳ ಏಕೀಕರಣ ಮಾಡುವುದರ ಬದಲು ಚೆಲ್ಲಾಪಿಲ್ಲಿಯಾಗಿ ಹರಿದು ಹಂಚುತ್ತಿವೆ. ಕರ್ನಾಟಕದ ವ್ಯಾಪಾರ ಹಾಗೂ ಸಾರಿಗೆಗಳಿಗೆ ಒಂದು ನಿಟ್ಟಿಲ್ಲ; ಒಂದು ಮುಖ ಎಂಬುದಿಲ್ಲ. ಮೈಸೂರು ಪ್ರದೇಶಕ್ಕೆ ಕರಾವಳಿ ಇರದ್ದರಿಂದ 'ಮುಖ' ಇಲ್ಲ. ಮಿಕ್ಕ ಕರ್ಣಾಟಕಕ್ಕೆ ಕರಾವಳಿ ಇದ್ದೂ 'ಮುಖ' ಇಲ್ಲ.

---

* ಇವು ಆಯಾ ಭಾಗದ ವಿಸ್ತೀರ್ಣಕ್ಕನುಗುಣವಾದ ಅಂಕಿಗಳು. ಜನಸಾಂದ್ರತೆಯ ದೃಷ್ಟಿಯಿಂದ ನೋಡಿದರೆ, ಬೆಂಗಳೂರು ಜಿಲ್ಲೆಗಿಂತ ಧಾರವಾಡ ಜಿಲ್ಲೆಯೂ, ಮೈಸೂರು ಪ್ರದೇಶಕ್ಕಿಂತ ಮಿಕ್ಕ ಕರ್ಣಾಟಕವೂ ಸ್ವಲ್ಪ ಉತ್ತಮ.

| | | | | |
|---|---|---|---|---|
| ಬೆಂಗಳೂರು ಜಿಲ್ಲೆಯಲ್ಲಿ ೧ ಲಕ್ಷ ಜನಸಂಖ್ಯೆಗೆ | | ... | ೭ ಮೈಲಿ ರೈಲು. | |
| ಧಾರವಾಡ ಜಿಲ್ಲೆಯಲ್ಲಿ | ,, | ... | ೧೨ | ,, |
| ಮೈಸೂರು ಸಂಸ್ಥಾನದಲ್ಲಿ | ,, | ... | ೮ | ,, |
| ಮಿಕ್ಕ ಕರ್ನಾಟಕದಲ್ಲಿ | ,, | ... | ೧೨ | ,, |

ಮೈಸೂರು ಸಂಸ್ಥಾನದಲ್ಲಿ ಪ್ರತಿನಿತ್ಯ ಪ್ಯಾಸೆಂಜರ್ ಗಾಡಿಗಳ ಓಡಾಟ ೫,೦೦೦ ಮೈಲಿಗೆ ಮಿಕ್ಕಿ.

ಮಿಕ್ಕ ಕರ್ನಾಟಕಹಲ್ಲಿ ಪ್ರತಿನಿತ್ಯ ಪ್ಯಾಸೆಂಜರ್ ಗಾಡಿಗಳ ಓಡಾಟ ೬,೦೦೦ ಮೈಲಿಗೆ ಮಿಕ್ಕಿ.

ಕರ್ಣಾಟಕದ ಏಕೀಕರಣದಿಂದ ಈ ದುಸ್ಥಿತಿ ಹೋಗಬೇಕಾಗಿದೆ. ಭಾಷೆಯ ನೆಪದಿಂದ ಒಂದಾದ ಜನಜೀವನವೂ, ಅದರ ವ್ಯಾಪಾರ ಹಾಗೂ ಔದ್ಯೋಗಿಕ ಚಟುವಟಿಕೆಗಳೂ, ಸಾರಿಗೆ ಸಂಪರ್ಕಗಳೂ ಒಂದೇ ಒಂದು ಮಹಾಪ್ರವಾಹವಾಗಿ ಮಡುವುಗೊಂಡು ಜನತೆಯ ನಿದರ್ಶಕತ್ವವನ್ನು ಅನುಸರಿಸಿ ಹರಿಯಬೇಕಾಗಿದೆ. ಹಲವು ಹಳ್ಳ ನದಿಗಳುಳ್ಳ ಮಹಾನದಿಯನ್ನು ಅಣೆಕಟ್ಟಿನಿಂದ ಮಡುವುಗೊಳಿಸಿ ನಾವು ಅದರ ನೀರನ್ನು ಉಪಯೋಗಿಸುವಂತೆಯೇ, ನಮ್ಮ ಸಂಚಾರ ಸಾಧನಗಳನ್ನು ಕ್ರೋಢೀಕರಿಸಿ ನಾಡಿನ ಔದ್ಯೋಗಿಕ ಹಾಗೂ ವಾಣಿಜ್ಯ ಸಂಪತ್ತಿನ ಏಕೀಕರಣವೂ ಆಗುವಂತೆ ಮಾಡುವುದು ಅವಶ್ಯವಾಗಿದೆ. ಇದೇ ನಿಜವಾದ ಆರ್ಥಿಕ ಐಕ್ಯತೆಯ ಅಡಿಗಲ್ಲು; ಇದೂ ಒಂದು ಹಿರಿಯ ಗುರಿ.

## (ಅ) ಕನ್ನಡ ನಾಡು ಚೆಲುವಿನ ಬೀಡು

ಕರ್ನಾಟಕ ರಾಜ್ಯ ಪ್ರವಾಸೀ ಪ್ರೇಕ್ಷಕರಿಗೆ (Tourists) ಒಂದು ಉತ್ತಮ ಆಕರ್ಷಕ ಪ್ರದೇಶವಾಗಬಲ್ಲದು. ಮೈಸೂರುಸಂಸ್ಥಾನ ಆ ಕೀರ್ತಿಯನ್ನು ಆಗಲೇ ಗಳಿಸಿಕೊಂಡಿದೆ. ಮಿಕ್ಕ ಕರ್ಣಾಟಕದ ಭಾಗಗಳು ಈ ವಿಷಯದಲ್ಲಿ ಹಿಂದುಳಿಯುವಂತಿಲ್ಲವಾದರೂ ಬೇರೆ ಆಡಳಿತಗಳ ತುದಿಬಾಲಗಳಾಗಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿಲ್ಲ. ಕರ್ನಾಟಕದಲ್ಲಿ ೨೦ರಷ್ಟು ಜಲಪಾತಗಳಿವೆ; ೫೦ಕ್ಕಿಂತಲೂ ಮಿಕ್ಕಿ ಸೊಬಗಿನ ಗಿರಿ ಶಿಖರಗಳಿವೆ. ಅಷ್ಟೇ ಚೆಲುವಾದ ನದಿ ಕೊಳ್ಳಗಳಿವೆ, ೧೫-೨೦ ಪ್ರೇಕ್ಷಣೀಯವಾದ ಘಟ್ಟದ ಮಾರ್ಗಗಳಿವೆ. ೮-೧೦ ಸುಂದರವಾದ ನಡುಗಡ್ಡೆಗಳಿವೆ. ೨೫-೩೦ರಷ್ಟು ಕ್ಷೇತ್ರ ಯಾತ್ರೆಯ ಸ್ಥಳಗಳಿವೆ. ೧೦ಕ್ಕೂ ಮಿಕ್ಕಿದ ಶಿಲ್ಪಕಲೆಯ ಆಲಯಗಳಿವೆ. ಜಗತ್ತಿಗೊಂದೇ ಎನ್ನಿಸುವ ಗೋಳ ಗುಮ್ಮಟ, ಗೋಮಟೇಶ್ವರ, ಗೇರುಸೊಪ್ಪೆಗಳಿವೆ. ಕರಾವಳಿಯ ಚೆಲ್ವಿಕೆಗೆ ಹೆಸರಾಂತ ಕುಂದಾಪುರ, ಗೋಕರ್ಣ, ಕಾರವಾರಗಳಿವೆ. ೧೫-೨೦ಕ್ಕೆ ಮಿಕ್ಕುವ ಆರೋಗ್ಯಧಾಮಗಳೂ, ನಂದಿ, ರಾಮನದುರ್ಗದಂತಹ ಅತ್ಯುತ್ಕೃಷ್ಟ ದರ್ಜೆಯ ಗಿರಿವಿಹಾರಗಳೂ ಇವೆ. ಅಲ್ಲದೆ ಆಧುನಿಕ ನಾಗರೀಕತೆಗೆ ಮಾದರಿಯಾದ ಬೆಂಗಳೂರು, ಮಂಗಳೂರು, ಮೈಸೂರುಗಳಂತಹ ನಗರಗಳೂ ಇವೆ. ಇದನ್ನೆಲ್ಲಾ ಬಗೆದರೆ ಕರ್ನಾಟಕ ರಾಜ್ಯ ಕನಿಷ್ಟಪಕ್ಷ ದಕ್ಷಿಣ ಭಾರತದಲ್ಲಾದರೂ ಪ್ರಪ್ರಥಮ ಮಟ್ಟದ ಪ್ರವಾಸೀ ಪ್ರೇಕ್ಷಕರ ಆಕರ್ಷಣೆಯಾಗಬಲ್ಲದು. ನಾಡಿನ ಸಂಚಾರ ಸಂಪರ್ಕಗಳ ಬೆಳವಣಿಗೆಗೆ ಇದೂ ಒಂದು ಗುರಿಯಾಗಬೇಕು.

## (ಆ) ಭೌಗೋಳಿಕ ಸ್ವರೂಪ

ಕನ್ನಡ ನಾಡಿನ ಆಕಾರ ಚಗಚೆ (ಅಗಸೆ) ಹೂವಿನಂತೆ ಬಲಕ್ಕೆ ಮಣಿದು ಉದ್ದವಾಗಿದೆ; ನಡು ಸಣ್ಣಾಗಿದೆ. ಮಣಿ ತರ ಕೆಳಭಾಗ ಮಾತ್ರ ಪಶ್ಚಿಮ



ಭದ್ರಾವತಿ ಕಾಗದದ ಕಾರ್ಖಾನೆಯ ಒಂದು ನೋಟ



ಬೆಂಗಳೂರು ವಿದ್ಯುಚ್ಛಕ್ತಿ ಕಾರ್ಖಾನೆಯ ಒಂದು ದೃಶ್ಯ



ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಒಂದು ನೋಟ



ಕರಗಿದ ಕಬ್ಬಿಣವನ್ನು ಎರಕದ ಕೊಳವೆಗಳಿಗೆ ಸುರಿಯುತ್ತಿರುವುದು

ದಲ್ಲಿ ಕರಾವಳಿಗೆ ತಾಗಿದೆ. ಅದರ ಮೇಲ್ಭಾಗ ಸಮುದ್ರದಿಂದ ದೂರವಾಗಿ ಪೂರ್ವಕ್ಕೆ ಬಾಗಿದೆ. ದಕ್ಷಿಣದ ಬಲಮೂಲೆಯಲ್ಲಿ ರಾಜಧಾನಿ ಬೆಂಗಳೂರು ಇದೆ. (ನಕ್ಷಾಲೇಖ ೧ ನೋಡಿ) ನಮ್ಮ ರಾಜ್ಯದ ಈ ಉದ್ದವಾದ ಆಕಾರದಿಂದ ಹಾಗೂ ರಾಜಧಾನಿ ಮೂಲೆಯಲ್ಲಿರುವುದರಿಂದ ಸಾರಿಗೆ-ಸಂಚಾರ-ಸಂಪರ್ಕಗಳ ಕೆಲವು ವಿಶಿಷ್ಟ ಸಮಸ್ಯೆಗಳುಂಟಾಗುತ್ತವೆ. ಇವುಗಳಲ್ಲಿ ಮುಖ್ಯವಾದುವು, (೧) ಕೆಲವು ಭಾಗಗಳು ರಾಜಧಾನಿಯಿಂದ ದೂರವಾಗಿ ಬಿಟ್ಟು, ಇತರ ರಾಜ್ಯಗಳು ರಾಜಧಾನಿಗೆ ಹತ್ತಿರವಾಗುವುದುಂಟು. (೨) ನಮ್ಮದು ಕರಾವಳಿಯುಳ್ಳ ರಾಜ್ಯವಾದುದರಿಂದ ಕಾಲಕ್ರಮೇಣ ಕರಾವಳಿಯೇ ನಮ್ಮ ಸಾರಿಗೆ-ಸಂಚಾರಾದಿಗಳಿಗೆ ಹೆಬ್ಬಾಗಿಲಾಗುವುದು. ಅದರ ಪರಿಣಾಮವಾಗಿ ಸಾರಿಗೆ-ಸಂಚಾರ-ಸಂಪರ್ಕಗಳ ಮುಖ್ಯ ಕೇಂದ್ರಗಳು ರಾಜಧಾನಿಯಿಂದ ದೂರವಿರುವ ಭಾಗಗಳಲ್ಲಿ ಉಂಟಾಗಬೇಕಾಗುವುದು. ರಾಜಧಾನಿ ವ್ಯಾಪಾರ ಹಾಗೂ ಸಾರಿಗೆಗಳ ಮುಖ್ಯ ಪ್ರವಾಹಕ್ಕೆ ಮುಖವಾಗದೆ ಒಂದು ಪಕ್ಕದಲ್ಲಿ ಉಳಿಯುವುದು. ಇದರ ಅರ್ಥ, ಕರ್ಣಾಟಕದಲ್ಲಿ ಬೇರೆ ಒಂದು ವ್ಯಾಪಾರೀ ರಾಜಧಾನಿ ತಾನಾಗಿಯೇ ಉಂಟಾಗಬೇಕಾಗುವುದು. ಹಾಗೂ ಬೆಂಗಳೂರಿಗಿಂತಲೂ ಹೆಚ್ಚಾಗಿ ಆ ವ್ಯಾಪಾರೀ ರಾಜಧಾನಿ ನಮ್ಮ ನಾಡಿನ ಸಾರಿಗೆ-ಸಂಚಾರ-ಸಂಪರ್ಕದ ಸಾಧನೆಗಳನ್ನು ತನ್ನಲ್ಲಿ ಕ್ರೋಢೀಕರಿಸಿಕೊಳ್ಳುವುದು. ನಮ್ಮ ನಾಡಿನ ಉದ್ದವಾದ ಆಕಾರದಿಂದಾಗಿ ಇಂತಹ ಸ್ಥಳಗಳು ಒಂದಲ್ಲದೆ ಎರಡಾದರೂ ಆಗಬಹುದು. ಇವು ನಮ್ಮ ನಾಡಿನ ವ್ಯಾಪಾರೀ ಪ್ರವಾಹಗಳು ಸಂಗಮಗೊಳ್ಳುವಲ್ಲಿ ಉದ್ಭವಿಸುವವು. ಬಹುಮಟ್ಟಿಗೆ, ಇವು ಕರಾವಳಿಯಲ್ಲಾಗಲಿ, ಅಥವಾ ಘಟ್ಟದ ಕಣಿವೆಗಳ ಹಿಂದೆ ಹೆದ್ದಾರಿಗಳ ಸಂಗಮಸ್ಥಾನದಲ್ಲಾಗಲಿ ಉಂಟಾಗುವುವು. ನಮ್ಮ ನಾಡಿನ ರಾಜಕೀಯ ಹಾಗೂ ಆಡಳಿತದ ರಕ್ತವಾಹಿನಿಗಳು ಬೆಂಗಳೂರತ್ತ ಹರಿದರೆ, ವ್ಯಾಪಾರೀ ರಕ್ತವಾಹಿನಿಗಳು ಇತ್ತ ಹರಿಯುವುವು; ಇದು ಅನಿವಾರ್ಯ.

## (ಇ) ಭಾರತದ ೩ನೆಯ ಮಹತ್ವದ ಔದ್ಯೋಗಿಕ ಪ್ರದೇಶ

'ಕರ್ನಾಟಕ ಭಾರತದ ೩ನೆಯ ಅತಿ ಮಹತ್ವದ ಔದ್ಯೋಗಿಕ ಪ್ರದೇಶ' ಎಂದು 'ನವಭಾರತ ಟಯಿಮ್ಸ್' ಪತ್ರಿಕೆ ಎಸ್.ಆರ್.ಸಿ. ವರದಿ ಹೊರ ಬಂದಾಗ ಒಕ್ಕಣಿಸಿತ್ತು. ಇದು ಅಕ್ಷರಶಃ ನಿಜವಾಗಿರುವುದಲ್ಲದೆ, ಜಾಣತನದಿಂದ ಯೋಜನಾತ್ಮಕ ಬೆಳವಣಿಗೆಗಳನ್ನು ಮಾಡಿಕೊಂಡರೆ, ಕರ್ಣಾಟಕವು ಮೊದಲನೆ ಮಹತ್ವದ ಔದ್ಯೋಗಿಕ ಪ್ರದೇಶವಾಗಬಲ್ಲುದು. ಭಾರತದ ೨ನೆಯ ಅತ್ಯಂತ ಮಹತ್ವದ ಸಾಗುವಳಿಯ ಹಾಗೂ ಖನಿಜಗಳ ಪ್ರದೇಶ ಕರ್ಣಾಟಕದಲ್ಲಿದೆ. ೨ನೆಯ ಮಹತ್ವದ ಮೀನುಗಳ ಕಡಲ ಪ್ರದೇಶವಿಲ್ಲಿದೆ. ಪ್ರಥಮ ಮಹತ್ವದ ಅರಣ್ಯ ಪ್ರದೇಶ ಹಾಗೂ ಅರಣ್ಯ ಸಂಪತ್ತು ಔದ್ಯೋಗಿಕ ವಿಕಾಸಕ್ಕನುಕೂಲವಾದ ಹವಾಮಾನ, ಮಸಾಲೆ, ಕಾಫಿ ಪ್ರದೇಶ, ಚಿನ್ನದ ಗಣಿಗಳು, ವಿದ್ಯುದಾಗರಗಳು ಇಲ್ಲಿವೆ. ಅಲ್ಲದೆ, ಹತ್ತಿಯ ಬೆಳೆ, ಎಣ್ಣೆಗಾಳಿನ ಬೆಳೆ, ಚಂದನ, ರೇಷ್ಮೆ, ಅಡಕೆ, ಜೇನುತುಪ್ಪಗಳಿಗೂ ಕರ್ನಾಟಕ ಭಾರತದಲ್ಲೇ ಪ್ರಥಮ ಸ್ಥಾನ ಪಡೆಯಬಲ್ಲುದು.

# ನಕ್ಷಾಲೇಖ ೧

## ವಿವರಣೆ

ಈ ನಕ್ಷಾಲೇಖದಲ್ಲಿ (SKETCH MAP) ನಮ್ಮ ಹೊಸರಾಜ್ಯದ ಗಡಿಗಳು ಸರಳ ರೇಖೆಗಳಲ್ಲಿ ತೋರಿಸಲಾಗಿವೆ. ನಮ್ಮ ನಾಡಿನ ಆಕಾರ ಚಗಚೆ (ಅಗಸೆ) ಹೂವಿನಂತಿದೆ. ಅಕ್ಷಾಂಶ ೧೧॥ ಯಿಂದ ೧೮॥ ವರೆಗೂ, ರೇಖಾಂಶ ೭೪ ರಿಂದ ೭೮ರ ವರೆಗೂ ಹಬ್ಬಿದ ಈ ನಾಡಿಗೆ ಅಕ್ಷಾಂಶ ೧೫, ರೇಖಾಂಶ ೭೬, ಎರಡೂ ಸೇರುವ ಸ್ಥಳವೇ ಮಧ್ಯ ಬಿಂದು. ಇದು ಹಡಗಲಿಯ ಪೂರ್ವಕ್ಕೆ ೫ ಮೈಲಿನಲ್ಲಿರುವ ನಂದಿಹಳ್ಳಿ. ನಮ್ಮ ನಾಡಿನ ಪರಮಾಧಿ ಅಗಲಳತೆ ಉದ್ದಳತೆಗಳು ೨೫೦×೫೦೦ ಮೈಲಿಯಾದರೂ, ಸರಾಸರಿಯಲ್ಲಿ ೨೦೦×೪೦೦ ಮೈಲಿಯಷ್ಟೇ; ಎಂದರೆ ಸುಮಾರು ೭೫-೮೦ ಸಾವಿರ ಚದುರ ಮೈಲಿನ ವಿಸ್ತಾರ. ಭಾರತದ ರಾಜ್ಯಗಳೆಲ್ಲಾ ಒಂದೇ ಆಕಾರದುವಿದ್ದಿದ್ದರೆ, ಪ್ರತಿಯೊಂದೂ ಇಷ್ಟೇ ವಿಸ್ತಾರವಿರುತ್ತಿತ್ತು. ಎಂದರೆ, ಭಾರತದ ಮಟ್ಟಿಗೆ, ನಮ್ಮ ನಾಡು ಅತ್ಯಂತ ಹದಣ ಆಕಾರದ್ದು. ತುಂಬ ದೊಡ್ಡದಲ್ಲ; ತುಂಬ ಚಿಕ್ಕದಲ್ಲ. ಜನಸಾಂದ್ರತೆಯಲ್ಲೂ ಅಷ್ಟೇ.

ಮೇಲ್ಕಾಣಿಸಿದ ನಕ್ಷಾಲೇಖದಲ್ಲಿ ನಮ್ಮ ಸಾರಿಗೆ-ಸಂಚಾರಗಳ ಹಿನ್ನೆಲೆಯಿದೆ. ಇಲ್ಲಿ ಎಲ್ಲಾ ಜಿಲ್ಲಾ ಸ್ಥಳಗಳೂ ಮತ್ತೆ ಕೆಲವು ಕೀಲುಸ್ಥಾನಗಳು ತೋರಿಸಲ್ಪಟ್ಟಿವೆ. ಇವು ಹೆಚ್ಚು ಸಂಖ್ಯೆಯಲ್ಲಿ ರಾಜಧಾನಿಯಿಂದ ದೂರವಾಗಿ ಉತ್ತರ ಪಶ್ಚಿಮಗಳಲ್ಲಿ ಗಡಿಗೆ ಹೊಂದಿಕೊಂಡು ಇವೆ. ಬೆಂಗಳೂರು ಸಹ ಆಗ್ನೇಯ ಗಡಿಯ ಹತ್ತಿರ, ಮಧ್ಯ ಬಿಂದುವಿನಿಂದ ೧೭೫ ಮೈಲಿ ದೂರದ ಮೂಲೆಯಲ್ಲಿದೆ. ಮಧ್ಯಬಿಂದುವಿನ ಉತ್ತರ ಹಾಗು ಪಶ್ಚಿಮದ ಭಾಗಗಳು, (ಎಂದರೆ, ಸಾಧಾರಣ ೨/೩ ಪ್ರದೇಶ,) ರಾಜಧಾನಿಯಿಂದ ಸಿಡಿದಂತಿವೆ. ಇಲ್ಲಿರುವ ಕೀಲು ಸ್ಥಾನಗಳನ್ನೆಲ್ಲ ರಾಜಧಾನಿಗೆ ಜೋಡಿಸುತ್ತ, ಬೆಂಗಳೂರಿಂದ ಸುತ್ತಲೂ ಚಾಚಿದ ಕಿರಣದಂಥ ಗೆರೆಗಳೂ, ಅವುಗಳ ತುದಿಯ ತುಂಡುಗೆರೆಗಳೂ, ನಮ್ಮ ಸಾಗಾಟದ ಸಿಟ್ಟುಗಳನ್ನೂ, ಬೆಂಗಳೂರು ಇನ್ನು ಮುಂದೆ ಎತ್ತ ಮೊಗದಿರುವಬೇಕೆಂಬುದನ್ನೂ ಸ್ಪಷ್ಟಗೊಳಿಸುತ್ತವೆ. ಈ ಕಿರಣರೇಖೆಗಳೇ ನಮ್ಮ ನಾಡನ್ನು ಒಂದೇ ಕಟ್ಟಿನಲ್ಲಿ ಬಿಗಿದುಹಿಡಿಯುವ ಹುರಿಗಳು. ನಕ್ಷಾಲೇಖ ೩ರ ರೈಲು-ರಸ್ತೆಗಳು ಇವನ್ನೇ ಅನುಸರಿಸುತ್ತವೆ. (ಪುಟ ೩೩೪ ನೋಡಿ.) ೪೦ ಮೈಲಿನ ಕೋಲಾರ, ೪೦೦ ಮೈಲಿನ ಬಿದರೆಗಳೆಂದೂ ರಾಜಧಾನಿಯ ಸಮದೃಷ್ಟಿಗೊಳಗಾಗಬೇಕಾದರೆ, ಉತ್ತರ ಹಾಗು ಪಶ್ಚಿಮ ಗಡಿಗಳೊಡನೆ ರಾಜಧಾನಿಯ ಸಂಬಂಧ ನಿಕಟವಾಗಿರುವುದೂ ಅದಕ್ಕಾಗಿ ಆ ಭಾಗದ ಸಾರಿಗೆ-ಸಂಚಾರದ ಸಾಧನೆಗಳು ಬಲಿಷ್ಠವಾಗಿರುವುದೂ ಅನಿವಾರ್ಯ. ನಮ್ಮ ನಾಡಿನ ಆರ್ಥಿಕ ಹಾಗು ಅಭಿವೃದ್ಧಿಯ ಅಸ್ತಿವಾರವೇ ಅದು.

ಕೇವಲ ಸರಳರೇಖೆಗಳಿಂದ ಚಿತ್ರಿಸಿದ ಈ ನಕ್ಷೆಯಲ್ಲಿ, ಕನ್ನಡದುಪೇ ಆದರೂ ಸಧ್ಯ ಹೊರಗಿರುವ ಕೆಲ ಪ್ರದೇಶಗಳೂ ಅಡಕವಾಗಿವೆ. ಅವುಗಳನ್ನು ಛಾಯಾಂಕಿತವಾಗಿ (SHADING) ತೋರಿಸಲಾಗಿದೆ. ಚುಕ್ಕೆ ಚುಕ್ಕೆಯಾಗಿರುವ ಗೆರೆಗಳು ನಾಡಿನ ಕರಾವಳಿಯತ್ತಣ ನಿಟ್ಟುಗಳನ್ನು ಸೂಚಿಸುತ್ತವೆ.


ನಕ್ಷಾಲೇಖ:೧
ನವಕರ್ನಾಟಕ ರಾಜ್ಯದ
ಆಕಾರ, ಸ್ವರೂಪ ಮತ್ತು
ಭೌಗೋಲಿಕ
ಹಿನ್ನೆಲೆ
ಬೀದರ
ವಿಜಾಪುರ
ಬೆಳಗಾವಿ
ಧಾರವಾಡ
ಹುಬ್ಬಳ್ಳಿ
ಗದುಗು
ಹೊಸಪೇಟೆ
ಬಳ್ಳಾರಿ
ಕಾರವಾರ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗೆ
ಚಿಕ್ಕಮಗಳೂರು
ತುಮಕೂರು
ಬೆಂಗಳೂರು
ಕೋಲಾರ
ಮಂಗಳೂರು
ಹಾಸನ
ಮಂಡ್ಯ
ಮಡಿಕೇರಿ
ಮೈಸೂರು
ಹೊಸೂರು
ಕೊಳ್ಳೆಗಾಲ
ರಾಜ್ಯದ ಮಧ್ಯರೇಖೆ
225 M.
225 M.
125 M.
125 M.
SCALE
0 20 40 60 80 100
ಗುರುತುಗಳು: * ರಾಜ್ಯದಮಧ್ಯಬಿಂದು; ರಾಜ್ಯದ ಗಡಿ; ರಾಜಧಾನಿ.

ಕಬ್ಬಿಣ, ಮೆಂಗನೀಸು, ಬಾಕ್ಸೈಟ್, ಸೀಮೆಂಟುಗಳಲ್ಲಿ ಕರ್ನಾಟಕ ದಕ್ಷಿಣ ಹಿಂದುಸ್ಥಾನ ಮಟ್ಟಿಗಾದರೂ ಪ್ರಥಮ ಸ್ಥಾನ ಪಡೆಯಬಲ್ಲುದು. ಕಚ್ಚಾ ಮಾಲು ಮತ್ತು ವಿದ್ಯುತ್ತಿನ ಪೂರೈಕೆ ಅಖಂಡವಾಗಿ ದೊರೆಯಬಲ್ಲ ಹಾಗು ಕರಾವಳಿಯುಳ್ಳ ನಮ್ಮ ರಾಜ್ಯ ಪ್ರಥಮ ದರ್ಜೆಯ ಔದ್ಯೋಗಿಕ ಪ್ರದೇಶವಾಗುವುದು ಸುಲಭಸಾಧ್ಯ. ಇಂತಹ ವಿಪುಲವಾದ ಔದ್ಯೋಗಿಕ ಬೆಳವಣಿಗೆಗನುರೂಪವಾದ ಸಾರಿಗೆ-ಸಂಚಾರದ ಮಾರ್ಗಗಳೂ ಇತರ ಸಂಪರ್ಕದ ಸಾಧನಗಳೂ ನಮ್ಮ ನಾಡಿನಲ್ಲಿ ಉಂಟಾಗುವುದು ಅವಶ್ಯವಾಗಿದೆ. ಭವಿಷ್ಯದಲ್ಲಾದರೂ ನಮ್ಮ ರಸ್ತೆ, ರೈಲುದಾರಿ, ನೀರುದಾರಿ, ಇತ್ಯಾದಿಗಳು ಒಂದು ಉಚ್ಚಮಟ್ಟದ ಔದ್ಯೋಗಿಕ ವಿಕಾಸಕ್ಕೆ ವಾಹನಗಳಾಗ ಬೇಕಾಗಿದೆ.

## (ಈ) ದಕ್ಷಿಣ ಭಾರತದ ಮಹತ್ವದ ನಡುನಾಡು

ದಕ್ಷಿಣ ಭಾರತದ ನಡುನಾಡಿನಂತಿದೆ ನಮ್ಮ ಕರ್ಣಾಟಕ ರಾಜ್ಯ. ದ್ರಾವಿಡ ಹಾಗೂ ಔತ್ತರೇಯ ಸಂಸ್ಕೃತಿಗಳ ಸಂಗಮಸ್ಥಾನವಾದಂತೆಯೇ ಈ ರಾಜ್ಯ ಭಾರತದ, ಮುಖ್ಯತಃ ದಕ್ಷಿಣ ಭಾರತದ, ಸಂಚಾರ ಸಂಪರ್ಕಗಳ ಸಂಗಮವೂ ಆಗಬಲ್ಲುದು. ಕರ್ನಾಟಕಕ್ಕೆ ಒಂದಾದರೂ ಹಿರಿ ಬಂದರು ಆದರಂತೂ ಇದು ನಿಸ್ಸಂದೇಹದ ಮಾತು. ಮೇಲೆ ವಿವರಿಸಿದಂತಹ ಔದ್ಯೋಗಿಕ ಮಹತಿಯುಳ್ಳ ನಮ್ಮ ನಾಡು ಹೀಗೆ ದಕ್ಷಿಣ ಭಾರತದ ನಡುಮನೆಯಾಗಿರುವುದು ಕೇವಲ ಭೌಗೋಲಿಕ ದೃಷ್ಟಿಯಿಂದಲ್ಲದೆ, ಆರ್ಥಿಕ ದೃಷ್ಟಿಯಿಂದಲೂ ಮಾರ್ಮಿಕವಾದ ಮಾತಾಗಿದೆ. ಕರ್ಣಾಟಕದಂತೆ ಆಂಧ್ರವೂ ನಡುವಿನ ಸ್ಥಾನದಲ್ಲಿದ್ದರೂ, ಕರ್ಣಾಟಕವು ಉನ್ನತ ಪ್ರದೇಶದಲ್ಲಿದ್ದು, (ಕಾಶ್ಮೀರದ ನಂತರ, ಕರ್ಣಾಟಕ ರಾಜ್ಯವೇ ಭಾರತದ ಅತ್ಯುನ್ನತ ಪ್ರದೇಶ), ಒಳ್ಳೆಯ ಔದ್ಯೋಗಿಕ ಹವಾಮಾನವನ್ನು ಪಡೆದುದರಿಂದ ಹಾಗೂ ಪಶ್ಚಿಮ ಕರಾವಳಿಗೆ ಹೊಂದಿರುವುದರಿಂದ ಸಾರಿಗೆ-ಸಂಪರ್ಕಗಳ ದೃಷ್ಟಿಯಿಂದ ನಮ್ಮ ನಾಡು ನಡುನಾಡಾಗಿರುವುದರಲ್ಲಿ ಹೆಚ್ಚುಗಾರಿಕೆ ಇದೆ. ದಕ್ಷಿಣ ಭಾರತಕ್ಕೆಲ್ಲ ಅಗಸೆಬಾಗಿಲು (ಗೇಟ್‌ವೇ) ಆಗಬಲ್ಲ ಅನುಕೂಲತೆ ನಮ್ಮ ನಾಡಿಗಿದೆ. ನಮ್ಮ ಬಂದರುಗಳ ಹೆಚ್ಚಳವೂ ಇದಕ್ಕೆ ಕಾರಣೀಭೂತವಾಗಬಲ್ಲುದು.

## (ಉ) ಭಾರತದ ಎರಡನೆಯ "ಗೇಟ್‌ವೇ"

ಬೊಂಬಾಯಿ-ಬೆಂಗಳೂರು-ಮದರಾಸುಗಳ ರಾಷ್ಟ್ರೀಯ ಹೆದ್ದಾರಿಯು ನಮ್ಮನಾಡಿನ ಎರಡು ಮುಖ್ಯ ನೈಸರ್ಗಿಕ ವಿಭಾಗಗಳಾದ ಮಲೆನಾಡು ಹಾಗೂ ಬೈಲುಸೀಮೆಗಳ ಸೆರಗಿನಲ್ಲಿ ನಾಡಿನ ನಟ್ಟನಡುವೆ ಹಾಯುತ್ತಿದೆ. ಇದೀಗ ಯೋಜಿತವಾಗಿರುವ ಪಶ್ಚಿಮ ಕರಾವಳಿಯ ಬೊಂಬಾಯಿ-ಕೊಚೀನದ ಹೆದ್ದಾರಿಯೂ ನಮ್ಮ ಕರಾವಳಿಯನ್ನು ಪೂರ್ತಿಯಾಗಿ ದಾಟುತ್ತದೆ. ಪೂನಾ-ಬೆಂಗಳೂರು ರೈಲು ಹೆದ್ದಾರಿಯೂ ನಾಡಿಗೆ ಮಧ್ಯವರ್ತಿಯಾಗಿದೆ. ಬೊಂಬಾಯಿ-ಮದ್ರಾಸು ರೈಲು ಹೆದ್ದಾರಿ ಮಾತ್ರ ಅಂಚಿನಲ್ಲಿ ಹಾಯುತ್ತದೆ. ಇದೂ ಸಹ ನಮ್ಮ ನಾಡ

ನಡು ನಾಡ ಹೆದ್ದಾರಿಯಾಗಲು ಸಾಧ್ಯ. ಬೊಂಬಾಯಿ-ಬೆಂಗಳೂರು-ಮದ್ರಾಸು ಹಾಗೂ ಬೊಂಬಾಯಿ-ಕೊಲಂಬೊ ವಿಮಾನ ಮಾರ್ಗಗಳಿಗೂ, ಬೊಂಬಾಯಿ-ಕೊರ್ಚಿ-ತ್ರಿವೆಂಡ್ರಂ ವಿಮಾನ ಮಾರ್ಗಕ್ಕೂ ಕರ್ಣಾಟಕ ಮಧ್ಯವರ್ತಿಯಾಗಿದೆ. ಒಟ್ಟಿನಲ್ಲಿ ಭಾರತದ ಮಹಾದ್ವಾರವಾದ ಬೊಂಬಾಯಿ ಹಾಗೂ ದಕ್ಷಿಣ ಭಾರತಗಳ ನಡುವಿನ ಯಾವುದೇ ಸಾರಿಗೆ ಸಂಪರ್ಕದ ವಿಷಯದಲ್ಲಿ ಕರ್ಣಾಟಕ ರಾಜ್ಯಕ್ಕೆ ಒಂದು ಹೆಚ್ಚಿನ ಸ್ಥಾನ ತಪ್ಪಿದ್ದಲ್ಲ. ಡಿಲ್ಲಿ ಹಾಗೂ ದಕ್ಷಿಣ ಭಾರತಗಳ ಮಟ್ಟಿಗೂ ಈ ಮಾತು ಕೆಲವಂಶದಲ್ಲಿ ಅನ್ವಯಿಸಬಲ್ಲುದು. ಸೂಯೆಜ್-ಕೊಲಂಬೋಗಳ ಕಡಲ ಹೆದ್ದಾರಿಗೂ ಕರ್ನಾಟಕದ ಬಂದರುಗಳು (ಕೇರಳ ಹೊರತಾಗಿ) ಭಾರತದ ಮಿಕ್ಕೆಲ್ಲ ಬಂದರುಗಳಿಗಿಂತ ತೀರ ಹತ್ತಿರವಾಗಿದೆ. ಏಡ್ಡ ಬಂದರಿಗೆ ಎಲ್ಲಕ್ಕೂ ಹತ್ತಿರದ ಭಾರತದ ಕರಾವಳಿ ನಮ್ಮದೇ.

ಇವೆಲ್ಲ ದೃಷ್ಟಿಯಿಂದ ಇಡೀ ಭಾರತಕ್ಕೆ ಬೊಂಬಾಯಿ ಹಾಗೂ ಮಹಾರಾಷ್ಟ್ರಗಳು ಯಾವ ಮಧ್ಯವರ್ತಿಯಾದ ಕೀಲದ ಸ್ಥಾನದಲ್ಲಿವೆಯೋ ಅಷ್ಟೇ ಮಹತ್ವದ ಹಾಗು ಕೀಲು ಸ್ಥಾನದಲ್ಲಿ ಕನ್ನಡ ಕರಾವಳಿಯೂ ಕರ್ನಾಟಕ ರಾಜ್ಯವೂ ಇವೆ, ದಕ್ಷಿಣ ಭಾರತದ ಮಟ್ಟಿಗೆ.

## (ಊ) ಸ್ಥಿರವಾದ ಪುರಾತನ ಭೂಮಿ

ಕರ್ನಾಟಕ ರಾಜ್ಯದ ಪ್ರಸ್ಥಭೂಮಿಯು ಪುರಾತನ ಅಗ್ನಿಶಿಲೆಗಳ ಕಾಲದಲ್ಲಿ ರಚಿತವಾದದ್ದು. ಇದು ಜಗತ್ತಿನಲ್ಲಿ ಮೊತ್ತ ಮೊದಲು ರೂಪುಗೊಂಡ ಭಾಗಗಳಲ್ಲೊಂದಾಗಿದೆ. ಇದರಿಂದ ನಮ್ಮ ಭಾಗ ಹೆಚ್ಚು ಸ್ಥಿರೀಕರಿಸಲ್ಪಟ್ಟಿದ್ದು ಜ್ವಾಲಾಮುಖಿಗಳಿಂದಲೂ, ಬಿರುಗಾಳಿ ನೆರೆಹಾವಳಿ ಮುಂತಾದುವುಗಳಿಂದಲೂ ಭಾರತದ ಮಿಕ್ಕ ಅನೇಕ ಭಾಗಗಳಿಗಿಂತ ಹೆಚ್ಚು ಸುರಕ್ಷಿತವಾಗಿದೆ. ಹಿರೀಘಟ್ಟಗಳಲ್ಲಿಯ ಅತಿಯಾಗಿ ಮಳೆ ಬೀಳುವ ಕೆಲವು ಭಾಗಗಳನ್ನುಳಿದರೆ, ಮಿಕ್ಕೆಲ್ಲ ಭಾಗ ರಸ್ತೆ, ರೈಲುದಾರಿಗಳ ಬೆಳವಣಿಗೆಗೆ ತಕ್ಕುದಾಗಿದೆ. ನೆಲವೂ ಗಟ್ಟಿಯಾದದ್ದು, ಏರಿಳಿತಗಳ ಪ್ರದೇಶವೆಂಬುದೊಂದೇ ತೊಂದರೆ. ಘಟ್ಟಗಳೂ ಸಹ ಮುಖ್ಯವಾಗಿ ಉತ್ತರ ಕನ್ನಡ ಜಿಲ್ಲೆಯ ಘಟ್ಟಗಳು. ಹೆದ್ದಾರಿಗಳ ನಿರ್ಮಾಣಕ್ಕೆ ಹೆಚ್ಚು ಆತಂಕವಾಗಿಲ್ಲ. ಸಂಚಾರ-ಸಾರಿಗೆಗಳ ಯಾವುದೇ ಸ್ಥಿರಕಟ್ಟುವಿಕೆಗೆ ನಮ್ಮಲ್ಲಿ ಬಿಹಾರ, ಕಚ್, ರಾಜಸ್ಥಾನಗಳಂತೆ ಯಾವ ಭಯವೂ ಇಲ್ಲ.

## (ಎ) ಬಂಧನ ಮುಕ್ತ ಮೈಸೂರು

ಕನ್ನಡನಾಡಿನ ಎಲ್ಲಕ್ಕೂ ಹೆಚ್ಚಿನ ಸದ್ಭಾಗ್ಯ ಅದಕ್ಕೆ ಕಡಲ ಕರಾವಳಿಯಿದ್ದುದು. ಮೈಸೂರು ಪ್ರದೇಶಕ್ಕೆ ಇದುವರೆಗೂ ಆ ಭಾಗ್ಯವಿಲ್ಲದುದರಿಂದ ಅದು ಎಷ್ಟೊಂದು ಆರ್ಥಿಕ ಚಡಪಡಿಕೆಗೊಳಗಾಗಿತ್ತೆಂಬುದು ತಿಳಿದ ವಿಷಯವೇ. ಅದರ ಗಡಿಗಳು ಅದಕ್ಕೆ ಭೌಗೋಳಿಕ ಗೋಡೆಗಳಂತಾಗಿದ್ದುವು. ಕರ್ನಾಟಕ ದೊಡಗೂಡಿ ಮೈಸೂರು ಇಂದು ಆ ದಿಗ್ಬಂಧನದಿಂದ ಮುಕ್ತವಾದಂತಾಗಿದೆ. ಇದೊಂದು ಅಮೋಘವಾದ ಲಾಭ. ಮಿಕ್ಕ ಕರ್ನಾಟಕಕ್ಕಂತೂ ನಮ್ಮ ಕರಾವಳಿ

ಅಭಿವೃದ್ಧಿ ಹೊಂದಿದರೆ ಸೌಭಾಗ್ಯದ ಹೊಸ್ತಿಲನ್ನೇ ತೆರೆದಂತೆ. ಯಾವುದೇ ಪ್ರದೇಶಕ್ಕೆ ಕಡಲ ಕರಾವಳಿಯಿರುವುದೆಂದರೆ ಒಂದು ಭಾಗ್ಯ.

ಅದರಲ್ಲೂ ನಾಡಿನ ಮುಖ್ಯಭಾಗಕ್ಕೆಲ್ಲಾ ಹೊಂದಿಕೊಂಡು ಒಂದಲ್ಲದಂತೆ ನಾಲ್ಕೈದು ನಿಸರ್ಗದತ್ತವಾದ ಅತ್ಯುತ್ತಮ ಬಂದರುಗಳಿರುವುದು ಹೆಚ್ಚಿನ ಸದ್ಭಾಗ್ಯ. ಕರ್ಣಾಟಕದ ಕರಾವಳಿ ಭಾರತದ ಮಿಕ್ಕ ಕಡಲು ತಾಗಿದ ರಾಜ್ಯಗಳ ಕರಾವಳಿಗಿಂತ ಚಿಕ್ಕದೇನೋ ಸರಿ. ಆದರೆ ಅದು ಚಿಕ್ಕದಾದರೂ ಹೆಚ್ಚಿನ ಸಂಖ್ಯೆಯ ಒಳ್ಳೆಯ ಬಂದರುಗಳುಳ್ಳದ್ದಾದುದರಿಂದ* ಅದರ ಚಿಕ್ಕತನ ಒಂದು ವಿಶೇಷ ಅನುಕೂಲತೆಯೇ ಆಗಿದೆ. ನಮ್ಮ ಕರಾವಳಿಯೇ ನಮ್ಮ ನಾಡಿನ ಮುಖ; ಮುಖ್ಯತಃ, ಸಾರಿಗೆ-ಸಂಪರ್ಕಗಳ ವಿಷಯದಲ್ಲಿ. ನಾಡಿನ ಆಕಾರಕ್ಕೆ ತಕ್ಕುದಾಗಿ ಆ ಮುಖ ಚಿಕ್ಕದಾಗಿಯೇ ಇದ್ದರೆ ಅದಕ್ಕೆ ಹಿರಿದಾದ ಹಿನ್ನಾಡು (ಹಿಂಟರ್ ಲ್ಯಾಂಡ್) ದೊರೆಯುವುದಲ್ಲದೆ, ಸಾರಿಗೆ-ಸಂಪರ್ಕಗಳನ್ನು ಸುಂದರವಾಗಿ ಈ ಕರಾವಳಿಗಭಿಮುಖವಾಗಿ ಕೇಂದ್ರೀಕರಿಸಲು ಅನುಕೂಲವಾಗುವುದು. ಅತ್ತ ಬೆಂಗಳೂರು-ಮೈಸೂರುಗಳಿಂದ ಇತ್ತ ಗುಲ್ಬರ್ಗಾ-ಬಿದರೆಗಳವರೆಗಿನ ಭಾಗವೆಲ್ಲ ನಮ್ಮ ಕರಾವಳಿಗೆ ಬೆಂಗಾವಲಾಗಿ ನಿಲ್ಲುವುದು. ಈ ಭಾಗಕ್ಕೆಲ್ಲ ನಮ್ಮ ಕರಾವಳಿಯ ಬಂದರುಗಳೇ ಮಿಕ್ಕಾವ ಬಂದರುಗಳಿಗಿಂತಲೂ ಹೆಚ್ಚು ಹತ್ತಿರವಾಗಿವೆ. ನಮ್ಮ ಕರಾವಳಿ ಕರ್ಣಾಟಕದ ಕ್ಷೇತ್ರವನ್ನೆಲ್ಲ ಪೂರ್ತಿ ಆವರಿಸಬಲ್ಲುದಲ್ಲದೆ ಸ್ವಲ್ಪ ಹೆಚ್ಚಿನ ಕ್ಷೇತ್ರವನ್ನೂ ವ್ಯಾಪಿಸಬಲ್ಲುದು. ಇದರಿಂದ ಕರ್ಣಾಟಕದ ಆರ್ಥಿಕ, ಔದ್ಯೋಗಿಕ ಹಾಗೂ ವಾಣಿಜ್ಯ ಕ್ಷೇತ್ರಗಳು ಒಂದೇ ರಾಜ್ಯದಲ್ಲಿ, ಒಂದೇ ಆಡಳಿತದಲ್ಲಿ, ಹಾಗೂ ಒಂದೇ ಕರಾವಳಿಯ ವ್ಯಾಪದಲ್ಲಿ ಬಂದು ಹೆಚ್ಚು ಸಂಘಟಿತವಾಗಬಲ್ಲುವು.

## ನಮ್ಮ ಕರಾವಳಿ ನಮ್ಮ ಸಂಘಟಿತ ಸ್ವರೂಪದ ಸೂತ್ರ

ಈ ಅನುಕೂಲತೆ ಆಂಧ್ರಕ್ಕಿಲ್ಲ. ವಿಶಾಖಾಪಟ್ಟಣ ಇಡೀ ಆಂಧ್ರವನ್ನು ವ್ಯಾಪಿಸುವದಿಲ್ಲ; ಅಲ್ಲದೆ ಆಂಧ್ರದ ದಕ್ಷಿಣಭಾಗವೆಲ್ಲ ಮದ್ರಾಸು ಬಂದರಿನ

---

"The land-locked position of Mysore aggravates its transport problem. The cost of transportation of heavy products to distant consuming centres becomes high and as a consequence the market gets circumscribed to a narrow area."

Industrial Development of Mysore,
(P. 304) By Dr. BALAKRISHNAN.

*ಆಂಧ್ರದ ಕರಾವಳಿ ೫೫೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧
ತಮಿಳುನಾಡಿನ ಕರಾವಳಿ ೫೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೨
ಕೇರಳದ ಕರಾವಳಿ ೪೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧
ಕರ್ನಾಟಕದ ಕರಾವಳಿ ೨೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೪ ಅಥವ ೫
ಮಹಾರಾಷ್ಟ್ರದ ಕರಾವಳಿ ೪೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧
ಕಚ್ಛ-ಗುಜರಾತಿನ ಕರಾವಳಿ ೧,೦೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧
ಓರಿಸ್ಸಾ ಕರಾವಳಿ ೩೫೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧
ಬಂಗಾಲದ ಕರಾವಳಿ ೩೦೦ ಮೈಲು ಉದ್ದ; ಒಳ್ಳೆಯ ಬಂದರುಗಳ ಸಂಖ್ಯೆ ೧

ವ್ಯಾಪದಲ್ಲಿದೆ. ಹಾಗೆಯೇ ಗುಜರಾತದ ದಕ್ಷಿಣಭಾಗ ಮಹಾರಾಷ್ಟ್ರದ ಕರಾವಳಿಯನ್ನವಲಂಬಿಸಬೇಕು. ಆದರೆ ನಮ್ಮ ಕರಾವಳಿ ಹಾಗು ಹಿನ್ನಾಡುಗಳ ಸಂಬಂಧ ಒಂದಕ್ಕೊಂದು ಹೆಚ್ಚು ಹೊಂದಿಕೊಂಡಿದೆಯಲ್ಲದೆ, ನಮ್ಮ ಕೆಲ ಅತ್ಯುತ್ತಮ ಬಂದರುಗಳು ಎಲ್ಲಿ ಬೇಕೋ ಅಲ್ಲಿಯೇ ಇವೆ. ಇಂತಹ ಅನುಕೂಲ ಕರ್ಣಾಟಕವನ್ನುಳಿದರೆ ಬಂಗಾಲಕ್ಕುಂಟು; ಆದರೆ ಅದಕ್ಕೆ ಒಂದೇ ಬಂದರು. ನಮ್ಮ ಕರಾವಳಿಯ ಈ ಮಹಿಮೆಯನ್ನು ನಾವು ಅರಿತರೆ, ನಮ್ಮ ನಾಡಿನ ಆರ್ಥಿಕ, ಔದ್ಯೋಗಿಕ ಹಾಗು ವ್ಯಾಪಾರೀ ಸೂತ್ರಗಳನ್ನು ನಾವು ನಿರಾತಂಕವಾಗಿ ನಮ್ಮ ಕರಾವಳಿಗೆ ಒಪ್ಪಿಸಬಹುದು.

ನಮ್ಮ ಕರಾವಳಿಯ ಇನ್ನೊಂದೆರಡು ಮಹತ್ತ್ವಗಳನ್ನು ಮೇಲೆ ಸೂಚಿಸಿ ಆಗಿದೆ. ಆದರೆ ನಮ್ಮ ಕರಾವಳಿಯ ಮಹಿಮೆಗೆ ಇನ್ನೂ ಎರಡು ಮುಖ್ಯ ಕಾರಣಗಳು ಇವೆ. (೧) ನಮ್ಮ ಬಂದರುಗಳು ಪ್ರವಾಸಿಕರ ಬಂದರು, ವ್ಯಾಪಾರೀ ಬಂದರು, ಎಣ್ಣೆ ಬಂದರು, ಹಡಗು ಕಟ್ಟುವ ಬಂದರು, ಮೀನು ಬಂದರು, ನೌಕಾ ತರಪೇತಿ ಬಂದರು ಹೀಗೆ ಬಂದರುಗಳ ಮುಖ್ಯ ಕಾರ್ಯಗಳಿಗೆಲ್ಲಾ ತಕ್ಕುವಾಗಿವೆ. ಆಂಧ್ರದ ಒಂದೇ ಒಂದು ಬಂದರು ಹಡಗು ಕಟ್ಟಲು ಮೀಸಲಾಗಿದೆ. ಕೇರಳದ ಒಂದೇ ಒಂದು ಬಂದರು ನೌಕಾ ತರಬೇತಿಗೆ ಕಾಯ್ದಿರಿಸಿದೆ. ಆದರೆ ಕರ್ಣಾಟಕದ ನಾಲ್ಕೈದು ನಿಸರ್ಗಸಿದ್ಧ ಬಂದರುಗಳು ತಕ್ಕ ರೀತಿಯಲ್ಲಿ ಅಭಿವೃದ್ಧಿಗೊಳಿಸಲ್ಪಟ್ಟರೆ ನಮ್ಮ ಕರಾವಳಿಯು ಭಾರತದ ಮಿಕ್ಕೆಲ್ಲಾ ಕರಾವಳಿಗಳು ಒಂದೊಂದಾಗಿ ಮಾಡುವ ಕೆಲಸವನ್ನು ತಾನೊಂದೇ ಮಾಡಬಲ್ಲುದು. (೨) ಎರಡನೇ ಮಹತ್ವವೆಂದರೆ ನಮ್ಮ ಕರಾವಳಿ ಇನ್ನೂರೇ ಮೈಲಿನಷ್ಟಾದರೂ ಮೀನುಗಾರಿಕೆಯಲ್ಲಿ ಭಾರತದಲ್ಲೇ ಎರಡನೇ ಸ್ಥಾನ ಪಡೆದಿದೆ.

ಮೊದಲನೆಯ ಸ್ಥಾನ ಕೇರಳಕ್ಕಿದೆ. ಬರೀ ಅಂಕಿಗಳನ್ನೇ ನೋಡಿದರೆ ಮೀನುಗಾರಿಕೆಯಲ್ಲಿ ಮೊದಲಸ್ಥಾನ ಬಂಗಾಳಕ್ಕೇನೋ ಸರಿ. ಆದರೆ ಬಂಗಾಳದ ಆ ಹೆಚ್ಚುಗಾರಿಕೆ ಕಡಲ ಮೀನಿನದಲ್ಲ. ಒಳನಾಡ (ಸಿಹಿನೀರಿನ) ಮೀನಿನದು. ಕಡಲ ಮೀನುಗಾರಿಕೆಯಲ್ಲಿ ಕೇರಳವೇ ಮೊದಲನೆಯದು. ಆದರೆ ಕೇರಳದ ಕರಾವಳಿ ಕರ್ಣಾಟಕದ ಎರಡರಷ್ಟಿದೆ. ಅವರ ಸದ್ಯದ ವಾರ್ಷಿಕ ಉತ್ಪತ್ತಿಯಾದ ಸುಮಾರು ೩ ಲಕ್ಷ ಟನ್ ಮೀನು, ಕರ್ನಾಟಕದ ಸುಮಾರು ೧.೨೦ ಲಕ್ಷ ಟನ್‌ಗಿಂತ ಪ್ರಮಾಣಶಃ ಬಹಳ ಹೆಚ್ಚೇನಲ್ಲ.

## (ಏ) ಏಕೀಕೃತ ಕರಾವಳಿ

ಕರ್ನಾಟಕದ ಏಕೀಕರಣದಿಂದ ಕನ್ನಡ ಕರಾವಳಿಯ ಏಕೀಕರಣವೂ ಆಗಿದೆ. ಇದೊಂದು ಆರ್ಥಿಕ ಏಕೀಕರಣದ ಹಿರಿಹೆಜ್ಜೆ. ಈವರೆಗೂ ನಮ್ಮ ಕರಾವಳಿಯ ಜಿಲ್ಲೆಗಳೆರಡೂ (೧೮೬೦ರ ವರೆಗೂ ಒಂದೇ ಆಗಿದ್ದುವು) ಒಡೆದು ಬೇರೆಬೇರೆ ರಾಜ್ಯಗಳಿಗೆ ಸೇರಿ ಆಯಾ ರಾಜ್ಯಗಳ ತುದಿಬಾಲವಾಗಿದ್ದುವು. ಒಂದರ ಮುಖ ಉತ್ತರಕ್ಕೆ, ಬೊಂಬಾಯಿ ಕಡೆಗೆ. ಇನ್ನೊಂದರ ಮುಖ ತದ್ವಿರುದ್ಧವಾಗಿ, ಮದರಾಸ್ ಕಡೆಗೆ. ಅಲ್ಲದೆ ಯಾವ ರಾಜ್ಯಕ್ಕೆ ಅವು ಸೇರಿದ್ದುವೋ ಆಯಾ

ರಾಜ್ಯಗಳ ಸಾಕಷ್ಟು ಹಿನ್ನಾಡೇ ಅದಕ್ಕೆ ಬೆಂಬಲವಾಗಿ ಇರಲಿಲ್ಲ. ಹೀಗಾಗಿ ಈ ಕರಾವಳಿಗೆ ಬರಬೇಕಾಗಿದ್ದ ಹೆಚ್ಚಳ ಇದುವರೆಗೂ ಬರಲಿಲ್ಲ. ಇನ್ನು ಮುಂದೆ ಕನ್ನಡ ಕರಾವಳಿಯೆಲ್ಲ ಏಕಜೀವವಾಗಿ ತಾನು ಸೇರಿರುವ ರಾಜ್ಯಕ್ಕೆಲ್ಲಾ ಮುಖ ವಾಗಿ ನಾಡ ಜೀವನದ ಸಂಪತ್ತಿಗೆ ಹಾಗೂ ಒಗ್ಗಟ್ಟಿಗೆ ಕಾರಣವಾಗಬಲ್ಲುದು.

ಒಟ್ಟಿನಲ್ಲಿ ನಮ್ಮ ಕರಾವಳಿಯ ಮಹತ್ವವನ್ನು ಪೂರ್ತಿ ಅರಿತಲ್ಲದೆ ನಮ್ಮ ನಾಡಿನ ನಿಜವಾದ ಸಾರಿಗೆ-ಸಂಚಾರ-ಸಂಪರ್ಕಗಳು ಸುಸಂಘಟಿತವಾಗಿ, ಕ್ರಮ ಬದ್ಧವಾಗಿ ಬೆಳೆಯಲಾರವು. ಈ ಇಡೀ ಹಿನ್ನೆಲೆಯನ್ನು ಕಣ್ಣೆದುರಿಗಿಟ್ಟುಕೊಂಡು ನಮ್ಮ ಸಾರಿಗೆ-ಸಂಪರ್ಕ ಸಾಧನಗಳ ಸದ್ಯದ ಪರಿಯನ್ನೂ, ಮುಂದಿನ ಸಿರಿ ಗುರಿಗಳನ್ನೂ ನಾವು ನಿರ್ಣಯಿಸಿಕೊಳ್ಳಬೇಕು. ಮೈಸೂರಿನಲ್ಲಾಗಲಿ, ಮಿಕ್ಕ ಕರ್ನಾಟಕ ಭಾಗಗಳಲ್ಲಾಗಲಿ ಇಲ್ಲಿಯವರೆಗೂ ಸಿದ್ಧಪಡಿಸಿದ ಯೋಜನೆಗಳಿಗೆ ಹೊಸ ರಾಜ್ಯದ ಆರ್ಥಿಕ ಒಗ್ಗಟ್ಟಿನ ಸಂಬಂಧವಿಲ್ಲದಿದ್ದುದರಿಂದ ಹೊಸ ರಾಜ್ಯಕ್ಕೆ ತಕ್ಕುದಾದ ಹೊಸದೊಂದು ಸಂಚಾರ-ಸಂಪರ್ಕಗಳ ಯೋಜನೆ ಆವಶ್ಯಕವಾಗಿದೆ.

# ಭಾಗ ೨

## ಹೆದ್ದಾರಿಗಳ ಹಿನ್ನೆಲೆ

ಈವರೆಗಿನ ಈ ತಾತ್ತ್ವಿಕ ವಿವೇಚನೆಯಿಂದ ನಾವು ತಿಳಿದುಕೊಳ್ಳಬೇಕಾದ ಮಾತುಗಳು ಇವು:—

(೧) ಕರಾವಳಿಯ ನಾಡಾದ ಕರ್ನಾಟಕಕ್ಕೆ ಕರಾವಳಿಯೇ ಹೆಚ್ಚಾಗಲು ಬಂದರುಗಳ ಅಭಿವೃದ್ಧಿಯೇ ನಮ್ಮ ನಾಡಿನ ಜೀವಾಳ. ಈವರೆಗೂ ನಿಟ್ಟಿಗೊಂದು ಮುಖವಾದ ನಮ್ಮ ಸಾರಿಗೆಯ ದಾರಿಗಳೆಲ್ಲಾ ಏಕಮುಖವಾಗಿ ಕರಾವಳಿಯತ್ತ ತಿರುಗಬೇಕು. (೨) ಭಾರತದ ನಡುನಾಡಾದ ಕರ್ನಾಟಕವು ಭಾರತದ ಸಾರಿಗೆ-ಸಂಚಾರ ಮಾರ್ಗಗಳದೊಂದು ದೊಡ್ಡ ಸಂಗಮವಾಗಬಹುದು. ಈ ನಾಡಿನ ಔದ್ಯೋಗಿಕ ಭವಿಷ್ಯ ಉಜ್ವಲವಾದುದರಿಂದ ಸಾರಿಗೆ-ಸಂಚಾರ ಮಾರ್ಗಗಳ ಅವ ಶ್ಯಕತೆಯೂ ಮಹತ್ವವೂ ಅತ್ಯಂತವಾಗಿವೆ. (೩) ಪ್ರವಾಸೀ ಪ್ರೇಕ್ಷಕರಿಗೆ ಈ ನಾಡು ಕಾಶ್ಮೀರದನಂತರ ಎರಡನೇ ಮಹತ್ವದ್ದಾಗಬಲ್ಲದು. ಕಾಶ್ಮೀರದಲ್ಲಿ ಬರೀ ನಿಸರ್ಗ ಸೌಂದರ್ಯವಿದ್ದರೆ, ಇಲ್ಲಿ ನಿಸರ್ಗ ಸೌಂದರ್ಯವಲ್ಲದೆ, ಅನೇಕ ಕ್ಷೇತ್ರ ಯಾತ್ರೆಯ ಸ್ಥಳಗಳೂ, ಶಿಲ್ಪವೇ ಮೊದಲಾದ ಕಲೆಯ ಅತ್ಯುಚ್ಚ ಸ್ಥಾನಗಳೂ, ಸಂಸ್ಕೃತಿ ಕೇಂದ್ರಗಳೂ, ಐತಿಹಾಸಿಕ ಸ್ಥಳಗಳೂ ತುಂಬಾ ಇವೆ. (೪) ನಾಲ್ಕನೆಯ ದಾಗಿ, ಈವರೆಗೂ ವಿವಿಧ ಮುಖವಾದ ನಮ್ಮ ನಾಡಿನ ಸಾರಿಗೆ-ಸಂಚಾರದ ಸಾಧನ ಗಳು ಇನ್ನುಮುಂದೆ ಕೇಂದ್ರೀಕೃತವಾಗಿ ಇಡೀ ನಾಡನ್ನು ಒಗ್ಗಟ್ಟಿನಲ್ಲಿ ಕಟ್ಟಿ ಹಿಡಿಯುವ ಹಗ್ಗಗಳಂತಾಗುವುವು. ನಾಡಿನ ಆರ್ಥಿಕ ಒಗ್ಗಟ್ಟಿನ ಸೂತ್ರ ಈ ಸಾಧನಗಳ ಸಮಂಜಸ ಸಂಯೋಜನೆಯಲ್ಲಿ ಅಡಕವಾಗಿದೆ; ಇದರಲ್ಲೇ ಸೂತ್ರಬದ್ಧ ವಾದ ಆಡಳಿತದ ಅನುಕೂಲತೆಯೂ ಇದೆ.

## ಹೆದ್ದಾರಿಯ ಪ್ರಕಾರಗಳು

ಈ ಸಂಯೋಜನೆ ಎಂತಹದಿರಬೇಕೆಂಬದನ್ನಷ್ಟು ವಿವೇಚಿಸಿ ನೋಡೋಣ :—

ನಾಡಿನ ಹೆದ್ದಾರಿಗಳು ಮೂರು ಬಗೆಯವು :—

(೧) ಭೂಮಾರ್ಗಗಳು = ರಸ್ತೆ, ರೈಲುದಾರಿ (ಹಳಿದಾರಿ ಅಥವಾ ಕಂಬಿದಾರಿ).

(೨) ಜಲಮಾರ್ಗಗಳು = ಕಡಲು, ನದಿ, ಹಾಗು ಕಾಲುವೆ ದಾರಿಗಳು.

(೩) ವಾಯುಮಾರ್ಗಗಳು = ವಿಮಾನದಾರಿ, ತಂತಿವಾಹಕ, ವಾಯರ್‌ಲೆಸ್ ಇತ್ಯಾದಿ.

ಕರ್ನಾಟಕವು ಮಹಾರಾಷ್ಟ್ರ, ಆಂಧ್ರ, ಮಧ್ಯಪ್ರದೇಶ, ಬೊಂಬಾಯಿ ರಾಜ್ಯಗಳಂತೆ ಅತ್ಯಂತ ವಿಶಾಲವಾದುದೂ ಅಲ್ಲ; ಕೇರಳ, ಪಂಜಾಬ, ಬಂಗಾಲಗಳಂತೆ ತೀರ ಚಿಕ್ಕದೂ ಅಲ್ಲ; ಹವಣೆ ಆಕಾರದ ರಾಜ್ಯ. ಆದುದರಿಂದಲೂ, ನಮ್ಮ ಭೂಮಿ ಗಟ್ಟಿ ನಮೂನೆಯಾದುದರಿಂದಲೂ, ನಮ್ಮಲ್ಲಿ ಸೀಮೆಂಟಿನ ಬೆಳವಣಿಗೆಗೆ ಹೆಚ್ಚು ಆಸ್ಪದವಿರುವದರಿಂದಲೂ 'ನಾಗಪೂರಿನ ರಸ್ತೆಗಳ ಯೋಜನೆಯ ಮೇರೆಗೆ' ತನ್ನ ರಸ್ತೆಗಳನ್ನು ಸಿದ್ಧಗೊಳಿಸಲು ಕರ್ನಾಟಕದಲ್ಲಿ ಅತ್ಯಂತ ಆಸ್ಪದವಿದೆ. ಕರ್ನಾಟಕ ರಾಜ್ಯದ ಸದ್ಯದ ಸರಾಸರಿಯಂತೆ ೧೦೦ ಚದರ ಮೈಲಿಗೆ ೨೦ ಮೈಲುದ್ದದ ರಸ್ತೆಯಿದೆ. ನಾಗಪೂರ ಯೋಜನೆಯಂತೆ ೧೦೦ ಚದರ ಮೈಲಿಗೆ ೭೦ ಮೈಲು ರಸ್ತೆ ಅವಶ್ಯ, ಎಂದರೆ ಒಟ್ಟಾರೆ ಸುಮಾರು ೫೦,೦೦೦ ಮೈಲು ರಸ್ತೆಗಳಾಗಬೇಕು. ಸದ್ಯ ಇಡೀ ಕರ್ನಾಟಕದಲ್ಲಿರುವ ರಸ್ತೆಗಳು ಸಾಧಾರಣವಾಗಿ ೧೨,೦೦೦ ಮೈಲಿ ಮಾತ್ರ. ಎಂದರೆ ಈಗಿರುವ ನಾಲ್ಕರಷ್ಟು ಹೆಚ್ಚು ಪ್ರಮಾಣದಲ್ಲಿ ರಸ್ತೆಗಳು ಕಟ್ಟಲ್ಪಡಬೇಕಾಗುವುದು. ಎಂದರೆ ಪ್ರತಿ ಪಂಚವಾರ್ಷಿಕ ಯೋಜನೆಯಲ್ಲಿ ೧೦,೦೦೦ ಮೈಲಿನಷ್ಟು ರಸ್ತೆದಾರಿ ಕಟ್ಟಿದರೆ, ೨೦ ವರ್ಷಗಳಲ್ಲಿ ಈ ಮಟ್ಟಕ್ಕೆ ನಾವು ಮುಟ್ಟಬಹುದು. ಆದರೆ ಅದು ಸುಸಾಧ್ಯವಾದ ಮಾತಲ್ಲ. ಕಾರಣ ಇದೀಗ ಕರ್ನಾಟಕದ ಮಿಕ್ಕ ಭಾಗಗಳನ್ನು ಮೈಸೂರಿನ ಮಟ್ಟಕ್ಕೆ ತರುವದಾದರೂ ಅಗತ್ಯವಾಗಿದೆ. ಎಂದರೆ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಕರ್ನಾಟಕ ರಾಜ್ಯ ೫,೦೦೦ ಮೈಲಿ ಹೆಚ್ಚು ರಸ್ತೆ ದಾರಿಗಳನ್ನು ಕಟ್ಟಬೇಕಾಗುವುದು. ಇವುಗಳಲ್ಲಿ ೪,೦೦೦ ಮೈಲಿಯಷ್ಟು ರಸ್ತೆದಾರಿ ಬಿಜಾಪುರ-ಬಳ್ಳಾರಿ-ಬಿದರೆ ಭಾಗಗಳಿಗೆ ಮೀಸಲಾಗಿಡಬೇಕು. ಇದಕ್ಕೆಲ್ಲಾ ಸುಮಾರು ೨೫-೩೦ ಕೋಟಿ ರೂಪಾಯಿಗಳ ಯೋಜನೆ ಅವಶ್ಯವಾದೀತು ಆದರೂ ಸದ್ಯದ ಮೈಸೂರು ಸಂಸ್ಥಾನದ ದ್ವಿತೀಯಯೋಜನೆಯಲ್ಲಿ ಹೊಸ ರಸ್ತೆಗಳಿಗೆ ಬರೀ ೭೫ ಲಕ್ಷ ರೂಪಾಯಿಗಳನ್ನಿರಿಸುವದನ್ನು ಬಗೆದು, ಸಮಸ್ತ ಕರ್ನಾಟಕದ ರಸ್ತೆಗಳಿಗೆ ದ್ವಿತೀಯ ಯೋಜನೆಯಲ್ಲಿ ಬರೀ ೩,೦೦೦ ಮೈಲಿ ಹೊಸ ರಸ್ತೆದಾರಿಗಳೂ, ಅದಕ್ಕಾಗಿ ೨೦ ಕೋಟಿ ರೂಪಾಯಿಗಳೂ ಅವಶ್ಯವೆಂದು ಮುಂದೆ ಸೂಚಿಸಲಾಗಿದೆ.

## ರಸ್ತೆಗಳೇ ನಾಡಿನ ಜೀವನಾಡಿ

ಕನ್ನಡ ನಾಡಿಗೆ ಯಾವ ದೃಷ್ಟಿಯಿಂದ ನೋಡಿದರೂ ಹೆಚ್ಚಿನ ಪ್ರಮಾಣದಲ್ಲಿ ಪ್ರಥಮ ತರಗತಿಯ ರಸ್ತೆಗಳು ಅವಶ್ಯ. ಈ ರಸ್ತೆಗಳು ಎಷ್ಟು ಹೆಚ್ಚುವುವೋ ಅಷ್ಟರಮಟ್ಟಿಗೆ ನಾಡಿನ ಆರ್ಥಿಕ ವಿಕಾಸಕ್ಕೆ ಹೆಚ್ಚು ಆಸ್ಪದವಿದೆ. ಉದಾಹರಣೆಗೆ—೧೦೦ ಚದರ ಮೈಲಿಗೆ ೫-೬ ಮೈಲಿಯಷ್ಟು ಮಾತ್ರ ರಸ್ತೆಯಿರುವ ಉತ್ತರ-ಪೂರ್ವ ಕರ್ನಾಟಕ (ಬಳ್ಳಾರಿ-ಬಿದರಿ-ಬಿಜಾಪುರ) ಇಡೀ ರಾಜ್ಯಕ್ಕೆ ಹೆಚ್ಚಿನದೆನ್ನಿಸಬಹುದಾದ ನೀರಾವರಿಯ ಆಸ್ಪದವುಳ್ಳದ್ದಿದೆ. ಈ ಭಾಗದಲ್ಲಿ ಕೇಂದ್ರಿತವಾಗುವಂತೆ ಹರಿಯುವ ಘಟಪ್ರಭಾ, ಮಲಪ್ರಭಾ, ತುಂಗಭದ್ರಾ, ಕೃಷ್ಣ ಹಾಗು ಭೀಮೆಯರ ನೀರನ್ನು ಶಕ್ಯವಿದ್ದಷ್ಟರ ಮಟ್ಟಿಗೆಲ್ಲಾ ನೀರಾವರಿಗೆ ಉಪಯೋಗಿಸಿದರೆ, ಇಡೀ ಕರ್ನಾಟಕದ ೧/೪ ರಷ್ಟಿರುವ ಈ ಭಾಗದಲ್ಲಿ ಸುಮಾರು ೪೦ ಲಕ್ಷ ಎಕರೆ, ಎಂದರೆ ಸಧ್ಯ ಮೈಸೂರು ಸಂಸ್ಥಾನದಲ್ಲಿ ನಡೆಯುವ ಹಾಗೂ ಯೋಜಿತವಾದ ನದಿ-ನೀರಾವರಿ ಕ್ಷೇತ್ರಕ್ಕಿಂತ ಸುಮಾರು ೧೦ ಪಟ್ಟು ಹೆಚ್ಚು ನೆಲಕ್ಕೆ ನೀರುಣ್ಣಿಸುವುದು ಸುಲಭಸಾಧ್ಯವಿದೆ. ಇಂತಹ ಆಸ್ಪದ ಬಹಳ ಕ್ವಚಿತ್ತಾಗಿ ಮಾತ್ರ ಸಿಕ್ಕಬಹುದು. ಇಡೀ ಕರ್ನಾಟಕದ ಮುಕ್ಕಾಲು ಭಾಗದ ನೀರು, ಎಂದರೆ ಸಾಧಾರಣ ೪೦-೫೦ ಸಾವಿರ ಚದರ ಮೈಲಿ ನೀರು, ಈ ಭಾಗದಲ್ಲಿ ಕೇಂದ್ರಿತವಾಗಿ ಹರಿಯುತ್ತಿದೆ. ನೀರಾವರಿಗೆ ಇಷ್ಟು ಅನುಕೂಲವಾದ ಹಾಗೂ ವಿಸ್ತಾರವಾದ ಪ್ರದೇಶ ಕರ್ನಾಟಕದಲ್ಲಿ ಮತ್ತೊಂದಿಲ್ಲ. ಇಷ್ಟು ಸುಸಂಪನ್ನತೆಯನ್ನು ಪಡೆಯಬಹುದಾದ ಈ ಪ್ರದೇಶದಲ್ಲಿ ಕನಿಷ್ಟಪಕ್ಷ ೧೦೦ ಚದರ ಮೈಲಿಗೆ (ಮೈಸೂರಿನ ಸರಾಸರಿಯಷ್ಟಲ್ಲದಿದ್ದರೂ) ೧೬-೨೦ ಮೈಲಿಯಷ್ಟು ರಸ್ತೆ ಅತ್ಯವಶ್ಯ ; ಎಂದರೆ, ಕನಿಷ್ಟಪಕ್ಷ ಈಗಿರುವ ೭೦೦ ಮೈಲಿ ರಸ್ತೆಯಲ್ಲದೆ ಮತ್ತೆ ೨,೦೦೦ ಮೈಲಿಯಷ್ಟು ರಸ್ತೆ ಅತ್ಯಗತ್ಯ.

ಒಟ್ಟಾರೆ, ರಸ್ತೆಗಳೇ ನಮ್ಮ ನಾಡಿನ ಅಭಿವೃದ್ಧಿಗೆ ಮೂಲಭೂತವಾದ ಹಾಗೂ ಅತ್ಯಂತ ಮಹತ್ವದ ನಾಳಗಳು. ಅವುಗಳ ನಂತರ ೨ನೇ ಮಹತ್ವ ರೈಲ್ದಾರಿಗಳಿಗೆ. ಈ ರೈಲುದಾರಿಗಳ ಸ್ಥಿತಿ ಹೊಸ ರಾಜ್ಯದಲ್ಲಿ ಹೀಗಿದೆ :—

| | | |
|---|---|---|
| ಬ್ರಾಡ್ ಗೇಜ್ | .... | ೨೨೦ ಮೈಲಿ |
| ಮೀಟರ್ ಗೇಜ್ | .... | ೧,೩೦೦ ಮೈಲಿ |
| ನ್ಯಾರೋ ಗೇಜ್ | .... | ೧೦೨ ಮೈಲಿ |
| ಒಟ್ಟು | .... | ೧,೬೨೨ ಮೈಲಿ |
| ಇದರಲ್ಲಿ ಮೈಸೂರು ಸಂಸ್ಥಾನದಲ್ಲಿ | .... | ೭೭೦ ಮೈಲಿ |
| ಮಿಕ್ಕ ಕರ್ಣಾಟಕದಲ್ಲಿ | .... | ೮೫೨ ಮೈಲಿ |

## ರೈಲುದಾರಿಯ ಹಿರಿ ಕೊರತೆಗಳು

ಕರ್ಣಾಟಕದಲ್ಲಿ ಬ್ರಾಡ್‌ಗೇಜು ಕರ್ಣಾಟಕದ ದೃಷ್ಟಿಯಿಂದ ಇದ್ದೂ

ಇಲ್ಲದಂತಿದೆ. ಅದು ನಾಲ್ಕು ತುಂಡಾಗಿ ನಾಲ್ಕು ಮೂಲೆಗಳಲ್ಲಿ ಎಸೆಯಲ್ಪಟ್ಟಿದೆ; ಒಂದಕ್ಕೊಂದು ಸಂಬಂಧವೇ ಇಲ್ಲ. ಆ ತುಂಡುಗಳು ಇವು :—

(೧) ದೂಧನಿಯಿಂದ ಮಂತ್ರಾಲಯದವರೆಗೂ ಮದ್ರಾಸು-ಬೊಂಬಾಯಿ ರೈಲುದಾರಿಯ ಭಾಗ.

(೨) ಬಿದರೆ-ಭಾಲ್ಕಿಯ ತುಂಡು;

(೩) ಬೆಂಗಳೂರು-ಬಂಗಾರಪೇಟೆ-ಕೋಲಾರಗಣಿಯ ಭಾಗ; ಹಾಗೂ

(೪) ಮಂಗಳೂರು-ಉಳ್ಳಾಲದ ೮ ಮೈಲಿನ ತುಂಡು.

ಹೀಗೆ ಹತ್ತುಗಡಿ ಕಡಿದ ದೂರದ ಮೂಲೆಗಳಲ್ಲಿ ಮಾತ್ರ ಹಾಯ್ದಿರುವ ಈ ರೈಲುದಾರಿಯಿಂದ ಹೆಚ್ಚಿನ ಪ್ರಯೋಜನವಾದರೂ ನಮಗೆ ಇಲ್ಲ. ನ್ಯಾರೋಗೇಜ್ ಒಂದೇ ಕಡೆಗೆ ಒಂದು ಸುತ್ತುದಾರಿಯಾಗಿದೆ, ಬೆಂಗಳೂರು-ಬಂಗಾರಪೇಟೆಗಳ ಮಧ್ಯೆ. ಕಾರಣ ಕರ್ಣಾಟಕದ ಮಟ್ಟಿಗೆ ನಿಜವಾಗಿ ಉಪಯೋಗವಿದ್ದ ರೈಲುದಾರಿ ಮೀಟರ್ ಗೇಜಿನದೇ. ಇಡೀ ದಕ್ಷಿಣ ಭಾರತಕ್ಕೆ ನಡು-ನಾಡೆನ್ನಿಸುವ ಕರ್ಣಾಟಕದಲ್ಲಿ ಬ್ರಾಡ್‌ಗೇಜಿನ ರೈಲು (ಅಂಚಿನ ಹೊರತು ಮತ್ತೆಲ್ಲೂ) ಹಾಯುವುದಿಲ್ಲ. ಭಾರತದ ಮಿಕ್ಕ ಮುಖ್ಯ ಭಾಗಗಳಿಂದ ನಮ್ಮ ನಾಡು ನಡುನಾಡಾಗಿಯೂ ಕಡಿದಂತಾಗಿದೆ. ಕಾರಣ—

(೧) ಇದೊಂದು ನಮ್ಮ ನಾಡಿನ ದೊಡ್ಡ ನ್ಯೂನತೆ.

(೨) ಇನ್ನೊಂದು ಇಷ್ಟೇ ದೊಡ್ಡ ನ್ಯೂನತೆ ಎಂದರೆ ನಮ್ಮನಾಡಿನ ರೈಲುದಾರಿಗಳಾವುವೂ ಒಳನಾಡಿನ ಕರಾವಳಿಗೆ ಜೋಡಿಸಲ್ಪಟ್ಟಿಲ್ಲ.

(೩) ಮೂರನೆಯ ನ್ಯೂನತೆ ಎಂದರೆ ನಮ್ಮ ರೈಲುದಾರಿಗಳೆಲ್ಲಾ ನೇರವಾಗಿ ಹೋಗದೆ ಬಳಸಿಕೊಂಡು ಹೋಗುತ್ತವೆ.

(ಉದಾ :—ಬೆಂಗಳೂರು-ದಾವಣಗೆರೆಗೆ ನೇರವಾಗಿ ೧೫೫ ಮೈಲಿ; ರೈಲಿನಿಂದ ೨೦೨ ಮೈಲಿ; ಧಾರವಾಡ-ಬೆಳಗಾವಿ ನೇರವಾಗಿ ೪೮ ಮೈಲಿ; ರೈಲಿನಿಂದ ೭೫ ಮೈಲಿ. ಹುಬ್ಬಳ್ಳಿ-ಬಿಜಾಪುರ ನೇರವಾಗಿ ೧೨೦ ಮೈಲಿ; ರೈಲಿನಿಂದ ೧೫೦ ಮೈಲಿ. ಬೆಂಗಳೂರು-ಬಳ್ಳಾರಿ ನೇರವಾಗಿ ೧೮೦ ಮೈಲಿ; ರೈಲಿನಿಂದ ೧೯೬ ಮೈಲಿ ಬೆಂಗಳೂರು-ಬಿಜಾಪುರಕ್ಕೆ ನೇರವಾಗಿ ೩೫೦ ಮೈಲಿ; ರೈಲಿನಿಂದ ೪೧೦ ಮೈಲಿ. ಗುಲ್ಬರ್ಗಾದಿಂದ-ಬಿದರೆಗೆ ನೇರವಾಗಿ ೭೫ ಮೈಲಿ; ರೈಲಿನಲ್ಲಿ ೧೫೦ ಮೈಲಿ. ಇದರಿಂದ ಕನ್ನಡಿಗರಿಗೆ ವರ್ಷಕ್ಕೆ ಕನಿಷ್ಠ ೨ ಕೋಟಿ ರೂಪಾಯಿಗಳ ಹಾನಿಯಾಗುತ್ತಿದೆ.)

(೪) ನಾಲ್ಕನೆಯ ನ್ಯೂನತೆ ಎಂದರೆ ಅಲ್ಲಲ್ಲಿ ಕೆಲವು ಶಾಖೆಗಳು ಮೊಂಡವಾಗಿ ಮೊಟಕಾಗಿ (Dead Ends) ನಿಂತುಬಿಡುತ್ತವೆ. ಚಿತ್ರದುರ್ಗ, ರಾಯದುರ್ಗ, ಕೊಟ್ಟೂರು, ಸಾಮೆಹಳ್ಳಿ, ದಾಂಡೇಲಿ, ತಾಳಗುಪ್ಪ, ಚಾಮರಾಜನಗರಗಳೇ ಇದಕ್ಕೆ ಸಾಕ್ಷಿ. ಈ ಮೊಟಕು ರೈಲುದಾರಿಗಳನ್ನು ಒಂದಕ್ಕೊಂದು ಕೂಡಿಸುವುದಗತ್ಯ.

(೫) ಐದನೆಯ ನ್ಯೂನತೆ, ಎಂದರೆ ಕರ್ನಾಟಕದ ಸುತ್ತಮುತ್ತೆಲ್ಲ ಬ್ರಾಡ್‌ಗೇಜ್ ಹಬ್ಬಿದ್ದು. ಕರ್ನಾಟಕದಲ್ಲಿ ಮಾತ್ರ ಬರೀ ಮೀಟರ್‌ಗೇಜ್ ಇರುವದರಿಂದ, ಕರ್ನಾಟಕದ ಸಾರಿಗೆ ಸಂಚಾರಗಳು ಬೊಂಬಾಯಿ, ಹೈದ್ರಾಬಾದು, ವಿಶಾಖಪಟ್ಟಣ, ಮದ್ರಾಸು, ತಿರುಚಿನಾಪಲ್ಲಿ, ಕೊಚ್ಚಿ, ಕಲ್ಲಿಕೋಟೆಗಳಂತಹ ಸುತ್ತಮುತ್ತಲಿನ ವ್ಯಾಪಾರೋದ್ಯೋಗಗಳ ಕೇಂದ್ರಗಳಿಗೆ ನೇರವಾಗಿ ಸಾಗಲು ಅಶಕ್ಯವಾಗಿದೆ. ಇದರಿಂದ ನಮ್ಮ ಉದ್ಯೋಗ-ವ್ಯಾಪಾರಗಳು ಅಪ್ರತ್ಯಕ್ಷವಾಗಿ ಕನಿಷ್ಟ ೪-೫ ಕೋಟಿ ರೂಪಾಯಿಗಳ ಹಾನಿಯನ್ನು ಪ್ರತಿವರ್ಷ ತಾಳಬೇಕಾಗುತ್ತದೆ.

(೬) ಆರನೆಯ ಹಾಗು ಕೊನೆಯ ದೊಡ್ಡ ನ್ಯೂನತೆಯೆಂದರೆ— ನಮ್ಮಲ್ಲಿದ್ದು ಬಿದ್ದ ರೈಲುದಾರಿಗಳೂ ಪ್ರವಾಸ ಸೌಕರ್ಯಗಳೂ ಬಹಳ ದುರ್ಲಕ್ಷಿತ ಹಾಗೂ ಕೀಳಾದುವು ಇವೆ. ಮೈಸೂರು ಪ್ರದೇಶದಲ್ಲಿ ಮಾತ್ರ ರೈಲುಗಳು ವಿಕಾಸಾತ್ಮಕ ಉದ್ದೇಶದಿಂದ ಕಟ್ಟಲ್ಪಟ್ಟವು. ಮಿಕ್ಕ ಭಾಗದಲ್ಲಿ ಅವು ಆನುಷಂಗಿಕವಾಗಿಯೋ ಯಾವದೊಂದು ಕಾಟ ಕಳೆಯುವುದಕ್ಕೋ ಕಟ್ಟಲ್ಪಟ್ಟುವು. ಉದಾಹರಣೆಗೆ, ಉತ್ತರಕರ್ನಾಟಕದ ರೈಲುದಾರಿಗಳೆಲ್ಲಾ ಮೇಲಿಂದಮೇಲೆ ಬೀಳುತ್ತಿದ್ದ ಬರಗಾಲದ ನಿವಾರಣೋಪಾಯಕ್ಕಾಗಿ ಮಾತ್ರ ಕಟ್ಟಲ್ಪಟ್ಟುವು. ಹೈದ್ರಾಬಾದ್-ಕರ್ನಾಟಕದ ರೈಲುದಾರಿಗಳೂ ಆನುಷಂಗಿಕವಾದುವು. ನಮ್ಮ ನಾಡಿಗೇ ಎಂದು ಕ್ರಮಬದ್ಧವಾಗಿ (೧೮೬೨ರಲ್ಲಿ) ಯೋಜಿತವಾದ ಒಂದೇ ಒಂದು ರೈಲುದಾರಿ,—ಬಳ್ಳಾರಿ-ಕಾರವಾರಗಳ ಬ್ರಾಡ್‌ಗೇಜ್ ದಾರಿ ಕಟ್ಟಲ್ಪಡಲೇ ಇಲ್ಲ. ಹೀಗೆಯೇ ನಾಡಿನ ವಿಕಾಸಕ್ಕೆಂದು ಯೋಜಿತವಾದ ಮತ್ತೆರಡು ದಾರಿಗಳು— ಬೆಳಗಾವಿ-ಸವದತ್ತಿ-ಹುಬ್ಬಳ್ಳಿ, ಹಾಗು ಗದುಗು-ವಾಡಿ, ಕಳೆದ ೩೦ ವರ್ಷಗಳಿಂದಲೂ ನೆನೆಗುದಿಗೆ ಬಿದ್ದಿವೆ. ಮೈಸೂರಿನ ರೈಲುದಾರಿಗಳು ಕೇಂದ್ರಕ್ಕೆ ವಶವಾದಂದಿನಿಂದ ಮೈಸೂರಿನ ಕೆಲವೇಕೆಲವಾದ ಅತಿ ಅವಶ್ಯಕವಾದ—ಬೀರೂರು-ಚಿಕ್ಕಮಗಳೂರು, ಚಾಮರಾಜಪೇಟೆ-ಸತ್ಯಮಂಗಲ, ಚಿತ್ರದುರ್ಗ-ರಾಯದುರ್ಗ ಮುಂತಾದ ಯೋಜನೆಗಳೂ ಹಳಸಿಹೋದಂತಾಗಿವೆ. ಮೈಸೂರು ಈಚೆಗೆ ರೈಲು ಬೆಳವಣಿಗೆಯ ಗೋಜನ್ನೇ ಬಿಟ್ಟಂತಿದೆ. ಭಾರತದ ಪ್ರಥಮ ಯೋಜನೆಯ ಲಾಭವೂ ನಮ್ಮ ಭಾಗಕ್ಕೆ ಆದಂತಿಲ್ಲ. ಇನ್ನೂ ೪೦ ವರ್ಷದ ಹಳೆಯ ಎಂಜಿನ್ನುಗಳೇ ನಮ್ಮ ಮೇಯಿಲು ಹಾಗೂ ಎಕ್ಸ್‌ಪ್ರೆಸ್ ಗಾಡಿಗಳನ್ನು ಎಳೆಯುತ್ತವೆ. ವೇಗದ ವಿಷಯ ದಲ್ಲಿ ನಮ್ಮ ರೈಲುದಾರಿಗಳು ಪ್ರಗತಿಯ ಪಥದ ಬದಲು ವಿಗತಿಯತ್ತ ನಡೆದಂತಿವೆ. ೧೫ ವರ್ಷಗಳ ಹಿಂದೆ ಪೂನಾ-ಹುಬ್ಬಳ್ಳಿಗಳ ಅಂತರವನ್ನು ಮೇಯಿಲ್ ಟ್ರೈನು ೧೨ ೧/೨ ಘಂಟೆಗಳಲ್ಲಿ ಕ್ರಮಿಸುತ್ತಿತ್ತು. ಅದಕ್ಕೂ ಮುನ್ನ ೧೮ ಘಂಟೆ ಬೇಕಾ ಗುತ್ತಿದ್ದುವು. ಈಗ ನಡೆಯುತ್ತಿರುವ ವೇಳಾಪತ್ರಿಕೆಯ ಮೇರೆಗೆ ೧೪ ೧/೨ ಘಂಟೆ ಬೇಕಾಗುತ್ತದೆ. ಹಿಂದಿನ ಹಾಗೆ ಪೂನಾ-ಹುಬ್ಬಳ್ಳಿ ಅಂತರವನ್ನು (೩೩೪ ಮೈಲಿ) ಮೇಯಿಲ್ ಟ್ರೈನು ೧೨ ೧/೨ ಘಂಟೆಗಳಲ್ಲಿ ಕ್ರಮಿಸಿದರೆ, ಹುಬ್ಬಳ್ಳಿ-ಬೆಂಗಳೂರಿನ ಅಂತರವನ್ನು (೨೯೨ ಮೈಲಿ) ೧೧ ೧/೨ ಘಂಟೆಗಳಲ್ಲಿ ಸುಲಭವಾಗಿ ಕ್ರಮಿಸಬಹುದು. ಎಂದರೆ ಪೂನಾ-ಬೆಂಗಳೂರು ಕೇವಲ ೨೪ ಘಂಟೆಯಾಗಬಲ್ಲುದು. ಭಾರತದ ಮೀಟರ್‌ಗೇಜ್ ಟ್ರೈನುಗಳಲ್ಲಿ ಎಲ್ಲಕ್ಕೂ ಹೆಚ್ಚು ವೇಗದ ಟ್ರೇಯಿನು—ತ್ರಿವೇಂಡ್ರಂ

ಎಕ್ಸ್‌ಪ್ರೆಸ್ಸು—ಇಷ್ಟೇ ಅಂತರವನ್ನು (೫೨ ಮೈಲಿ) ೧೦ ೧/೨ ಘಂಟೆಗಳಲ್ಲಿ ಕ್ರಮಿಸುತ್ತದೆ. ಅಹಮ್ಮದಾಬಾದ್-ಡಿಲ್ಲಿ ಮೇಲು ಇಷ್ಟೇ ಅಂತರವನ್ನು ೧೧ ಘಂಟೆ ಗಳಲ್ಲಿ ಕ್ರಮಿಸುತ್ತದೆ. ಆದರೆ ಬೆಂಗಳೂರು-ಹುಬ್ಬಳ್ಳಿ ಮೇಯಿಲ್ ಟ್ರೇನಿಗೆ ಅಷ್ಟೇ ಅಂತರಕ್ಕೆ ೧೪ ಘಂಟೆ ಬೇಕಾಗುತ್ತದೆ. ೨೦ ವರ್ಷಗಳ ಹಿಂದೆ ಹರಿಹರ-ಬೆಂಗಳೂರು ರೈಲುದಾರಿ Y.D. ವರ್ಗದ ಎಂಜಿನ್ನುಗಳಿಗೆ ತಕ್ಕುದಲ್ಲ ಎಂದು ಹೇಳುತ್ತಿದ್ದರು. ಈಗಲೂ ಹಾಗೇ ಹೇಳುತ್ತಾರೆ. ಹುಬ್ಬಳ್ಳಿ-ಬಳ್ಳಾರಿಯ ರೈಲುದಾರಿಯೂ ಅದಕ್ಕೂ ನಿಕೃಷ್ಟದ ಗದಗು-ಸೊಲ್ಲಾಪುರ ರೈಲುದಾರಿಯೂ ಇಂತಹ ವಿಗತಿಯ ಪಾದರಿಗಳಾಗಿವೆ. ತಲೆ-ತಲಾಂತರಗಳಿಂದ ನಮ್ಮ ರೈಲುದಾರಿ ಗಳಲ್ಲಿ ಆಗಬೇಕಾದ ಸುಧಾರಣೆಗಳಾಗುತ್ತಿಲ್ಲ. ಅದೇ ಮೊನ್ನೆ ಮೊನ್ನೆ ಕಟ್ಟಿದ ಪಾಲನ ಪುರ-ಕಂಡಲಾ ಮಿಕ್ಸೆಡ್ ಟ್ರೈನು ಎರಡು ವರ್ಷಗಳ ಹಿಂದೆ ಯಾವ ಅಂತರ ವನ್ನು ೧೫ ಘಂಟೆಗಳಲ್ಲಿ ಕ್ರಮಿಸುತ್ತಿತ್ತೋ ಅದನ್ನೀಗ ೧೧ ೧/೨ ಘಂಟೆಗಳಲ್ಲಿ ಕ್ರಮಿಸುತ್ತದೆ. ಗದಗು-ಕೊಲ್ಲಾಪುರಗಳ ಅಂತರವೂ ಕಂಡಲಾ-ಪಾಲನ ಪುರಗಳಷ್ಟೆ ಇದೆ. ಆದರೆ ಕಳೆದ ೩೦-೪೦ ವರ್ಷಗಳಲ್ಲಿ ಈ ಭಾಗದ ಪ್ಯಾಸೆಂಜರು ಟ್ರೇಯಿನುಗಳು ಸಹ ೧೨ ಘಂಟೆಗಿಂತ ಕಡಿಮೆ ಅವಧಿಯಲ್ಲಿ ಈ ಅಂತರವನ್ನು ಕ್ರಮಿಸಿಲ್ಲ. ಈ ಪ್ರಗತಿಯ ಓಟ ಹೇಗಿದೆ? ಹಾಗೆ ನೋಡಿದರೆ, ಆ ಭಾಗ ಭಾರತ ದಲ್ಲೇ ಅತಿ ಪೊಳ್ಳು ನೆಲದ ಭಾಗ. ಇದಕ್ಕೆಲ್ಲಾ ನಮ್ಮ ಜನಜಾಗೃತಿಯ ಅರಕಳಿತನವೇ ಮುಖ್ಯ ಕಾರಣವೆನ್ನಬೇಕು.

## ಹೊಸ ರಾಜ್ಯಕ್ಕಾಗಿ ಹೊಸ ಏರ್ಪಾಡು ಅವಶ್ಯ

ಇವು ನಮ್ಮ ರೈಲುದಾರಿಗಳ ಕೆಲವು ನ್ಯೂನತೆಗಳು. ಇಷ್ಟುದಿನ ಕರ್ನಾಟ ಕವು ಒಂದು ಸಂಘಟಿತ, ಏಕೀಕೃತರಾಜ್ಯವಾಗಿರದ್ದರಿಂದಲೂ ಅದರ ಭಾಗಗಳು ಮಿಕ್ಕರಾಜ್ಯಗಳ ತುದಿ ಬಾಲಗಳಾಗಿದ್ದುದರಿಂದಲೂ, ಜನತೆಯೂ ನಿಕೃಷ್ಟಾವಸ್ಥೆ ಯಲ್ಲಿರುವುದರಿಂದಲೂ ಇಂತಹ ನ್ಯೂನತೆಗಳು ಅಷ್ಟಾಗಿ ಎದ್ದುಕಾಣುತ್ತಿರಲಿಲ್ಲ.

ಇನ್ನು ಮುಂದೆ ಮಾತ್ರ ನಮ್ಮನಾಡಿನ ರೈಲುದಾರಿಗಳೂ ನಮ್ಮ ಸಾರಿಗೆ ಸಂಪರ್ಕದ ನಿಟ್ಟಿನಲ್ಲಿ ವೇಗವಾಗಿ ಮುಂದಡಿ ಇಡುವುದು ಅಗತ್ಯ. ನಮ್ಮ ರಾಜ್ಯದ ಆಡಳಿತದ ಮುಕ್ಕಾಲುಪಾಲಿನ ಅನುಕೂಲತೆ ಹಾಗು ಯಶಸ್ಸು ನಮ್ಮ ರೈಲುದಾರಿ ಗಳನ್ನೇ ಅವಲಂಬಿಸಿದೆ. ನಾವು ಅತಿ ಹೆಚ್ಚಿನ ಪ್ರಗತಿಯನ್ನು ಮಾಡದಿದ್ದರೂ ಮೀಟರ್ ಗೇಜಿನಲ್ಲೇ ಎಷ್ಟು ಹೆಚ್ಚಿನ ಪ್ರಗತಿ ಸಾಧ್ಯವೋ ಅಷ್ಟನ್ನಾದರೂ ಏಕೆ ಪಡೆಯಬಾರದು? ಆರಂಭದಲ್ಲಿ ಹೇಳಿದಂತೆ ನಮ್ಮ ರಾಜ್ಯ ಅಗಸೆ ಹೂವಿನಹಾಗೆ ಆಕಾರದಲ್ಲಿ ಉದ್ದವಾಗಿದ್ದು ರಾಜಧಾನಿ ಒಂದು ಮೂಲೆಯಲ್ಲಿರುವುದರಿಂದಲಂತೂ-ಆಡಳಿತದ ಅನುಕೂಲತೆಯ ದೃಷ್ಟಿಯಿಂದ ನಮ್ಮ ರೈಲುದಾರಿಗಳಲ್ಲಿ ಅತ್ಯವಸರದ ಸುಧಾರಣೆಗಳಾಗುವುದು ಅತ್ಯವಶ್ಯ. ನಮ್ಮಲ್ಲಿಯ ರೇಲ್ದಾರಿಗಳು ತಳ ಸೋಸಿ ಗಟ್ಟಿಪಾಯದ ಮೇಲೆ ಕಟ್ಟಿದವುಗಳಲ್ಲ ಎಂಬ ಮಾತನ್ನು ನಾವು ಎರಡು ತಲೆ ಮಾರುಗಳಿಂದಲೂ ಕೇಳುತ್ತ ಬಂದಿದ್ದೇವೆ. ನಮ್ಮ ಭೂಮಿಯೇ ಗಟ್ಟಿಪಾಯದ ರೈಲುದಾರಿಗಳಿಗೆ ಕಾಂಡಲಾ ಬಂದರಿನ ಹೊಸಮಾರ್ಗಕ್ಕಿಂತ ಹತ್ತು ಪಟ್ಟು ಹೆಚ್ಚು

ಯೋಗ್ಯವಾಗಿದೆ. ಆದರೂ ಎರಡೇ ವರ್ಷಗಳಲ್ಲಿ ಆ ಕಾಂಡಲಾ ರೈಲುದಾರಿಯಲ್ಲಾದ ಮಿಕ್ಸೆಡ್ ಟ್ರೇನಿನ ಪ್ರಗತಿ ನಮ್ಮ ಮೆಯಿಲ್ ಟ್ರೇನುಗಳಲ್ಲೂ ವರ್ಷಾನುವರ್ಷ ಗಳವರೆಗೂ ಆಗಿಲ್ಲ. ರೈಲುದಾರಿಗಳನ್ನು ಭದ್ರಗೊಳಿಸಿ ಸಾಕಷ್ಟು ರೇಕುಗಳನ್ನೂ ಹೊಸ ಎಂಜಿನ್ನುಗಳನ್ನೂ ಒದಗಿಸಿ ತ್ರಿವೇಂದ್ರಂ ಎಕ್ಸ್‌ಪ್ರೆಸ್ಸ್‌ನ ವೇಗವನ್ನಾದರೂ ನಮ್ಮ ಮೇಲ್-ಎಕ್ಸ್‌ಪ್ರೆಸ್ ಗಾಡಿಗಳಿಗೆ ಕೂಡಲೇ ಒದಗಿಸದ ಪಕ್ಷದಲ್ಲಿ ನಮ್ಮ ಆಡಳಿತ ಕುಂಟುವುದಲ್ಲದೆ ಬೆಂಗಳೂರಿನಿಂದ ದೂರದಲ್ಲಿರುವ ಜನತೆ ಖಂಡಿತವಾಗಿ ತ್ರಸ್ತರಾಗುತ್ತಾರೆ. ಈಗಿರುವಂತೆ, ಬೆಳಗಾಂವಿಂದ ಬೆಂಗಳೂರಿಗೆ ೨೧ ಗಂಟೆ; ಬೆಳಗಾಂವಿಯಿಂದ ಬೊಂಬಾಯಿಗೆ ಮೇಯಿಲ್ ಟ್ರೇನಿನಿಂದ ೧೫ ಗಂಟೆ; ಬಿಜಾಪುರದಿಂದ ಬೊಂಬಾಯಿಗೆ ೧೪ ಗಂಟೆ; ಬೆಂಗಳೂರಿಗೆ ೨೫ ಗಂಟೆ; ಗುಲ್ಬರ್ಗದಿಂದ ಬೊಂಬಾಯಿಗೆ ೧೨ ಗಂಟೆ; ಹೈದರಾಬಾದಿಗೆ ೩ ಗಂಟೆ; ಬೆಂಗಳೂರಿಗೆ ಸುಮಾರು ೧೮ ಗಂಟೆ. ಈ ಪರಿಸ್ಥಿತಿ ಕೂಡಲೇ ಬದಲಾಗುವುದು ಅತ್ಯನಿವಾರ್ಯ. ಹೊಸ ರಾಜ್ಯ ನಿರ್ಮಾಣದೊಡನೆ-ಬೆಂಗಳೂರಿನಿಂದ ಒಂದು ಬೆಳಗಾಮಿಗೆ, ಒಂದು ವಿಜಾಪುರಕ್ಕೆ-ಹೀಗೆ ಎರಡಾದರೂ ತ್ರಿವೇಂದ್ರಂ ಎಕ್ಸ್‌ಪ್ರೆಸ್‌ನಂತಹ ಟ್ರೆಯಿನುಗಳನ್ನು ಪ್ರಾರಂಭಿಸಲೇಬೇಕು. ಅದಕ್ಕೆ ಜತೆಯಾಗಿ ಗುಂತಕಲ್-ಗುಲ್ಬರ್ಗ-ಬಿದರೆಗೂ ನಡುವೆ ವಿಶೇಷಗಾಡಿಯೊಂದನ್ನು ಓಡಿಸಬೇಕು. ಹಾಗಾದರೆ ಬೆಳಗಾವಿ ೧೫ ಗಂಟೆಗಳ, ಬಿಜಾಪುರ ೧೮ ಗಂಟೆಗಳ ಅಂತರದಲ್ಲಿಯಾದರೂ ಬರಬಹುದು. ಇದು ಕೇವಲ ಪ್ರಾರಂಭದ ಹಾಗು ಕನಿಷ್ಟಪಕ್ಷದ ಹಾಗು ಈಗಿರುವಂತೆಯೇ ಆಗಬೇಕಾದ ಸುಧಾರಣೆ. ಇದರ ಹೊರತು ನಮ್ಮ ನಾಡಿನಲ್ಲಿ ಅತ್ಯವಶ್ಯವಾದ ಹೊಸ ರೈಲುದಾರಿಗಳನ್ನು ಕಟ್ಟುವುದೂ, ಇದ್ದವನ್ನು ಸುಧಾರಿಸುವುದೂ ಅಥವಾ ಬ್ರಾಡ್ ಗೇಜಿಗೆ ಮಾರ್ಪಡಿಸುವುದೂ, ಸರಕುಗಳ ಹಾಗು ಜನರ ಸಾಗಾಟ ಸಂಚಾರಗಳಿಗೆ ವಿಶೇಷ ಸೌಕರ್ಯಗಳನ್ನು ಒದಗಿಸುವುದೂ ಮುಂತಾದುವುಗಳ ವಿಶೇಷ ಯೋಜನೆಯೊಂದು ಪ್ರತ್ಯೇಕವಾಗಿ ಬೇಕೇ ಬೇಕು.

## ಭಾಗ ೩.

### ಅಭಿವೃದ್ಧಿಯ ಚತುರ್ಮುಖಗಳು

ಕನ್ನಡನಾಡು ಇದೀಗ ಹೊಸದಾಗಿ ರೂಪಗೊಳ್ಳುತ್ತಿರುವುದರಿಂದ, ಅದರ ರಸ್ತೆಗಳಿಗೂ, ರೈಲುದಾರಿಗಳಿಗೂ ಪ್ರಾಥಮಿಕ ಹಾಗು ಅಗತ್ಯದ ಪ್ರಾಧಾನ್ಯತೆ ಯಿದೆ. ನಮ್ಮದು ಕರಾವಳಿಯ ನಾಡಾದರೂ, ನಮ್ಮ ಕರಾವಳಿಗೂ ಒಳನಾಡಿಗೂ ರೈಲುದಾರಿಯ ಸಂಬಂಧವೇ ಇಲ್ಲದುದರಿಂದ ಅಂತಹ ಸಂಪರ್ಕವನ್ನುಂಟುಮಾಡುವುದು ಸಹ ಪ್ರಥಮ ಪ್ರಾಧಾನ್ಯತೆಯ ಹಾಗು ಅತ್ಯಗತ್ಯದ ಮಾತಾಗಿದೆ. ಕಾರಣ ಈ ಬರೆಹದಲ್ಲಿ ನಮ್ಮ ರಸ್ತೆಗಳು, ರೈಲುದಾರಿಗಳು ಹಾಗು ಬಂದರುಗಳು ಈ ಮೂರಕ್ಕೆ ವಿಶೇಷ ಮಹತ್ವ ಕೊಡಲಾಗಿದೆ. ವಿಮಾನ ಮಾರ್ಗಗಳು, ಜಲ ಮಾರ್ಗಗಳು, ಅಂಚೆತಂತಿ, ಆಕಾಶವಾಣಿ, ಇತ್ಯಾದಿಗಳ ಬೆಳವಣಿಗೆಗೆ ಎರಡನೇ

ಪ್ರಾಧಾನ್ಯತೆ. ಕರ್ನಾಟಕದ ಹೊಸರಾಜ್ಯಕ್ಕೆ ಸಾರಿಗೆ-ಸಂಚಾರ-ಸಂಪರ್ಕಗಳ ಮಟ್ಟಿಗೆ ನಾಲ್ಕು ಮುಖಗಳು. ಈ ಚತುರ್ಮುಖಗಳ ಬೆಳವಣಿಗೆ ಸಮಾನವಾಗಿರ ಬೇಕು. ಒಂದು ಮುಖವೂ ಅಪಸ್ವರವೆತ್ತಬಾರದು. ಅದೇ ನಾಡಿನ ಸರ್ವಾಂಗೀಣ ಉನ್ನತಿಯ ಸೂತ್ರ. ಆದರೆ ಅಂತಹದೊಂದು ಸಂಯೋಜನೆಯನ್ನು ಮುಂಗಾಣ ಬೇಕಾದರೆ ನಮ್ಮ ನಾಡಿಗೆ ಬೇಕಾದುದು ಏನೇನು, ಹಾಗು ಯಾವ ಪರಿಯಲ್ಲಿ, ಎಂಬುದನ್ನು ತಿಳಿದುಕೊಂಡಿರುವುದವಶ್ಯ.

## ನಾಡಿನ ನಾಲ್ಮೊಗಗಳು

(೧) ನಮ್ಮ ನಾಡಿನ ' ಆಡಳಿತದ ಮುಖ '.

ಸ್ವಾಭಾವಿಕವಾಗಿಯೇ, ಈ ಮುಖ ರಾಜಧಾನಿಯಾದ ಬೆಂಗಳೂರಿನತ್ತ ತಿರುಗುವುದು. ಬಿದರೆ, ಬಿಜಾಪುರ, ಬೆಳಗಾವಿ, ಮಂಗಳೂರು ಪ್ರದೇಶಗಳೆಲ್ಲಾ ತಮ್ಮ ರಾಜಕೀಯ ಹಾಗೂ ಆಡಳಿತದ ದೃಷ್ಟಿಯನ್ನು ಬೆಂಗಳೂರಿನ ಮೇಲೆಯೇ ನೆಟ್ಟಿರುವುವು. ನಮ್ಮ ರಸ್ತೆಗಳು, ರೈಲುದಾರಿಗಳು ಇನ್ನಿತರ ಸಂಪರ್ಕದ ಸಾಧನೆ ಗಳು ಸಹ ಇದಕ್ಕೆ ಅನುಕೂಲವಾಗುವಂತೆ ಅಳವಡಿಸಲ್ಪಡಬೇಕು. ಇದು ಒಂದು ನಿಟ್ಟು.

(೨) ನಮ್ಮ ಕರಾವಳಿಯ ' ವ್ಯಾಪಾರ ಉದ್ಯೋಗಗಳ ಮುಖ '.

ನಮ್ಮ ವ್ಯಾಪಾರಸ್ಥರಿಗೆ ಹಾಗೂ ಹಿರಿ ಉದ್ದಿಮೆಗಾರರಿಗೆ ನಮ್ಮ ಕರಾ ವಳಿಯ ಬಂದರುಗಳೇ ಪ್ರಾಣ. ಕಾರಣ ನಮ್ಮ ರಸ್ತೆಗಳು, ರೈಲುದಾರಿ ಆದಿ ಗಳು, ಸಾರಿಗೆ ಸಾಗಾಟಗಳ ಮಟ್ಟಿಗೆ ಕರಾವಳಿಗಭಿಮುಖವಾಗಿರಬೇಕಾದುದು ಅನಿ ವಾರ್ಯ.

(೩) ಕರ್ನಾಟಕ ರಾಜ್ಯ ಭಾರತದ ಒಂದು ಭಾಗ.

ಆ ಭಾರತದ ಬಹು ಭಾಗ ಇರುವುದು ಉತ್ತರಕ್ಕೆ. ಭಾರತದ ಮಹಾ ದ್ವಾರ ಬೊಂಬಾಯಿ, ರಾಜಧಾನಿ ದಿಲ್ಲಿ. ಇವೆರಡೂ ಇರುವುದು ಉತ್ತರದಲ್ಲಿ. ಕಾರಣ ನಮ್ಮ ' ರಾಜಕೀಯ ಮುಖ ' ಅಥವಾ ' ಅಂತರ್-ರಾಜ್ಯ ಮುಖ ' ಬೊಂಬಾಯಿ, ದಿಲ್ಲಿಗಳತ್ತ ಇರಬೇಕಾಗುವುದು. ಕರ್ನಾಟಕಕ್ಕೆ ದಿಲ್ಲಿ ಅಥವಾ ಬೊಂಬಾಯಿ ಕಡೆಗಳಿಂದ ಬರುವವರಿಗೆ ಉತ್ತರದ ಉಕ್ಕಡದಲ್ಲಿರುವ ಗುಲ್ಬರ್ಗ ಹಾಗು ಬಿಜಾಪುರಗಳೇ ಹೆಬ್ಬಾಗಿಲು. ಅಂತರ್-ರಾಜ್ಯ ಸಂಪರ್ಕಕ್ಕೂ, ಕೇಂದ್ರ ಸರಕಾರದ ಸಂಪರ್ಕಕ್ಕೂ, ನಮ್ಮ ರಸ್ತೆಗಳೂ, ರೈಲುದಾರಿಗಳೂ, ದಿಲ್ಲಿ-ಬೊಂಬಾಯಿಗಳಿಗೆ ಅಭಿಮುಖವಾಗಬೇಕು.

(೪) ನಾಡಿನ ಅಂತರ್ಮುಖ, ಎಂದರೆ ಜನಜೀವನದ ಸಾಮಾಜಿಕ, ಆರ್ಥಿಕ, ಹಾಗೂ ' ಸಾಂಸ್ಕೃತಿಕ ಮುಖ '.

ನಮ್ಮ ರಾಜಧಾನಿಯಾಗಿರುವ ಬೆಂಗಳೂರು ಕರಾವಳಿಯ ಬಂದರ ವಾಗಿದ್ದರಾಗಲಿ, ನಾಡಿನ ಕೇಂದ್ರದಲ್ಲಿದ್ದಿದ್ದರಾಗಲಿ, ನಮ್ಮ ನಾಡು ಏಕಮುಖ ವಾಗಬಹುದಿತ್ತು. ಆಡಳಿತಕ್ಕೆ ಬೆಂಗಳೂರು; ವ್ಯಾಪಾರಕ್ಕೆ ಕರಾವಳಿಯ

## ನಕ್ಷಾಲೇಖ ೨

**ಗುರುತುಗಳು:**

ಕರ್ನಾಟಕದ ಗಡಿ

ಈಗಿರುವ ಜಿಲ್ಲಾಸ್ಥಾನಗಳು: ತುಮಕೂರು

ಆಗಬಹುದಾದ ,, : ಗದುಗು

ಆಗಬಹುದಾದ ಆಡಳಿತದ ಕೇಂದ್ರಗಳು } ಬಳ್ಳಾರಿ

ತ್ರಿಕೋಣಗಳ ಹೊರಗಿರುವ ಮಹತ್ವದ ಕೀಲಸ್ಥಾನಗಳು } ಮಡಿಕೇರಿ

(ಕನ್ನಡದವಾಗಿಯೂ ಸಧ್ಯ ಹೊರಗಿರುವ ಕನ್ನಡದ ಭಾಗಗಳು.)

0 20 40 60 80 100

SCALE



## ವಿವರಣೆ

ಈ ನಕ್ಷೆಯಲ್ಲಿ ಕನ್ನಡನಾಡಿನ ೫೦ ಕೀಲು ಸ್ಥಾನಗಳನ್ನು ತೋರಿಸಿದೆ. ತೀರ ಉತ್ತರದ ಕೇಂದ್ರವಾದ ಕಲ್ಬುರ್ಗಿಯೂ, ತೀರ ದಕ್ಷಿಣದ ಕೇಂದ್ರವಾದ ಬೆಂಗಳೂರೂ ನಾಡಿನ ಮಧ್ಯ ಬಿಂದುವಿನಿಂದ (★) ಬಹುಶಃ ಸಮಾಂತರವಾಗಿವೆ. ತೀರಾ ತುದಿಯುಕ್ಕಡದ ಬಿದರೆ ಹಾಗು ಚಾಮರಾಜನಗರಗಳೂ ಅಷ್ಟೇ. ಈ ಮಧ್ಯ ಬಿಂದುವಿನ ಬಳಿ ಹಾಯುವ ಬಳ್ಳಾರಿ-ಕಾರವಾರಗಳ ರೇಖೆಯೇ ನಾಡಿನ ಮಧ್ಯರೇಖೆ. ಕಾರವಾರವೇ ಶಿರೋಬಿಂದುವಾಗಿರುವ ಕಲ್ಬುರ್ಗಿ-ಕಾರವಾರ-ಬೆಂಗಳೂರುಗಳ ದೊಡ್ಡ ತ್ರಿಕೋಣ ನಾಡಿನ ಬಹುಭಾಗವನ್ನು ವ್ಯಾಪಿಸುತ್ತದೆ. ಈ ತ್ರಿಕೋಣದೊಳಗಿನ ಹಾಗು ಅಕ್ಕಪಕ್ಕದ ಪ್ರದೇಶಕ್ಕೆಲ್ಲ ಕಾರವಾರವೇ ಮುಖ; ಹಾಗೂ, ಮಧ್ಯವರ್ತಿ ಮತ್ತು ಸಮೀಪವರ್ತಿಯಾದ ಬಂದರು. ಇದು ಅತ್ಯಂತ ನೈಸರ್ಗಿಕವಾದ ಒಳ್ಳೆಯ ಬಂದರೂ ಅಹುದು. ಅಲ್ಲದೆ ಈ ತ್ರಿಕೋಣವು ತುಂಡು ಗೆರೆಗಳಿಂದ ತೋರಿಸಿದ ಮೂರು ವರ್ತುಲಗಳನ್ನೂ ವ್ಯಾಪಿಸುತ್ತದೆ.

(೧) ಅತ್ಯಂತ ಹೆಚ್ಚಿನ ಅರಣ್ಯೋದ್ಯೋಗದ ಪ್ರದೇಶ

(೨) ಅತ್ಯಂತ ಹೆಚ್ಚಿನ ನೀರಾವರಿಯ ಪ್ರದೇಶ

(೩) ಅತ್ಯಂತ ಹೆಚ್ಚಿನ ಔದ್ಯೋಗಿಕ ವಿಕಾಸ ಪ್ರದೇಶ

ಇದರಂತಹ ಇನ್ನೊಂದು ಚಿಕ್ಕ ತ್ರಿಕೋಣಕ್ಕೂ ಅದರ ಅಕ್ಕಪಕ್ಕದ ಪ್ರದೇಶಕ್ಕೂ ಮಂಗಳೂರೇ ಮುಖ.

ಇವೆರಡೂ ತ್ರಿಕೋಣಗಳು ಸೇರಿ ಆಗುವ ಕಲ್ಬುರ್ಗಿ-ಕಾರವಾರ-ಮಂಗಳೂರು-ಬೆಂಗಳೂರು-ಬಳ್ಳಾರಿಗಳ ಪಂಚಕೋಣವು ಕರ್ನಾಟಕದ ಆಕಾರಕ್ಕೆ ಸರಿಹೋಗುತ್ತದೆ. ಈ ಆಕೃತಿಗೆ ಮುಖದಂತಿದ್ದ ಕಾರವಾರ-ಮಂಗಳೂರು ಕರಾವಳಿ ನಮ್ಮ ಪಶ್ಚಿಮ ಮಹಾದ್ವಾರ. ಹಾಗೆಯೇ ಕಲ್ಬುರ್ಗಿ, ಬಳ್ಳಾರಿ, ಬೆಂಗಳೂರುಗಳು ಇದರ ಮಹಾದ್ವಾರಗಳು. ಇವೇ ಸಾರಿಗೆ-ಸಂಚಾರಗಳ ಕೀಲುಸ್ಥಾನಗಳೂ ಆಗಬಲ್ಲವು; ಆಡಳಿತದ ಕೀಲು ಸ್ಥಾನಗಳೂ ಆಗಬಲ್ಲವು.

ನಕ್ಷಾಲೇಖ ೨



ಕರ್ನಾಟಕದ ಸಾರಿಗೆ-
ಸಂಚಾರ-ಸಂಪರ್ಕಾದಿ-
ಗಳ ಚತುರ್ಮುಖ
ಉತ್ತರ ದ್ವಾರ
ಪೂರ್ವ ದ್ವಾರ
ದಕ್ಷಿಣ ದ್ವಾರ
ಪಶ್ಚಿಮ ದ್ವಾರ
ಕಲುಬುರ್ಗಿ
ಬಳ್ಳಾರಿ
ಬೆಂಗಳೂರು
ಮಂಗಳೂರು
ಬೀದರ
ಬೆಳಗಾವಿ
ಧಾರವಾಡ
ಹಾವೇರಿ
ಶಿವಮೊಗ್ಗೆ
ಚಿತ್ರದುರ್ಗ
ತುಮಕೂರು
ಚಿಕ್ಕಮಗಳೂರು
ಹಾಸನ
ಮಂಡ್ಯ
ಮಡಿಕೇರಿ
ಮೈಸೂರು
ಕೋಲಾರ
ರಾಯಚೂರು
250 M.
200 M.
150 M.
260 M.
200 M.
200 M.

ಬಂದರುಗಳು; ಅಂತರ್ ರಾಜ್ಯ ಹಾಗೂ ಕೇಂದ್ರ ಸಂಬಂಧಕ್ಕೆ ಬಿಜಾಪುರ-ಗುಲ್ಬರ್ಗ ಪ್ರದೇಶಗಳು ಸ್ವಯಂಸಿದ್ಧ ಮುಖ್ಯ ಮುಖಗಳಾದುವು.

ಕೊನೆಯ ಮುಖ ಇನ್ನೂ ಉದಯಿಸಿಲ್ಲ. ಕಾಲಾವಧಿಯಲ್ಲಿ ಬೆಂಗಳೂರೇ ಆ ಸಾಂಸ್ಕೃತಿಕ ಮುಖವಾಗಬಲ್ಲುದು; ಅಥವಾ, ಕರ್ನಾಟಕಕ್ಕೆ ಅತ್ಯಂತ ಮಧ್ಯವರ್ತಿಯಾಗಿರುವ ಹಂಪೆ ವಿಜಯನಗರವನ್ನು ಪುನರುತ್ಥಾಪಿಸಿ, ಅದೇ ಇಡೀ ಕನ್ನಡನಾಡಿನ ಸಾಂಸ್ಕೃತಿಕ ಕೇಂದ್ರವಾಗುವಂತೆ ಕನ್ನಡಿಗರೆಲ್ಲಾ ಅಭಿಮಾನದಿಂದ ಪ್ರಯತ್ನಿಸಬೇಕು. ಅಲ್ಲದೆ ಮಧ್ಯವರ್ತಿಯಾದ ಹಂಪೆ (ಹೊಸಪೇಟೆ) ಯಾವುದೇ ಒಂದು ಸುಸಂಬದ್ಧವಾದ ಸಾರಿಗೆ-ಸಂಚಾರ ಸಂಪರ್ಕಗಳ ಯೋಜನೆಯಲ್ಲಿ ತಾನಾಗಿಯೇ ಮಹತ್ವವನ್ನು ಪಡೆಯಬಲ್ಲುದು. ಆದರೆ ಇದೆಲ್ಲಾ ಮುಂದಿನ ಕನಸು.

ಸಧ್ಯ ಆ ವಿಚಾರವನ್ನು ಮನದಲ್ಲೇ ಇರಿಸಿ, ಕೇವಲ ಆಡಳಿತದ ಮುಖ ಬೆಂಗಳೂರು, ವ್ಯಾಪಾರದ ಮುಖವಾಗಿ ನಮ್ಮ ಬಂದರುಗಳು, ಹಾಗು ಅಂತರ್ ರಾಜ್ಯ ಮುಖವಾದ ನಮ್ಮ ನಾಡಿನ ತೀರ ಉತ್ತರದ ಭಾಗ—ಇವುಗಳಿಗೆಲ್ಲಾ ಸಾಧ್ಯವಾದಷ್ಟು ಸಮಾನ ಪ್ರಾಧಾನ್ಯತೆಯಿತ್ತು, ನಮ್ಮ ನಾಡಿನ ಸಂಚಾರ-ಸಂಪರ್ಕಗಳ ಸಾಧನೆಗಳನ್ನು ಸರಿಯಾಗಿ ಅಳವಡಿಸಬೇಕು. ಪಕ್ಕದ ನಕ್ಷೆ (ನಕ್ಷಾಲೇಖ ೨.) ಈ ಚತುರ್ವಿಧ ಸ್ವರೂಪವನ್ನು ಸ್ಪಷ್ಟೀಕರಿಸುವಂತಿದೆ. ರೈಲ್ವೆಗಳು ಬರದ ಮುನ್ನ, ಬೆಂಗಳೂರು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾಗ ನಮ್ಮ ನಾಡಿನ ಸ್ವಾಭಾವಿಕವಾದ ಏಕಮುಖ ಕರಾವಳಿಯೇ ಆಗಿತ್ತು. ಆಗ ಕಾಲ್ದಾರಿಗಳಿಂದಲೇ ಆಗಲಿ, ಎತ್ತಿನ ದಾರಿಗಳಿಂದಲೇ ಆಗಲಿ, ಇಡೀ ಕನ್ನಡ ನಾಡಿನ ಸಂಪತ್ತು ನಮ್ಮ ಕರಾವಳಿಯನ್ನು ಕಾಣುತ್ತಿತ್ತು. ಕಾರವಾರ, ಕುಮುಟಗಳು ಇಡೀ ಕರ್ನಾಟಕದ ಹತ್ತಿಯ ಬೆಳೆಯನ್ನು ತಮ್ಮ ಸೊತ್ತಾಗಿ ಮಾಡಿಕೊಂಡಿದ್ದುವು. ೧೮೮೦-೮೪ರವರೆಗೂ ಕಾರವಾರದ ವ್ಯಾಪಾರ ೧ ಕೋಟಿ ರೂಪಾಯಿಗಳಿಗೂ ಮಿಕ್ಕಿತ್ತು ನಮ್ಮ ನಾಡಿನಲ್ಲಿ ರೈಲ್ವೆಗಳಾದ ವರ್ಷದಿಂದ ಇದರ ವ್ಯಾಪಾರ ೧೦ ಲಕ್ಷಕ್ಕಿಳಿಯಿತು. ಸಧ್ಯ ೨-೩ ಲಕ್ಷದಷ್ಟು ಇಲ್ಲ. ಇದಕ್ಕೆ ಕಾರಣವೆಂದರೆ ನಮ್ಮ ರೈಲುದಾರಿಗಳೆಲ್ಲಾ ಬೇಕು ಬೇಕಾಗೇ ನಮ್ಮ ಕರಾವಳಿಗೆ ವಿಮುಖವಾಗುವಂತೆ ೧೮೮೦ರಲ್ಲಿ ಹುಬ್ಬಳ್ಳಿ-ಕಾರವಾರ ರೈಲ್ವೆಯ ೧೦೫ ಮೈಲಿನ ಕಟ್ಟೋಣ ಆರಂಭವಾಗುವುದರಲ್ಲಿದ್ದಾಗ 'ಬೊಂಬಾಯಿ ಚೇಂಬರ್ ಆಫ್ ಕಾಮರ್ಸ್'ರವರು ಬಹು ಯಶಸ್ವಿಯಾಗಿ ಆ ರೈಲುದಾರಿ ಆಗದಂತೆ ಹೋರಾಡಿ, ಅದರ ಬದಲಾಗಿ ೨೨೦ ಮೈಲಿನ ಹುಬ್ಬಳ್ಳಿ-ಸೊಣ್ಣಾಪುರದ ರೈಲುದಾರಿ ಕಟ್ಟಲ್ಪಡುವುದಕ್ಕೆ ಕಾರಣರಾದರು. ಇದೆಲ್ಲದರಿಂದ ನಮ್ಮ ಕರಾವಳಿಯೆ ನಮ್ಮ ನಾಡಿನ ನಿಜವಾದ ನೈಸರ್ಗಿಕವಾದ ಮುಖ ಎಂಬುದು ಸ್ವಯಂಸಿದ್ಧ ಮಾತಾಯಿತು. ಆದುದರಿಂದ ಬಂದರುಗಳ ಬೆಳವಣಿಗೆಗೂ ಹೆಚ್ಚಿನ ಪ್ರಾಧಾನ್ಯತೆ ಅಗತ್ಯ.

## ಕರಾವಳಿಗಭಿಮುಖವಾಗಿ ಎರಡು ತ್ರಿಕೋಣಗಳು

ನಕ್ಷಾಲೇಖ ೨ರಲ್ಲಿ ಬಾಣದ ಮೊನೆಯಾಕಾರಗಳಿಂದ ಕರ್ನಾಟಕದ

ಕರಾವಳಿ ಮುಖವು ಸೂಚಿಸಲ್ಪಟ್ಟಿದೆ. ದಕ್ಷಿಣೋತ್ತರ ಉದ್ದವಾಗಿ ಹಬ್ಬಿರುವ ನಮ್ಮ ನಾಡಿಗೆ ಬಳ್ಳಾರಿ ಕಾರವಾರಗಳ ಅಕ್ಷಾಂಶವೇ ಮಧ್ಯರೇಖೆ. ನಮ್ಮ ನಾಡು ಈ ಮಧ್ಯರೇಖೆಯ ಉತ್ತರಕ್ಕೂ ದಕ್ಷಿಣಕ್ಕೂ ಸಮಾನವಾಗಿ ವಿಸ್ತರಿಸಿ ಕೊಂಡಿದೆ. ಕರ್ನಾಟಕ ೧೧॥ ಅಕ್ಷಾಂಶದಿಂದ ೧೮॥ ಅಕ್ಷಾಂಶದವರೆಗೂ ದಕ್ಷಿಣೋತ್ತರವಾಗಿ ಹಬ್ಬಿದೆ. ಇವುಗಳ ಮಧ್ಯ ಅಕ್ಷಾಂಶವಾದ ೧೫ನೆ ಅಕ್ಷಾಂಶದ ಬಳಿ ಬಳ್ಳಾರಿ ಕಾರವಾರಗಳು ಇರುವುವು. ಈ ಮಧ್ಯರೇಖೆ ಕರಾವಳಿಯನ್ನು ತಾಗುವಲ್ಲಿಯೇ ಕರ್ನಾಟಕದ ತೀರ ಉತ್ತರಭಾಗದ ಕೇಂದ್ರದಂತಿದ್ದ ಗುಲ್ಬರ್ಗ ದಿಂದಲೂ, ದಕ್ಷಿಣದ ಅದೇ ಮೂಲೆಯಲ್ಲಿದ್ದ ಬೆಂಗಳೂರಿನಿಂದಲೂ ನೇರವಾಗಿ ಎರಡು ಭುಜಗಳನ್ನು ಕೂಡಿಸಿದರೆ ಬೆಂಗಳೂರು-ಗುಲ್ಬರ್ಗ-ಕಾರವಾರಗಳ ತ್ರಿಕೋಣ ಉಂಟಾಗುವುದು. ಕಾರವಾರವೇ ಆ ತ್ರಿಕೋಣದ ಶಿರೋಬಿಂದು. ಈ ಬಿಂದುವಿನಿಂದ ಗುಲ್ಬರ್ಗ ಹಾಗು ಬೆಂಗಳೂರುಗಳು ಸಮಾಂತರವಾಗಿವೆ. ಕಾರವಾರದಲ್ಲಿ ಶಿರೋಬಿಂದುವುಳ್ಳ ಈ ಕಾರವಾರ-ಬೆಂಗಳೂರು-ಬಳ್ಳಾರಿ-ಗುಲ್ಬರ್ಗ ಗಳಿಂದಾಗುವ ಸಮದ್ವಿಭುಜ ತ್ರಿಕೋಣದಂತಹ ಆಕೃತಿಯು (ಅಥವಾ ಬಾಣದ ಮುಖವು) ಕರ್ನಾಟಕದ ಬಹು ಭಾಗವನ್ನು ವ್ಯಾಪಿಸುತ್ತದೆ. ನಾಡಿನ ಸರ್ವಾಂ ಗೀಣ ಪ್ರಗತಿಯ ವ್ಯಾಪ ಹೇಗಿರಬೇಕು ಹಾಗು ನಮ್ಮ ವ್ಯಾಪಾರೋದ್ಯಮಗಳೂ, ಸಾರಿಗೆ-ಸಂಪರ್ಕದ ಸಾಧನಗಳೂ ಕರಾವಳಿಗಭಿಮುಖವಾಗಿ ಎಲ್ಲಿ ಕೇಂದ್ರಿತವಾಗ ಬೇಕು ಎಂಬುದನ್ನು ಇದು ಸೂಚಿಸುತ್ತದೆ. (ನಕ್ಷಾಲೇಖ ೨ ನೋಡಿ) ಕಾರವಾರವು ಕನ್ನಡ ಕರಾವಳಿಯ ಒಂದು ಮೂಲೆಯಲ್ಲಿದ್ದರೂ ಇದು ಇಡೀ ಕರ್ನಾಟಕದ ಉದ್ದಳತೆಯನ್ನು ಲಕ್ಷಿಸಿದರೆ ಕರ್ನಾಟಕದ ಅತ್ಯಂತ ಮಧ್ಯವರ್ತಿಯಾದ ಬಂದರು ಆಗಿದೆ. ಅಷ್ಟಲ್ಲದೆ ಕಾರವಾರ, ಭಾರತದ—ಅದೇಕೆ? ಕೆಲವು ತಜ್ಞರ ಅಭಿಪ್ರಾಯ ದಂತೆ ಜಗತ್ತಿನ—ಅತ್ಯುತ್ತಮ ನೈಸರ್ಗಿಕ ಬಂದರುಗಳಲ್ಲೊಂದಾಗಿದೆ. ಇದು ನಮ್ಮ ವ್ಯಾಪಾರೀ ಮಹಾದ್ವಾರ, ಅಥವಾ ಪಶ್ಚಿಮದ ಮುಖಮಂಟಪವಾಗಲು ತಕ್ಕು ದಾಗಿದೆ. ಹಾಗೆಯೇ, ಗುಲ್ಬರ್ಗ-ಬೆಂಗಳೂರುಗಳು ಉತ್ತರದ ಹಾಗೂ ದಕ್ಷಿಣದ ಮಹಾದ್ವಾರಗಳಂತೆ ತಾವಾಗಿಯೇ ಆಗುವವು. ನಮ್ಮ ಸಾರಿಗೆ-ಸಾಗಾಟದ ಸಾಧನಗಳು ಮುಖ್ಯ. ರಸ್ತೆಗಳೂ, ರೈಲುದಾರಿಗಳೂ ಈ ಮಹಾ ತ್ರಿಕೋಣದ ಅಥವಾ ಬಾಣದ ಮೊನೆಯಾಕೃತಿಯ ಭುಜಗಳನ್ನೇ ಅನುಸರಿಸುವಂತಾಗ ಬೇಕು. ಕರ್ನಾಟಕದ ಸಾರಿಗೆ-ಸಂಚಾರ-ಸಂಪರ್ಕಗಳ ನಕ್ಷಾಲೇಖ ೨ ಈ ತತ್ವಕ್ಕನುಗುಣವಾಗಿಯೇ ತಯಾರಿಸಲ್ಪಟ್ಟಿವೆ.

ಈ ಮಹಾ ತ್ರಿಕೋಣವು ಕರ್ನಾಟಕದ ಬಹು ಭಾಗವನ್ನು ವ್ಯಾಪಿಸಿದರೂ, ಚಿಕ್ಕಮಗಳೂರು, ಮಲ್ಪೆ, ಮಂಗಳೂರು, ಮಡಿಕೇರಿ ಹಾಗು ಮೈಸೂರುಗಳ ಭಾಗ ಮಾತ್ರ ಬಹುಮಟ್ಟಿಗೆ ಹೊರಗುಳಿಯುತ್ತಿದೆ. ಅಲ್ಲದೆ, ಈ ಭಾಗಕ್ಕೆ ತೀರ ಸಮೀಪದಲ್ಲಿ ಕರಾವಳಿಯೂ ಇದೆ. ಮಲ್ಪೆ, ಮಂಗಳೂರಿನಂತಹ ಬಂದರುಗಳೂ ಇವೆ. ಕಾರಣ ಬೆಂಗಳೂರು-ಬಳ್ಳಾರಿ-ಮಂಗಳೂರಿನ ಇನ್ನೊಂದು ತ್ರಿಕೋಣ ವನ್ನು ನಾವು ಕಲ್ಪಿಸಿದರೆ ಮಂಗಳೂರು ಅದರ ಶಿರೋಬಿಂದುವಾಗಿ, ಈ ತೀರ ದಕ್ಷಿಣದ ಭಾಗಕ್ಕೆ ಕಡಲ ಮುಖವಾಗುವುದು. ಮಂಗಳೂರಿಗೆ ಬದಲು ಮಲ್ಪೆ

ಯಾದರೂ ನಡೆದೀತು. ಈ ಭಾಗದ ರಸ್ತೆಗಳು, ರೈಲುದಾರಿಗಳು ಈ ತ್ರಿಕೋಣದ ಭುಜಗಳನ್ನೇ ಅನುಸರಿಸುವುವು.

ಇದೀಗ ನಮ್ಮ ರಸ್ತೆ, ರೈಲುದಾರಿಗಳ ಬೆಳವಣಿಗೆಯ ನಿಟ್ಟಾವುದೆಂಬುದನ್ನು ನಿರ್ಧರಿಸಿದಂತಾಯಿತು. ಇನ್ನು ನಮ್ಮ ನಾಡಿನ ಆರ್ಥಿಕ ಐಕ್ಯತೆಯನ್ನು ಸಂಘಟಿಸುವುದಕ್ಕೂ, ನಮ್ಮ ಜನತೆಗೆ ಹಾಗು ವ್ಯಾಪಾರಗಳಿಗೆ ಸಂಚಾರದ ಹಾಗು ಸಾರಿಗೆಯ ಸೌಕರ್ಯಗಳನ್ನು ಒದಗಿಸುವುದಕ್ಕೂ ಆಡಳಿತದ ಅನುಕೂಲ್ಯಕ್ಕೂ ಅತ್ಯಾವಶ್ಯವಾದ ಸಿರಿಗುರಿಗಳಾವುವು, ಮಾರ್ಗಗಳಾವುವು ಎಂಬುದನ್ನು ಪರಿಶೀಲಿಸುವ.

ರಸ್ತೆಗಳ ಪರಮಾವಧಿಯ ಗುರಿಯೆಂದರೆ ನಾಗಪುರದ ಯೋಜನೆ ಎಂದರೆ ಸಾಕು. ಇದರ ಪ್ರಕಾರ, ಎಲ್ಲಾ ಹಳ್ಳಿ ರಸ್ತೆಗಳೂ ಜಿಲ್ಲಾರಸ್ತೆಗಳಿಗೂ, ಇವು ಪ್ರಾಂತೀಯ ಹೆದ್ದಾರಿಗಳಿಗೂ ಸೇರಿರಬೇಕು. ೧,೦೦೦ ಜನ ವಸ್ತಿಯ ಪ್ರತಿಹಳ್ಳಿಯೂ ಹೆದ್ದಾರಿಯಿಂದ ೧ ಅಥವ ೫ ಮೈಲಿ ನಂತರದಲ್ಲೇ ಬರುವಂತಾಗಬೇಕು. ಆದರೆ ದ್ವಿತೀಯ ಪಂಚವಾರ್ಷಿಕ ಯೋಜನೆಯ ಮಟ್ಟಿಗೆ, ತಾತ್ಪೂರ್ತಿಕ ಗುರಿಯೆಂದರೆ, ಮೈಸೂರು ಸಂಸ್ಥಾನದಲ್ಲಿದ್ದ ರಸ್ತೆಗಳ ಸರಾಸರಿ ಇಡೀ ಕರ್ನಾಟಕಕ್ಕಾಗುವಂತಾದರೂ ಸಾಕು. ರಾಷ್ಟ್ರೀಯ ಹೆದ್ದಾರಿಗಳ ಮಟ್ಟಿಗೆ ನಮ್ಮ ನಾಡಿನ ಭಾಗ್ಯ ಚೆನ್ನಾಗಿಯೇ ಇದೆ ಎಂಬುದು ನಕ್ಷೆಯಿಂದ ಸ್ಪಷ್ಟವೇ ಇದೆ. (ನಕ್ಷಾಲೇಖ ೩ ನೋಡಿ ಪು. ೩೩೪). ಹಿಂದೆ ನಾಗಪುರ ಯೋಜನೆಯಲ್ಲಿ ಸೂಚಿತವಾದಂತೆ ಕಾರವಾರ-ಬಳ್ಳಾರಿ-ಗುತ್ತಿಯ ರಸ್ತೆಯೂ ಹಾಗೆಯೆ ಮಂಗಳೂರು-ಮೈಸೂರು-ಬೆಂಗಳೂರು ರಸ್ತೆಯೂ ರಾಷ್ಟ್ರೀಯ ಹೆದ್ದಾರಿಯಾದರಂತೂ ಇನ್ನೂ ಉತ್ತಮವೇ. ಆದರೆ ಕರ್ನಾಟಕದ ಮುಖ್ಯ ಕೊರತೆ ಪ್ರಾಂತೀಯ ಹೆದ್ದಾರಿಗಳದು. ಈ ವಿಷಯದಲ್ಲಿ ಮಲೆನಾಡು ಭಾಗ ಬಹುಮಟ್ಟಿಗೆ ಸುಧೈವಿಯಾಗಿದ್ದರೂ ಅಲ್ಲಿಯ ರಸ್ತೆಗಳೂ ಸಹ ಅಷ್ಟು ಉಚ್ಚಮಟ್ಟದವಿಲ್ಲ. ಬಯಲು ಸೀಮೆಯಂತೂ ತೀರಾ ಹಿಂದುಳಿದುದು. ಈ ಪರಿಸ್ಥಿತಿ ಸುಧಾರಿಸಬೇಕಾದರೆ ಈ ಮುಂದೆ ಕಾಣಿಸಿದ ಪಟ್ಟಿಯಲ್ಲಿಯ ಪ್ರಾಂತೀಯ ಹಾಗು ರಾಷ್ಟ್ರೀಯ ಹೆದ್ದಾರಿಗಳೂ, ಕೆಲವು ಪೂರತ (ಬೋಡಣೆಯ) ರಸ್ತೆಗಳೂ ಅತ್ಯಗತ್ಯ. ಇವುಗಳಲ್ಲಿ ಕೆಲವು ತೀರ ಹೊಸವು. ಇನ್ನು ಕೆಲವು ಈಗಾಗಲೇ ಇರುವಂಥವಾದರೂ ಪ್ರಾಂತೀಯ ಹೆದ್ದಾರಿಯ ಮಟ್ಟಕ್ಕೆ ಬರಲು ತಕ್ಕುವಾಗುವುದವಶ್ಯ.

ನಕ್ಷಾಲೇಖ ೨ರಲ್ಲಿ ಮೂರು (ತುಂಡುಗೆರೆಯ) ಕರಿ ವರ್ತುಲಗಳಿವೆ. ೧ನೆಯ ವರ್ತುಲ, ಅರಣ್ಯೋದ್ಯೋಗಗಳ ಕೆಂದ್ರವಾಗಲು ತಕ್ಕ ಪ್ರದೇಶವನ್ನು ಸೂಚಿಸುತ್ತದೆ. ಈ ಭಾಗದಲ್ಲಿ ನಮ್ಮ ನಾಡಿನಲ್ಲೇ, ಅದೇಕೆ ಇಡೀ ಭಾರತಕ್ಕೇ, ಹಿರಿದಾದ ಅರಣ್ಯ ಕ್ಷೇತ್ರವಿದ್ದು ಇದು ಅನೇಕ ಹಿರಿ ಉದ್ದಿಮೆಗಳ ಕಚ್ಚಾಮಾಲಿನ ಪ್ರಚಂಡ ಆಗರವಾಗಿದೆ. ಇದು ಮಹಾ ತ್ರಿಕೋಣದ ಮುಖದಲ್ಲೇ, ಕಾರವಾರ ಬಂದರಿನ ಹಿಂಗಡೆಯಲ್ಲೇ ಇದೆ. ೨ನೆಯ ವರ್ತುಲ, ಕರ್ನಾಟಕದಲ್ಲೇ ಅತ್ಯತಿಶಯವಾದ ನೀರಾವರಿಗೆ ಆಸ್ಪದವುಳ್ಳ ಎರೆನೆಲದ ಪ್ರದೇಶ, ಹತ್ತಿ ಬೆಳೆಯ ಪಡಿಮೂಲೆ. ಸಮೃದ್ಧವಾದ ಈ ಭಾಗ ಹಿಂದೆ '**The granary of the Deccan—The Palmyra**

of the South'—ಎಂದರೆ 'ದಕ್ಷಿಣದ ಕಣಜ' ಎಂದು ಹೆಸರಾಗಿದೆ. ಕರ್ನಾಟಕದ ಮೂರು ಹಿರಿತೊರೆಗಳಾದ ಭೀಮೆ, ಕೃಷ್ಣೆ, ತುಂಗಭದ್ರೆಯರೂ, ಕಿರಿತೊರೆಗಳಾದ ಘಟಪ್ರಭೆ, ಮಲಪ್ರಭೆ, ಡೋಣಿ, ಕಾಗಿನಾಗಳು ಈ ಭಾಗದಲ್ಲೇ ಸಂಗಮಗೊಂಡು ನಮ್ಮ ನಾಡಿನ ೩/೪ ಭಾಗ ನೀರನ್ನು ಇಲ್ಲಿ ಕೇಂದ್ರೀಕರಿಸುತ್ತವೆ. ಹಾಗು ಇಲ್ಲಿಯ ಭೂಮಿಯ ಹರಹು ನೀರಾವರಿಗೆ ಅತ್ಯನುಕೂಲವಾಗಿದೆ. ಈ ಭಾಗದಲ್ಲೇ ಕರ್ನಾಟಕದ ಅತ್ಯಂತ ದೊಡ್ಡ ಸಿಮೆಂಟುಗಲ್ಲಿನ ಹರಹೂ ಇದೆ. ೩ನೆಯ ವರ್ತುಲ, ನಮ್ಮ ನಾಡಿನ ಔದ್ಯೋಗಿಕ ನಿವೇಶನಗಳ ಕೇಂದ್ರವಾಗಲು ತಕ್ಕ ಹವಾಮಾನ, ಭೂವಿಸ್ತಾರ, ಖನಿಜ ಹಾಗು ಮಿಕ್ಕ ಕಚ್ಚಾಮಾಲು ನೀರು ಹಾಗು ವಿದ್ಯುತ್ತಿನ ಪೂರೈಕೆಗಳುಳ್ಳ ಪ್ರದೇಶ. ಈ ಭಾಗ ರಾಜಧಾನಿಗಭಿಮುಖವಾದ ಎಲ್ಲಾ ಸಂಚಾರಮಾರ್ಗಗಳ ಸಂಗಮ ಸ್ಥಾನವೂ ಅಹುದು. ಇದಲ್ಲದೆ ನಾಲ್ಕನೆಯ ಅತಿಸಂಪದ್ಭರಿತ ಪ್ರದೇಶವೂ ಇನ್ನೊಂದಿದೆ. ಅದನ್ನು ನಕ್ಷೆಯಲ್ಲಿ ತೋರಿಸಲಾಗಿಲ್ಲ. ಅದು ಮಲ್ಪೆ—ಮಂಗಳೂರುಗಳ ಮೀನುಗಾರಿಕೆಯ ಪ್ರದೇಶ.

ಈ ವರ್ತುಲಗಳ ಪ್ರದೇಶಗಳೂ ಮೇಲ್ಕಾಣಿಸಿದ ತ್ರಿಕೋಣಗಳಲ್ಲೇ ಇವೆ. ಆದುದರಿಂದ ಈ ತ್ರಿಕೋಣಗಳ ತತ್ವವನ್ನನುಸರಿಸಿ ಇರುವ ಅಥವಾ ಉಂಟಾಗುವ ಸಂಚಾರ ಮಾರ್ಗಗಳು ತರ್ಕಸಿದ್ಧವಾಗಿರುವುದಲ್ಲದೆ, ನಾಡಿನ ಸರ್ವಾಂಗೀಣ ಅಭಿವೃದ್ಧಿಗೆ ಅತ್ಯಂತ ಅನುಕೂಲವಾಗಿವೆ. ಈ ಕೆಳಗೆ ಸೂಚಿತವಾದ ಮುಖ್ಯ ಮುಖ್ಯ ಹೆದ್ದಾರಿಗಳಂತೂ ೧ನೆಯ ನಕ್ಷೆಯ ಕಿರಣರೇಖೆಗಳ ಹಾಗು ೨ನೆಯ ನಕ್ಷೆಯ ತ್ರಿಕೋಣ ಮತ್ತು ತ್ರಿವರ್ತುಲಗಳ ಹಿನ್ನೆಲೆ, ಮುನ್ನೆಲೆಗಳನ್ನೇ ಅನುಸರಿಸಿವೆ.

ಆಡಳಿತ, ವ್ಯಾಪಾರ ಹಾಗು ಆರ್ಥಿಕ ದೃಷ್ಟಿಯಿಂದ ಅತ್ಯವಶ್ಯಕವಾದ ಹೆದ್ದಾರಿಗಳು (ನಕ್ಷಾಲೇಖ ೩ ನೋಡಿ; ಪು. ೩೩೪) :—

| ಕ್ರಮ ಸಂಖ್ಯೆ | ದಾರಿಗಳು | ಉದ್ದ ಮೈಲಿ | ಹೊಸತಾಗಿ ಸುಧಾರಿಸಬೇಕಾದ ಮೈಲಿ |
|---|---|---|---|
| *I. | ಬೆಂಗಳೂರಿಗೆ ಅಭಿಮುಖವಾದ ಕೆಲವು ಅತ್ಯಾವಶ್ಯಕವಾದ ಪ್ರಾಂತೀಯ ಹೆದ್ದಾರಿಗಳು :— | | |
| ೧. | ಮಂಗಳೂರು-ಹಾಸನ-ಕುಣಿಗಲು-ಬೆಂಗಳೂರು .... | ೨೦೦ | .... |
| ೨. | ಹೊಸನಗರ-ತೀರ್ಥಹಳ್ಳಿ-ಕೊಪ್ಪ-ಚಿಕ್ಕಮಗಳೂರು-ಅರಸೀಕೆರೆ-ತುಮಕೂರು (ಇದು ಮಲೆನಾಡಿನ ನಡುದಾರಿ; ಇದರಲ್ಲಿ ನಗರ-ಕೊಪ್ಪದ ಭಾಗ ಹೊಸತು) .... .... | ೧೮೦ | ೬೦ |
| ೩. | ಸೊಲ್ಲಾಪುರ-ಬಿಜಾಪುರ-ಬಾಗೇವಾಡಿ-ಇಲಕಲ್ಲು-ಹೊಸಪೇಟೆ-ಚಿತ್ರದುರ್ಗ (ಇದು ಸೊಲ್ಲಾಪುರ-ಬೆಂಗಳೂರುಗಳ ನೇರವಾದ ಹೆದ್ದಾರಿ) .... | ೨೦೦ | ೮೫ |

* ಕ್ರಮಸಂಖ್ಯೆ :— ಈ ಸಂಖ್ಯೆಗಳನ್ನೇ ನಕ್ಷೆಯಲ್ಲಿ ಕಾಣಿಸಿದೆ.

| ಕ್ರಮ ಸಂಖ್ಯೆ | ದಾರಿಗಳು | ಉದ್ದ ಮೈಲಿ | ಹೊಸದಾಗಿ ಕಟ್ಟಬೇಕಾದ ಮೈಲಿ |
|---|---|---|---|
| ೪. | ಬಿದರೆ-ಹುಮನಾಬಾದ್-ಗುಲ್ಬರ್ಗ-ಸುರಪುರ-ಹಟ್ಟಿ (ಚಿನ್ನದಗಣಿ)-ಮುದಗಲ್ಲು-ಹೊಸಪೇಟಿ (ಇದು ಬಿದರೆ-ಮಂಗಳೂರು ಹೆದ್ದಾರಿ) .... | ೨೨೦ | ೧೦೦ |
| ೫. | ಮಿರ್ಜಿ-ಅಥಣಿ-ಜಮುಖಂಡಿ-ರಾಯದುರ್ಗ-ನರಗುಂದ-ಗದುಗು-ಮುಂಡರಗಿ-ಕೊಟ್ಟೂರು-ಚಿತ್ರದುರ್ಗ (ಇದರ ಸ್ವಲ್ಪಭಾಗ ಬೊಂಬಾಯಿ ರಾಜ್ಯದ ಮಿರ್ಜಿ-ಅಥಣಿಗಳ ನಡುವಿನ ಕನ್ನಡ ಭಾಗದಲ್ಲಿ ಹಾಯುತ್ತದೆ) .... | ೨೨೦ | ೧೦೦ |
| II. | ಕರಾವಳಿಗಭಿಮುಖವಾದ ಕೆಲವು ಅತ್ಯವಶ್ಯಕವಾದ ಪ್ರಾಂತೀಯ ಹೆದ್ದಾರಿಗಳು :— | | |
| ೬. | ಮಂಗಳೂರು-ಕಡೂರು-ಬೀರೂರು-ಚಿತ್ರದುರ್ಗ-ಬಳ್ಳಾರಿ-ರಾಯಚೂರು-ಯಾದಗಿರಿ (ಇದರ ಸ್ವಲ್ಪಭಾಗ ಆಂಧ್ರದ ಕನ್ನಡ ಭಾಗದಲ್ಲಿ ಹಾಯುತ್ತದೆ) .... .... | ೩೫೦ | ೧೫೦ |
| ೭. | ಮಲ್ಪೆ-ಹೊಸನಗರ-ಕುಂಸಿ-ದಾವಣಗೆರೆ-ಹರಪನಹಳ್ಳಿ-ಹೊಸಪೇಟೆ-ರಾಯಚೂರು .... | ೩೦೦ | ೪೦ |
| ೮. | ಕಾರವಾರ-ಸಿರಸಿ-ಶಿವಮೊಗ್ಗ-ಬೀರೂರು-ಅರಸೀಕೆರೆ-ಮೈಸೂರು (ಇದು ಕಾರವಾರ-ಉದಕಮಂಡಲ ಹೆದ್ದಾರಿ) .... .... | ೨೭೫ | ೪೫ |
| ೯. | ಬೆಳಗಾವಿ-ಗೋಕಾವಿ-ಜಮುಖಂಡಿ-ಬಿಜಾಪುರ-ಸಿಂದಗಿ-ಭೀಮಸೇತುವೆ (ಗುಲ್ಬರ್ಗಕ್ಕೆ) .... | ೨೩೦ | ೧೦೦ |
| III. | ಇನ್ನು ಕೆಲವು ಜೋಡಣೆಯ ಪ್ರಾಂತೀಯ ಹೆದ್ದಾರಿಗಳು :— | | |
| ೧೦. | ಬೀರೂರು-ಚನ್ನಗಿರಿ-ದಾವಣಗೆರೆ-ಹರಪನಹಳ್ಳಿ-ಹಡಗಲಿ-ತುಂಗಭದ್ರಾ ಸೇತುವೆ ಹಾಗೂ ಗದಗು ಬಾದಾಮಿ-ಬಾಗಲಕೋಟೆ-ಬಿಜಾಪುರ (೫ ಹಾಗೂ ೭ನೆ ದಾರಿಗಳ ಭಾಗ ಸೇರಿ ಇದು ಬಿಜಾಪುರ-ಮಂಗಳೂರು ಹೆದ್ದಾರಿ) .... | ೨೦೦ | ೫೦ |
| ೧೧. | ಗದುಗು-ಮುದ್ಗಲ್ಲು-ರಾಯಚೂರು (ಇದರಿಂದ ಕಾರವಾರ-ರಾಯಚೂರು-ಹೈದ್ರಾಬಾದುಗಳು ನೇರವಾಗುವುವು) .... .... | ೧೨೫ | .... |

| ಕ್ರಮ ಸಂಖ್ಯೆ | ದಾರಿಗಳು | ಉದ್ದ ಮೈಲಿ | ಜೋಡಣೆಗೆ ಬೇಕಾದ ಮೈಲಿ |
|---|---|---|---|
| ೧೨. | ಹುಬ್ಬಳ್ಳಿ-ನರಗುಂದ-ಬಾಗಲಕೋಟೆ-ತಾಳೀಕೋಟೆ ಸುರಪುರ-ಯಾದಗಿರಿ-ಮಳಖೇಡ-ಚಿಂಚೋಳಿ-ಬಿದರೆ (ಇದರ ಸ್ವಲ್ಪಭಾಗ ಆಂಧ್ರದ ಕನ್ನಡ ಭಾಗಗಳಲ್ಲಿ ಹಾಯುತ್ತದೆ) .... | ೨೪೦ | ೧೦೦ |
| ೧೩. | ಹೊಸನಗರ-ಸಾಗರ-ಸಿರಸಿ-ಎಲ್ಲಾಪುರ-ಆಳ್ನಾವರ-ಕಿತ್ತೂರು (ಬೆಳಗಾವಿಗೆ) (ಇದು ಇನ್ನೊಂದು ಮಲೆನಾಡು ನಡುದಾರಿ) .... | ೧೩೦ | ೨೦ |
| ೧೪. | ಬೆಂಗಳೂರು-ಮಡಕಶಿರ-ಪಾವುಗಡ, ಬಳ್ಳಾರಿ, ಸಿರಗುಪ್ಪ-ಸಿಂಧನೂರು-ಸುರಪುರ (ಇದರ ೧/೩ ಭಾಗ ಆಂಧ್ರದ ಕನ್ನಡ ಭಾಗಗಳಲ್ಲಿ ಹಾಯುತ್ತದೆ).... | ೨೫೦ | ೭೦ |
| ೧೫. | ಅರಸೀಕೆರೆ-ಹಾಸನ-ಮಡಿಕೇರಿ-ವಿರಾಜಪೇಟೆ (ಇದೇ ಮುಂದೆ ತಲ್ಲಿಚೇರಿ-ಕನ್ನಾನೂರುಗಳಿಗೆ ಹೋಗುವುದು) .... .... | ೧೦೦ | ೨೫ |
| ೧೬. | ಭಟ್ಕಲ್-ಸಾಗರ-ಶಿವಮೊಗ್ಗ-ಚೆನ್ನಗಿರಿ-ಚಿತ್ರದುರ್ಗ-ಕಲ್ಯಾಣದುರ್ಗ (ಅನಂತಪುರಕ್ಕೆ) .... | ೨೨೦ | ೩೫ |
| IV. | ಇವಲ್ಲದೆ, ನಾಲ್ಕು ಮುಖ್ಯ ರಾಷ್ಟ್ರೀಯ ಹೆದ್ದಾರಿಗಳು :— | | |
| I | ಬೆಳಗಾವಿ-ಬೆಂಗಳೂರು (ನಿಪ್ಪಾಣಿಯಿಂದ ಹೊಸೂರುವರೆಗೆ (ಇದೇ ಮುಂದೆ ಕನ್ಯಾಕುಮಾರಿ ವರೆಗೂ ಹೋಗುವುದು.) | | |
| II | ಬೊಂಬಾಯಿ-ಕನ್ಯಾಕುಮಾರಿ (ಬೆಳಗಾವಿಯಿಂದ ಮಂಗಳೂರುವರೆಗೆ) .... | ೨೫೦ | .... |
| III | ಕಾರವಾರ-ಬಳ್ಳಾರಿ (ಇದರಲ್ಲಿ ಗದಗು ಕೊಪ್ಪಳದ ಭಾಗ ಹೊಸತು; ಇದೇ ಮುಂದೆ ನೆಲ್ಲೂರು-ವಿಜಯವಾಡಗಳಿಗೆ ಹೋಗುವುದು) .... | ೨೫೦ | ೫೦ |
| IV | ಮಂಗಳೂರು-ಮಡಿಕೇರಿ-ಮೈಸೂರು-ಬೆಂಗಳೂರು ಇದೇ ಮಂಗಳೂರು-ಮದ್ರಾಸು ಹೆದ್ದಾರಿಯಾಗುವುದು ಈ ಹೊರತು ಬೊಂಬಾಯಿ-ಹೈದ್ರಾಬಾದಿನ ರಾಷ್ಟ್ರೀಯ ಹೆದ್ದಾರಿ ಬಿದರೆ ಜಿಲ್ಲೆಯಲ್ಲಿ ಸ್ವಲ್ಪ ಹಾಯುತ್ತದೆ. ಅದನ್ನು ಇಲ್ಲಿ ವರ್ಣಿಸಿಲ್ಲ .... .... | ೨೫೦ | ೫೦ |
| | | ೪೬೦೦ | ೧೦೫೦ |

ಇವೆಲ್ಲಾ ಕೇವಲ ೧ನೇ ವರ್ಗದ ಹೆದ್ದಾರಿಗಳು. ರಾಷ್ಟ್ರೀಯ ಹೆದ್ದಾರಿಗಳಲ್ಲಿ I ಹಾಗೂ II ಈಗಾಗಲೇ ಕೇಂದ್ರದ ಆಡಳಿತದಲ್ಲಿದ್ದೇ ಇವೆ. III ಹಾಗೂ IV ಗಳನ್ನು ಕೇಂದ್ರಕ್ಕೆ ಒಪ್ಪಿಸಬೇಕು. ನಾಗಪುರ ಯೋಜನೆಯ ಮೇರೆಗೆ III ರಾಷ್ಟ್ರೀಯ ಹೆದ್ದಾರಿಗಳಲ್ಲಿ ಅಡಕವಾಗಿಯೇ ಇದೆ. IV ಸಹ ಅಡಕವಾದ ರಾಯ್ತು*. ಅದಿಲ್ಲವಾದರೆ ಪ್ರಾಂತೀಯ ಹೆದ್ದಾರಿಗಳ ಉದ್ದಳತೆ ಮತ್ತೆ ೫೦೦ ಮೈಲಿ ಹೆಚ್ಚುತ್ತದೆ. ಎಂದರೆ ಸಾಧಾರಣ ೪,೦೦೦ ಮೈಲೇ ಆದಂತೆ. ಅದರಲ್ಲಿ ಸಾಧಾರಣ ೧,೦೫೦ ಮೈಲಿ ಹೊಸತಾಗಿ ಕಟ್ಟಬೇಕಾದುವು. ಮಿಕ್ಕ ೩,೦೦೦ ಮೈಲಿ ಹೆದ್ದಾರಿಗಳನ್ನಾದರೂ ಉತ್ತಮಗೊಳಿಸಿ ಮೇಲ್ಮಟ್ಟದವಾಗುವಂತೆ ಮಾಡಬೇಕಾದುವು. ಇದಲ್ಲದೆ ಮಿಕ್ಕ ಚಿಕ್ಕ ಚಿಕ್ಕ ಪ್ರಾಂತೀಯ ರಸ್ತೆಗಳೂ, ಜಿಲ್ಲಾದಾರಿಗಳೂ (೨ನೇ-೩ನೇ ವರ್ಗದ ರಸ್ತೆಗಳೂ) ಸೇರಿ ಸಧ್ಯ ೯,೦೦೦ ಮೈಲಿಯಷ್ಟು ಇದೆ. ಅವುಗಳ ಮಟ್ಟವನ್ನು ಏರಿಸುವುದೂ, ನಮ್ಮ ರಸ್ತೆಗಳ ಯೋಜನೆಯ ಅಂಗವೇ ಸರಿ.

ಅಲ್ಲದೆ ೨ನೇ-೩ನೇ ವರ್ಗದ ಮತ್ತೆ ೨,೦೦೦ ಮೈಲಿಯಷ್ಟಾದರೂ ಹೊಸ ರಸ್ತೆಗಳು ಅವಶ್ಯ. ಇವೆಲ್ಲಾ ಎಣಿಕೆಗಳಿಂದ ನೋಡಿದರೆ ನಮ್ಮ ಹೊಸರಾಜ್ಯದ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ, ಕನಿಷ್ಠ ಪಕ್ಷ—

೧೨,೦೦೦ ಮೈಲಿ ರಸ್ತೆಗಳನ್ನು ಸುಧಾರಿಸಲು ೫ ಕೋಟಿ ರೂಪಾಯಿ.

೩,೦೦೦ ಮೈಲಿ ಹೊಸ ೧ನೇ-೨ನೇ ವರ್ಗದ ರಸ್ತೆಗಳಿಗಾಗಿ ೨೦ ಕೋಟಿ ರೂಪಾಯಿ.

ಅಂತೂ ರಸ್ತೆಗಳಿಗಾಗಿಯೇ ಒಟ್ಟಾರೆ ೨೫ ಕೋಟಿ ರೂಪಾಯಿಗಳ ಯೋಜನೆ ಅವಶ್ಯ. ಇದರಲ್ಲಿ ಎರಡು-ಎರಡುವರೆ ಸಾವಿರ ಮೈಲಿಯಷ್ಟು ರಸ್ತೆಗಳನ್ನು ಮೈಸೂರು ಪ್ರದೇಶದ ಹೊರಗೆ ಕಟ್ಟಿದರೆ ಮಾತ್ರ ಮಿಕ್ಕ ಕರ್ನಾಟಕ ಮೈಸೂರ ಮಟ್ಟಕ್ಕೆ ತಕ್ಕಮಟ್ಟಿಗೆ ಬಂದಂತಾಗುವುದು. ಇಷ್ಟಾದರೆ, ಕರ್ನಾಟಕ ರಾಜ್ಯದಲ್ಲಿ ದ್ವಿತೀಯ ಯೋಜನೆಯ ಕೊನೆಯಲ್ಲಿ ಸಧ್ಯದ ೧೨,೦೦೦ ಮೈಲಿ ರಸ್ತೆಗಳ ಬದಲು ಒಟ್ಟು ೧೫,೦೦೦ ಮೈಲಿ ರಸ್ತೆಗಳಾಗುವುವು. ಇದು ನಾಗಪುರ ಯೋಜನೆಯ ಮಟ್ಟದ ೧/೪ ಮಾತ್ರ. ಆದರೆ ಈ ವಿಷಯದಲ್ಲಿ ಪ್ರಥಮ ಪ್ರಾಶಸ್ತ್ಯ ಕೊಡಬೇಕಾದುದು ೧,೦೦೦ ಮೈಲಿ ೧ನೇ ವರ್ಗದ ಪ್ರಾಂತೀಯ ಹೆದ್ದಾರಿಗಳಿಗೇ. ಏಕಂದರೆ ಅವೇ ನಮ್ಮ ನಾಡನ್ನು ಕಟ್ಟಿ ಹಿಡಿಯುವ ಚಾಳಿಗೆಯ ದಾರಗಳು. ಈ ಸಂದರ್ಭದಲ್ಲಿ ನಕ್ಷಾಲೇಖ ೩ನ್ನು ಅವಲೋಕಿಸಿದರೆ, ಬೆಂಗಳೂರಿಗೆ ಅಭಿಮುಖವಾದ ನಮ್ಮ ಹೆದ್ದಾರಿಗಳೂ, ಕರಾವಳಿಗಭಿಮುಖವಾದ ಹೆದ್ದಾರಿಗಳೂ ಹೇಗೆ ಹಾಸು ಹೊಕ್ಕಿನಂತೆ ಗಡಿಯಿಂದ ಗಡಿಯವರೆಗೆ ಹೆಣೆಯಲ್ಪಟ್ಟಿವೆ ಎಂಬುದು ಸ್ಪಷ್ಟವಾಗುವುದು. ಕರ್ನಾಟಕ ಪ್ರತಿಯೊಂದು ಮುಖ್ಯಪಟ್ಟಣವೂ ಬೆಂಗಳೂರೊಡನೆ ಹಾಗು ಕರಾವಳಿಯ ಐದೂ †ಮುಖ್ಯ ಬಂದರುಗಳೊಡನೆ ಜೋಡಿಸಲ್ಪಟ್ಟಿರುವುದು.

---

* ಈ ಸಂಖ್ಯೆಗಳನ್ನೇ ನಕ್ಷಾರೇಖಾ ೩ರಲ್ಲಿ ಕಾಣಿಸಿದೆ.

† ೧. ಕಾರವಾರ ೨. ತದಡೀ (ಗೋಕರ್ಣ-ಕುಮಟ) ೩. ಭಟ್ಕಲ್ ೪. ಮಲ್ಪೆ ೫. ಮಂಗಳೂರು.

ಹಾಗು ನಾಡಿನ ಎಲ್ಲ ಭಾಗಗಳಲ್ಲೂ ಈ ಹೆದ್ದಾರಿಗಳು ಸರಿಸಮವಾಗುವಂತೆ ಹಂಚಲ್ಪಟ್ಟಿರುವುದು ಈ ಯೋಜನೆಯ ವೈಶಿಷ್ಟ್ಯ. ರಸ್ತೆಗಳ ಮಟ್ಟಿಗೆ ಸಧ್ಯ ತೀರ ಹಿಂದುಳಿದ ಬಳ್ಳಾರಿ-ಬಿಜಾಪುರ-ಬಿದರೆ ಭಾಗ ಸಹ ೧ನೇ ವರ್ಗದ ಪ್ರಾಂತೀಯ ಹೆದ್ದಾರಿಗಳ ಮಟ್ಟಿಗೆ ಬೆಂಗಳೂರು-ಮೈಸೂರು ಭಾಗಗಳೊಂದಿಗೆ ಸರಿಸಮವಾಗಿರುವುದು ನಕ್ಷೆಯಿಂದ ಸ್ಪಷ್ಟವಾಗುವುದು. ಈ ಹವಣಾದ ಹೆಣಿಕೆಯೇ ಕರ್ನಾಟಕದ ಅಭಿವೃದ್ಧಿಯ ಚತುರ್ಮುಖಗಳ ಅವಶ್ಯಕತೆಯನ್ನು ಪೂರೈಸಬಲ್ಲುದು.

## ಗಡಿನಾಡಿನ ತೊಡಕು

ಈ ಹೆದ್ದಾರಿಗಳ ಬೆಳವಣಿಗೆಯ ವಿಷಯದಲ್ಲಿ ಇನ್ನೊಂದು ಜಟಿಲವಾದ ಪ್ರಶ್ನೆ ಅಡಕವಾಗಿದೆ. ಅದು ಗಡಿನಾಡಿನ ಕೆಲವು ಭಾಗಗಳದು. ಭಾರತವೆಲ್ಲಾ ಒಂದೇ ಆಗಿರುವಾಗ, ಭಾಷೆಯ ಮಟ್ಟಿಗೆ ಒಂದು ತುಂಡು ಆ ರಾಜ್ಯದಲ್ಲಿದ್ದರೇನು ಇನ್ನೊಂದು ಈ ರಾಜ್ಯದಲ್ಲಿದ್ದರೇನು, ಎನ್ನಬಹುದು. ಆದರೆ ರಸ್ತೆಯ ಸಾರಿಗೆ-ಸಂಚಾರದ ವಿಷಯ ಕೇಂದ್ರ ವಿಷಯವಾಗಿರದೆ, ಪ್ರಾಮುಖ್ಯವಾಗಿ ರಾಜ್ಯ ವಿಷಯವಾಗಿರುವದರಿಂದ ಒಂದು ರಾಜ್ಯದ ರಸ್ತೆಗಳಿಗೆ ಅಲ್ಲಲ್ಲಿ ಬೇರೆ ರಾಜ್ಯಗಳ ಭಾಗಗಳು ಕಾಲ್ತೊಡಕಾಗಿರುವುದು ನ್ಯಾಯವಲ್ಲ. ಒಂದು ರಾಜ್ಯದ ಎರಡು ಮುಖ್ಯ ಭಾಗಗಳನ್ನಾಗಲಿ ಪಟ್ಟಣಗಳನ್ನಾಗಲ್ಲಿ ಮತ್ತೊಂದು ರಾಜ್ಯದ ಕೇವಲ ಒಂದು ಚುಂಗು ಅಥವಾ ತುದಿ ಅಡ್ಡಹಾಯ್ದು ವಿಂಗಡಿಸುತ್ತಿದ್ದರೆ, ಅಲ್ಲಿ ಭಾಷೆಗೆ ಮಹತ್ವಕೊಡದೆ, ಸಾರಿಗೆ-ಸಂಚಾರ-ಸಂಪರ್ಕಗಳ ಅನುಕೂಲತೆಗೆ ಪ್ರಾಶಸ್ತ್ಯ ಕೊಟ್ಟು ಅಂಥ ಚುಂಗುಗಳನ್ನು ವಿಂಗಡಿಸಲ್ಪಡುವ ರಾಜ್ಯಕ್ಕೆ ಕೊಡಬೇಕು. ಕರ್ನಾಟಕದ ಮಟ್ಟಿಗೆ ನಾಲ್ಕೈದು ಆಯಕಟ್ಟಿನ ಸ್ಥಳಗಳಲ್ಲಿ ಹೀಗಾದುದನ್ನು ಕೂಡಲೇ ಸರಿಪಡಿಸುವುದವಶ್ಯ. ಭಾಷೆಯ ದೃಷ್ಟಿಯಿಂದ ಬಿಡಿಸಬಹುದಾದ ಗಡೀ ನಾಡುಗಳ ತೊಡಕು ಬಿಡಲಿ, ಬಿಡದಿರಲಿ; ಸಾರಿಗೆಯ ತೊಡಕು ಮಾತ್ರ ಕೂಡಲೆ ಬಿಡಲೇ ಬೇಕು.

ಇಂಥ ಅಡ್ಡಹಾಯುವ ಚುಂಗುಗಳಲ್ಲಿ ಆಂಧ್ರದವು ನಾಲ್ಕು; ಬೊಂಬಾಯಿ ರಾಜ್ಯದ್ದು ಒಂದು. ಇವು ಐದನ್ನು ಅ, ಆ, ಇ, ಈ, ಉ ಎಂಬ ಸಂಕೇತಗಳಿಂದ ನಕ್ಷೆಯಲ್ಲಿ ತೋರಿಸಲಾಗಿದೆ. ಇವುಗಳಲ್ಲಿ ಮುಖ್ಯವಾದುದು ಬೆಂಗಳೂರು-ಪಾವುಗಡ-ಬಳ್ಳಾರಿಗಳ ನೇರವಾದ ರಸ್ತೆಯಲ್ಲಿ ಅಡ್ಡಹಾಯುವ ಸಧ್ಯ ಆಂಧ್ರಕ್ಕೆ ಸೇರಿರುವ ಮಡಕಶಿರ, ಕಲ್ಯಾಣದುರ್ಗ ಹಾಗು ರಾಯದುರ್ಗಗಳ ಕನ್ನಡ ಭಾಗಗಳು. ಇವು ಆಂಧ್ರದ ತೀರಾ ಪಶ್ಚಿಮದ ಅಂಚುಗಳು. ಈ ನೇರವಾದ ರಸ್ತೆಯ ೧೮೦ ಮೈಲಿಗಳಲ್ಲಿ ಸುಮಾರು ೧೦೦ ಮೈಲಿ ಆಂಧ್ರದ ಚುಂಗಿನಲ್ಲಿ ಹಾಯುತ್ತದೆ. ಇದನ್ನು ತಪ್ಪಿಸಬೇಕಾದರೆ, ಬೆಂಗಳೂರಿನಿಂದ ಬಳ್ಳಾರಿಗೆ ಚಿತ್ರದುರ್ಗದ ಮಾರ್ಗವಾಗಿ ೨೫ ಮೈಲಿ ಸುತ್ತದಾರಿಯಿಂದ ಹೋದರೂ, ಅಲ್ಲಿಯೂ ಮೊಳಕಾಲ್ಮೂರು ಹಾಗು ಬಳ್ಳಾರಿಗಳ ನಡುವೆ ೬-೮ ಮೈಲಿ ಆಂಧ್ರದ ಭಾಗ ಅಡ್ಡ ಒಂದೇ ಬರುತ್ತದೆ (ನಕ್ಷೆಯಲ್ಲಿ ಹೆದ್ದಾರಿ ನಂ. ೬ ಹಾಗು ೧೮ ನೋಡಿ) ಹಾಗೆಯೇ ಬಳ್ಳಾರಿಯಿಂದ ರಾಯಚೂರಿಗೆ ನೇರವಾಗಿ ಹೋಗುವಾಗಲೂ

ಸುಮಾರು ೩೦-೪೦ ಮೈಲುದ್ದದ ಆಂಧ್ರದ ಚುಂಗು ಅಡ್ಡಹಾಯುತ್ತದೆ. ಅದಕ್ಕೆ ಮೇಲೆ ರಾಯಚೂರು-ಯಾದಗಿರಿಗಳ ನಡುವೆ ಸಹ ಅಷ್ಟೇ. ಬೆಂಚೋಳಿ-ಬಿದರೆಗಳ ನಡುವೆ ಜಹಿರಾಬಾದಿನ ಒಂದು ಭಾಗ ಅಡ್ಡ ಹಾಯುತ್ತದೆ. ಹಾಗೆಯೇ ತೀರ ವಾಯವ್ಯದಲ್ಲಿ ಮಿರ್ಜಿ ಬಳಿ ಇರುವ ಅಥಣಿ ಪಟ್ಟಣದಿಂದ ತೀರ ಸಮೀಪದ ರೈಲು ನಿಲ್ದಾಣವಾದ ಕೇಡಬಾಳಕ್ಕೆ ಹೋಗಬೇಕಾದರೆ ೩-೪ ಮೈಲಿಗಾಗಿ ನಮ್ಮ ರಾಜ್ಯದ ಗಡಿ ದಾಟಿಯೇ ಹೋಗಬೇಕು. ಇದು ಸರ್ವಥಾ ಸರಿಯಲ್ಲ. ಈ ಭಾಗಗಳು ಆಡಳಿತದ ಹಾಗು ಸಾರಿಗೆಯ ಅನುಕೂಲತೆಯ ದೃಷ್ಟಿಯಿಂದ (ಭಾಷಾ ತತ್ವವನ್ನು ಬದಿಗಿರಿಸಿ ಸಹ) ಕರ್ನಾಟಕಕ್ಕೇ ಸೇರಬೇಕು. ಆದರೆ ನಿಜಸ್ಥಿತಿ ನೋಡಿದರೆ, ಈ ಭಾಗಗಳು ಅಚ್ಚ ಕನ್ನಡದ ಭಾಗಗಳೇ. ಹೀಗೆ ಭಾಷೆಯ ದೃಷ್ಟಿಯಿಂದಲೂ, ಅದಕ್ಕೂ ಹೆಚ್ಚಿಗೆ ಸಾರಿಗೆ ಸಂಚಾರದ ದೃಷ್ಟಿಯಿಂದಲೂ, ಈ ಐದು ಭಾಗಗಳೂ ಕರ್ನಾಟಕಕ್ಕೆ ಸೇರಬೇಕು.

## ಹೆದ್ದಾರಿಗಳಿಗಿಂತಲೂ ಸೇತುವೆಗಳು ಹೆಚ್ಚು ಅಗತ್ಯ

ಕರ್ನಾಟಕಕ್ಕೆ ಅತ್ಯವಶ್ಯವಾದ ಹೆದ್ದಾರಿಗಳನ್ನು ಕಟ್ಟುವುದು ಅಥವಾ ಸುಧಾರಿಸುವುದು ಎಷ್ಟು ಅವಶ್ಯವೋ ಅದಕ್ಕೂ ಒಂದು ಅಂಶ ಹೆಚ್ಚು ಅವಶ್ಯಕವಾದುವುಗಳು ಸೇತುವೆಗಳು. ಮೈಸೂರು ಹೊರಗಿನ ಕರ್ನಾಟಕದಲ್ಲಿ ಸೇತುವೆಗಳ ಅಭಾವ ಕಣ್ತಿವಿಯುವಂತೆ ಮನ ಕೊರಗುವಂತೆ ಇದೆ. ಕನ್ಯಾಕುಮಾರಿ ವರೆಗಿನ ಕರಾವಳಿಯ ರಾಷ್ಟ್ರೀಯ ಹೆದ್ದಾರಿಯಿಂದ ಕನ್ನಡ ಜಿಲ್ಲೆಗಳೆರಡರ ಈ ಹಿರಿ ಸಮಸ್ಯೆ ಈಗ ಬಿಡಿಸಲ್ಪಡುತ್ತಲಿದೆ. ಆದರೆ ಬಯಲು ಸೀಮೆಯ ವಿಸ್ತಾರದಲ್ಲಿ ಮುಖ್ಯತಃ ಉತ್ತರ ಕರ್ನಾಟಕ ಹಾಗು ಹೈದ್ರಾಬಾದ್ ಕರ್ನಾಟಕಗಳಲ್ಲಿ ಹೇಳಿಕೊಳ್ಳುವಂತಹ ಒಂದೂ ಸೇತುವೆಯಿಲ್ಲ. ಕರ್ನಾಟಕದಲ್ಲಿ ೨೫೦ ಮೈಲಿ ಹರಿಯುವ ಕೃಷ್ಣಾ ನದಿಗೆ ಕಳೆದ ವರ್ಷದವರೆಗೂ ಒಂದೂ ಸೇತುವೆ ಇರಲಿಲ್ಲ. ಈಗ ಒಂದೇ ಒಂದು ಇದೆ. ಹರಿಹರದಿಂದ ಮಂತ್ರಾಲಯದವರೆಗಿನ ೨೦೦ ಮೈಲಿನಲ್ಲಿ ತುಂಗಭದ್ರೆಗೆ ಒಂದೂ ಸೇತುವೆಯಿಲ್ಲ. ಹೊಸಪೇಟೆಯ ಬಳಿಯ ಅಣೆಕಟ್ಟನಿಂದ ಈ ಕೊರತೆ ಸ್ವಲ್ಪ ನೀಗಬಹುದು. ಆದರೆ ಹರಿಹರದವರೆಗಿನ ತುಂಗಭದ್ರೆಯ ೧೪೦ ಮೈಲಿನಲ್ಲಿ ೬-೭ ಸೇತುವೆಗಳಿವೆ. ಘಟಪ್ರಭಾ, ಮಲಪ್ರಭಾಗಳ ೪೫೦ ಮೈಲಿನ ಉದ್ದಳತೆಯಲ್ಲಿ (ರಾಷ್ಟ್ರೀಯ ಹೆದ್ದಾರಿಯನ್ನುಳಿದರೆ) ಒಂದೇ ಒಂದು ಸೇತುವೆ ಇದೆ. ೨೦೦ ಮೈಲುದ್ದದ ಭೀಮಾನದಿಗೆ ಈವರೆಗೆ ಒಂದೇ ಒಂದು ಸೇತುವೆಯಿತ್ತು. ಇದೀಗ ಮತ್ತೆರಡು ಆಗುತ್ತಿವೆ. ಇದಲ್ಲದೆ ಇನ್ನು ಕೆಲವು ಸಣ್ಣ ಪುಟ್ಟ ಹಳ್ಳ ನದಿಗಳ ಸೇತುವೆಗಳ ಲೆಕ್ಕವೂ ಆಗಬೇಕು. ಮೇಲ್ಕಾಣಿಸಿದ ೧೬ ಮುಖ್ಯ ಪ್ರಾಂತೀಯ ಹೆದ್ದಾರಿಗಳೆಲ್ಲಾ ೧ನೇ ವರ್ಗದ ಹೆದ್ದಾರಿಗಳಾಗಬೇಕಾದರೆ, ಒಟ್ಟಿಗೆ ೨೫ ರಷ್ಟು ಹೊಸ ಸೇತುವೆಗಳು ಬೇಕೇ ಬೇಕು. ಇದನ್ನು ನಕ್ಷಾಲೇಖ ೩ರಲ್ಲಿ ಹೀಗೆ × ಗುರುತು ಮಾಡಲಾಗಿದೆ. ಇವುಗಳಲ್ಲಿ ಸುರಪುರ-ಸೀತೆಮನೆಗಳ ಬಳಿಯ ಕೃಷ್ಣಾ ಸೇತುವೆಗಳೂ, ಹಡಗಲಿ ಬಳಿಯ ತುಂಗಭದ್ರಾ ಸೇತುವೆಯೂ, ಕಾರವಾರದ ಬಳಿಯ ಕಾಳೀ ಸೇತುವೆಯೂ ಹೆಚ್ಚು

ದೊಡ್ಡವು, ಹಾಗು ಅತ್ಯಗತ್ಯದುವು. ಇಂಥಲ್ಲಿ ಸೇತುವೆಗಳ ಬದಲು ಅಣೆ ಕಟ್ಟಿದರೆ ಹೆಚ್ಚು ಉಪಯೋಗವಾದೀತು. ಮಲೆನಾಡಿಗೆ ರಸ್ತೆ, ಸೇತುವೆ ಎರಡೂ ಒಮ್ಮೆಲೇ ಅವಶ್ಯ. ಆದರೆ ಬಯಲು ಸೀಮೆ ಎಲ್ಲೆಲ್ಲೂ ಬಯಲು ಬಯಲಾಗಿರುವುದರಿಂದ ರಸ್ತೆಗಳಿಲ್ಲದಿದ್ದರೂ ಜೀವನ ಹೇಗೋ ನಡೆದೀತು. ಆದರೆ ಸೇತುವೆಗಳಿಲ್ಲದೆ ಜೀವನ ಪ್ರಗತಿಪರವಾಗಲು ಶಕ್ಯವೇ ಇಲ್ಲ. ಅಂತೆಯೇ ದಕ್ಷಿಣ ಭಾರತದ ಕಣಜ (ಗ್ರೇನರಿ ಆಫ್ ದಿ ಡೆಕ್ಕನ್) ಎಂದು ಹೆಸರಾಗಿಯೂ ಅದು ಸಧ್ಯ ಅತಿ ಹಿಂದುಳಿದ ಭಾಗವಾಗಿದೆ.

## ರಸ್ತೆ ಸಂಚಾರ ವ್ಯವಸ್ಥೆ

ಇಡೀ ಕರ್ನಾಟಕದ ದೃಷ್ಟಿಯಿಂದ ಸರಕಾರವೇ ಪೂರ್ತಿಯಾಗಿ ರಸ್ತೆ ಸಂಚಾರ ವ್ಯವಸ್ಥೆಯನ್ನು ತಾನೇ ವಹಿಸಿಕೊಳ್ಳುವುದುತ್ತಮ. ಹೈದ್ರಾಬಾದ್ ಕರ್ನಾಟಕದಲ್ಲಿ ಹಾಗು ಮೈಸೂರು ಪ್ರದೇಶದಲ್ಲಿ ಇಂತಹ ಸರಕಾರಿ ವ್ಯವಸ್ಥೆ ಕೆಲಮಟ್ಟಿಗೆ ಇದೆಯಲ್ಲದೆ, ಧೋರಣೆಯೂ ಪ್ರಗತಿಪರವಾಗಿದೆ. ಆದರೆ ಬೊಂಬಾಯಿ ಕರ್ನಾಟಕದಲ್ಲಿ ಈ ವ್ಯವಸ್ಥೆ ೧೦ ಪಾಲು ಸರಕಾರಕ್ಕೆ ಸೇರಿದ್ದು ಇರುವದಲ್ಲದೆ ಸಾಕಷ್ಟು ಸಂಘಟಿತವಾಗಿದೆ. ಸಧ್ಯ ಮುಂಬಯಿ ಕರ್ನಾಟಕದಲ್ಲಿ ಹಾಗೂ ಮೈಸೂರು ಸಂಸ್ಥಾನದಲ್ಲಿ ಪರಿಸ್ಥಿತಿ ಹೀಗಿದೆ:—

| | |
|---|---|
| ಮೈಸೂರಿನಲ್ಲಿ ... | ಒಟ್ಟು ಮಾರ್ಗ (ರೂಟುಗಳು) ೩೧೦; ವಾಹನಗಳು ೨೧೫; ತೊಡಕಿಸಿದ ಹಣ ೫೪ ಲಕ್ಷ ರೂಪಾಯಿಗಳು. |
| ಬೊಂಬಾಯಿ ಕರ್ನಾಟಕದಲ್ಲಿ | ಒಟ್ಟು ಮಾರ್ಗ ೪೩೮; ವಾಹನಗಳು ೫೩೦; ತೊಡಕಿಸಿದ ಹಣ ೨೨೦ ಲಕ್ಷ ರೂಪಾಯಿಗಳು ಹಾಗೂ ಒಟ್ಟು ಸಾಧಾರಣ ೩ ಕೋಟಿ ರೂಪಾಯಿಗಳು. |
| ಹೈದ್ರಾಬಾದು ಕರ್ನಾಟಕದಲ್ಲಿ ಸಾಧಾರಣ. | ಒಟ್ಟು ಮಾರ್ಗ ೩೦; ವಾಹನಗಳು ೮೦; ತೊಡಕಿಸಿದ ಹಣ ೩೦ ಲಕ್ಷ ರೂಪಾಯಿಗಳು. |

ಕಾರಖಾನೆ ಆಸ್ತಿ ಮೊದಲಾದುವೂ ಇದಕ್ಕೆ ಸೇರುತ್ತವೆಂದು ಗ್ರಹಿಸಬಹುದು.

ಕರ್ನಾಟಕದಲ್ಲಿ ರೈಲುದಾರಿಗಳ ಅನುಕೂಲ ಕಡಿಮೆಯಿದ್ದು, ರಸ್ತೆಗಳು ಸಾಕಷ್ಟಿರುವ ಮಲೆನಾಡು ಹಾಗು ಅದರ ಸೆರಗಿನ ಭಾಗ ತುಂಬಾ ಇದೆ. ರಸ್ತೆಗಳೇ ನಮ್ಮ ರಾಜ್ಯದ ರಕ್ತನಾಳಗಳೆಂದು ಆರಂಭದಲ್ಲೇ ಹೇಳಿದೆ. ಆದುದರಿಂದ ಕರ್ನಾಟಕ ರಾಜ್ಯದಲ್ಲಿ ರಸ್ತೆ ಸಂಚಾರ ವ್ಯವಸ್ಥೆ ಸಂಪರ್ಕವಾಗಿ ರಾಷ್ಟ್ರೀಕೃತವಾಗಬೇಕು. ಇದಕ್ಕಾಗಿ ಕೂಡಲೆ ಮತ್ತೆ ಸುಮಾರು ೩-೪ ಕೋಟಿ ರೂಪಾಯಿ ತೊಡಕಿಸಲ್ಪಡಬೇಕಾದೀತು. ಇದಕ್ಕೆ ಕೇಂದ್ರ ಸರಕಾರದ ನೆರವೂ ದೊರೆಯುವುದು ಸಾಧ್ಯ. ಇದೊಂದು ಮಾರ್ಗದಿಂದಲೇ ನಮ್ಮ ರಾಜ್ಯಕ್ಕೆ ಸುಮಾರು ೨-೨॥ ಕೋಟಿ ರೂಪಾಯಿಯ ವಾರ್ಷಿಕ ಆದಾಯವಾಗಬಲ್ಲುದು. ಇಡೀ ಕರ್ನಾಟಕದಲ್ಲಿ ರಸ್ತೆಗಳು ಸುಮಾರು ೧೨,೦೦೦ ಮೈಲಿ. (ಮೈಸೂರಲ್ಲಿ ೭,೦೦೦ + ಮಿಕ್ಕ ಕರ್ನಾಟಕದಲ್ಲಿ ೫,೦೦೦) ಎಂದರೆ, ಸುಮಾರು ಸದ್ಯದ ಬೊಂಬಾಯಿಯಷ್ಟೆ. ಬೊಂಬಾಯಿ ರಾಜ್ಯದಷ್ಟೆ ಪ್ರಗತಿ ಸಾಧಿಸಲು ನಮಗೆ

ಒಟ್ಟು ೨೦ ಕೋಟಿ ರೂಪಾಯಿ ಹಣವೂ, ೩ ಸಾವಿರ ವಾಹನಗಳೂ ಬೇಕಾಗುವುವು. ಈ ವಿಷಯದಲ್ಲಿ ಹಿಂದುಳಿದ ಮೈಸೂರು ಭಾಗದಲ್ಲೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲೂ, ಬೊಂಬಾಯಿ ಕರ್ನಾಟಕದಲ್ಲಿ ಈಗಾಗಲೇ ಆಗಿರುವ ಪ್ರಗತಿಗಿಂತ ಹೆಚ್ಚಿನ ಮಟ್ಟದ ಪ್ರಗತಿ ಸಾಧ್ಯವಿದೆ. ದ್ವಿತೀಯ ಯೋಜನೆಯಲ್ಲಿ ಮೈಸೂರು ಭಾಗಕ್ಕೆ ಈ ವಿಷಯ ದಲ್ಲಿ ಪ್ರಪ್ರಥಮ ಪ್ರಾಶಸ್ತ್ಯವನ್ನು ಕೊಡುವದವಶ್ಯ. ಅನಂತರ ದಕ್ಷಿಣ ಕನ್ನಡ, ಹೈದರಾಬಾದು ಕರ್ನಾಟಕದಲ್ಲಿ ಕೆಲವು ಆವಶ್ಯಕ ಹೊಸ ದಾರಿಗಳೂ ಸೇತುವೆಗಳೂ ಸಿದ್ಧವಾಗುವವರೆಗೆ ಅಲ್ಲಿ ಈ ಪ್ರಗತಿ ಸ್ವಲ್ಪ ಕುಂಠಿತವಾಗಬಹುದು. ಈ ವಿಷಯದಲ್ಲಿ ಉತ್ತರ ಕರ್ನಾಟಕ ಈಗಾಗಲೇ ಮುಂದುವರಿದುದರಿಂದ, ಅಲ್ಲಿಯ ವ್ಯವಸ್ಥೆಯೇ ಇಡಿ ಕರ್ನಾಟಕಕ್ಕೆ ಮಾದರಿಯಾಗಬಲ್ಲುದು. ಹಾಗು ಹುಬ್ಬಳ್ಳಿಯ ಪ್ರಾದೇಶಿಕ ಕಾರಖಾನೆಯೇ ನಮ್ಮ ಮಧ್ಯವರ್ತಿ ಕಾರಖಾನೆಯಾಗ ಬಲ್ಲುದು.

ರೈಲುದಾರಿಗಳ ಬಗ್ಗೆ ಹೇಳುವಾಗ ನಮ್ಮ ರೈಲುದಾರಿಗಳು ಹೇಗೆ ಸುತ್ತು ಹಾಕಿ ಬಳಸಿಕೊಂಡು ಹೋಗುತ್ತಿವೆ ಎಂಬುದು ಹೇಳಿಯಾಗಿದೆ. ಈ ಪರಿಸ್ಥಿತಿ ಸಧ್ಯದ ಮಟ್ಟಿಗೆ ರಸ್ತೆ ಸಂಚಾರದ ಬೆಳವಣಿಗೆಗೆ ಹೆಚ್ಚು ಅನುಕೂಲವಾಗಿದೆ. ಉದಾ ಹರಣೆಗೆ, ದಾವಣಗೆರೆಯಿಂದ ಬೆಂಗಳೂರಿಗೆ ರೈಲುದಾರಿಗಿಂತ ಬೇಗನೆ ಎಕ್ಸ್‌ಪ್ರೆಸ್ ಬಸ್ಸಿನಿಂದ ಹೋಗಲು ಸಾಧ್ಯ. ಈ ರಸ್ತೆ ಪೂರ್ತಿ ಸೀಮೆಂಟಿನದಾಗಬೇಕು ಮಾತ್ರ. ಹೀಗೆ ಎಲ್ಲೆಲ್ಲಿ ನೋಡಿದರೂ ಇದೆ. ಅಲ್ಲದೆ, ನಮ್ಮ ರೈಲುದಾರಿಗಳೇ ಒಟ್ಟನಲ್ಲಿ ಕಡಿಮೆ.* ಇದರ ಲಾಭ ನಮ್ಮ ರಸ್ತೆ ಸಂಚಾರ ವ್ಯವಸ್ಥೆಗೆ ದೊರೆತು, ಅಭಿವೃದ್ಧಿಗೆ ಅತ್ಯಂತ ಪೋಷಕವಾಗುವುದು. ಒಟ್ಟಾರೆ ಮೈಸೂರು ಭಾಗಗಳಲ್ಲಿ ಸರಕಾರೀ ರಸ್ತೆ ಸಂಚಾರ ವ್ಯವಸ್ಥೆಯೂ, ಮಿಕ್ಕೆಡೆಗಳಲ್ಲಿ ರಸ್ತೆಗಳ ಕಟ್ಟೋಣವೂ ಪ್ರಾಶಸ್ತ್ಯ ವನ್ನು ಪಡೆಯಬೇಕಾಗಿದೆ.

## ನವ ಕರ್ಣಾಟಕದಲ್ಲಿ ಹೊಸ ರೈಲುದಾರಿಗಳ ಯುಗ ಪ್ರಾರಂಭವಾಗಬೇಕು

ನಮ್ಮ ರೈಲುದಾರಿಗಳ ನ್ಯೂನತೆಗಳನ್ನು ಹಿಂದೆ ಹೇಳಿಯಾಗಿದೆ. ಅವುಗಳನ್ನು ಸರಿಪಡಿಸುವುದೇ ಪ್ರಥಮೋದ್ದೇಶ. ಆ ದೃಷ್ಟಿಯಿಂದ ಈ ಕೆಳಗಿನ ರೈಲುದಾರಿಗಳಿಗೆ ಪ್ರಪ್ರಥಮ ಪ್ರಾಧಾನ್ಯತೆಯನ್ನು ಕೊಡುವುದವಶ್ಯ. ಈ ಯೋಜನೆಗಳಿಂದ ಆ ನ್ಯೂನತೆಗಳೆಲ್ಲಾ ಬಹುಮಟ್ಟಿಗೆ ದೂರವಾಗುವುವು.

---

* ಇಡೀ ಭಾರತದಲ್ಲಿ ರಸ್ತೆ, ರೈಲುದಾರಿಗಳ ಪ್ರಮಾಣ ೧೦೦ಕ್ಕೆ ೩೫ ರಂತಿದ್ದರೆ, ಇಡೀ ಕರ್ನಾಟಕದಲ್ಲಿ ೧೦೦ಕ್ಕೆ ೧೩ ಮಾತ್ರ.

# ಹದಿನಾಲ್ಕು ಅತ್ಯಾವಶ್ಯಕ ರೈಲುದಾರಿಗಳು

(ಇವನ್ನೆಲ್ಲಾ ನಕ್ಷಾಲೇಖ ೩ರಲ್ಲಿ ಕಾಣಿಸಿದೆ. ಕೆಲ ಹೆಚ್ಚಿನ ರೈಲುದಾರಿಗಳೂ ಇವೆ.)

I. ಕರಾವಳಿಗಭಿಮುಖವಾದ ರೈಲ್ದಾರಿಗಳು—

(೧) ಹುಬ್ಬಳ್ಳಿ-ಕಾರವಾರ .... ೯೫ ಮೈಲು
(೨) ಬೆಂಗಳೂರು-ಕುಣಿಗಲು-ಹಾಸನ-ಮಂಗಳೂರು .... ೨೩೦ ,,
(೩) ತಾಳಗುಪ್ಪಾ-ದಾಂಡೇಲಿ .... ೮೦ ,,
(೪) ಅರಸಾಳು-ಮಲ್ಪೆ .... ೮೦ ,,
(೫) ಬೀರೂರು-ಚಿಕ್ಕಮಗಳೂರು-ಬೇಲೂರು-ಸಕಲೇಶಪುರ-ಕೊಡ್ಲಿಪೇಟೆ-ಮಡಿಕೇರಿ .... ೧೧೦ ,,

II. ರಾಜಧಾನಿಗಭಿಮುಖವಾದ ರೈಲುದಾರಿಗಳು—

(ನಮ್ಮ ರೈಲುದಾರಿಗಳೆಲ್ಲಾ ಬೆಂಗಳೂರಿಗೆ ಅಭಿಮುಖವಾಗಿದ್ದಂತೆಯೇ ಇವೆ. ಆದರೆ ಇವೆಲ್ಲಾ ಸುತ್ತಿ ಬಳಸಿಕೊಂಡು ಹಾಯ್ದಿರುವುದರಿಂದ ಮೊದಲೇ ಒಂದು ಮೂಲೆಯಲ್ಲಿದ್ದ ಬೆಂಗಳೂರು ನಾಡಿನ ಮುಖ್ಯ ಭಾಗಗಳಿಂದ ಮತ್ತಷ್ಟು ದೂರವಾಗಿದೆ. ಈ ನ್ಯೂನತೆ ಹೋಗಬೇಕೆಂಬ ಉದ್ದೇಶದಿಂದ ಈ ಕೆಳಗಿನ ರೈಲುದಾರಿಗಳು ಸೂಚಿಸಲ್ಪಟ್ಟಿವೆ.)

(೬) ತುಮಕೂರು-ದಾವಣಗೆರೆ (ಚಿತ್ರದುರ್ಗ ಮಾರ್ಗವಾಗಿ) .... ೧೨೫ ಮೈಲು
(೭) ಚಿತ್ರದುರ್ಗ-ಹೊಸಪೇಟೆ-ಇಲಕಲ್ಲು-ಸೀತೆಮನೆ.... ೧೩೫ ,,
(೮) ಚಿತ್ರದುರ್ಗ-ಮೊಣಕಾಲ್ಮೂರು-ರಾಯದುರ್ಗ .... ೫೦ ,,
(೯) ಗದುಗು-ರಾಣಿಬೆನ್ನೂರು-(ಅಥವಾ ದಾವಣಗೆರೆ). ೮೦ ,,
(೧೦) ಗುಲ್ಬರ್ಗಾ-ಹುಮನಾಬಾದ್-ಬಿದರೆ .... ೮೦ ,,

III. ಒಳನಾಡಿನ ಅತಿ ಮಹತ್ವದ ಜೋಡಣೆಗಳು—

(೧೧) ಕೊಳ್ಳೆಗಾಲ-ಶಿವಸಮುದ್ರ-ಮದ್ದೂರು .... ೩೫ ಮೈಲು
(೧೨) ಶಿವಮಗ್ಗಿ-ದಾವಣಗೆರೆ-ಹೊಸಪೇಟೆ (ಕೊಟ್ಟೂರು ಮಾರ್ಗವಾಗಿ) .... ೮೦ ,,
(೧೩) ಗದುಗು-ಮುದ್ಗಲ್ಲು-ಗುಲ್ಬರ್ಗಾ-(ಅಥವಾ ವಾಡಿ). ೧೭೫ ,,
(೧೪) ಗದುಗು-ನರಗುಂದ-ರಾಮದುರ್ಗ-ಮುಧೋಳ - ಜಮಖಂಡಿ-ಅಥಣಿ-ಮಿರ್ಜಿ (ಜಮಖಂಡಿ-ಬಿಜಾಪುರ-ಮುಧೋಳ-ಬಾಗಲಕೋಟೆ ಹಾಗೂ ನರ್ಗುಂದ-ಸವದತ್ತಿ-ಬೆಳಗಾವಿ ಶಾಖೆಗಳೊಂದಿಗೆ). ೨೬೦ ,,

## ನಕ್ಷಾಲೇಖ ೩

### ವಿವರಣೆ

ಹೊಸ ರಾಜ್ಯದ ಸಾರಿಗೆ-ಸಂಚಾರ ಮಾರ್ಗಗಳು ಹೇಗೆ ಪುನರ್‍ರೂಪಿತವಾಗಬೇಕೆಂಬುದರ ನಕ್ಷೆ ಇದು. ಇಲ್ಲಿ ಮುಖ್ಯತಃ ಅತಿ ಮಹತ್ವದ ಹೆದ್ದಾರಿಗಳನ್ನು ಮಾತ್ರ ತೋರಿಸಲಾಗಿದೆ. ನಮ್ಮ ರಾಜ್ಯದ ಒಂದು ವೈಶಿಷ್ಟ್ಯವೆಂದರೆ, ಮಹತ್ವದ ಪಟ್ಟಣಗಳು ಹೆಚ್ಚಾಗಿ ಗಡಿಗುಂಟ ಇರುವುದು. ೧೯ ಜಿಲ್ಲಾ ನಗರಗಳಲ್ಲಿ ೧೨ ಗಡಿ ನಗರಗಳೇ ಆಗಿವೆ. ನಮ್ಮ ಮುಖ್ಯ ನಗರಗಳನ್ನು ರಾಜಧಾನಿಯೊಂದಿಗೂ ಕರಾವಳಿಯೊಂದಿಗೂ ಜೋಡಿಸುವ ಹೆದ್ದಾರಿಗಳು ಎದುರು ಬದುರು ಗಡಿಗಳನ್ನು ಜೋಡಿಸುತ್ತ ಒಂದು ಸುಂದರವಾದ ಹಾಸುಹೊಕ್ಕಿನ ನೆಯ್ಗೆಯ ರಚನೆಯನ್ನುಂಟುಮಾಡುವುವು. ಇಂತಹ ಹೆದ್ದಾರಿಗಳ ಯೋಜನೆಯಿಂದ ಪ್ರತಿ ಹಿರಿ ಪಟ್ಟಣದಿಂದ ಮಿಕ್ಕೆಲ್ಲಾ ಪಟ್ಟಣಗಳಿಗೂ, ರಾಜಧಾನಿ ಹಾಗು ಕರಾವಳಿಗೂ ನೇರವಾದ ನಾಡಿನಾದ್ಯಂತವಾದ ಸಾರಿಗೆ-ಸಂಚಾರದ ಸಂಬಂಧವುಂಟಾಗುವುದು. ಇಂತಹ ಈ ೫,೦೦೦ ಮೈಲುದ್ದದ ಮುಖ್ಯ ಹೆದ್ದಾರಿಗಳನ್ನು ಅತ್ಯುಚ್ಚ ಮಟ್ಟದಲ್ಲಿರಿಸುವುದರಲ್ಲಿಯೇ ನಮ್ಮ ನಾಡಿನ ಆರ್ಥಿಕ ಐಕ್ಯತೆ ಹಾಗು ಔದ್ಯೋಗಿಕ ಬೆಳವಣಿಗೆಯ ಗುಟ್ಟು ಅಡಗಿದೆ. ಇವೇ ನಮ್ಮ ನಾಡಿನ ನಾಡಿಗಳು. ಹಣಕಾಸಿನ ದೃಷ್ಟಿಯಿಂದಂತೂ ಈ ಹೆದ್ದಾರಿಗಳೂ ಚಿನ್ನದ ಗಣಿಗಳೇ !

ನಕ್ಷಾಲೇಖ ೨ ರಲ್ಲಿಯ (ಪು. ೩೨೧) ತ್ರಿಕೋಣಗಳಿಗೆ ಹೋಲುವಂತೆಯೇ ಇಲ್ಲಿ ಕಾಣಿಸಿದ ಹೆದ್ದಾರಿಗಳು ಕರಾವಳಿಗಭಿಮುಖವಾದ ತ್ರಿಕೋಣಗಳನ್ನುಂಟುಮಾಡುವುದನ್ನು ಸ್ವಲ್ಪ ಲಕ್ಷಿಸಿ ನೋಡಿದರೆ ಯಾರೂ ಕಂಡುಕೊಳ್ಳಬಹುದು. ಈ ಹೆದ್ದಾರಿಗಳ ಯೋಜನೆಯಲ್ಲಿ, ರಾಜಧಾನಿಗಭಿಮುಖವಾಗಿ ತುಮಕೂರು-ಚಿತ್ರದುರ್ಗಗಳೂ, ಕರಾವಳಿಗಭಿಮುಖವಾಗಿ ಹಾಸನ-ಶಿವಮುಗ್ಗಿ-ಎಲ್ಲಾಪುರ-ಹುಬ್ಬಳ್ಳಿಗಳೂ ಅನಿವಾರ್ಯವಾಗಿಯೇ ಈ ಹೆದ್ದಾರಿಗಳ ಹೆಬ್ಬಾಗಿಲುಗಳಂತಹ ಮಹತ್ವವನ್ನು ಪಡೆಯುವುವು. ದಾವಣಗೆರೆ-ಗದುಗು-ಹೊಸಪೇಟೆ-ಸುರಪುರಗಳು ನಡುನಾಡಿನ ಸಂಚಾರ ಕೇಂದ್ರಗಳಾಗಿ ಪರಿಣಮಿಸುವುವು.

ಹೊಸ ರೈಲ್ದಾರಿಗಳಲ್ಲಿ, ಕಾರವಾರ-ಹುಬ್ಬಳ್ಳಿ-(ಹಾವೇರಿ) ಹಾಗು ಹಾಸನ-ಮಂಗಳೂರುಗಳ ಜೋಡಣೆಗಳು ಅತ್ಯಗತ್ಯ ಹಾಗು ಅತ್ಯನಿವಾರ್ಯ. ಇವು ಬ್ರಾಡ್‌ಗೇಜಿನವಾದರೆ ಉತ್ತಮ. ಆದರೆ, ಕರ್ನಾಟಕ ಹಾಗು ಭಾರತಗಳೆರಡರ ದೃಷ್ಟಿಯಿಂದ, ಬೆಂಗಳೂರು-ಚಿತ್ರದುರ್ಗ-ಬಿಜಾಪುರ-ಸೊಲ್ಲಾಪುರಗಳ ಹೊಸ ಬ್ರಾಡ್‌ಗೇಜಿನ ರೈಲ್ದಾರಿ ಸಹ ಅತ್ಯನಿವಾರ್ಯವೇ. ಚಿತ್ರದುರ್ಗ-ಬಿಜಾಪುರಗಳ ಮಧ್ಯೆ, ಈ ದಾರಿ ಗದುಗು ಅಥವಾ ಹೊಸಪೇಟೆಗಳಲ್ಲೊಂದರ ಮಾರ್ಗವಾಗಿ ಸಾಗಬಹುದು ; ೨ ನೆಯದು ಹೆಚ್ಚು ಉತ್ತಮ.

ನಕ್ಷೆಯಲ್ಲಿ ಎಲ್ಲಾ ಸೂಚಿತ ಮಾರ್ಗಗಳನ್ನೂ ಮೀಟರ್ ಗೇಜಿನಲ್ಲೇ ತೋರಿಸಲಾಗಿದೆ. ಇವೆಲ್ಲಾ ಇಂದಲ್ಲ, ಐವತ್ತು ವರ್ಷಗಳಲ್ಲಾದರೂ ಆಗಬೇಕಾದುವೇ. ನಮ್ಮ ರೈಲ್ದಾರಿಗಳ ವೈಶಿಷ್ಟ್ಯವೆಂದರೆ, ಇವು ಹೆಚ್ಚಾಗಿ ಕರಾವಳಿಗೂ, ಭಾರತದ ಹೆಚ್ಚಿನ ವಿಸ್ತಾರವಿರುವ ಉತ್ತರಕ್ಕೂ ಅಭಿಮುಖವಾಗಿರಬೇಕಾದುದೇ. ನಮ್ಮ ಭಾಗದ ರೈಲ್ದಾರಿಗಳಿಗೆ ಉತ್ತರದ ಉಕ್ಕಡದಲ್ಲಿರುವ ಬೆಳಗಾವಿ, ಬಿಜಾಪುರ, ಕಲ್ಬುರ್ಗಿ, ಬಿದರೆಗಳೇ ಮಹಾದ್ವಾರಗಳು ; ಪೂರ್ವದಲ್ಲಿ ಬಳ್ಳಾರಿ.

ಇವಲ್ಲದೆ ಭವಿಷ್ಯಕ್ಕೆ ಅವಶ್ಯವಾಗುವ ಮತ್ತೆ ಕೆಲ ಜೋಡಣೆಗಳು ನಕ್ಷೆಯಲ್ಲಿ ಕಾಣಿಸಲ್ಪಟ್ಟಿವೆ. ಇವೆಲ್ಲಾ ರೈಲುದಾರಿಗಳು ಸಾಧಾರಣ ೧,೫೦೦ ಮೈಲಿನಷ್ಟಾಗುತ್ತವೆ. ಇಷ್ಟಾದರೂ ಸಹ ಕರ್ಣಾಟಕದ ರಸ್ತೆ-ರೈಲುದಾರಿಯ ಪ್ರಮಾಣ ಭಾರತ ಪ್ರಮಾಣದ ೨/೩ ರಷ್ಟೇ ಆಗುತ್ತದೆ. ನಮ್ಮ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಇಡೀ ಭಾರತಕ್ಕೆ ಹೊಸ ರೈಲುದಾರಿಗಳು ಕೇವಲ ೮೦೦ ಮೈಲಿನಷ್ಟಿರುವಾಗ ಬಡ ಕರ್ಣಾಟಕಕ್ಕೆ ಇಷ್ಟೆಲ್ಲಾ ಒಮ್ಮೆಲೇ ಸಿಕ್ಕುವುದು ಹೇಗೆ? ಆದರೆ ದುರಾದೃಷ್ಟದ ಮಾತೆಂದರೆ—ನಮ್ಮ ದ್ವಿತೀಯ ರಾಷ್ಟ್ರೀಯ ಯೋಜನೆಯಲ್ಲಿ ದಕ್ಷಿಣ ಭಾರತಕ್ಕಾಗಲಿ, ಕರ್ನಾಟಕಕ್ಕಾಗಲಿ ಒಂದು ಮೈಲಿಯಷ್ಟು ಹೊಸ ರೈಲುದಾರಿ ಅಡಕವಾಗಿಲ್ಲ. ಎಂದ ಮೇಲೆ ೧೫೫೦ ಮೈಲು ರೈಲ್ದಾರಿಯ ಮಾತು ಬರಿಗನಸೇ ಸರಿ. ಆದರೂ ಕರ್ಣಾಟಕ ರಾಜ್ಯ ಸಂಘಟಿತವಾದೊಡನೆ ಕನಿಷ್ಟಪಕ್ಷ ೮೦೦ ಮೈಲು ಹೊಸದಾರಿಯನ್ನೂ ೧೫೦ ಮೈಲು ಮೀಟರ್‌ಗೇಜನ್ನು ಬ್ರಾಡಗೇಜ ಮಾಡುವುದನ್ನೂ ಭಾರತ ಸರಕಾರಕ್ಕೆ ಒತ್ತಾಯಪೂರ್ವಕ ಸೂಚಿಸಿ ಸ್ವೀಕರಿಸುವಂತೆ ಮಾಡಬೇಕು. ಸಧ್ಯ ಇದೂ ಅಸಾಧ್ಯವಾದರೆ ಕನಿಷ್ಟಪಕ್ಷ ೫೫೦ ಮೈಲಿ ಹೊಸ ಮೀಟರ್‌ಗೇಜ್ ಮಾರ್ಗವಾದರೂ ಅನಿವಾರ್ಯ.

## ಬ್ರಾಡ್‌ಗೇಜ್ ರೈಲುದಾರಿಗಳು

ಬ್ರಾಡ್‌ಗೇಜಿನಲ್ಲಿ ಮುಖ್ಯವಾಗಿ ಈ ಕೆಳಗಿನ ದಾರಿಗಳಾಗುವುದು ಅತ್ಯುತ್ತಮ ಹಾಗೂ ಅತ್ಯಗತ್ಯ.—

(೧) ಸೊಲ್ಲಾಪುರ - ಬಿಜಾಪುರ - ಗದುಗು - ದಾವಣಗೆರೆ - ಚಿತ್ರದುರ್ಗ-ತುಮಕೂರು-ಬೆಂಗಳೂರು (ಅಥವಾ ಗದುಗು-ದಾವಣಗೆರೆ ಮಾರ್ಗ ಬಿದ್ದು (೮)ರಲ್ಲಿ ಹೇಳಿದಂತೆ ಸೀತೆಮನೆ-ಇಲಕಲ್ಲು-ಹೊಸಪೇಟೆ-ಚಿತ್ರದುರ್ಗವಾದರೂ ಸರಿ) ಇದರ ಉದ್ದಳತೆ ೩೯೦ ಮೈಲಿ. ೨೪೦ ಮೈಲಿಯಷ್ಟು ಹೊಸಮಾರ್ಗ, ೧೫೦ ಮೈಲಿಯಷ್ಟು ಮೀಟರ್‌ಗೇಜಿನಿಂದ ಪರಿವರ್ತನೆ.

(೨) ಗುಂತಕಲ್-ಹೊಸಪೇಟೆ (ಹುಬ್ಬಳ್ಳಿಯ ಮಾರ್ಗವಾಗಿ ಅಥವಾ ನೇರವಾಗಿ ಕಾರವಾರಕ್ಕೆ) ೧೦೦ ಮೈಲಿ ಹೊಸತು; ೧೬೦ ಮೈಲಿ ಪರಿವರ್ತನೆ.

(೩) ಬೆಂಗಳೂರು - ಕುಣಿಗಲು - ಚನ್ನರಾಯಪಟ್ಟಣ - ಹಾಸನ - ಮಂಗಳೂರು.

ಇಷ್ಟಾದರೆ ಕರ್ಣಾಟಕದ ಮಟ್ಟಿಗೆ ಬ್ರಾಡ್‌ಗೇಜ್ ಸಾಕು. ಬೆಂಗಳೂರು-ಮಂಗಳೂರು ಹಾಗೂ ಬಳ್ಳಾರಿ-ಕಾರವಾರಗಳೆರಡೂ ಬ್ರಾಡ್‌ಗೇಜಿನವೇ ಆದರೆ ಸಕಲೇಶಪುರ-ಮಂಗಳೂರು ಹಾಗೂ ಯಲ್ಲಾಪುರ-ಕಾರವಾರಗಳ* ನಡುವೆ ಮಿಕ್ಸೆಡ್

---

* ಈ ದಾರಿ ಹಿಂದೊಮ್ಮೆ ಬ್ರಾಡ್‌ಗೇಜಿಗಾಗಿಯೇ ಸರ್ವೆ ಆಗಿದೆ. ಅಲ್ಲದೇ ಗುಂತಕಲ್ಲು—ಬಳ್ಳಾರಿವರೆಗಿನ ಕಾಯಂ ದಾರಿ (ಪರ್ಮನೆಂಟ್ ವೇ) ಈಗಲೂ ಬ್ರಾಡ್ ಗೇಜಿನದೇ ಆಗಿದೆ.

ಗೇಜ್ (ಎಂದರೆ ಮೀಟರ್‌ಗೇಜ್ ಹಾಗೂ ಬ್ರಾಡ್‌ಗೇಜ್ ಎರಡೂ ಸೇರಿದ ಗೇಜ್) ಉಪಯೋಗಿಸಬೇಕಾಗುವುದು. ಇಲ್ಲವಾದರೆ ಮಿಕ್ಕ ಮೀಟರ್‌ಗೇಜಿನ ಸರಕುಗಳ ಸಾಗಾಟಕ್ಕೆ ತೊಂದರೆಯಾಗುತ್ತದೆ. ಆದರೆ ಸೊಲ್ಲಾಪುರ-ಗದುಗು-ಬೆಂಗಳೂರು ಅಥವಾ ಸೊಲ್ಲಾಪುರ-ಹೊಸಪೇಟೆ-ಬೆಂಗಳೂರುಗಳ ಬ್ರಾಡ್‌ಗೇಜಿಗೆ ಯಾವ ಅಭ್ಯಂತರವಿಲ್ಲ. ಭಾರತದ ದಕ್ಷಿಣೋತ್ತರವಾದ ಒಂದು ಹಿರಿದಾದ ಟ್ರಂಕ್ ರೈಲುದಾರಿ ಕರ್ಣಾಟಕದ ನಡುನಾಡಿನಲ್ಲೇ ಹಾಯ್ದಂತಾಗುವುದು. ಹಾಗು ವಿಜಾಪುರದ ಭಾಗ ಬೆಂಗಳೂರಿಗೆ ೯೦ ಮೈಲಿಯಷ್ಟು ಹತ್ತಿರವಾಗುವುದು. ಆದುದರಿಂದ ಕಾರವಾರ ಹಾಗೂ ಮಂಗಳೂರುಗಳಿಗೆ ಈಗಲೇ ಬ್ರಾಡ್‌ಗೇಜ್ ಸಿಕ್ಕದಿದ್ದರೂ ಆದೀತು. ಹಾಗಾದರೆ ಬರೀ ಹುಬ್ಬಳ್ಳಿ-ಕಾರವಾರ, ಹಾಸನ-ಮಂಗಳೂರು ಮೀಟರ್‌ಗೇಜ್ ಆದರೂ ಸದ್ಯ ಸಾಕು. ಇದಲ್ಲದೆ ಮಿಕ್ಕ ಸೂಚಿತ ರೈಲ್ದಾರಿಗಳಲ್ಲಿ ಮಲ್ಪೆ-ಅರಸಾಳು, ಬೀರೂರು-ಚಿಕ್ಕಮಗಳೂರು-ಮಡಿಕೇರಿ, ಚಿತ್ರದುರ್ಗ-ರಾಯದುರ್ಗ, ಗುಲ್ಬರ್ಗ-ಬಿದರೆ ಇವುಗಳಾದರೂ (ಒಟ್ಟು ೩೨೦ ಮೈಲಿ) ಆವಶ್ಯಕವೇ. ಈ ಕನಿಷ್ಟಪಕ್ಷದ ಲೆಕ್ಕದಂತೆ ನಮಗೆ ೫೫೦ ಮೈಲಿಯಷ್ಟು ಹೊಸ ಮೀಟರ್‌ಗೇಜೂ, ೨೪೦ ಮೈಲಿ ಹೊಸ ಬ್ರಾಡ್‌ಗೇಜೂ ಹಾಗೂ ೧೫೦ ಮೈಲಿ ಪರಿವರ್ತಿತ ಬ್ರಾಡ್‌ಗೇಜೂ ಅತ್ಯವಶ್ಯ.

## ಕರ್ನಾಟಕದಲ್ಲಿ ಜಲಮಾರ್ಗಗಳಿಗೂ ವಿಶೇಷ ಆಸ್ಪದವಿದೆ

ಕರ್ನಾಟಕದಲ್ಲಿ ಜಲಮಾರ್ಗಗಳಾಗುವುದು ಸಾಧ್ಯವೆಂದು ಸರ್ ಆರ್ಥರ್ ಕಾಟನ್ ಎಂಬ ಯಾತ್ರಿಕ ತಜ್ಞರು ಒಂದೆಡೆ ರೂಪಿಸಿಟ್ಟಿದ್ದಾರೆ. ಆ ಮೇರೆಗೆ ಕಾರವಾರ-ಬಳ್ಳಾರಿ-ಬೆಂಗಳೂರು ಕಾಲುವೆ ದಾರಿಯೂ, *ಕಾರವಾರ-ಮಂಗಳೂರು ಕನ್ಯಾಕುಮಾರಿ ಕಾಲುವೆ ದಾರಿಯೂ ಸಾಧ್ಯವಂತೆ. ಇದರಲ್ಲಿ ಎರಡನೆಯದಂತೂ ಸುಲಭ ಸಾಧ್ಯ. ಕಾರವಾರ-ಮಂಗಳೂರು ವರೆಗಿನ ಕರಾವಳಿಯ ಕಾಲುವೆ ದಾರಿಯನ್ನಂತೂ ಏ. ಡಿ. ಟೈಲರ್ ಎಂಬ ಸಮುದ್ರಯಾನ ನಿಷ್ಣಾತನು ಸರ್ವೆ ಕೂಡ ಮಾಡಿ, ಇಂಥಾ ಕಾಲುವೆ ದಾರಿಗೆ ಮುಕ್ಕಾಲು ಪಾಲಿನ ನೈಸರ್ಗಿಕ ಅನುಕೂಲತೆ ಯಿರುವದಾಗಿ ಹೇಳಿದ್ದಾನೆ. ನಮ್ಮ ಕಡಲುಕರಾವಳಿಗುಂಟ ರೈಲ್ದಾರಿ ಕಟ್ಟುವು ದಕ್ಕಿಂತಲೂ ಇಂಥದೊಂದು ಕಾಲುವೆ ದಾರಿಯನ್ನು ನಿರ್ಮಿಸಿದರೆ ಕರಾವಳಿಯ ಸಾಗಾಟಕ್ಕೆ ಒಳ್ಳೆಯ ಅನುಕೂಲವಾಗುವುದು. ಏಕೆಂದರೆ ಈ ಕರಾವಳಿ ಕಾಲುವೆ ದಾರಿಯಲ್ಲಿ ನದಿಗಳೆಲ್ಲಾ ಜೋಡಿಸುವುದರಿಂದಲೂ, ನಮಗೆ ಕರಾವಳಿ ನದಿಗಳಲ್ಲಿ ೧೫-೨೦ ಮೈಲಿನವರೆಗೂ ಒಳನಾಡಿನಲ್ಲಿ ನೌಕಾಯಾನಕ್ಕೆ ಉಪಯೋಗವಾಗು ವಂತಿರುವುದರಿಂದಲೂ, ಕರಾವಳಿಯ ಕಾಲುವೆಯ ೨೦೦ ಮೈಲಿ ಈ ನದಿಗಳೆಲ್ಲಾ ಸೇರಿ ಮತ್ತೆ ೨೦೦ ಮೈಲಿ. ಹೀಗೆ ಒಟ್ಟಾರೆ ೪೦೦ ಮೈಲಿನ ಜಲಮಾರ್ಗವಾಗಬಲ್ಲುದು. ಕರಾವಳಿಯ ಕಾಲುವೆದಾರಿ ನಮ್ಮ ಜನತೆ ನೌಕಾಯಾನದಲ್ಲಿ ಆಸಕ್ತರಾಗುವಂತೆ

---

*ಇದು ಪನಾಮಾ ಕಾಲುವೆಯ ತತ್ವದಂತೆ ಕಟ್ಟಲ್ಪಡಬಹುದಂತೆ.

ಮಾಡುವುದು. ಹಡಗು ಕಟ್ಟುವ ಕಲೆಗೆ ಉತ್ತೇಜನವಾಗುವುದು. ಮೀನಗಾರಿಕೆಗೆ ಸಹಕಾರಿಯಾಗುವುದು. ಬಂದರುಗಳನ್ನು ಪೋಷಿಸುವುದು. ನೆರೆಹಾವಳಿಯನ್ನು ತಡೆಯುವುದು. ರಾಜ್ಯದ ಧನಸಂಪತ್ತನ್ನು ಹೆಚ್ಚಿಸುವುದು, ಅತಿಅವಶ್ಯದ ಹಾಗು ಸುರಕ್ಷಿತವಾದ ಸಾಗಾಟದ ಸೌಕರ್ಯವನ್ನು ಒದಗಿಸುವುದು. ಇದನ್ನೆಲ್ಲಾ ಮನಗಂಡು ಕರ್ನಾಟಕ ಜನತೆಯೂ, ರಾಜ್ಯಾಧಿಕಾರಿಗಳೂ ಸಧ್ಯ ಸೂಚಿತವಾದ ಬೊಂಬಾಯಿ-ಮಂಗಳೂರು ರೈಲ್ದಾರಿಗೆ ತಡೆಹಾಕಿಸಿ, ಆ ರೈಲ್ದಾರಿಯನ್ನೇ ತಮ್ಮ ಒಳನಾಡಿನಲ್ಲಿ ಹಾಕುವಂತೆ ಪ್ರೇರೇಪಿಸಿ ಕರಾವಳಿಗುಂಟ ಮಾತ್ರ ಕಾಲುವೆ ದಾರಿಯೇ ಆಗುವಂತೆ ನೋಡಿಕೊಳ್ಳಬೇಕು. ಕರಾವಳಿಯ ರೈಲ್ದಾರಿ ನಮ್ಮ ಬಂದರುಗಳ ಕತ್ತು ಹಿಸುಕುವಲ್ಲಿ ಸಂದೇಹವಿಲ್ಲ.

## ಒಳನಾಡಿನ ಜಲಮಾರ್ಗಗಳು

ಒಳನಾಡಿನಲ್ಲೂ ಜಲಮಾರ್ಗಗಳನ್ನುಂಟುಮಾಡಲು ಸಾಧ್ಯವಿದೆ. ಉದಾಹರಣೆಗೆ ಶಿವಮಗ್ಗಿ-ಧಾರವಾಡ ಜಿಲ್ಲೆಗಳಲ್ಲಿ ಹರಿಯುವ ವರದಾನದಿಗೆ ನಾಲ್ಕೆಡೆಗಳಲ್ಲಿ ಅಣೆಕಟ್ಟು ಕಟ್ಟಿದರೆ ೧೦೦ ಮೈಲುದ್ದದ ಮಾರ್ಗವಾಗುತ್ತದೆ. ಈ ನದಿಯ ಇಳಿತವೇ ಅಷ್ಟುಅನುಕೂಲವಾಗಿದೆ. ತುಂಗಭದ್ರೆಗೂ ಹೆಚ್ಚು ಕಡಿಮೆ ಈ ಅನುಕೂಲತೆಯಿದೆ. ಹಡಗಲಿ, ಹರಿಹರ, ಬೈರನಪಾದ, ಕೂಡಲು ಎಂಬ ಸ್ಥಳಗಳಲ್ಲಿ ಅಣೆಕಟ್ಟು ಕಟ್ಟಲು ಸೌಕರ್ಯವಿದೆ. ಇವನ್ನೆಲ್ಲ ಕಟ್ಟಿದರೆ ಲಕ್ಕವಳ್ಳಿಯಿಂದ ಹೊಸಪೇಟೆಯವರೆಗೂ (೧೪೦ ಮೈಲಿ) ಜಲಮಾರ್ಗವಾಗಬಲ್ಲುದು. ಈ ಮಾರ್ಗಗಳು ನೀರಾವರಿ, ವಿದ್ಯುತ್, ಮೀನುಗಾರಿಕೆ ಮುಂತಾದವುಗಳಿಗೂ ಉಪಯೋಗವಾಗುವುದರಿಂದ ಇವು ವಿವಿಧೋದ್ದೇಶದ ಯೋಜನೆಗಳಾಗುವುವು. ಪ್ರಾಯೋಗಿಕವಾಗಿ ವರದಾ ಯೋಜನೆಯೊಂದನ್ನಾದರೂ ನಮ್ಮ ರಾಜ್ಯ ಸಾಧ್ಯವಾದೊಡನೆ ಕೈಕೊಳ್ಳಬೇಕು.

## ವಿಮಾನ ಮಾರ್ಗಗಳು—ನಿಲ್ದಾಣಗಳು

ವಿಮಾನ ಮಾರ್ಗಗಳಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟುವು: ಒಂದು ಬೊಂಬಾಯಿ-ಕೊಚೀನದ್ದು; ಇನ್ನೊಂದು ಬೊಂಬಾಯಿ-ಬೆಂಗಳೂರಿನದು; ಮೂರನೆಯದು ಮದ್ರಾಸು-ಬೆಂಗಳೂರು-ತ್ರಿವೆಂದ್ರಂದು. ಇದಲ್ಲದೆ ಬೊಂಬಾಯಿ-ಕೋಲಂಬೋ ಮಾರ್ಗವೂ ಕರ್ನಾಟಕದ ಮೇಲಿಂದಲೇ ಹೋಗುತ್ತಿದೆ. ಕರ್ನಾಟಕ ರಾಜ್ಯಸ್ಥಾಪನೆಯಾದೊಡನೆಯೆ ಮಂಗಳೂರು-ಮೈಸೂರು-ಬೆಂಗಳೂರು ಹಾಗು ಬೆಳಗಾವಿ-ಬಳ್ಳಾರಿ-ಬೆಂಗಳೂರು ಹೀಗೆ ಎರಡು ಫೀಡರ್-ಸರ್ವಿಸ್ ಅತ್ಯವಶ್ಯ. ಬಳ್ಳಾರಿಯ ವಿಮಾನ ನಿಲ್ದಾಣ ಮತ್ತೆ ಪ್ರಾರಂಭಿಸಬೇಕು; ಅಥವಾ ಬಳ್ಳಾರಿ-ಹೊಸಪೇಟೆಯ ಮಧ್ಯೆ ಬೇರೊಂದು ಕಟ್ಟಬೇಕು. ಬಿದರೆಯ ವಿಮಾನ ನಿಲ್ದಾಣವನ್ನು ಪುನರುಜ್ಜೀವಿಸಿದರೆ ಬಿದರೆ-ಗುಲ್ಬರ್ಗ-ಬಳ್ಳಾರಿ-ಬೆಂಗಳೂರಿನ ಫೀಡರ್ ಸರ್ವಿಸು ನಡೆಯಬಹುದು. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಹುಬ್ಬಳ್ಳಿಯ ವಿಮಾನ ನಿಲ್ದಾಣ ನಮೂದಿಸಲ್ಪಟ್ಟಿದೆ. ಈ ನಿಲ್ದಾಣವನ್ನು ಹುಬ್ಬಳ್ಳಿ-ಗದುಗುಗಳ ಮಧ್ಯೆ

ಮಾಡಿದರೆ ಹೆಚ್ಚು ಅನುಕೂಲ. ಹಾಗೆಯೇ ಭಾರತದ ೧೪ ಪ್ರವಾಸೀ—ಪ್ರೇಕ್ಷಕಕೇಂದ್ರಗಳಲ್ಲಿ ಒಳಗೊಂಡಿರುವ ಬಿಜಾಪುರಕ್ಕೂ ಒಂದು ನಿಲ್ದಾಣವಾಗಬಹುದು. ಇದು ಬೊಂಬಾಯಿ-ಬಳ್ಳಾರಿ-ಮದ್ರಾಸುಗಳ ನೇರವಾದ ದಾರಿಯಲ್ಲೇ ಇದೆ. ಬೊಂಬಾಯಿ-ಬೆಳಗಾವಿ-ಕೊಚೀನಗಳ ನೇರವಾದ ವಿಮಾನದಾರಿಯಲ್ಲೇ ಬೆಳಗಾವಿ-ಮಂಗಳೂರುಗಳ ನಟ್ಟನಡುವೆ ಜೋಗದ ಜಲಪಾತವಿದೆ. ಇದೊಂದು ಪ್ರಸಿದ್ಧಿಯುಳ್ಳ ಪ್ರವಾಸೀ-ಪ್ರೇಕ್ಷಕ ಸ್ಥಳವಾದುದರಿಂದ ಇಲ್ಲೊಂದು ಸಾದಾ (Air-strip) ವಿಮಾನದ ಬೈಲನ್ನಾದರೂ ಮಾಡಿ ಪ್ರವಾಸಿಗರಿಗೆ ಅಗತ್ಯವಿದ್ದಾಗ ಮಾತ್ರ ವಿಮಾನಗಳು ಇಳಿಯುವಂತೆ ಮಾಡಬಹುದು.

ಇದೀಗ ನಮ್ಮಲ್ಲಿ ಉಪಯೋಗದಲ್ಲಿರುವ ವಿಮಾನ-ನಿಲ್ದಾಣಗಳು ಮೂರು: ಬೆಳಗಾವಿ, ಮಂಗಳೂರು, ಬೆಂಗಳೂರು. ನಡೆಯದಿರುವವು ಮೂರು: ಮೈಸೂರು, ಬಳ್ಳಾರಿ, ಬಿದರೆ. (ಬರೀ ಬಯಲು ನಿಲ್ದಾಣ (Air-strips) ಮೂರು: ದಾವಣಗೆರೆ, ಹೊಸಪೇಟೆ, ಶಿರಸಿ. ಕೂಡಲೆ ಆಗಬಹುದಾದಂತಹವು ಎರಡು—ಹುಬ್ಬಳಿ, ಬಿಜಾಪುರ. ಗುಲ್ಬರ್ಗಕ್ಕೂ ಒಂದು ಅವಶ್ಯ. ಅಲ್ಲದೆ ಎರಡು ಬಯಲು ನಿಲ್ದಾಣಗಳು ಜೋಗದ ಜಲಪಾತದ ಬಳಿ ಹಾಗೂ ಮಡಿಕೇರಿಯ ಬಳಿ ಆಗಬೇಕು. ಮಂಗಳೂರು-ಮೈಸೂರು-ಬೆಂಗಳೂರು ಫೀಡರ್ ಸರ್ವಿಸ್ ಆರಂಭವಾದರೆ ಮಡಿಕೇರಿಯ ಬಯಲು ನಿಲ್ದಾಣ ಉಪಯೋಗವಾಗಬಲ್ಲುದು. ಇದರ ಹೊರತು ಭವಿಷ್ಯದಲ್ಲಿ ಬೀರೂರಿನಲ್ಲೊಂದು ವಿಮಾನನಿಲ್ದಾಣ ಅವಶ್ಯವಾದೀತು. ಇದು ಭದ್ರಾವತಿ, ಶಿವಮುಗ್ಗಿ, ಚಿಕ್ಕಮಗಳೂರು, ಅರಸಿಕೆರೆಗಳಿಗಲ್ಲದೆ ಚಿತ್ರದುರ್ಗಕ್ಕೂ ಮಧ್ಯವರ್ತಿಯಾಗಿದೆ. ಅಥವಾ ಬೀರೂರಿನ ಬದಲು ಹಾಸನವಾದರೂ ಸರಿ. ಒಟ್ಟಾರೆ ೧೦ ವಿಮಾನ ನಿಲ್ದಾಣಗಳೂ, ೫ ಬಯಲು ನಿಲ್ದಾಣಗಳೂ, ೨ನೇ ಹಾಗೂ ೩ನೇ ಪಂಚವಾರ್ಷಿಕ ಯೋಜನೆಯಲ್ಲಾದರೂ ಅಡಕವಾಗಬೇಕು. ರಾಯಚೂರು, ಕಾರವಾರಗಳಿಗೂ ಸಕಾಲದಲ್ಲಿ ಇಂತಹ ಅನುಕೂಲತೆ ಅವಶ್ಯವಾಗಬಹುದು.

ಇನ್ನೊಂದು ಮಹತ್ವದ ವಿಷಯು. ಇದೀಗ ಹೆಚ್ಚು ಮಹತ್ವದ ಅಂಚೆಯೆಲ್ಲಾ ವಿಮಾನ ಮಾರ್ಗವಾಗಿಯೇ ನಡೆಯುತ್ತಿದೆ. ಅದಕ್ಕಾಗಿ ರಾತ್ರಿ ವಿಮಾನಸಾರಿಗೆ ನಾಗಪುರ ಮಾರ್ಗವಾಗಿ ಇಟ್ಟಿದ್ದಾರೆ. ಅದರ ಹೊರತಾಗಿ, ಬೊಂಬಾಯಿ-ಡಿಲ್ಲಿ ನಡುವೆ ನೇರವಾದ ಒಂದು ವಿಶೇಷ ಅಂಚೆಯ ವಿಮಾನ ಸರ್ವಿಸ್ಸು ಇದೆ. ಅದರಂತೆ ಬೊಂಬಾಯಿ ಮದ್ರಾಸುಗಳ ನಡುವೆಯೂ ನೇರವಾದ ರಾತ್ರಿಯ ಅಂಚೆ ವಿಮಾನವನ್ನು ಬಿಜಾಪುರ, ಬಳ್ಳಾರಿ, ಬೆಂಗಳೂರುಗಳಿಗೆ ತಾಗಿ ಹೋಗುವಂತೆ ಮಾಡಬೇಕು. ಇದರಿಂದ ಇಡೀ ಕರ್ನಾಟಕಕ್ಕೆ ಮಹತ್ತರವಾದ ಒಂದು ಸೌಕರ್ಯ ಒದಗಿಸಿದಂತಾಗುವುದು.

ಇದಲ್ಲದೆ ಬೆಂಗಳೂರು, ಮಂಗಳೂರು, ಹುಬ್ಬಳ್ಳಿ, ಬೆಳಗಾವಿಗಳಲ್ಲಿ ಒಂದೆರಡು ಉಡ್ಡಾಣ ಸಂಘಗಳು (ಪ್ಲಾಯಿಂಗ್ ಕ್ಲಬ್ಸ್) ಸ್ಥಾಪಿತವಾಗಬೇಕು.

# ಭಾಗ ೪

## ಮಿಕ್ಕ ಸಂಪರ್ಕ ಸಾಧನಗಳು

### ಅಂಚೆ ತಂತಿ

ಕರ್ನಾಟಕವು ಒಂದು ವಿಶಾಲವಾದ ರಾಜ್ಯವಾಗುವುದರಿಂದ ಅದರ ಅಂಚೆ ತಂತಿ ಖಾತೆಗಳನ್ನು ಈವರೆಗೂ ಮೈಸೂರು ಸಂಸ್ಥಾನವನ್ನು ಮದ್ರಾಸಿಗೆ ಸೇರಿಸಿದಂತೆ ಎತ್ತಲೋ ಸೇರಿಸಿದರೆ, ಇನ್ನು ಮುಂದೆ ನಡೆಯಲಾರದು. ಈ ರಾಜ್ಯಕ್ಕೆ ಪ್ರತ್ಯೇಕವಾದ ಪೋಸ್ಟ್‌ಮಾಸ್ಟರ್ ಜನರಲನೂ, ಜನರಲ್ ಪೋಸ್ಟ್ ಆಫೀಸೂ ಹಾಗೂ ಸೆಂಟ್ರಲ್ ಟೆಲಿಗ್ರಾಫ್ ಆಫೀಸೂ ದೊರೆಯಲೇಬೇಕು. ಇದರ ಕೇಂದ್ರ ಬೆಂಗಳೂರು ಅಥವಾ ಬೇರೊಂದು ಹೆಚ್ಚು ಮಧ್ಯವರ್ತಿಯಾದ ಸ್ಥಳವಾಗ ಬಹುದು. ದ್ವಿತೀಯ ಯೋಜನೆಯಲ್ಲಿ ಇಡೀ ಭಾರತದಲ್ಲಿ ೨೦,೦೦೦ ಅಂಚೆ ಕಟ್ಟೆ ಗಳು ಹೆಚ್ಚಲಿವೆ. ಆ ಪ್ರಮಾಣದಲ್ಲಿ ಕರ್ನಾಟಕದಲ್ಲಿ ಕನಿಷ್ಟ ೧೨೦೦ ಹೊಸ ಅಂಚೆ ಕಟ್ಟೆಗಳು ದೊರೆಯಬೇಕು. ಟೆಲಿಫೋನು ಟೆಲಿಗ್ರಾಫುಗಳ ಸೌಕರ್ಯ ದ್ವಿತೀಯ ಪಂಚವಾರ್ಷಿಕ ಯೋಜನೆಯ ಮೇರೆಗೆ ದೊರೆತರೆ ಪ್ರಶ್ನೆಯೇ ಇಲ್ಲ. ಆದರೆ ವಾರ್ಷಿಕ ನಮ್ಮ ನಾಡಿನ ಅಂಚೆಯ ಸೌಕರ್ಯದಲ್ಲಿ ಮುಖ್ಯವಾದ ಅವಶ್ಯಕತೆ ಮೇಲೆ ಸೂಚಿಸಿದ ರೀತಿಯ ವಿಮಾನ ಸಾರಿಗೆ.

### ಬಾನುಲಿ

ಬಾನುಲಿ (ಆಕಾಶ ವಾಣಿ)ಯ ವಿಚಾರದಲ್ಲಿ ಕರ್ನಾಟಕಕ್ಕೆ ಹೆಚ್ಚಿನ ಸೌಕರ್ಯ ಸಿಕ್ಕೇ ಇದೆ. ಬೆಂಗಳೂರಿನ ಆಕಾಶವಾಣಿ ಭಾರತದ ದೊಡ್ಡ ಕೇಂದ್ರಗಳಲ್ಲೊಂದು. ಆದರೆ ಬೆಂಗಳೂರಿನಿಂದ ಬಹುದೂರ ಇರುವ ಹಾಗು ಒಂದು ನಿರ್ದಿಷ್ಟ ರೀತಿಯಲ್ಲಿ ಸುಸಂಘಟಿತವಾದ ಪ್ರದೇಶವಾದ ಹೈದ್ರಾಬಾದು ಕರ್ನಾಟಕಕ್ಕೆ ಧಾರವಾಡ ದಂತಹ ಒಂದು ಪೈಲಟ್ ಸ್ಟೇಷನ್ನಾದರೂ ಅತ್ಯವಶ್ಯ. ಯುದ್ಧಾನಂತರದ ಹೈದ್ರಾಬಾದು ಯೋಜನೆಯ ಮೇರೆಗೆ ಗುಲ್ಬರ್ಗದಲ್ಲಿ ಒಂದು ರೇಡಿಯೋ ಸ್ಟೇಷನಿನ ಲೆಕ್ಕವಿತ್ತು. ಆ ಪ್ರಕಾರ ಗುಲ್ಬರ್ಗದಲ್ಲಿ ಒಂದು ಪೈಲಟ್ ಸ್ಟೇಷನ್ನು ಇರುವದು ಅವಶ್ಯ. ಬಿದರೆ-ಕಾರವಾರದಂತಹ ದೂರದ ಹಾಗೂ ಗಡಿಯ ಪಟ್ಟಣಗಳೊಡನೆ ವೈರ್‌ಲೆಸ್ ಸಂಪರ್ಕವಿರಬೇಕು.

## ಕೊನೆಯ ಮಾತು

### ಸಾರಾಂಶ

(೧) ನಮ್ಮ ಹೊಸ ರಾಜ್ಯ ರಸ್ತೆಗಳ ಬೆಳವಣಿಗೆಗೆ ಪ್ರಪ್ರಥಮ ಪ್ರಾಧಾನ್ಯತೆಯನ್ನು ಕೊಡಬೇಕು. ಹಾಗು ಆ ಬೆಳವಣಿಗೆಯ ೩/೪ ಸೌಕರ್ಯವಾದರೂ ಬಯಲು ಸೀಮೆಗೆ ಆಗಬೇಕು. ರಾಜಧಾನಿ ಒಂದು ಮೂಲೆಯಲ್ಲಿರುವ ಅನಾನು ಕೂಲತೆಯನ್ನು ತೊಡೆದು ಹಾಕಲು ಇದೊಂದು ಒಳ್ಳೆಯ ಉಪಾಯ. ಹಾಗೆಯೇ

ನಾಡಿನ ಆರ್ಥಿಕ ಬೆನ್ನೆಲುಬು ಸಹ ರಸ್ತೆಗಳ ಬೆಳವಣಿಗೆಯೇ. ಮೈಸೂರು ಸಂಸ್ಥಾನದ ದ್ವಿತೀಯ ಯೋಜನೆಯಲ್ಲಿ ರಸ್ತೆಗಳ ಬೆಳವಣಿಗೆಯ ಬಗೆಗೆ ಮಹತ್ವಾಕಾಂಕ್ಷೆ ಪೂರ್ಣವಾದ ಉದ್ದಿಶ್ಯವಿಲ್ಲ. ಆದರೆ ಕರ್ನಾಟಕ ರಾಜ್ಯದಲ್ಲಿ ಮಾತ್ರ ಅದು ನಡೆಯದು. ಭಾರತ ಸರಕಾರವು ಹೇಗೆ ತನ್ನ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ೩೦% ರಷ್ಟು ಯೋಜನಾಧನವನ್ನು ಸಾರಿಗೆ ಸಂಪರ್ಕಕ್ಕೆ ಮೀಸಲಾಗಿರಿಸಿದೆಯೋ ಹಾಗೆಯೇ ಕರ್ನಾಟಕವು ತನ್ನ ಯೋಜನಾಧನದ ೩೦%ನ್ನು ಸಾರಿಗೆ-ಸಂಚಾರ-ಸಂಪರ್ಕಾದಿಗಳಿಗೆ ಮೀಸಲಿಟ್ಟು, ಅದರ ೪೦% ರಸ್ತೆಗಳಿಗೂ, ೪೦% ಕರಾವಳಿಯ ಅಭಿವೃದ್ಧಿಗೂ, ಮಿಕ್ಕ ೨೦% ಇತರ ವಿಷಯ ಗಳಿಗೂ ಬಳಸಬಹುದು. ಇಡೀ ಕರ್ನಾಟಕದ ಯೋಜನಾಧನ ಸಾಧಾರಣ ೧೬೦ ಕೋಟಿಯಷ್ಟಾಗಬೇಕು. ಅದರಲ್ಲಿಯ ಸಾಧಾರಣ ೫೦ ಕೋಟಿ ರೂಪಾಯಿ ಬರೀ ಸಾರಿಗೆ-ಸಂಪರ್ಕಗಳಿಗೆ, ಎಂದರೆ ೨೦ ಕೋಟಿ ರಸ್ತೆ ದಾರಿಗಳಿಗೆ, ೨೦ ಕೋಟಿ ಕರಾವಳಿಗೆ, ೧೦ ಕೋಟಿ ಮಿಕ್ಕ ಸಾಧನಗಳಿಗೆ. ಇದು ಅತಿ ಮಹತ್ವಾಕಾಂಕ್ಷೆಯೇನಲ್ಲ. ಇಷ್ಟಾದರೂ ಕೂಡಲೆ ಆಗದಿದ್ದರೆ, ಕರ್ನಾಟಕದ ರಥ ಕುಂಟುವುದರಲ್ಲಿ ಸಂದೇಹವಿಲ್ಲ.

(೨) ಸರಕಾರೀ ರಸ್ತೆ ಸಂಚಾರ ವ್ಯವಸ್ಥೆ ನಮ್ಮ ರಾಜ್ಯಕ್ಕೆ ಮತ್ತೊಂದು ದೊಡ್ಡ ಆರ್ಥಿಕ ಬಲ. ಅದರ ಬೆಳವಣಿಗೆ ರಾಜ್ಯವನ್ನೆಲ್ಲಾ ವ್ಯಾಪಿಸಬೇಕು. ಬೊಂಬಾಯಿ ಕರ್ನಾಟಕದ ಬಲಿಷ್ಟವಾದ ಈ ವ್ಯವಸ್ಥೆಯನ್ನು ಕರ್ಣಾಟಕ ಸರಕಾರ ಕೂಡಲೆ ಕೈವಶಪಡಿಸಿಕೊಳ್ಳಬೇಕು.

(೩) ಕರಾವಳಿ ಅಭಿವೃದ್ಧಿಗೂ ಮೇಲ್ಪಂಕ್ತಿಯ ಪ್ರಾಧಾನ್ಯವನ್ನು ಕೊಡಬೇಕು. ಭಾರತದ ದ್ವಿತೀಯ ಪಂಚವರ್ಷಿಯ ಯೋಜನೆಯಲ್ಲಿ ಮಂಗಳೂರಾಗಲಿ, ಮಲಪೆಯಾಗಲಿ ಅಭಿವೃದ್ಧಿಗೊಳ್ಳುವುದು ಖಂಡಿತ. ಆದರೆ ಕರ್ನಾಟಕದ ಬಹು ಭಾಗಕ್ಕೆ ಅವೆರಡೂ ದೂರವಾಗುವುದರಿಂದ ಅಲ್ಪವೆಚ್ಚದಲ್ಲಿಯೇ ಹಿರಿದಾಗಿ ಮಾಡಬಹುದಾದ ನೈಸರ್ಗಿಕ ಸೌಕರ್ಯವುಳ್ಳ ಕಾರವಾರನ್ನು ಪ್ರಾಂತೀಯ (ಇಂಟರ್‌ಮೀಡಿಯಟ್) ಬಂದರನ್ನಾಗಿಯಾದರೂ ಬೆಳೆಯಿಸ ಬೇಕು.

(೪) ರೈಲ್ದಾರಿಗಳಲ್ಲಿ ಕರಾವಳಿಗಭಿಮುಖವಾದುವೂ, ಕೆಲವು ಬ್ರಾಡ್ ಗೇಜಿಗೆ ಪರಿವರ್ತಿಸಬೇಕಾದುವೂ ಅಭಿವೃದ್ಧಿಗಾಗಿ ತಡೆದು ನಿಂತಿವೆ. ಅವಕ್ಕೆ ಮೊದಲು ಪ್ರಾಧಾನ್ಯ ಅವಶ್ಯ.

(೫) ವಿಮಾನ ದಾರಿಗಳಲ್ಲಿ ಒಂದು ರಾತ್ರಿ ಮೇಲ್ ವಿಮಾನ ಸಾರಿಗೆಯೂ, ಒಂದು ಅಥವಾ ಎರಡು ಫೀಡರ್ ಸರ್ವಿಸುಗಳೂ, ಮೂರು ಹೊಸ ನಿಲ್ದಾಣಗಳೂ ಅತ್ಯವಶ್ಯ. ಇವು ಹುಬ್ಬಳ್ಳಿ-ಗದುಗು, ಬಿಜಾಪುರ, ಹಾಗು ಗುಲ್ಬರ್ಗ.

(೬) ಮಿಕ್ಕ ಬೆಳವಣಿಗೆಗಳಲ್ಲಿ, ಹುಬ್ಬಳ್ಳಿ ಅಥವಾ ಬಳ್ಳಾರಿಯಂಥ ಮಧ್ಯವರ್ತಿ ಜಾಗದಲ್ಲಿ ಪಿ.ಎಂ.ಜಿ. ಹಾಗೂ ಆತನ ಜಿ.ಪಿ.ಓ. ಹಾಗು ಸಿ.ಟಿ.ಓ. ಅವಶ್ಯ.

(೭) ಗುಲ್ಬರ್ಗಕ್ಕೂ ಒಂದು ಪೈಲಟ್ ರೇಡಿಯೋ ಸ್ಟೇಶನ್ ಅವಶ್ಯ.

(೮) ಕರ್ನಾಟಕದ ಪ್ರವಾಸಿ ಪ್ರೇಕ್ಷಿತ ಆಕರ್ಷಣೆ ಹೆಚ್ಚಿಸಲು ಅವಶ್ಯಕವಾದ ಕ್ರಮಗಳನ್ನು ಕೈಗೊಳ್ಳಬೇಕು. ಅದಕ್ಕಾಗಿ ಒಂದು ಇಲಾಖೆ ಖಾತೆಯನ್ನೇ ಏರ್ಪಡಿಸಬೇಕು. ಮೈಸೂರ ಹೊರಗಿನ ಕರ್ನಾಟಕದಲ್ಲಿ ಯಾತ್ರಿಕರು ಹಾಗು ಪ್ರವಾಸಿಪ್ರೇಕ್ಷಕರು ಉಳಿದುಕೊಳ್ಳುವ ಅನುಕೂಲತೆ ತೀರ ಕೀಳಾಗಿವೆ. ಅವಶ್ಯವಿದ್ದ ಸ್ಥಳಗಳಲ್ಲೆಲ್ಲ "ಮೈಸೂರು ಮಟ್ಟದ ವಿಶ್ರಾಂತಿ ಮಂದಿರಗಳೂ, ಪ್ರವಾಸಿಮಂದಿರಗಳೂ ಆಗುವುದು ಅತ್ಯಗತ್ಯ. ಹುಬ್ಬಳ್ಳಿ, ಬಿಜಾಪುರಗಳಲ್ಲಿ ಬೃಂದಾವನದ 'ಹೊಟೇಲ್ ಕೃಷ್ಣರಾಜಸಾಗರ' ಮಟ್ಟದ ಒಂದಾದರೂ ಸರಕಾರಿ ವಿಶ್ರಾಂತಿ ಮಂದಿರ ಅತ್ಯವಶ್ಯ. ಅಲ್ಲದೆ ಬೆಳಗಾವಿ, ಹುಬ್ಬಳ್ಳಿ, ಬಿಜಾಪುರ, ಗುಲ್ಬರ್ಗ, ಹೊಸಪೇಟೆ, ದಾವಣಗೆರೆ, ಮಂಗಳೂರು, ಮೈಸೂರುಗಳಂತಹ ಸ್ಥಳಗಳಲ್ಲಿ 'ಪ್ರಪ್ರೇಕ್ಷಕ' ಇಲಾಖೆಯ ಶಾಖೆಗಳೂ, ಬಾದಾಮಿ, ಬಿದರೆ, ಗದುಗು, ಕಾರವಾರ, ಸಾಗರ, ಕಾರ್ಕಳ ಅಥವಾ ಶಿವಮುಗ್ಗಿ, ಬೇಲೂರು ಅಥವಾ ಹಾಸನಗಳಂತಹ ಸ್ಥಳಗಳಲ್ಲಿ ಪ್ರವಾಸೀಪ್ರೇಕ್ಷಕ ಇಲಾಖೆಯ ಉಪಶಾಖೆಗಳೂ ಉಂಟಾಗಬೇಕು.

## ತಾತ್ಪರ್ಯ

ಕನ್ನಡನಾಡು ಒಂದಾದುದು ಬರೀ ಕನ್ನಡಿಗರ ಆಂದೋಲನದಿಂದಲ್ಲ. ಸಮಗ್ರ ಭಾರತದಲ್ಲೇ ಆಗಿರುವ ಒಂದು ಪುನರುಜ್ಜೀವನದ ನವಪಲ್ಲಟ ಪರಿವರ್ತನಗಳ ಪರಿಣಾಮ ಅದು. ಆ ಪುನರುಜ್ಜೀವನದ ಕ್ರಮ ಹಾಗು ವಿಕಾಸಗಳಲ್ಲಿ ಭಾಷೆ ಅತ್ಯಂತ ಮಹತ್ತ್ವವಾದ ಪಾತ್ರ ವಹಿಸಿದೆ. ಅಂತೇ ರಾಷ್ಟ್ರದ ಮೇಲೆ ಭಾಷೆಗಳಿಗಿರುವ ಜನ್ಮಸಿದ್ಧ ಹಕ್ಕನ್ನು ಎಂಥೆಂಥಾ ವಿರೋಧಿ ಅತಿರಥಿ ಮಹಾರಥಿಗಳು ತಡೆಯದೆ ಹೋದರು. ಇದನ್ನೆಲ್ಲಾ ಬಗೆದು, ನವಕರ್ನಾಟಕ ಮಿಶ್ರಭಾಷೆಯ ರಾಜ್ಯ, ಭಾಷಾತೀತ ರಾಜ್ಯ ಎಂಬ ಸಲ್ಲದ ಸೋಗನ್ನು ಹಾಕದೆ, ಭಾರತದ ಮಿಕ್ಕೆಲ್ಲ ರಾಜ್ಯಗಳಂತೆ ನಮ್ಮದೂ ಒಂದು ಭಾಷಾರಾಜ್ಯ ಎಂತಲೇ ಅಭಿಮಾನದಿಂದ ಒಪ್ಪೋಣ. ಭಾಷೆ ಜನಜೀವನಕ್ಕೆಷ್ಟೋ ಅಷ್ಟೇ ಆಡಳಿತಕ್ಕೂ ಅತ್ಯಗತ್ಯ ಸಾಧನ. ಒಂದು ನಾಡಿಗೆ ಸಂಚಾರ-ಸಂಪರ್ಕ-ಸಾಧನಗಳು ಎಷ್ಟು ಅಗತ್ಯವೋ ಅದಕ್ಕೂ ಸಾವಿರಪಾಲು ಹೆಚ್ಚು ಅಗತ್ಯ ಭಾಷೆ. ಏಕಂದರೆ ಅದು ಸಾಮಾಜಿಕತೆಯ ಹಾಗು ವಿಚಾರಾದರ್ಶಗಳ ಸಂಚಾರ ಸಂಪರ್ಕಕ್ಕೆ ಅಸಮಾನವಾದ ಸಾಧನ. ಆದರೆ, ನಮ್ಮ ರಾಜ್ಯ ಭಾರತದ ಒಂದು ರಾಜಕೀಯ ಅಂಗ ಹಾಗೂ ಮಿಕ್ಕ ಭಾಷಾರಾಜ್ಯಗಳ ಸಹೋದರ, ಒಡನಾಡಿ ಎಂಬುದನ್ನು ಮರೆಯಲಾಗದು. ಮೇಲಾಗಿ ಸಂಯುಕ್ತ ಕರ್ನಾಟಕದ ಬೇಡಿಕೆ ಹೊರಹೊರಗೆ ಭಾಷಾತ್ಮಕವಾಗಿದ್ದರೂ, ನಿಜವಾಗಿ ಅದು ಆರ್ಥಿಕ ದೃಷ್ಟಿಯಲ್ಲಿ ಹಿಂದುಳಿದವರ ಕೂಗಾಗಿತ್ತು. ಆದುದರಿಂದ ಈಗ ಒಂದಾಗಿರುವ ಸಂಯುಕ್ತ ಕರ್ನಾಟಕ ಹಿಂದುಳಿದ ಪ್ರದೇಶಗಳದೇ ಒಂದು ಸಂಯುಕ್ತರಾಜ್ಯವೆಂತಲೂ, ಭಾಷೆ ಒಂದಾಗಿರುವುದು ಒಂದು ಹೆಚ್ಚಿನ ಅನುಕೂಲ್ಯ ಎಂತಲೂ ಭಾವಿಸಿಕೊಳ್ಳಬೇಕು.

ಆದುದರಿಂದ ಭಾಷೆ, ಸಾಹಿತ್ಯಗಳ, ಬೆಳವಣಿಗೆಗಿಂತಲೂ, ಹಿಂದುಳಿದ ಪ್ರದೇಶಗಳ ಆರ್ಥಿಕ ಬೆಳವಣಿಗೆಯೇ ಕರ್ನಾಟಕ ರಾಜ್ಯದ ಗುರಿ ಎಂದು ಬಗೆಯಬೇಕು. ಈ ವಿಷಯದಲ್ಲಿ, ಮೈಸೂರು ಸಂಸ್ಥಾನದಲ್ಲೂ ಬೆಂಗಳೂರು, ಮೈಸೂರುಗಳ ಪರಿಸರದಲ್ಲಿ ಮಾತ್ರ ಸಾಕಷ್ಟು ಬೆಳವಣಿಗೆಯಾಗಿದೆಯೇ ಹೊರತು, ಮಿಕ್ಕ ಹಲಭಾಗ ಸಾಕಷ್ಟು ಹಿಂದುಳಿದಿದೆ. ಇದನ್ನೆಲ್ಲಾ ಬಗೆದರೆ, ನಮ್ಮ ನಿಜ ಕರ್ನಾಟಕ, ಕೊಡಗು, ಕನ್ನಡ ಜಿಲ್ಲೆ, ಶಿವಮೊಗ್ಗ, ಚಿತ್ರದುರ್ಗ, ಬಿಜಾಪುರ, ಗುಲ್ಬರ್ಗಗಳ ಪ್ರದೇಶದಲ್ಲಿರುವುದಲ್ಲದೆ, ಬೆಂಗಳೂರು-ಮಂಗಳೂರು-ಮೈಸೂರು ನಗರಗಳಲ್ಲಿಲ್ಲ. ಇದನ್ನು ಮನದಟ್ಟಾಗುವಂತೆ ಅರಿತಾಗ ಮಾತ್ರ ನಾವು ನಮ್ಮ ನಾಡಿಗೆ ಸಮರ್ಪಕವಾದ ಸಂಚಾರ-ಸಂಪರ್ಕಗಳ ಸಾಧನೆಗಳನ್ನು ಸಂಯೋಜಿಸಿಕೊಳ್ಳಬಲ್ಲೆವು. ಕರ್ಣಾಟಕದ ಬಹುಭಾಗ ನಾಡಿನ ಪಶ್ಚಿಮ ಹಾಗು ಉತ್ತರ ನಿಟ್ಟಿನಲ್ಲಿರುವುದರಿಂದಲೂ, ಅದರಲ್ಲಿ ಕೆಲಭಾಗ ರಾಜಧಾನಿಯಿಂದ ಅತಿ ದೂರದಲ್ಲಿರುವುದರಿಂದಲೂ, ಬೆಂಗಳೂರು ಇನ್ನು ಮುಂದೆ ಉತ್ತರಾಭಿಮುಖವಾಗಬೇಕು. ಸಂಸಾರಿಯಾದವನಿಗೆ ಹೊರಗಿನ ದೊಡ್ಡಸ್ತಿಕೆ ಎಷ್ಟೇ ಇದ್ದರೂ, ತನ್ನ ಕುಟುಂಬದ ಹೊಣೆ ಹೇಗೆ ಆದ್ಯಕರ್ತವ್ಯವೋ ಹಾಗೇ ಬೆಂಗಳೂರು, ತನ್ನ ಅಂತರ್‌ಭಾರತೀಯ, ಅಂತರ್‌ರಾಷ್ಟ್ರೀಯ ಹಿರಿಮೆ ಎಷ್ಟೇ ಇದ್ದರೂ ಕರ್ಣಾಟಕದ ಆರ್ಥಿಕ ಅಂತರ್ವ್ಯವಸ್ಥೆ ಹೆಚ್ಚು ಕೀಳಾಗಿರುವಲ್ಲಿ, ತನ್ನ ಹೊಣೆ ಹೆಚ್ಚಿದೆಯೆಂದು ಬಗೆದುಕೊಳ್ಳಬೇಕು. ಹಾಗೆಯೇ ಉತ್ತರದ ಕನ್ನಡಿಗರು ತಮ್ಮ ಜೀವಾಳದ ಸೂತ್ರಗಳು ಬೆಂಗಳೂರಲ್ಲಿರುವುದನ್ನು ಬಗೆದು ದಕ್ಷಿಣಾಭಿಮುಖಿಗಳಾಗಿ ದಕ್ಷಿಣದ ಹಿರಿಮೆಯಲ್ಲಿ ಬೆರೆಯಲು ಮನಃಪೂರ್ವಕ ಯತ್ನಿಸಬೇಕು. ಈ ಪರಸ್ಪರತೆಗೆ ನಮ್ಮ ನಾಡಿನ ಸಾರಿಗೆ-ಸಂಚಾರ-ಸಂಪರ್ಕಗಳ ಸುವ್ಯವಸ್ಥಿತ ಸಂಯೋಜನೆ ಒಂದು ಹಿರಿದಾದ ಭೌತಿಕ ಸಾಧನ. ಈ ಸಾಧನ ಸುಸಂಘಟಿತವಾಗಬೇಕಾದರೆ ದಕ್ಷಿಣದ ಕನ್ನಡಿಗರೂ ಉತ್ತರದ ಕನ್ನಡಿಗರೂ ಪಶ್ಚಿಮಾಭಿಮುಖಿಗಳಾಗಿ ಕರಾವಳಿಯನ್ನು ಪೂರ್ತಿ ಅಭಿವೃದ್ಧಿಗೊಳಿಸಬೇಕು. ನಮ್ಮ ಕರಾವಳಿ ಚಿಕ್ಕದಾಗಿ, ಅತಿ ಸಂಪನ್ನವಾಗಿ ಇರುವುದರಿಂದ, ಅದರ ಮೇಲೆ ನಾವು ನಮ್ಮ ಆರ್ಥಿಕ ಶಕ್ತಿಗಳನ್ನು ಚೆನ್ನಾಗಿ ಕ್ರೋಢೀಕರಿಸಿ ಅದನ್ನು ಅಭಿವೃದ್ಧಿಗೊಳಿಸುವುದು ಸುಲಭಸಾಧ್ಯ.

ಕೊನೆಯದಾಗಿ ಕನ್ನಡಿಗರು ಆತ್ಮಾಭಿಮುಖಿಗಳೂ ಆಗಬೇಕು. ಆ ಆತ್ಮವಿರುವುದು ಹಂಪೆಯಲ್ಲಿ; ಹಾಳಾದ ವಿಜಯನಗರದಲ್ಲಿ. ಅದು ಮತ್ತೆ ಪುನರುಜ್ಜೀವಿತವಾಗಬೇಕು. ಅದೇ ನಮ್ಮನ್ನು ತಾಳಿಬಾಳಿಸುವ ಭುವನೇಶ್ವರೀ ಶಕ್ತಿ; ನಮ್ಮ ಸಾಂಸ್ಕೃತಿಕ ಹಿರಿಮೆಯ ಹೃದಯ. ಆದರೆ ಇದು ಕೇವಲ ಭಾವನೆಯ ಮಾತಲ್ಲ. ಹಂಪೆಯು ಬಿದರೆ ಅಥವಾ ಕೊಡಗಿನ ಒಂದು ಮೂಲೆಯಲ್ಲಿದ್ದಿದ್ದರೆ, ನಾವದನ್ನು ಇಷ್ಟು ಮಹತ್ವ ಕೊಟ್ಟು ಪುನರುಜ್ಜೀವನಬೇಕೆಂದು ತಾನೇ ಹೇಳುತ್ತಿರಲಿಲ್ಲ. ಆದರೆ ಸಮಗ್ರ ಕರ್ನಾಟಕದ ಸಾರಿಗೆ-ಸಂಚಾರ-ಸಂಪರ್ಕದ ಸಮಸ್ಯೆಯನ್ನು ಸೂಕ್ಷ್ಮವಾಗಿ ಅಭ್ಯಸಿಸುತ್ತಿರುವಾಗ ಹಂಪೆ (ಹೊಸಪೇಟೆ) ಹೇಗೆ ನಮ್ಮ ಹೆದ್ದಾರಿಗಳ ಕೇಂದ್ರವಾಗಬಲ್ಲುದೆಂಬುದೂ, ಹೇಗೆ ಅದು ಭೂಗೋಲಿಕವಾಗಿಯೂ ನಮ್ಮ ಹೊಸರಾಜ್ಯದ ಹೃದಯವಾಗಬಲ್ಲುದೆಂಬುದೂ ನನ್ನ ನಿದರ್ಶನಕ್ಕೆ

ಬಂದಿದೆ. ಅಲ್ಲದೆ ಸೊಂಡೂರು-ಹೊಸಪೇಟೆಗಳ ಬಳಿ ಒಂದು ಹಿರಿ ಔದ್ಯೋಗಿಕ ಕೇಂದ್ರವು ಸಂಭಾವ್ಯವಾಗಿರುವುದರಿಂದ ನಮ್ಮ ನಾಡಿನ ಸಾಂಸ್ಕೃತಿಕ-ಭೂಗೋಳಿಕ-ಔದ್ಯೋಗಿಕ ಹೃದಯ ಹಂಪೆಯ ಪರಿಸರವೇ ಏಕಾಗಬಾರದೆಂದು ಈ ಮೂಲಕ ಕನ್ನಡಿಗರಲ್ಲೆಲ್ಲ ಕೇಳಿಕೊಳ್ಳುತ್ತೇನೆ. ಇದೊಂದು ಅಪರೂಪದ ಸುಯೋಗವಲ್ಲವೇ ? ಇದರಿಂದ ಹೊಸ ಮೈಸೂರು ರಾಜ್ಯದ ಚತುರ್ಮುಖ ಅಭಿವೃದ್ಧಿ ಪೂರ್ತಿಯಾಗುವುದಲ್ಲವೇ ?

---

# ಭಾಗ ೨

## — ಅಂಕಿಗಳ ಸಂಗ್ರಹ —

ಈ ವಿವರಗಳನ್ನು ಮೈಸೂರು ಸರ್ಕಾರದ ಅಂಕಿ ಸಂಗ್ರಹ ಇಲಾಖೆಯ ಅಧಿಕಾರ ವರ್ಗದವರು ಸಂಗ್ರಹಿಸಿಕೊಟ್ಟಿದ್ದಾರೆ.

# ಮೈಸೂರು ರಾಜ್ಯ

## ೧. ಸ್ಥೂಲ ಅಂಕಿ ವಿವರ

| | | |
|---|---|---|
| **ಜನಸಂಖ್ಯೆ** | .... | 19,401,477 (1951-ಜನಗಣತಿ) |
| ಭಾಷಾವಾರು ಜನಸಂಖ್ಯೆ :— | | |
| ಕನ್ನಡ | .... | 62·2 % |
| ತೆಲುಗು | .... | 11·3 % |
| ತಮಿಳು | .... | 3·5 % |
| ಮರಾಠಿ | .... | 6·2 % |
| ತುಳು | .... | 3·5 % |
| ಹಿಂದೂಸ್ಥಾನಿ | .... | 8·6 % |
| ಇತರೆ | .... | 4·7 % |
| ಔದ್ಯೋಗಿಕ ರೀತಿ ಜನಸಂಖ್ಯೆ :— | | |
| ಸ್ವಂತ ಬೇಸಾಯಗಾರರು | .... | 47·6 % |
| ಗೇಣಿದಾರರು | .... | 9·3 % |
| ಬೇಸಾಯ ಕೂಲಿಗಾರರು | .... | 10·9 % |
| ಸ್ವತಃ ಬೇಸಾಯಮಾಡದ ಮಾಲೀಕರು | .... | 3·4 % |
| ಬೇಸಾಯದಲ್ಲಿ ತೊಡಗಿರುವ ಒಟ್ಟು ಜನಸಂಖ್ಯೆ. | | 71·2 % |
| ಉತ್ಪತ್ತಿ (ಬೇಸಾಯೇತರ) | .... | 10·2 % |
| ವಾಣಿಜ್ಯ | .... | 5·5 % |
| ಸಾಗಾಣಿಕೆ | .... | 1·2 % |
| ಇತರ ಉದ್ಯೋಗಗಳು | .... | 11·9 % |
| ಬೇಸಾಯೇತರ ಒಟ್ಟು ಜನಸಂಖ್ಯೆ | .... | 28·8 % |
| **ವಿಸ್ತೀರ್ಣ** (ಚದರ ಮೈಲಿಗಳಲ್ಲಿ) | .... | 74,286 |
| ಚದರ ಮೈಲಿಯೊಂದಕ್ಕೆ ಜನಸಾಂದ್ರತೆ | .... | 261 |
| ಹಳ್ಳಿಗಳು | .... | 25,897 |
| ಪಟ್ಟಣಗಳು | .... | 289 |
| ಗ್ರಾಮವಾಸಿಗಳು | .... | 14,945,492 |
| ಪಟ್ಟಣವಾಸಿಗಳು | .... | 4,455,985 |
| ಗಂಡಸರು | .... | 9,866,791 |
| ಹೆಂಗಸರು | .... | 9,534,686 |
| ಒಟ್ಟು ಜನಸಂಖ್ಯೆಗೆ ಗ್ರಾಮವಾಸಿಗಳ ಶೇಕಡಾವಾರು. | | 77 % |
| ಒಟ್ಟು ಜನಸಂಖ್ಯೆಗೆ ಪಟ್ಟಣವಾಸಿಗಳ ಶೇಕಡಾವಾರು. | | 23 % |

## ವ್ಯವಸಾಯ

| | | |
|---|---|---|
| ಫಸಲು ಬೆಳೆದ ಜಮೀನು (ಎಕರೆಗಳಲ್ಲಿ) | .... | 24,162,176 |
| ತಲೆಯೊಂದಕ್ಕೆ ಸಾಗುವಳಿ (ಎಕರೆಗಳಲ್ಲಿ) ಜಮೀನು | .... | 1·36 |
| ಒಟ್ಟು ನೀರಾವರಿ ಪ್ರದೇಶ (ಎಕರೆಗಳಲ್ಲಿ) | .... | 15,51,323 |
| (1) ಕಾಲುವೆಗಳಿಂದ | .... | 3,63,205 |
| (2) ಕೆರೆಗಳಿಂದ | .... | 7,54,529 |
| (3) ಬಾವಿಗಳಿಂದ | .... | 2,89,246 |
| (4) ಇತರ ವಿಧಾನಗಳಿಂದ | .... | 1,44,343 |

## ವಿದ್ಯಾಭ್ಯಾಸ

| | | ಶಾಲೆಗಳು | ಉಪಾಧ್ಯಾಯರುಗಳು | ವಿದ್ಯಾರ್ಥಿಗಳು |
|---|---|---|---|---|
| ಪ್ರೌಢ | .... | 484 | 7,172 | 167,619 |
| ಮಾಧ್ಯಮಿಕ | .... | 1,709 | 11,084 | 297,061 |
| ಪ್ರಾಥಮಿಕ | .... | 19,864 | 43,924 | 1,472,865 |
| ಮೂಲಶಿಕ್ಷಣ | .... | 441 | 1,669 | 40,539 |

ಪ್ರತಿ ಶಾಲೆಯಿಂದ ಪ್ರಯೋಜನ ಪಡೆಯುವ ಸರಾಸರಿ ವಿಸ್ತೀರ್ಣ (ಚದರಮೈಲಿಗಳಲ್ಲಿ) 3·3

ಪ್ರತಿ ಶಾಲೆಯಿಂದ ಪ್ರಯೋಜನ ಪಡೆಯುವ ಸರಾಸರಿ ಜನಸಂಖ್ಯೆ .... 920

## ಸಹಕಾರ

ಸಹಕಾರ ಸಂಘಗಳ ಸಂಖ್ಯೆ ... 12,710

ಪ್ರತಿ ಸಹಕಾರ ಸಂಘದಿಂದ ಪ್ರಯೋಜನ ಪಡೆಯುವ ಸರಾಸರಿ ಜನಸಂಖ್ಯೆ. ... 1,628

## ವಿದ್ಯುಚ್ಛಕ್ತಿ

ವಿದ್ಯುಚ್ಛಕ್ತಿಯನ್ನೊದಗಿಸಲಾದ ಗ್ರಾಮಗಳು ಮತ್ತು ಪಟ್ಟಣಗಳ ಸಂಖ್ಯೆ ... 1,184

---

## ೨. ಮೈಸೂರು ವಿಧಾನ ಸಭೆ

— ಸದಸ್ಯರು —

| ಹೆಸರು | ಚುನಾವಣೆ ಕ್ಷೇತ್ರ |
|---|---|
| **ಬೆಂಗಳೂರು ಜಿಲ್ಲೆ** | |
| ಶ್ರೀಯುತರಾದ— | |
| ಆರ್. ಅನಂತರಾಮನ್, ಬಿ.ಎಸ್‌ಸಿ., ಎಲ್‌ಎಲ್.ಬಿ. .... | ಚಾಮರಾಜಪೇಟೆ. |
| ಕೆ. ವಿ. ಬೈರೇಗೌಡ .... | ಬೆಂಗಳೂರು-ಉತ್ತರ |
| ಡಿ. ಎಂ. ಗೋವಿಂದರಾಜ್ .... | ನೆಲಮಂಗಲ |
| ಕೆ. ಹನುಮಂತಯ್ಯ, ಬಿ.ಎ., ಎಲ್‌ಎಲ್.ಬಿ. | ರಾಮನಗರ |
| ಎಸ್. ಕರಿಯಪ್ಪ .... | ವಿರೂಪಾಕ್ಷಪುರ |
| ಬಿ. ಟಿ. ಕೆಂಪರಾಜ್, ಬಿ.ಎ., ಬಿ.ಎಲ್. .... | ಬೆಂಗಳೂರು-ದಕ್ಷಿಣ (ನಿಮ್ನವರ್ಗ) |
| ಶ್ರೀಮತಿ ಲಕ್ಷ್ಮಿದೇವಿ ರಾಮಣ್ಣ, ಬಿ.ಎಸ್‌ಸಿ. | ಹೊಸಕೋಟೆ-ಆನೇಕಲ್. |
| ವಿ. ಎಂ. ಮ್ಯಾಸ್ಕರ್‌ನ್ಹಾಸ್, ಬಿ.ಎ. .... | ಸೆಂಟ್‌ಜಾನ್ಸ್‌ಹಿಲ್ |
| ಆರ್. ಮುನಿಸ್ವಾಮಯ್ಯ, ಬಿ.ಎ. .... | ಬೆಂಗಳೂರು-ಉತ್ತರ (ನಿಮ್ನ-ವರ್ಗ) |
| ವಿ. ಆರ್. ನಾಯ್ಡು .... | ಮಲ್ಲೇಶ್ವರಂ |
| ಎ. ವಿ. ನರಸಿಂಹರೆಡ್ಡಿ, ಬಿ.ಎ. .... | ಬೆಂಗಳೂರು-ದಕ್ಷಿಣ |
| ಎಂ. ಪಳನಿಯಪ್ಪನ್, ಬಿ.ಎ. .... | ಅಲಸೂರು |
| ಕೆ. ಪ್ರಭಾಕರ್, ಬಿ.ಎ. .... | ನೆಲಮಂಗಲ-(ನಿಮ್ನವರ್ಗ) |
| ಎಚ್. ಟಿ. ಪುಟ್ಟಪ್ಪ .... | ಹೊಸಕೋಟೆ-ಆನೇಕಲ್ (ನಿಮ್ನವರ್ಗ) |
| ಪಿ. ಆರ್. ರಾಮಯ್ಯ, ಬಿ.ಎಸ್‌ಸಿ. .... | ಬಸವನಗುಡಿ |
| ಬಿ. ಎಂ. ಸೀನಪ್ಪ .... | ಕಬ್ಬನ್‌ಪೇಟೆ |
| ಟಿ. ಸಿದ್ದಲಿಂಗಯ್ಯ, ಬಿ.ಎ., ಬಿ.ಎಲ್. .... | ದೊಡ್ಡಬಳ್ಳಾಪುರ |
| ಎಸ್. ಸಿದ್ದಪ್ಪ .... | ಮಾಗಡಿ |
| ಕೆ. ಜಿ. ತಿಮ್ಮೆಗೌಡ, ಬಿ.ಎಸ್‌ಸಿ., ಬಿ.ಎಲ್. .... | ಕನಕಪುರ |
| ವಿ. ವೆಂಕಟಪ್ಪ .... | ಚನ್ನಪಟ್ಟಣ |
| ಡಿ. ವೆಂಕಟೇಶ್ .... | ಗಾಂಧೀನಗರ |

| ಹೆಸರು | | ಚುನಾವಣೆಕ್ಷೇತ್ರ |
|---|---|---|

## ಚಿಕ್ಕಮಗಳೂರು ಜಿಲ್ಲೆ

ಶ್ರೀಯುತರಾದ—

| | | |
|---|---|---|
| ವೈ. ಎಂ. ಚಂದ್ರಶೇಖರಯ್ಯ | .... | ಕಡೂರು |
| ಜಿ. ಪುಟ್ಟಸ್ವಾಮಿ | .... | ಚಿಕ್ಕಮಗಳೂರು-ಮೂಡಿಗೆರೆ (ನಿಮ್ನವರ್ಗ) |
| ಶ್ರೀಮತಿ ಬಿ. ಎಲ್. ಸುಬ್ಬಮ್ಮ | .... | ಚಿಕ್ಕಮಗಳೂರು-ಮೂಡಿಗೆರೆ |

## ಚಿತ್ರದುರ್ಗ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಜಿ. ಬಸವಪ್ಪ, ಬಿ.ಎ. | .... | ಹೊಸದುರ್ಗ |
| ಎ. ಭೀಮಪ್ಪನಾಯಕ್, ಬಿ.ಎ. | .... | ಮೊಳಕಾಲ್ಮೂರು |
| ಜಿ. ದುಗ್ಗಪ್ಪ, ಬಿ.ಎಸ್‌ಸಿ., ಎಲ್‌ಎಲ್.ಬಿ. | | ಹೊಳಲ್ಕೆರೆ-(ನಿಮ್ನವರ್ಗ) |
| ಟಿ. ಹನುಮಯ್ಯ | .... | ಹಿರಿಯೂರು (ನಿಮ್ನವರ್ಗ) |
| ಜೆ. ಮಹಮ್ಮದ್ ಇಮಾಂ. ಬಿ.ಎ., ಬಿ.ಎಲ್. | | ಜಗಳೂರು |
| ವಿ. ಮಸಿಯಪ್ಪ, ಬಿ.ಎ., ಎಲ್‌ಎಲ್.ಬಿ. | .... | ಹಿರಿಯೂರು |
| ಮುಲ್ಕಾ ಗೋವಿಂದರೆಡ್ಡಿ, ಬಿ.ಎ., ಎಲ್‌ಎಲ್.ಬಿ. | | ಚಿತ್ರದುರ್ಗ |
| ಜಿ. ಶಿವಪ್ಪ, ಬಿ.ಎ., ಎಲ್‌ಎಲ್.ಬಿ. | .... | ಹೊಳಲ್ಕೆರೆ |
| ಎಚ್. ಸಿದ್ದವೀರಪ್ಪ, ಬಿ.ಎ., ಎಲ್‌ಎಲ್.ಬಿ. | | ಹರಿಹರ |
| ಶ್ರೀಮತಿ ಬಳ್ಳಾರಿ ಸಿದ್ದಮ್ಮ | .... | ದಾವಣಗೆರೆ |

## ಹಾಸನ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಬಿ. ಎನ್. ಬೋರಣ್ಣಗೌಡ | .... | ಬೇಲೂರು |
| ಬಿ. ಚಿಕ್ಕಣ್ಣ | .... | ಜಾವಗಲ್ |
| ಡಿ. ಆರ್. ಕರಿಗೌಡ | .... | ಹಾಸನ |
| ಕೆ. ಲಕ್ಕಪ್ಪ, ಬಿ.ಎ., ಎಲ್‌ಎಲ್.ಬಿ. | .... | ಚನ್ನರಾಯಪಟ್ಟಣ |
| ಕೆ. ಪಂಚಾಕ್ಷರಯ್ಯ | .... | ಅರಸೀಕೆರೆ |
| ಎ. ಜಿ. ರಾಮಚಂದ್ರರಾವ್, ಬಿ.ಎ. ಎಲ್‌ಎಲ್.ಬಿ. | .... | ಹೊಳೇನರಸಿಪುರ |
| ಎಚ್. ಕೆ. ಸಿದ್ದಯ್ಯ | .... | ಬೇಲೂರು (ನಿಮ್ನವರ್ಗ) |
| ಜಿ. ಎ. ತಿಮ್ಮಪ್ಪಗೌಡ, ಬಿ.ಎ (ಆನರ್ಸ್), ಎಲ್‌ಎಲ್.ಬಿ. | .... | ಅರಕಲಗೂಡು |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|

## ಕೋಲಾರ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಎಂ. ಸಿ. ಆಂಜನೇಯರೆಡ್ಡಿ | .... | ಚಿಂತಾಮಣಿ |
| ಟಿ. ಚನ್ನಯ್ಯ, ಬಿ.ಎಸ್‌ಸಿ. | .... | ಮುಳಬಾಗಲು-ಶ್ರೀನಿವಾಸ ಪುರ (ನಿಮ್ನ ವರ್ಗ) |
| ಆರ್. ಕೆ. ಪ್ರಸಾದ್, ಬಿ.ಕಾಂ. | .... | ಬಂಗಾರಪೇಟೆ |
| ಎಚ್. ಸಿ. ಲಿಂಗಾರೆಡ್ಡಿ, ಬಿ.ಎ., ಬಿ.ಎಲ್. | .... | ಮಾಲೂರು |
| ಎ. ಮುನಿಯಪ್ಪ | .... | ಶಿಡ್ಲಘಟ್ಟ-ಚಿಕ್ಕಬಳ್ಳಾಪುರ (ನಿಮ್ನ ವರ್ಗ) |
| ಎನ್. ಸಿ. ನಾಗಯ್ಯರೆಡ್ಡಿ, ಬಿ.ಎ., ಬಿ.ಎಲ್. | | ಗೌರೀಬಿದನೂರು |
| ಜಿ. ನಾರಾಯಣಗೌಡ, ಬಿ.ಎ. | .... | ಮುಳಬಾಗಲು-ಶ್ರೀನಿವಾಸ ಪುರ |
| ಜೆ. ನಾರಾಯಣಪ್ಪ | .... | ಚಿಂತಾಮಣಿ (ನಿಮ್ನ ವರ್ಗ) |
| ಬಿ. ವಿ. ನಾರಾಯಣರೆಡ್ಡಿ | .... | ಬಾಗೆಪಲ್ಲಿ-ಗುಡಿಬಂಡೆ |
| ಜಿ. ಪಾಪಣ್ಣ | .... | ಸಿಡ್ಲಘಟ್ಟ-ಚಿಕ್ಕಬಳ್ಳಾಪುರ |
| ಕೆ. ಪಟ್ಟಾಭಿರಾಮನ್, ಬಿ.ಎ., ಬಿ.ಎಲ್. | .... | ಕೋಲಾರ |
| ಪಿ. ಎಂ. ಸ್ವಾಮಿದುರೈ | .... | ಕೋಲಾರದ ಚಿನ್ನದ ಗಣಿ (ನಿಮ್ನವರ್ಗ) |
| ಕೆ. ಎಸ್. ವಾಸನ್ | .... | ಕೋಲಾರದ ಚಿನ್ನದ ಗಣಿ |

## ಮಂಡ್ಯ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಜಿ. ಎಸ್. ಬೊಮ್ಮೇಗೌಡ | .... | ಮಂಡ್ಯ |
| ಎಂ. ಚಿಕ್ಕಲಿಂಗಯ್ಯ, ಬಿ.ಎ. | .... | ಮಳವಳ್ಳಿ (ನಿಮ್ನವರ್ಗ) |
| ಎಸ್. ಎಂ. ಲಿಂಗಪ್ಪ, ಬಿ.ಎ., ಎಲ್‌ಎಲ್.ಬಿ. | .... | ಕೃಷ್ಣರಾಜಪೇಟೆ |
| ಬಿ. ಪಿ. ನಾಗರಾಜಮೂರ್ತಿ, ಬಿ.ಎ., ಎಲ್‌ಎಲ್.ಬಿ. | .... | ಮಳವಳ್ಳಿ |
| ಬಿ. ವೈ. ನೀಲೇಗೌಡ, ಬಿ.ಎ., ಎಲ್‌ಎಲ್.ಬಿ. | .... | ಪಾಂಡವಪುರ |
| ಕೆ. ಪುಟ್ಟಸ್ವಾಮಿ, ಬಿ.ಎ. (ಆನರ್ಸ್), ಎಲ್‌ಎಲ್.ಬಿ. | .... | ಶ್ರೀರಂಗಪಟ್ಟಣ |
| ಕೆ. ಸಿಂಗಾರಿಗೌಡ, ಬಿ.ಎ., ಎಲ್‌ಎಲ್.ಬಿ. | .... | ನಾಗಮಂಗಲ |
| ಎಚ್. ಕೆ. ವೀರಣ್ಣಗೌಡ | .... | ಮದ್ದೂರು |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|

## ಮೈಸೂರು ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಎಚ್. ಎಂ. ಚನ್ನಬಸಪ್ಪ, ಬಿ.ಎಸ್‌ಸಿ. | .... | ಪೆರಿಯಾಪಟ್ಟಣ |
| ಡಿ. ದೇವರಾಜ ಅರ್ಸ್, ಬಿ.ಎ. | .... | ಹುಣಸೂರು |
| ಎಂ. ಲಿಂಗಣ್ಣ, ಬಿ.ಎಸ್‌ಸಿ., ಎಲ್‌ಎಲ್.ಬಿ. | .... | ನಂಜನಗೂಡು |
| ಯು. ಎಂ. ಮಾದಪ್ಪ, ಬಿ.ಎ. | .... | ಚಾಮರಾಜನಗರ |
| ಎಂ. ಮಾದಯ್ಯ | .... | ನಂಜನಗೂಡು (ನಿಮ್ನವರ್ಗ) |
| ಟಿ. ಮರಿಯಪ್ಪ, ಬಿ.ಎ., ಎಲ್‌ಎಲ್.ಬಿ. | .... | ಮೈಸೂರುನಗರ—ಉತ್ತರ |
| ಬಿ. ನಾರಾಯಣಸ್ವಾಮಿ, ಬಿ.ಎ., ಬಿ.ಎಲ್. | .... | ಮೈಸೂರು ನಗರ—ದಕ್ಷಿಣ |
| ಬಿ. ರಾಚಯ್ಯ, ಬಿ.ಎಸ್‌ಸಿ., ಬಿ.ಎಲ್. | .... | ಯಳಂದೂರು (ನಿಮ್ನವರ್ಗ) |
| ಎಂ. ರಾಜಶೇಖರ ಮೂರ್ತಿ, ಬಿ.ಎ., ಬಿ.ಕಾಂ., ಎಲ್‌ಎಲ್.ಬಿ. | .... | ಯಳಂದೂರು |
| ಶಿವನಂಜೇಗೌಡ | .... | ಮೈಸೂರು ತಾಲ್ಲೂಕು |
| ಸಿದ್ದಯ್ಯ ಅಲಿಯಾಸ್ ಕುನ್ನಯ್ಯ | .... | ಗುಂಡ್ಲುಪೇಟೆ—ಹೆಗ್ಗಡ ದೇವನಕೋಟೆ (ನಿಮ್ನವರ್ಗ) |
| ಎಚ್. ಕೆ. ಶಿವರುದ್ರಪ್ಪ | .... | ಗುಂಡ್ಲುಪೇಟೆ—ಹೆಗ್ಗಡ ದೇವನಕೋಟೆ. |
| ಎಸ್. ಶ್ರೀನಿವಾಸ ಅಯ್ಯಂಗಾರ್, ಬಿ.ಇ. | .... | ಟಿ.ನರಸೀಪುರ |
| ಎಸ್. ಹೆಚ್. ತಮ್ಮಯ್ಯ ಅಲಿಯಾಸ್ ಹನುಮಂತೇಗೌಡರ ತಮ್ಮಯ್ಯ | .... | ಕೃಷ್ಣರಾಜನಗರ |

## ಶಿವಮೊಗ್ಗ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಗಂಗಾನಾಯಕ್ | .... | ಸೊರಬ-ಶಿಕಾರಿಪುರ (ನಿಮ್ನವರ್ಗ). |
| ಎಸ್. ಗೋಪಾಲಗೌಡ | .... | ಸಾಗರ-ಹೊಸನಗರ |
| ಕಡಿದಾಳ್ ಮಂಜಪ್ಪ, ಬಿ.ಎ., ಎಲ್‌ಎಲ್.ಬಿ. | .... | ತೀರ್ಥಹಳ್ಳಿ-ಕೊಪ್ಪ |
| ಬಿ. ಮಾಧವಾಚಾರ್ | .... | ಭದ್ರಾವತಿ |
| ಎಸ್. ಆರ್. ನಾಗಪ್ಪ ಶೆಟ್ಟಿ | .... | ಶಿವಮೊಗ್ಗ |
| ವೈ. ಮಲ್ಲಿಕಾರ್ಜುನಪ್ಪಗೌಡ | .... | ಸೊರಬ-ಶಿಕಾರಿಪುರ |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|
| ಶ್ರೀಯುತರಾದ— | | |
| ಹೆಚ್. ಎಸ್. ರುದ್ರಪ್ಪ, ಬಿ.ಎಸ್‌ಸಿ. ಎಲ್‌ಎಲ್.ಬಿ. | .... | ಹೊನ್ನಾಳಿ |
| ಎಲ್. ಸಿದ್ದಪ್ಪ, ಬಿ.ಎ., ಎಲ್‌ಎಲ್.ಬಿ. | .... | ಚನ್ನಗಿರಿ |
| ಟಿ. ಸಿ. ಶಾಂತಪ್ಪ | .... | ತರೀಕೆರೆ |

## ತುಮಕೂರು ಜಿಲ್ಲೆ

| | | |
|---|---|---|
| ಶ್ರೀಯುತರಾದ— | | |
| ಸಿ. ಎಂ. ಅಣ್ಣಯ್ಯಪ್ಪ | .... | ಗುಬ್ಬಿ |
| ಆರ್. ಚೆನ್ನಿಗರಾಮಯ್ಯ | .... | ಕೊರಟಗೆರೆ-ಮಧುಗಿರಿ (ನಿಮ್ನವರ್ಗ). |
| ಸಿ. ಟಿ. ಹನುಮಂತಯ್ಯ | .... | ಪಾವಗಡ (ನಿಮ್ನವರ್ಗ) |
| ಬಿ. ಹುಚ್ಚೇಗೌಡ | .... | ತುರುವೇಕೆರೆ |
| ಎನ್. ಹುಚ್ಚಮಾಸ್ತಿಗೌಡ, ಬಿ.ಎ. | .... | ಹುಲಿಯೂರುದುರ್ಗ |
| ಸಿ. ಎಚ್. ಲಿಂಗದೇವರು | .... | ಚಿಕ್ಕನಾಯ್ಕನಹಳ್ಳಿ |
| ಮಾಲಿ ಮರಿಯಪ್ಪ, ಬಿ.ಎ., ಬಿ.ಎಲ್. | .... | ಪಾವಗಡ |
| ಮುದ್ದುರಾಮಯ್ಯ | .... | ಕೊರಟಗೆರೆ-ಮಧುಗಿರಿ |
| ಟಿ. ಎನ್. ಮೂಡ್ಲಗಿರಿಗೌಡ | .... | ಕುಣಿಗಲು |
| ಬಿ. ಸಿ. ನಂಜುಂಡಯ್ಯ | .... | ಕೊರಟಗೆರೆ |
| ಎಂ. ವಿ. ರಾಮರಾವ್, ಬಿ.ಎ., ಎಲ್‌ಎಲ್.ಬಿ. | .... | ತುಮಕೂರು |
| ಬಿ. ಎನ್. ರಾಮೇಗೌಡ | .... | ಸಿರಾ |
| ಟಿ. ಜಿ. ತಿಮ್ಮೇಗೌಡ | .... | ತಿಪಟೂರು |
| ಸಿಡ್ನಿ ಎ. ಥಾಮಸ್ | .... | (ನಾಮಕರಣ ಸದಸ್ಯರು) |

## ಬಳ್ಳಾರಿ ಜಿಲ್ಲೆ

| | | |
|---|---|---|
| ಶ್ರೀಯುತರಾದ— | | |
| ಸಿರಸಪ್ಪ ಇಜಾರಿ | .... | ಹರಪನಹಳ್ಳಿ |
| ಎಸ್. ಪರಮೇಶ್ವರಪ್ಪ | .... | ಸಿರುಗುಪ್ಪ |
| ಕೆ. ಕೋಟ್ರ ಬಸವನಗೌಡ | .... | ಕುಡ್ಲಿಗಿ |
| ಎಸ್. ಸಣ್ಣಬಸವಣ್ಣಗೌಡ | .... | ಬಳ್ಳಾರಿ |
| ಡಾ|| ಆರ್. ನಾಗನಗೌಡ, ಎಂ.ಎಸ್‌ಸಿ., ಪಿಎಚ್.ಡಿ. (ಯು.ಎಸ್.ಎ.) | .... | ಹೊಸಪೇಟೆ |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|

## ಬೆಳಗಾಂ ಜಿಲ್ಲೆ

| | | |
|---|---|---|
| ಶ್ರೀಮತಿ ರಾಧಾಬಾಯಿ ಮಾರುತಿ, ಶ್ರೀಯೇಕರ್ | | ಚಿಕ್ಕೋಡಿ |
| ಶ್ರೀಯುತರಾದ— | | |
| ಬಸಪ್ಪ ಸಿದ್ದಲಿಂಗಪ್ಪ, ಅರಗಾವಿ | .... | ಖಾನಾಪುರ |
| ಹೋಳಿಬಸಪ್ಪ ಶಿವಲಿಂಗಪ್ಪ, ಮೇಟಗುಡ್ಡ | .... | ಬೈಲಹೊಂಗಲ |
| ನರಸಗೌಡ ಎಲ್ಲಗೌಡ, ಪಾಟೀಲ್ | .... | ಅಥಣಿ |
| ಪದ್ಮಪ್ಪ ಹಿರಿಯಪ್ಪ, ಗುಂಜಾಲ | .... | ಅಥಣಿ-ಚಿಕ್ಕೋಡಿ |
| ವಸಂತರಾವ್ ಲಕ್ಕಗೌಡ, ಪಾಟೀಲ್ | .... | ಚಿಕ್ಕೋಡಿ-ರಾಯ್‌ಬಾಗ್ |
| ಶಂಕರ ದಡೋಬ, ಕೊಥಾವಳೆ | .... | ಚಿಕ್ಕೋಡಿ |
| ಅಪ್ಪಣ್ಣ ರಾಮಪ್ಪ, ಪಂಚಗವಿ | .... | ಗೋಕಾಕ್ |
| ಖಾದರ್‌ಸಾಬ್ ಅಬ್ದುಲ್‌ಸಾಬ್, ಷೇಕ್ | .... | ಕೊಣ್ಣೂರು |
| ಹೇಮಪ್ಪ ವೀರಭದ್ರಪ್ಪ, ಕೌಜಲಗಿ | .... | ಪರಸಗಡ |
| ಭುಜಂಗ್ ಕೇಶವ್, ದಾಳ್ವಿ | .... | ಬೆಳಗಾಂ (ನಗರ) |
| ನಾಗೇಂದ್ರ ಓಮಣ್ಣ, ಸಮಾಜಿ | .... | ಬೆಳಗಾಂ (ಗ್ರಾಮಪ್ರದೇಶ) |
| ಮಾಲಗೌಡ ಪುನಗೌಡ, ಪಾಟೀಲ್ | .... | ಹುಕ್ಕೇರಿ |
| ಹನುಮಂತ ಯೆಲ್ಲಪ್ಪ, ಮುಂಬರಡ್ಡಿ | .... | ರಾಮದುರ್ಗ |

## ಬಿಜಾಪುರ ಜಿಲ್ಲೆ

| | | |
|---|---|---|
| ಶ್ರೀಯುತರಾದ— | | |
| ಮಲ್ಲಪ್ಪ ಕರಿಬಸಪ್ಪ, ಸುರಪುರ | .... | ಇಂಡಿ-ಸಿಂಧ್ಗಿ |
| ಜಟ್ಟೆಪ್ಪ ಲಕ್ಷ್ಮಣ್, ಕಬಡಿ | .... | ಇಂಡಿ-ಸಿಂಧ್ಗಿ |
| ಶಂಕರಗೌಡ ಯಶವಂತಗೌಡ, ಪಾಟೀಲ್ | .... | ಹಿಪ್ಪರ್ಗಿ-ಬಾಗೇವಾಡಿ |
| ರಾಯನಗೌಡ ಸಿದ್ದಲಿಂಗಪ್ಪ, ಬುಲ್‌ಗೌಡ | .... | ಬಿಜಾಪುರ |
| ಡಾ. ಶಿವಪ್ಪಗೌಡ ಬಾಪೂಗೌಡ, ಪಾಟೀಲ್ | .... | ಮಂಗೋಲಿ-ಒಬಳೇಶ್ವರ |
| ಚನ್ನಬಸಪ್ಪ ಜಯದೇವಪ್ಪ, ಅಂಬಲಿ | .... | ತಿಕೋಟ-ಬೀಳ್ಗಿ |
| ವಕೀಲ್ ಪ್ರಾಣೇಶಗುರುಭಟ್ಟ, ಸಿದ್ಧಾಂತಿ | .... | ಮುದ್ದೆಬಿಹಾಳ |
| ಬಸಪ್ಪ ದಾನಪ್ಪ, ಜತ್ತಿ | .... | ಜಮಖಂಡಿ |
| ಹಿರಾಲಾಲ್ ಬಂಡೂಲಾಲ್, ಷಾ | .... | ಮುಧೋಳ್ |
| ಬಸಪ್ಪ ತಮ್ಮಣ್ಣ, ಮೂರ್ನಾಳ್ | .... | ಬಾಗಲಕೋಟೆ |
| ವೆಂಕಣ್ಣಗೌಡ ಹನುಮಂತಗೌಡ, ಪಾಟೀಲ್ | .... | ಬಾದಾಮಿ |
| ಮಡಿವಾಳಪ್ಪ ರುದ್ರಪ್ಪ, ಪಟ್ಟಣಶೆಟ್ಟಿ | .... | ಗುಳೇದಗುಡ್ಡ-ಕಮತಗಿ |
| ಶಿವಲಿಂಗಪ್ಪ ರುದ್ರಪ್ಪ, ಕಂಠಿ | .... | ಹುನಗುಂದ |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|

## ಧಾರವಾಡ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಬಸವರಾಜ್ ಅಯ್ಯಪ್ಪ, ದೇಶಾಯಿ | .... | ಧಾರವಾಡ |
| ಬಸವನೀಪ್ಪ ರಾಮಪ್ಪ, ತಂಬಕಾಡ್ | .... | ಧಾರವಾಡ-ಕಲಘಟ್ಗಿ |
| ಅಡವೆಪ್ಪ ಶಿದ್ದಪ್ಪ, ಕಂಬ್ಳಿ | .... | ಹುಬ್ಬಳ್ಳಿ |
| ಧರ್ಮಪ್ಪ ಎಲ್ಲಪ್ಪ, ಸಾಂಬ್ರಾಣಿ | .... | ಹುಬ್ಬಳ್ಳಿ |
| ಅಡಿವಪ್ಪಗೌಡ ಸಿದ್ದನಗೌಡ, ಪಾಟೀಲ್ | .... | ನವಲಗುಂದ-ನರಗುಂದ |
| ನೀಲಗಂಗಯ್ಯ ಬಸಯ್ಯ, ಪೂಜಾರ್ | .... | ರೋಣ |
| ಕುಬೇರಪ್ಪ ಪರಪ್ಪ, ಗದಗ | .... | ಗದಗ |
| ಚೆನ್ನಬಸಪ್ಪ ಸದಾಶಿವಪ್ಪ, ಹುಲ್ಕೋಟಿ | .... | ಗದಗ-ಮುಂಡರ್ಗಿ |
| ವೆಂಕಟೇಶ್ ತಿಮ್ಮಣ್ಣ, ಮಾಗಡಿ | .... | ಶಿರಹಟ್ಟಿ |
| ಮಲ್ಲಪ್ಪ ಬಸಪ್ಪ, ಹುರಳಿಕೊಪ್ಪ | .... | ಶಿಗ್ಗಾಂ |
| ಹಳ್ಳಿಕೇರಿ, ಜಿ. ವಿ. | .... | ಹಾವೇರಿ |
| ಪಾಟೀಲ್, ಕೆ. ಎಫ್. | .... | ರಾಣಿಬೆನ್ನೂರು |
| ಪಾಟೀಲ್, ವಿ. ವಿ. | .... | ಹಿರೆಕೆರೂರು |
| ಸಿದ್ದಪ್ಪ ಚೆನ್ನಬಸಪ್ಪ, ಸಿಂಧೂರ್ | .... | ಹಾನಗಲ್ಲು |

## ಉತ್ತರ ಕನ್ನಡ ಜಿಲ್ಲೆ

ಶ್ರೀಯತರಾದ—

| | | |
|---|---|---|
| ರಾಮಚಂದ್ರಗೋಪಾಲ್, ಕಾಮತ್ | .... | ಹಳಿಯಾಳ ಮಲ್ಲಾಪುರ-ಸುಪ |
| ಬಲ್ತೊ ಪುರ್ಸೊ, ಕದಂ | .... | ಅಂಕೋಲ-ಕಾರವಾರ |
| ರಾಮಕೃಷ್ಣ ಬೀರಣ್ಣ, ನಾಯಿಕ್ | .... | ಕುಮುಟ-ಹೊನ್ನಾವರ |
| ರಾಮಕೃಷ್ಣ ನರಸಿಂಹ, ಕಾಮತ್ | .... | ಹೊನ್ನಾವರ |
| ತಿಮ್ಮಪ್ಪ ಮಂಜಪ್ಪ ಮೊತನ್ಸರ್, ಹೆಗ್ಡೆ | .... | ಸಿದ್ದಾಪುರ-ಶಿರ್ಸಿ-ಮುಂದಗೋಡು |

## ಕೊಡಗು ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಸಿ. ಎಮ್. ಪೂಣಚ್ಚ | .... | ಬೆಟ್ಟಯತ್‌ನಾಡು |
| ಎ. ಸಿ. ತಿಮ್ಮಯ್ಯ, ಎಂ.ಎ. (ಕ್ಯಾಂಟಬ್.) | .... | ನಾಪೋಕ್ಲು |
| ಬಿ. ಎಸ್. ಕುಶಾಲಪ್ಪ, ಬಿ.ಎ., ಡಿ.ಇ., (ಲಂಡ್.) | .... | ಮಡಕೇರಿ (ನಗರ) |
| ಬಿ. ಕಾಳ | .... | ಸಿದ್ದಾಪುರ (ರಿ) |

| ಹೆಸರು | | ಚುನಾವಣೆಕ್ಷೇತ್ರ |
|---|---|---|
| ಶ್ರೀಯುತರಾದ— | | |
| ಸಿ. ಎ. ಮಂದಣ್ಣ, ಬಿ.ಎ., ಬಿ.ಎಲ್. | .... | ಮುರ್ನಾಡು |
| ಸಿ. ಕೆ. ಕಾಳಪ್ಪ, ಬಿ.ಎ. | .... | ಸೋಮವಾರಪೇಟೆ-ಉತ್ತರ |
| ಜಿ. ಎಮ್. ಮಂಜುನಾಥಯ್ಯ | .... | ಸುಂಟಿಕೊಪ್ಪ |
| ಜಿ. ಲಿಂಗರಾಜಯ್ಯ | .... | ಫ್ರೇಸರ್‌ಪೇಟೆ |
| ಜಿ. ಸುಬ್ಬಯ್ಯ | .... | ಶ್ರೀಮಂಗಳ ನಾಡು (ರಿ) |
| ಎಚ್. ಟಿ. ಮುತ್ತಣ್ಣ | .... | ಸೋಮವಾರಪೇಟೆ |
| ಎಚ್. ಎ. ನಂಜ | .... | ವೀರರಾಜಪೇಟೆನಾಡು (ರಿ) |
| ಕೆ. ಎಮ್. ದೇವಯ್ಯ | .... | ಬಾಗಮಂಡಲ |
| ಕೆ. ಮಲ್ಲಪ್ಪ, ಬಿ.ಎ., ಬಿ.ಎಲ್. | .... | ಶನಿವಾರಸಂತೆ |
| ಕೆ. ಪಿ. ಕರುಂಬಯ್ಯ, ಎಂ.ಎ., ಎಲ್‌ಎಲ್.ಬಿ. | | ಶ್ರೀಮಂಗಳ |
| ಕೆ. ಕೆ. ಗಣಪತಿ | .... | ಹುಡಿಕೇರಿ |
| ಎಮ್. ಡಿ. ಮಾಚಯ್ಯ | .... | ಸಿದ್ದಾಪುರ |
| ಎನ್. ಜಿ. ಅಹಮುದ್ | .... | ವೀರರಾಜಪೇಟೆ (ನಗರ) |
| ಪಿ. ಕೆ. ಚನ್ನಯ್ಯ | .... | ಶನಿವಾರಸಂತೆ (ರಿ) |
| ಪಿ. ಲಕ್ಕಯ್ಯ | .... | ಸುಂಟಿಕೊಪ್ಪ (ರಿ) |
| ಪಿ. ಡಿ. ಸುಬ್ಬಯ್ಯ | .... | ಮಡಿಕೇರಿನಾಡು |
| ಪಿ. ಎಮ್. ನಾಣಯ್ಯ, ಎಲ್.ಎ.ಎಂ.ಎಸ್. | | ಪೊನ್ನಂಪೇಟೆನಾಡು |
| ಪಿ. ಐ. ಬೆಳ್ಳಿಯಪ್ಪ | .... | ಅಮ್ಮತ್ತಿನಾಡು |
| ಪಿ. ಸಿ. ಉತ್ತಯ್ಯ, ಬಿ.ಎ., ಎಲ್.ಟಿ. | .... | ವೀರರಾಜಪೇಟೆನಾಡು |
| ಎ. ಎನ್. ಬೆಳ್ಳಿ | .... | ಪೊನ್ನಂಪೇಟೆನಾಡು (ರಿ) |

## ದಕ್ಷಿಣ ಕನ್ನಡ ಜಿಲ್ಲೆ

| ಶ್ರೀಯುತರಾದ— | | |
|---|---|---|
| ಅನಂತ ಪೈ, ಟಿ. | .... | ಉಡುಪಿ |
| ಈಶ್ವರ್, ಕೆ. | .... | ಪುತ್ತೂರು (ರಿ) |
| ಕೊಳ್ಕೆಬೈಲ್, ಎಸ್. ಎಸ್. | .... | ಬ್ರಹ್ಮಾವರ |
| ಮಂಜಯ್ಯಶೆಟ್ಟಿ, ವೈ. | .... | ಕುಂದಾಪುರ |
| ಪೆಯಿಸ್, ಎಲ್. ಸಿ. | .... | ಮಂಗಳೂರು |
| ಶೆಟ್ಟಿ, ಎ. ಬಿ. | .... | ಕಾರ್ಕಳ |
| ಸುವರ್ಣ, ಎನ್. ಎನ್. | .... | ಮುಲ್ಕಿ |
| ವೈಕುಂಟ ಬಲಿಗ, ಬಿ. | .... | ಪಣೆಮಂಗಳೂರು |
| ವೆಂಕಟರಮಣಗೌಡ, ಕೆ. | .... | ಪುತ್ತೂರು (ಜ) |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|

## ರಾಯಚೂರು ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಅಂಬಾದಾಸ್‌ರಾವ್ | .... | ಯಾದಗಿರಿ (ರಿ) |
| ಬಸವನಗೌಡ | .... | ಲಿಂಗುಸೂಗೂರು |
| ಜಗನ್ನಾಥರಾವ್ | .... | ಯಾದಗಿರಿ (ಜ) |
| ಎಲ್. ಕೆ. ಶ್ರಾಪ್ | .... | ರಾಯಚೂರು |
| ವಿರುಪಾಕ್ಷಪ್ಪ | .... | ಷಹಪುರ |
| ಅಂದಾನಪ್ಪ | .... | ಕುಷ್ಟಗಿ |
| ಹಿರೇಮಠ್, ಕೆ. ಆರ್. | .... | ಗಂಗಾವತಿ |
| ಕರಿಬಸಪ್ಪ, ಗುರುಬಸಪ್ಪ | .... | ದೇವದುರ್ಗ |
| ಪಂಪನಗೌಡ ಶಂಕರಪ್ಪ | .... | ಮನ್ವಿ |
| ಶಿವಬಸವನಗೌಡ | .... | ಸಿಂಧನೂರು |
| ಶ್ರೀಮತಿ ಮಹದೇವಮ್ಮ | .... | ಕೊಪ್ಪಳ |

## ಗುಲ್ಬರ್ಗ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಅಣ್ಣಾರಾವ್ ಬಸಪ್ಪ | .... | ಅಫ್ಜಲ್‌ಪುರ |
| ಅಯ್ಯನಗೌಡ ನಿಂಗನಗೌಡ | .... | ಎಲ್ಬುರ್ಗ |
| ಚಂದ್ರಶೇಖರ್ | .... | ಕಮಲಾಪುರ |
| ಮಲ್ಲಪ್ಪ ಕೊಳ್ಳೂರ್ | .... | ಷೋರಾಪುರ |
| ಮಹಮದ್ ಆಲಿ | .... | ಗುಲ್ಬರ್ಗ |
| ಪ್ರಾಣೇಶಚಾರ್ಯ | .... | ತಂಡೂರು-ಸೇರಮ್ |
| ಎಸ್. ರುದ್ರಪ್ಪ | .... | ಚಿತ್ತಾಪುರ |
| ಶಂಕರಪ್ಪ, ಎಸ್. | .... | ಚಿಂಚೋಳಿ |
| ವೀರೇಂದ್ರ ಪಾಟೀಲ್ | .... | ಆಲಂದ್ |
| ಶರಣಗೌಡ ಇನಾಮ್ದಾರ್ | .... | ಅಂಡೋಳ-ಜೀವರ್ಗಿ |

## ಬಿದರೆ ಜಿಲ್ಲೆ

ಶ್ರೀಯುತರಾದ—

| | | |
|---|---|---|
| ಶಫಿಯುದ್ದೀನ್ | .... | ಬಿದರೆ |
| ಕಮಟಿಕಾರ್ ಮುರಳೀಧರರಾವ್ ಶ್ರೀನಿವಾಸರಾವ್ | .... | ಭಾಲ್ಕಿ |

| ಹೆಸರು | | ಚುನಾವಣೆ ಕ್ಷೇತ್ರ |
|---|---|---|
| ಶ್ರೀಯುತರಾದ— | | |
| ಶ್ರೀನಿವಾಸ ರಾಮರಾವ್ ಎಕೇಲಿಕರ್ | .... | ಹುಮ್ನಾಬಾದ್ (ಜ) |
| ಶಂಕರ್‌ದೇವ್ | .... | ಹುಮ್ನಾಬಾದ್ (ರಿ) |
| ಬಾಪುರಾವ್ ಕಿಷನ್‌ರಾವ್ ದೇಶಪಾಂಡೆ | .... | ಹುಲಸೂರು |

## ಕೊಯಮತ್ತೂರು ಜಿಲ್ಲೆ

| | | |
|---|---|---|
| ಶ್ರೀಯುತ— | | |
| ಎಸ್. ಸಿ. ವಿರೂಪಾಕ್ಷಯ್ಯ | .... | ಕೊಳ್ಳೇಗಾಲ |

## ೩. ಮೈಸೂರು ವಿಧಾನ ಪರಿಷತ್ತು

— ಸದಸ್ಯರು —

| ಹೆಸರು | | ಚುನಾವಣೆ ಕ್ಷೇತ್ರ |
|---|---|---|
| ಶ್ರೀಯುತರಾದ— | | |
| ಜಿ. ವೀರಪ್ಪ, ಬಿ.ಎಸ್‌ಸಿ., ಎಲ್‌ಎಲ್.ಬಿ. | .... | ಪದವೀಧರರ ಕ್ಷೇತ್ರ |
| ಎಂ. ಎಲ್. ಶ್ರೀಕಂಠಯ್ಯ, ಬಿ.ಎ., ಬಿ.ಎಲ್. | | ,, |
| ಎ. ಎನ್. ರಾಮರಾವ್, ಬಿ.ಎ., ಬಿ.ಎಲ್. | .... | ,, |
| ಎಂ. ಪಿ. ಎಲ್. ಶಾಸ್ತ್ರೀ, ಎಂ.ಎ. | .... | ಉಪಾಧ್ಯಾಯರ ಕ್ಷೇತ್ರ |
| ಎಂ. ಸಿ. ಮಹದೇವಸ್ವಾಮಿ | .... | ,, |
| ಹೆಚ್. ಆರ್. ಅಬ್ದುಲ್ ಗಫಾರ್, ಬಿ.ಎ. | .... | ,, |

## ಸ್ಥಾನೀಯ ಪ್ರಾತಿನಿಧ್ಯ ಕ್ಷೇತ್ರ

| | | |
|---|---|---|
| ಶ್ರೀಯುತರಾದ -- | | |
| ಸಿ. ಹೆಚ್. ವೆಂಕಟರಮಣಪ್ಪ | .... | ಕೋಲಾರ ಜಿಲ್ಲೆ |
| ಡಿ. ವೆಂಕಟರಾಮಯ್ಯ, ಬಿ.ಎ., ಬಿ.ಎಲ್. | .... | ,, |
| ಟಿ. ಎನ್. ಕೆಂಪಹೊನ್ನಯ್ಯ | .... | ತುಮಕೂರು ಜಿಲ್ಲೆ |
| ಬಿ. ಎಂ. ಕೃಷ್ಣಮೂರ್ತಿ | .... | ಬೆಂಗಳೂರು ಜಿಲ್ಲೆ |
| ಎಸ್. ಆರ್. ಗುರು ಅಲಿಯಾಸ್ ಗುರುಲಿಂಗಯ್ಯ, ಬಿ.ಎ. | .... | ಬೆಂಗಳೂರು ಜಿಲ್ಲೆ |
| ಜೆ. ದೇವಯ್ಯ | .... | ಮಂಡ್ಯ ಜಿಲ್ಲೆ |
| ಪಿ. ಸೀತಾರಾಮಯ್ಯ, ಬಿ.ಎ., ಬಿ.ಎಲ್. | .... | ಮೈಸೂರು ಜಿಲ್ಲೆ |
| ಟಿ. ವೆಂಕಟರಮಣಯ್ಯ | .... | ,, |
| ವೈ. ಧರ್ಮಪ್ಪ, ಬಿ.ಎ., ಬಿ.ಎಲ್. | .... | ಹಾಸನ ಜಿಲ್ಲೆ |
| ಎನ್. ಪಿ. ಗೋವಿಂದಗೌಡ, ಬಿ.ಎ. | .... | ಚಿಕ್ಕಮಗಳೂರು ಜಿಲ್ಲೆ |
| ಕೆ. ರಂಗಪ್ಪ | .... | ಚಿತ್ರದುರ್ಗ—ಬಳ್ಳಾರಿ ಜಿಲ್ಲೆ |
| ಕೆ. ಸಂಜೀವರೆಡ್ಡಿ .. .... | .... | ,, |
| ಕೆ. ವಿ. ನರಸಪ್ಪ | .... | ಶಿವಮೊಗ್ಗ ಜಿಲ್ಲೆ |
| ಮರಿಸ್ವಾಮಯ್ಯ ಮಠದ ಪಾಟೀಲ್ | .... | ವಿಧಾನಸಭೆಯಿಂದ |
| ಹೆಚ್. ಎಂ. ಗಂಗಾಧರಯ್ಯ | .... | ,, |
| ಎಂ. ಎನ್. ಜೋಯಿಸ್, ಬಿ.ಎ. | .... | ,, |
| ಶ್ರೀಮತಿ ಎಸ್. ವೀರಮ್ಮ | .... | ,, |
| ಎಚ್. ಸಿ. ಬೋರಯ್ಯ | .... | ,, |

